ಪರಮ ದಯಾಮಯನೂ ಕೃಪಾಶೀಲನೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

'ಜೀವನದ ಶಿಷ್ಟಾಚಾರಗಳು' ಎಂಬ ಈ ಗ್ರಂಥವು ಮೌಲಾನಾ ಮುಹಮ್ಮದ್ ಯೂಸುಫ್ ಇಸ್ಲಾಹೀಯವರ 'ಆದಾಬೆ ಝಿಂದಗೀ' ಎಂಬ ಉರ್ದು ಗ್ರಂಥದ ಕನ್ನಡಾನುವಾದವಾಗಿದೆ. ನಿಮ್ಮ ಕೈಯಲ್ಲಿರುವ ಈ ಕೃತಿಯು ಅದರ ಹದಿಮೂರನೆಯ ಆವೃತ್ತಿಯಾಗಿದೆ. ಸನ್ಮಾರ್ಗ ವಾರಪತ್ರಿಕೆಯ ಪ್ರಧಾನ ಸಂಪಾದಕರಾಗಿದ್ದ ಮರ್ಹೂಮ್ ಇಬ್ರಾಹೀಮ್ ಸಈದ್‌ರವರು ಇದನ್ನು ಸುಂದರವಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ.

ಮಾನವನ ಸಕಲ ಭೌತಿಕ ಅಗತ್ಯಗಳನ್ನೂ ಪೂರೈಸಿರುವ ಸೃಷ್ಟಿಕರ್ತನು, ಅವನಿಗೆ ಜೀವನ ನಡೆಸಲು ಸರಿಯಾದ ಮಾರ್ಗದರ್ಶನವನ್ನು ನೀಡಿ ಅವನನ್ನು ಅನುಗ್ರಹಿಸಿದ್ದಾನೆ. ಅದಕ್ಕಾಗಿ ಲೋಕಾರಂಭದಿಂದ ಪ್ರವಾದಿಗಳನ್ನೂ ಗ್ರಂಥಗಳನ್ನೂ ನಿರಂತರ ಕಳುಹಿಸುತ್ತಲಿದ್ದನು. ಅಂತಿಮವಾಗಿ ಪ್ರವಾದಿ ಮುಹಮ್ಮದ್‌ರನ್ನು(ಸ) ಪವಿತ್ರ ಕುರ್‌ಆನ್ ಗ್ರಂಥ ನೀಡಿ ಕಳಿಸಿದನು. ಪ್ರವಾದಿವರ್ಯರು(ಸ) ದೈವಿಕ ಗ್ರಂಥದ ಆಧಾರದಲ್ಲಿ ದೇವನ ಮಾರ್ಗದರ್ಶನದಂತೆ ಒಂದು ಮಾದರೀ ಜೀವನವನ್ನು ನಡೆಸಿ ತೋರಿಸಿದರು. ಅವರ ಅನುಸರಣೆಯು ವಿಶ್ವಾಸಿಗಳಿಗೆ ಕಡ್ಡಾಯವಾಗಿದೆ.

ಅದರಂತೆ ಮಾನವನ ದೈನಂದಿನ ಜೀವನದಲ್ಲಿ ಪಾಲಿಸಬೇಕಾದ ಶಿಷ್ಟಾಚಾರಗಳನ್ನು ಈ ಗ್ರಂಥದಲ್ಲಿ ಕ್ರೋಢೀಕರಿಸಲಾಗಿದೆ. ಜೊತೆಗೆ ಜೀವನದ ವಿವಿಧ ಸಂದರ್ಭಗಳಲ್ಲಿ ಮಾಡಬೇಕಾದ ಪ್ರಾರ್ಥನೆಗಳು ಮತ್ತು ಅಲ್ಲಾಹನ 99 ಗುಣನಾಮಗಳನ್ನೂ ಅರ್ಥ-ವಿವರಣೆಯ ಸಹಿತ ಈ ಗ್ರಂಥದಲ್ಲಿ ಕ್ರೋಢೀಕರಿಸಲಾಗಿದೆ. ಇಸ್ಲಾಮೀ ಜೀವನವನ್ನು ಅದರ ಯಥಾರ್ಥ ಸೌಂದರ್ಯ ಮತ್ತು ಸ್ಫೂರ್ತಿಯೊಂದಿಗೆ ನಡೆಸ ಬಯಸುವ ಪ್ರತಿಯೊಬ್ಬರಿಗೂ ಈ ಗ್ರಂಥವು ಒಂದು ಉತ್ತಮ ಮಾರ್ಗದರ್ಶಿಯಾಗಬಹುದು. ಕನ್ನಡಿಗರಾದ ಮುಸ್ಲಿಮರಿಗೆ ಇದು ಪ್ರಾಯೋಗಿಕ ಮಾರ್ಗದರ್ಶಿಯಾದಂತೆ ಇಸ್ಲಾಮಿನ ಶಿಷ್ಟಾಚಾರಗಳನ್ನು ತಿಳಿಯಲು ದೇಶಬಾಂಧವರಿಗೂ ಇದು ಸಹಾಯಕವಾದೀತೆಂದು ನಿರೀಕ್ಷಿಸುತ್ತೇವೆ.

ಶಾಂತಿ ಪ್ರಕಾಶನ

# ಮುನ್ನುಡಿ

ಜೀವನದಿಂದ ಪರಿಪೂರ್ಣ ಪ್ರಯೋಜನ ಪಡೆಯುವುದು, ಅದರಿಂದ ಗರಿಷ್ಠ ಸುಖ ಪಡೆಯುವುದು ಮತ್ತು ವಾಸ್ತವದಲ್ಲಿ ಫಲಪ್ರದ ಜೀವನ ಸಾಗಿಸುವುದು ನಿಮ್ಮ ಹಕ್ಕು. ಆದರೆ ಇದು ಸಾಧ್ಯವಾಗಬೇಕಾದರೆ ನೀವು ಜೀವನದ ರೀತಿ ನೀತಿಗಳನ್ನು ಅರಿತಿರಬೇಕು. ಯಶಸ್ವೀ ಜೀವನದ ತತ್ವಗಳನ್ನೂ ಶಿಷ್ಟಾಚಾರಗಳನ್ನೂ ತಿಳಿದಿರಬೇಕು. ತಿಳಿದಿದ್ದರೆ ಮಾತ್ರ ಸಾಲದು, ಆ ತತ್ವ ಮತ್ತು ಶಿಷ್ಟಾಚಾರಗಳಂತೆ ನಿಮ್ಮ ಜೀವನವನ್ನು ರೂಪಿಸುವ ಮತ್ತು ಅಲಂಕರಿಸುವ ಪ್ರಯತ್ನದಲ್ಲಿ ಸದಾ ನಿರತರಾಗಿರಬೇಕು.

ಸಭ್ಯತೆ ಮತ್ತು ಸದಾಚಾರ, ಘನತೆ ಮತ್ತು ಗಾಂಭೀರ್ಯ, ಅಚ್ಚುಕಟ್ಟು ಮತ್ತು ಪರಿಶುದ್ಧತೆ, ವಿವೇಕ ಮತ್ತು ವಿವೇಚನೆ, ಶಿಸ್ತು ಮತ್ತು ಸಂಘಟನೆ, ಸದ್ಭಾವನೆ ಮತ್ತು ಸದಭಿರುಚಿ, ಹೃದಯ ವೈಶಾಲ್ಯ ಮತ್ತು ಸಜ್ಜನಿಕೆ, ಅನುಕಂಪ ಮತ್ತು ಸಹಾನುಭೂತಿ, ನಯ ವಿನಯ ಮತ್ತು ಮೃದುಭಾಷೆ, ದೈನ್ಯತೆ ಮತ್ತು ವಿನಮ್ರತೆ, ತ್ಯಾಗ ಮತ್ತು ಬಲಿದಾನ, ನಿಷ್ಠೆ ಮತ್ತು ನಿಸ್ವಾರ್ಥತೆ, ಸ್ಥಿರಚಿತ್ತತೆ, ಕರ್ತವ್ಯ ಪ್ರಜ್ಞೆ ಮತ್ತು ಕ್ರಿಯಾಶೀಲತೆ, ದೇವಭಯ ಮತ್ತು ಧರ್ಮನಿಷ್ಠೆ, ದೇವನ ಮೇಲೆ ಭರವಸೆ ಮತ್ತು ಧೈರ್ಯ- ಇವೇ ಮೊದಲಾದ ಇಸ್ಲಾಮೀ ಜೀವನದ ಮನಮೋಹಕ ಗುಣಗಳಿಂದಾಗಿ ಒಬ್ಬ ಸತ್ಯವಿಶ್ವಾಸಿಯ ಜೀವನದಲ್ಲಿ ಅಸಾಮಾನ್ಯ ಆಕರ್ಷಣೆ ಉಂಟಾಗುತ್ತದೆ. ಮುಸ್ಲಿಮರು ಮಾತ್ರವಲ್ಲ ಇಸ್ಲಾಮಿನ ಬಗ್ಗೆ ತಿಳುವಳಿಕೆ ಇಲ್ಲದವರು ಕೂಡ ಆತನೆಡೆಗೆ ಆಕರ್ಷಿತರಾಗುತ್ತಾರೆ. ಜೀವನವನ್ನು ವಿಕಾಸಗೊಳಿಸುವ, ಸುಧಾರಿಸುವ ಮತ್ತು ಅದಕ್ಕೆ ಅಸಾಮಾನ್ಯ ಆಕರ್ಷಣಾ ಶಕ್ತಿಯನ್ನು ದಯಪಾಲಿಸುವಂತಹ ಅಮೂಲ್ಯ ತತ್ವಗಳನ್ನೂ ಶಿಷ್ಟಾಚಾರಗಳನ್ನೂ ನೀಡುವ ಈ ಮಾನವೀಯ ಸಂಸ್ಕೃತಿಯು ಖಂಡಿತವಾಗಿಯೂ ಗಾಳಿ-ಬೆಳಕಿನಂತೆ ಎಲ್ಲ ಮನುಷ್ಯರ ಸಾಮಾನ್ಯ ಸೊತ್ತಾಗಿದೆ ಎಂಬುದನ್ನು ಸಾಮಾನ್ಯ ಮನುಷ್ಯನೂ ತಿಳಿದುಕೊಳ್ಳುವಂತಾಗುವುದು. ಇಡೀ ಮಾನವ ಜನಾಂಗವು ಅದನ್ನು ಅಂಗೀಕರಿಸಿ ಅದರ ಆಧಾರದಲ್ಲಿ ತನ್ನ ವೈಯಕ್ತಿಕ ಮತ್ತು ಸಾಮೂಹಿಕ ಜೀವನವನ್ನು ಯಶಸ್ವಿಯಾಗಿ ಕಟ್ಟಿ ಬೆಳೆಸಬಹುದಾಗಿದೆ. ತನ್ಮೂಲಕ ಅದರ ಲೌಕಿಕ ಜೀವನವು ಶಾಂತಿ-ನೆಮ್ಮದಿ ಮತ್ತು ಸುಖ-ಸಂತೋಷದ ಆಗರವಾಗುವುದು. ಪರಲೋಕದಲ್ಲಿಯೂ ವಿಜಯೀ ಮತ್ತು ಯಶಸ್ವೀ ಜೀವನಕ್ಕೆ ಅಗತ್ಯವಿರುವ ಎಲ್ಲವೂ ಅದಕ್ಕೆ ಲಭಿಸುವುದು ಎಂಬುದು ಖಾತ್ರಿಯಾಗುವುದು.

"ಜೀವನದ ಶಿಷ್ಟಾಚಾರಗಳು" ಎಂಬ ಈ ಗ್ರಂಥದಲ್ಲಿ ಇಸ್ಲಾಮೀ ಸಂಸ್ಕೃತಿಯ ಈ ತತ್ವ ಮತ್ತು ಶಿಷ್ಟಾಚಾರಗಳನ್ನೇ ಕ್ರೋಢೀಕರಿಸಲಾಗಿದೆ. ಪವಿತ್ರ ಕುರ್‌ಆನ್, ಪ್ರವಾದಿಚರ್ಯೆ ಮತ್ತು ಪೂರ್ವಜರ ಚಿರಂತನ ಮಾದರಿಗಳು ಹಾಗೂ ಇಸ್ಲಾಮೀ ಒಲವು ಮತ್ತು ಅಭಿರುಚಿಗಳ ಬೆಳಕಿನಲ್ಲಿ ಜೀವನದ ರೀತಿ-ನೀತಿಗಳನ್ನು ಕಲಿಸುವ ಈ ಗ್ರಂಥವನ್ನು ಐದು ಮುಖ್ಯ ಅಧ್ಯಾಯಗಳಲ್ಲಿ ವಿಂಗಡಿಸಲಾಗಿದೆ.

- ಅಧ್ಯಾಯ ಒಂದು : ಶಿಷ್ಟಾಚಾರ ಮತ್ತು ಸಂಸ್ಕೃತಿ
- ಅಧ್ಯಾಯ ಎರಡು : ಆರಾಧನಾ ಕರ್ಮಗಳು
- ಅಧ್ಯಾಯ ಮೂರು : ಸಮಾಜದ ಸಂಸ್ಕರಣೆ
- ಅಧ್ಯಾಯ ನಾಲ್ಕು : ಧರ್ಮ ಸಂದೇಶ
- ಅಧ್ಯಾಯ ಐದು : ದಾಸ್ಯ ಭಾವನೆ

ಈ ಐದು ಅಧ್ಯಾಯಗಳಲ್ಲಿ ಜೀವನದ ಎಲ್ಲ ಕ್ಷೇತ್ರಗಳಿಗೆ ಸಂಬಂಧಿಸಿದ ಇಸ್ಲಾಮೀ ಶಿಷ್ಟಾಚಾರಗಳನ್ನು-

- ಪ್ರಭಾವ ಪೂರ್ಣ ಕ್ರಮಬದ್ಧತೆ,
- ಸರಳ ಮತ್ತು ಸುಲಲಿತ ಭಾಷೆ,
- ಸುಲಭ ಮತ್ತು ಮನಮುಟ್ಟುವ ವಿವರಣೆಗಳು
- ಮತ್ತು ವಿಚಾರಪೂರ್ಣ ಪುರಾವೆಗಳೊಂದಿಗೆ,

ಉಪನ್ಯಾಸದ ಶೈಲಿಯಲ್ಲಿ ಕ್ರಮಸಂಖ್ಯೆಯೊಂದಿಗೆ ಪ್ರಸ್ತುತ ಪಡಿಸಲಾಗಿದೆ.

ಅಲ್ಲಾಹನ ದಯೆಯಿಂದ "ಜೀವನದ ಶಿಷ್ಟಾಚಾರಗಳು" ಎಲ್ಲ ವಯಸ್ಸಿನ ಮತ್ತು ಎಲ್ಲ ವರ್ಗದ ಓದುಗರಿಗೆ ಉಪಯುಕ್ತವಾದೀತೆಂದು ನಂಬುತ್ತೇವೆ. ಇಸ್ಲಾಮನ್ನು ಪ್ರೀತಿಸುವ ಸೋದರ-ಸೋದರಿಯರು ಈ ಅಮೂಲ್ಯ ಶಿಷ್ಟಾಚಾರಗಳು ಮತ್ತು ಮನಮಿಡಿಯುವ ಪ್ರಾರ್ಥನೆಗಳ ಮೂಲಕ ತಮ್ಮ ಜೀವನವನ್ನು ಸುಧಾರಿಸುವ ಮತ್ತು ತಮ್ಮ ಕಿರಿಯರ ಗುಣ-ನಡತೆ ಮತ್ತು ರೀತಿ-ನೀತಿಗಳನ್ನು ಸಂಸ್ಕರಿಸುವ ಪ್ರಯತ್ನ ಮಾಡುವರೆಂದು ಆಶಿಸುತ್ತೇವೆ. ಎಳೆಯರಿಗೆ ಈ ಶಿಷ್ಟಾಚಾರಗಳನ್ನು ಸಾಧ್ಯವಿದ್ದಷ್ಟು ಅಭ್ಯಾಸ ಮಾಡಿಸಬೇಕು ಮತ್ತು ಪ್ರಾರ್ಥನೆಗಳನ್ನು ಕಂಠಪಾಠ ಮಾಡಿಸಬೇಕು. ಈ ಶಿಷ್ಟಾಚಾರಗಳಿಂದ ಅಲಂಕೃತವಾದ ಜೀವನವು ಇಹಲೋಕದಲ್ಲಿ ಗೌರವಾದರ ಮತ್ತು ಪ್ರೀತಿ ವಿಶ್ವಾಸಗಳಿಗೆ ಹಾಗೂ ಪರಲೋಕದಲ್ಲಿ ಪುಣ್ಯ- ಪುರಸ್ಕಾರಗಳಿಗೆ ಪಾತ್ರವಾಗುವುದು.

ಈ ಗ್ರಂಥದ ರಚನೆಯಲ್ಲಿ ಯಾವ ಯಾವ ಮುಖ್ಯ ಗ್ರಂಥಗಳಿಂದ ಪ್ರಯೋಜನ ಪಡೆಯಲಾಗಿದೆಯೋ ಅವುಗಳ ಉದ್ಧರಣೆಯನ್ನು ಆಯಾ ಸ್ಥಾನದಲ್ಲೇ ನೀಡಲಾಗಿದೆ.

ಈ ಸೇವೆಯನ್ನು ಸ್ವೀಕರಿಸಲೆಂದು ಅಲ್ಲಾಹನಲ್ಲಿ ಪ್ರಾರ್ಥಿಸುತ್ತೇವೆ. ಮುಸ್ಲಿಮರು ಈ ತತ್ವ ಮತ್ತು ಶಿಷ್ಟಾಚಾರಗಳನ್ನು ತಮ್ಮ ಜೀವನದಲ್ಲಿ ಅಳವಡಿಸುವ ಮೂಲಕ ಇಸ್ಲಾಮಿನ ಬಗ್ಗೆ ಜನಮನಗಳಲ್ಲಿ ಅಭಿರುಚಿ ಮತ್ತು ಶ್ರದ್ಧೆಯನ್ನು ಸೃಷ್ಟಿಸಲು ನೆರವಾಗಬೇಕೆಂದು ಕೋರಿಕೆ. ಈ ಗ್ರಂಥವು ಮನುಷ್ಯರನ್ನು ದೇವನ ನೈಜ ಧರ್ಮದ ಕಡೆಗೆ ಸೆಳೆಯುವ ಒಂದು ಪ್ರಭಾವೀ ಮಾಧ್ಯಮವಾಗಲಿ, ಗ್ರಂಥಕರ್ತನಿಗೆ ಇದು ಮೋಕ್ಷದ ಹೇತುವಾಗಲಿ ಮತ್ತು ಈ ಕಾರ್ಯದಲ್ಲಿ ಯಾವ ಮಹಾನುಭಾವರ ಗ್ರಂಥಗಳಿಂದ ಪ್ರಯೋಜನ ಪಡೆಯಲಾಗಿದೆಯೋ ಅವರೆಲ್ಲರಿಗೂ ಇದರ ಪುಣ್ಯದಲ್ಲಿ ಪಾಲು ಸಿಗುವಂತಾಗಲಿ (ಆಮೀನ್).

**ರಾಮಪುರ, U.P.** **ಮುಹಮ್ಮದ್ ಯೂಸುಫ್ ಇಸ್ಲಾಹೀ**

# ಅನುಕ್ರಮಣಿಕೆ

## I. ಶಿಷ್ಟಾಚಾರ ಮತ್ತು ಸಂಸ್ಕೃತಿ



## II. ಆರಾಧನಾ ಕರ್ಮಗಳು



## III. ಸಮಾಜದ ಸಂಸ್ಕರಣೆ

## IV. ಧರ್ಮ ಸಂದೇಶ



## V. ದಾಸ್ಯ ಭಾವನೆ

(ಲುಕ್ಮಾನರು ಹೀಗೆಂದಿದ್ದರು) "ಮಗನೇ ನಮಾಝನ್ನು ಸಂಸ್ಥಾಪಿಸು, ಒಳಿತಿನ ಆದೇಶ ಕೊಡು, ಕೆಡುಕಿನಿಂದ ತಡೆ ಮತ್ತು ಯಾವ ಕಷ್ಟವೇ ಬರಲಿ ಸಹನೆ ವಹಿಸು. ಇವು ಅತಿ ಹೆಚ್ಚು ತಾಕೀತು ಮಾಡಲ್ಪಟ್ಟ ವಿಷಯಗಳು. ಜನರೊಡನೆ ಮುಖ ತಿರುಗಿಸಿ ಮಾತಾಡಬೇಡ. ಭೂಮಿಯ ಮೇಲೆ ದರ್ಪದಿಂದ ನಡೆಯಬೇಡ, ದುರಭಿಮಾನ ಹಾಗೂ ಅಹಂಕಾರ ಪಡುವವನನ್ನು ಅಲ್ಲಾಹನು ಮೆಚ್ಚುವುದಿಲ್ಲ. ನಿನ್ನ ನಡೆಯಲ್ಲಿ ಇತಿಮಿತಿಯನ್ನಿರಿಸು. ನಿನ್ನ ಸ್ವರವನ್ನು ಸ್ವಲ್ಪ ತಗ್ಗಿಸು. ಎಲ್ಲ ಸ್ವರಗಳಿಗಿಂತ ಕೆಟ್ಟ ಸ್ವರವು ಕತ್ತೆಯ ಸ್ವರವಾಗಿರುತ್ತದೆ."

(ಪವಿತ್ರ ಖುರ್‌ಆನ್: 31: 17-19)

ಅಧ್ಯಾಯ - ಒಂದು

# ಶಿಷ್ಟಾಚಾರ ಮತ್ತು ಸಂಸ್ಕೃತಿ

## ಶುಚಿತ್ವ

ಶುಚಿತ್ವವನ್ನು ಸಂಪೂರ್ಣವಾಗಿ ಪಾಲಿಸುವವರನ್ನು ದೇವನು ತನ್ನ ಪ್ರೀತಿಗೆ ಪಾತ್ರರೆಂದು ಸಾರಿರುವನು. "ಶುಚಿತ್ವವು ಸತ್ಯವಿಶ್ವಾಸದ ಅರ್ಧಾಂಶವಾಗಿದೆ" ಎಂದು ಪ್ರವಾದಿ(ಸ) ಹೇಳಿರುವರು. ಅರ್ಥಾತ್ ಆತ್ಮವನ್ನು ಶುಚಿಯಾಗಿಡುವುದು ಸತ್ಯವಿಶ್ವಾಸದ ಅರ್ಧಾಂಶವಾದರೆ, ಉಳಿದ ಅರ್ಧಾಂಶ ಶರೀರದ ಶುಚಿತ್ವದ ಬಗ್ಗೆ ಜಾಗರೂಕತೆ ವಹಿಸುವುದಾಗಿದೆ. ಆತ್ಮವನ್ನು ಸತ್ಯನಿಷೇಧ, ಬಹುದೇವ ವಿಶ್ವಾಸ, ಪಾಪ ಮತ್ತು ಪಥಭ್ರಷ್ಟತೆಗಳ ಮಾಲಿನ್ಯದಿಂದ ರಕ್ಷಿಸಿ ಸದ್ವಿಶ್ವಾಸ ಮತ್ತು ಸದಾಚಾರವನ್ನು ಮೈಗೂಡಿಸುವುದೇ ಆತ್ಮದ ಶುಚಿತ್ವ. ಶರೀರವನ್ನು ಬಾಹ್ಯ ಮಲಿನತೆಗಳಿಂದ ಶುದ್ಧಗೊಳಿಸಿ ಶುಚಿತ್ವ ಮತ್ತು ಅಚ್ಚುಕಟ್ಟಿನ ಶಿಷ್ಟಾಚಾರಗಳನ್ನು ಅಳವಡಿಸಿಕೊಳ್ಳುವುದೇ ಶರೀರದ ಶುಚಿತ್ವ.

1. ನಿದ್ದೆಯಿಂದ ಎಚ್ಚೆತ್ತ ಬಳಿಕ ಕೈ ತೊಳೆಯದೆ ನೀರಿನ ಪಾತ್ರೆಗೆ ಕೈ ಹಾಕಬೇಡಿರಿ. ನಿದ್ರೆಯ ವೇಳೆ ನಿಮ್ಮ ಕೈ ಎಲ್ಲೆಲ್ಲಾ ಬಿದ್ದಿದೆ ಎಂದು ಯಾರಿಗೆ ಗೊತ್ತು.

2. ಸ್ನಾನಗೃಹದ ನೆಲದಲ್ಲಿ ಮೂತ್ರ ವಿಸರ್ಜನೆ ಮಾಡಬೇಡಿರಿ. ಸ್ನಾನಗೃಹದ ನೆಲವು ಮಣ್ಣಿನದ್ದಾಗಿದ್ದರೆ ಈ ಬಗ್ಗೆ ವಿಶೇಷ ಎಚ್ಚರಿಕೆ ಅಗತ್ಯ.

3. ಮಲಮೂತ್ರ ವಿಸರ್ಜನೆಗಾಗಿ ಕಿಬ್ಲಾಭಿಮುಖವಾಗಿ ಅಥವಾ ಕಿಬ್ಲಾಕ್ಕೆ ಬೆನ್ನು ಮಾಡಿ ಕುಳಿತುಕೊಳ್ಳಬೇಡಿರಿ. ವಿಸರ್ಜನೆಯ ಬಳಿಕ ಮಣ್ಣಿನ ಹೆಂಟೆ ಮತ್ತು ನೀರಿನಿಂದ ಶುದ್ಧಗೊಳಿಸಿರಿ ಅಥವಾ ಕೇವಲ ನೀರಿನಿಂದ ಶುಚಿಗೊಳಿಸಿರಿ. ಒಣ ಸೆಗಣಿ, ಎಲುಬು ಮತ್ತು ಇದ್ದಲು ಇತ್ಯಾದಿಗಳಿಂದ ಶುಚಿಗೊಳಿಸಬಾರದು. ಶೌಚದ ಬಳಿಕ ಸಾಬೂನು ಅಥವಾ ಮಣ್ಣಿನಿಂದ ಚೆನ್ನಾಗಿ ಕೈ ತೊಳೆಯಿರಿ.

4. ಮಲಮೂತ್ರ ವಿಸರ್ಜನೆಯ ಬಯಕೆಯಿರುವಾಗ ಊಟ ಮಾಡಬಾರದು. ಶೌಚದ ಬಳಿಕವೇ ಊಟ ಮಾಡಿರಿ.

5. ಊಟ ತಿಂಡಿಗಳಿಗಾಗಿ ಬಲಕೈಯನ್ನೇ ಬಳಸಿರಿ. ವುಝೂ (ಅಂಗ ಸ್ನಾನ) ಮಾಡುವಾಗಲೂ ಬಲಕೈಯನ್ನೇ ಬಳಸಿರಿ. ಶೌಚ ಮತ್ತು ಮೂಗು ಶುಚಿಗೊಳಿಸಲಿಕ್ಕಾಗಿ ಎಡಗೈಯನ್ನೇ ಉಪಯೋಗಿಸಿರಿ.

6. ಮೂತ್ರದ ಹನಿಗಳು ಹಾರದಂತೆ ಮೂತ್ರ ವಿಸರ್ಜನೆಯನ್ನು ಮೆದುವಾದ ನೆಲದಲ್ಲೇ ಮಾಡಿರಿ. ಯಾವಾಗಲೂ ಕುಳಿತೇ ಮೂತ್ರ ವಿಸರ್ಜನೆ ಮಾಡಿರಿ. ನೆಲವು ಕುಳಿತುಕೊಳ್ಳಲು ಯೋಗ್ಯವಲ್ಲದಿದ್ದರೆ ಅಥವಾ ಇನ್ನೇನಾದರೂ ವಾಸ್ತವಿಕ ಅಡಚಣೆ ಇದ್ದರೆ ನಿಂತುಕೊಂಡೂ ಮೂತ್ರ ವಿಸರ್ಜನೆ ಮಾಡಬಹುದು. ಆದರೆ ಸಾಮಾನ್ಯ ಪರಿಸ್ಥಿತಿಯಲ್ಲಿ ಹಾಗೆ ಮಾಡುವುದು ಕೆಟ್ಟ ಚಾಳಿ. ಆದ್ದರಿಂದ ಅದನ್ನು ವರ್ಜಿಸಬೇಕು.

7. ನದಿ, ಕಾಲುವೆ, ಸಾರ್ವಜನಿಕ ರಸ್ತೆ ಮತ್ತು ನೆರಳಿನ ಸ್ಥಳಗಳಲ್ಲಿ ಮಲಮೂತ್ರ ವಿಸರ್ಜನೆ ಮಾಡಬೇಡಿರಿ. ಇದರಿಂದ ಇತರರಿಗೆ ತೊಂದರೆಯಾಗುವುದು. ಇದು ಶಿಷ್ಟಾಚಾರ, ಸಭ್ಯತೆಗಳಿಗೂ ವಿರುದ್ಧ.

8. ಶೌಚಗೃಹಕ್ಕೆ ಹೋಗುವಾಗ ಪಾದರಕ್ಷೆ ಹಾಕಿಕೊಂಡು ಮತ್ತು ತಲೆಗೆ ಟೊಪ್ಪಿ ಅಥವಾ ರುಮಾಲನ್ನು ಹಾಕಿಕೊಂಡು ಹೋಗಿರಿ. ಶೌಚಗೃಹ ಪ್ರವೇಶಿಸುವಾಗ ಈ ರೀತಿ ಪ್ರಾರ್ಥಿಸಿರಿ,

اَللّٰهُمَّ اِنِّیْ اَعُوْذُ بِكَ مِنَ الْخُبُثِ وَالْخَبَائِثِ (بخاری، مسلم)

"ಅಲ್ಲಾಹುಮ್ಮ ಇನ್ನೀ ಅಊದುಬಿಕ ಮಿನಲ್ ಖುಬುಸಿ ವಲ್ ಖಬಾಇಸ್."

(ಓ ಅಲ್ಲಾಹ್! ಗಂಡು ಮತ್ತು ಹೆಣ್ಣು ಶೈತಾನರಿಂದ ನಾನು ನಿನ್ನ ಅಭಯ ಯಾಚಿಸುತ್ತೇನೆ.) (ಬುಖಾರಿ, ಮುಸ್ಲಿಮ್)

ಶೌಚಗೃಹದಿಂದ ಹೊರ ಬರುವಾಗ ಈ ರೀತಿ ಪ್ರಾರ್ಥಿಸಿರಿ:

اَلْحَمْدُ لِلّٰهِ الَّذِیْ اَذْهَبَ عَنِّی الْاَذٰی وَعَافَانِیْ (نسائی، ابن ماجة)

"ಅಲ್‌ಹಮ್ದು ಲಿಲ್ಲಾಹಿಲ್ಲದೀ ಅದ್‌ಹಬ ಅನ್ನಿಲ್ ಅದಾ ವ ಆಫಾನೀ."

(ನನ್ನ ತೊಂದರೆಯನ್ನು ನೀಗಿಸಿ ನನಗೆ ಆರೋಗ್ಯವನ್ನು ದಯಪಾಲಿಸಿದ ಅಲ್ಲಾಹನಿಗೆ ವಂದನೆಗಳು.) (ನಸಾಈ, ಇಬ್ನುಮಾಜಃ)

9. ಮೂಗು ಶುಚಿಗೊಳಿಸಲು ಅಥವಾ ಉಗುಳಲು ಪೀಕದಾನಿಯನ್ನು ಬಳಸಿರಿ ಅಥವಾ ಜನರ ಕಣ್ಣಿಗೆ ಬೀಳದಂತೆ ನಿಮ್ಮ ಆವಶ್ಯಕತೆಯನ್ನು ಪೂರ್ತಿಗೊಳಿಸಿರಿ.

10. ಆಗಾಗ ಮೂಗಿನೊಳಕ್ಕೆ ಬೆರಳು ಹಾಕಿ ಕೊಳಕು ತೆಗೆಯದಿರಿ. ಮೂಗು ಶುಚಿಗೊಳಿಸುವ ಅಗತ್ಯ ಬಿದ್ದಲ್ಲಿ ಜನರ ಕಣ್ಣಿಗೆ ಬೀಳದಂತೆ ಸಾವಕಾಶವಾಗಿ ಶುಚಿಗೊಳಿಸಿರಿ.

11. ಅನಿವಾರ್ಯ ಸಂದರ್ಭಗಳ ಹೊರತು ಕರವಸ್ತ್ರದಲ್ಲಿ ಕಫ ಉಗುಳಿ ಲೇಪಿಸದಿರಿ. ಇದು ಬಹಳ ಕೊಳಕು ಅಭ್ಯಾಸ.

12. ಬಾಯಿಯಲ್ಲಿ ತಾಂಬೂಲ ತುಂಬಿಕೊಂಡು ಮಾತಾಡಬೇಡಿ. ಇದರಿಂದ ಕೇಳುವವನ ಮೇಲೆ ಅದರ ಹನಿಗಳು ಹಾರಿ ಅವನಿಗೆ ತೊಂದರೆಯಾಗಬಹುದು. ಎಲೆ ಅಡಿಕೆ ಸೇವನೆಯ ಅಭ್ಯಾಸವಿದ್ದರೆ ಬಾಯಿಯನ್ನು ಶುಚಿಯಾಗಿರಿಸಲು ಪ್ರಯತ್ನಿಸಬೇಕು. ಇತರರೊಂದಿಗೆ ಮಾತನಾಡುವಾಗ ಬಾಯಿಯನ್ನು ಆದಷ್ಟು ದೂರವಿಡಲು ಪ್ರಯತ್ನಿಸಿರಿ.

13. 'ವುಝೂ' (ಅಂಗ ಸ್ನಾನ) ಚೆನ್ನಾಗಿ ಮಾಡಿರಿ. ಯಾವಾಗಲೂ ಸಾಧ್ಯವಿಲ್ಲದಿದ್ದರೆ ಹೆಚ್ಚಿನ ವೇಳೆ 'ವುಝೂ'ವಿನಿಂದ ಇರಲು ಪ್ರಯತ್ನಿಸಿರಿ. ನೀರು ಸಿಗದಿರುವಲ್ಲಿ 'ತಯಮ್ಮುಮ್' ಮಾಡಿರಿ. ವುಝೂ 'ಬಿಸ್ಮಿಲ್ಲಾಹಿರ್ರಹ್ಮಾನಿರ್ರಹೀಮ್' (ಪರಮ ದಯಾಳುವೂ, ಕರುಣಾಳುವೂ ಆದ ಅಲ್ಲಾಹನ ನಾಮದಿಂದ) ಎಂದು ಆರಂಭಿಸಿರಿ. ವುಝೂ ಮಾಡುವಾಗ ಈ ರೀತಿ ಪ್ರಾರ್ಥಿಸಿರಿ:

اَشْهَدُ اَنْ لَّآ اِلٰـهَ اِلَّا اللّٰهُ وَحْدَهُ لَا شَرِيْكَ لَهُ وَاَشْهَدُ اَنَّ مُحَمَّدًا عَبْدُهُ وَرَسُوْلُهُ اَللّٰهُمَّ اجْعَلْنِىْ مِنَ التَّوَّابِيْنَ وَاجْعَلْنِىْ مِنَ الْمُتَطَهِّرِيْنَ (ترمذى)

"ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹು ವಹ್ದಹೂ ಲಾ ಶರೀಕಲಹು ವಅಶ್‌ಹದು ಅನ್ನ ಮುಹಮ್ಮದನ್ ಅಬ್ದುಹೂ ವರಸೂಲುಹೂ. ಅಲ್ಲಾಹುಮ್ಮ ಜ್‌ಅಲ್‌ನೀ ಮಿನತ್ತವ್ವಾಬೀನ ವಜ್‌ಅಲ್‌ನೀ ಮಿನಲ್ ಮುತತಹ್ಹಿರೀನ್."

(ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲ. ಅವನು ಏಕೈಕನು. ಅವನಿಗಾರೂ ಸಹಭಾಗಿಗಳಿಲ್ಲ ಎಂದು ನಾನು ಸಾಕ್ಷ್ಯವಹಿಸುತ್ತೇನೆ ಮತ್ತು ಮುಹಮ್ಮದ್(ಸ) ಅಲ್ಲಾಹನ ದಾಸರೂ, ಸಂದೇಶ ವಾಹಕರೂ ಆಗಿರುವರೆಂದು ನಾನು ಸಾಕ್ಷ್ಯವಹಿಸುತ್ತೇನೆ. ಓ ಅಲ್ಲಾಹ್! ನನ್ನನ್ನು ಅತ್ಯಧಿಕ ಪಶ್ಚಾತ್ತಾಪ ಪಡುವವರಲ್ಲಿ ಮತ್ತು ಅತ್ಯಧಿಕ ಶುಚಿಯಾಗಿರುವವರಲ್ಲಿ ಸೇರಿಸು.) (ತಿರ್ಮಿದಿ)

ವುಝೂ ಮಾಡಿದ ಬಳಿಕ ಈ ರೀತಿ ಪ್ರಾರ್ಥಿಸಿರಿ:

سُبْحَانَكَ اَللّٰهُمَّ وَبِحَمْدِكَ اَشْهَدُ اَنْ لَّآ اِلٰهَ اِلَّآ اَنْتَ اَسْتَغْفِرُكَ وَاَتُوْبُ اِلَيْكَ (نسائى)

"ಸುಬ್‌ಹಾನಕಲ್ಲಾಹುಮ್ಮ ವಬಿಹಮ್ದಿಕ ಅಶ್‌ಹದು ಅಲ್ಲಾ ಇಲಾಹ ಇಲ್ಲಾ ಅಂತ ಅಸ್ತಗ್ಫಿರುಕ ವಅತೂಬು ಇಲೈಕ್."

(ಓ ಅಲ್ಲಾಹ್! ನೀನು ಪರಮ ಪಾವನನು. ನಿನ್ನ ಸ್ತುತಿಸ್ತೋತ್ರಗಳೊಂದಿಗೆ ನಾನು ಸಾಕ್ಷ್ಯ ವಹಿಸುತ್ತೇನೆ. ನೀನಲ್ಲದೆ ಬೇರೆ ಆರಾಧ್ಯರಿಲ್ಲ. ನಾನು ನಿನ್ನಲ್ಲಿ ಕ್ಷಮೆ ಯಾಚಿಸುತ್ತೇನೆ ಮತ್ತು ನಿನ್ನೆಡೆಗೆ ಪಶ್ಚಾತ್ತಾಪಪಟ್ಟು ಮರಳುತ್ತೇನೆ.) (ನಸಾಈ)

ಪ್ರವಾದಿ(ಸ) ಹೇಳಿರುವರು: "ಪುನರುತ್ಥಾನದ ದಿನ ನನ್ನ ಸಮುದಾಯದ ಗುರುತು ಅವರ ಹಣೆ ಮತ್ತು ವುಝೂವಿನ ಅಂಗಗಳ ಕಾಂತಿಯಾಗಿರುವುದು. ಯಾರು ತನ್ನ ಕಾಂತಿಯನ್ನು ಹೆಚ್ಚಿಸ ಬಯಸುತ್ತಾನೋ ಹೆಚ್ಚಿಸಲಿ." (ಬುಖಾರಿ, ಮುಸ್ಲಿಮ್)

14. ಹಲ್ಲುಜ್ಜುವುದನ್ನು ಕ್ರಮವಾಗಿ ರೂಢಿಸಿಕೊಳ್ಳಿರಿ. "ನನ್ನ ಸಮುದಾಯಕ್ಕೆ ತೊಂದರೆಯಾದೀತೆಂಬ ಭಯವಿಲ್ಲದಿರುತ್ತಿದ್ದರೆ ಪ್ರತಿ ವುಝೂವಿನ ಸಮಯದಲ್ಲೂ ಹಲ್ಲುಜ್ಜುವುದನ್ನು ಕಡ್ಡಾಯಗೊಳಿಸುತ್ತಿದ್ದೆ" ಎಂದು ಪ್ರವಾದಿ(ಸ) ಹೇಳಿರುವರು. ಒಂದು ದಿನ ಪ್ರವಾದಿವರ್ಯರ(ಸ) ಬಳಿಗೆ ಕೆಲವರು ಬಂದರು. ಅವರ ಹಲ್ಲುಗಳು ಹಳದಿಯಾಗಿದ್ದುವು. ಅದನ್ನು ಕಂಡು ಪ್ರವಾದಿ(ಸ) ಅವರಿಗೆ ಹಲ್ಲುಜ್ಜುವುದನ್ನು ರೂಢಿಸಿಕೊಳ್ಳುವಂತೆ ಆಜ್ಞಾಪಿಸಿದರು.

15. ಜುಮಾ ದಿವಸ ಸ್ನಾನ ಮಾಡಿ ಶುಚಿಯಾದ ಬಟ್ಟೆಗಳನ್ನು ಧರಿಸಿ ಜುಮಾ ನಮಾಝ್‌ನಲ್ಲಿ ಪಾಲ್ಗೊಳ್ಳಿರಿ. ಪ್ರವಾದಿ(ಸ) ಹೇಳಿದರು, "ಅಮಾನತ್‌ನ ಸಂದಾಯ ಮನುಷ್ಯನನ್ನು ಸ್ವರ್ಗಕ್ಕೆ ಒಯ್ಯುತ್ತದೆ." ಸಹಾಬಿವರ್ಯರು(ರ) ಕೇಳಿದರು, "ಓ ಅಲ್ಲಾಹನ ಸಂದೇಶವಾಹಕರೇ! ಅಮಾನತ್ ಎಂದರೇನು?" "ಅಶುದ್ಧತೆಯಿಂದ ಶುದ್ಧವಾಗಲು ಸ್ನಾನ ಮಾಡುವುದು. ಇದಕ್ಕಿಂತ ಮಿಗಿಲಾದ ಅಮಾನತನ್ನು ಅಲ್ಲಾಹನು ಗೊತ್ತುಪಡಿಸಿಲ್ಲ. ಆದ್ದರಿಂದ ಒಬ್ಬ ವ್ಯಕ್ತಿಗೆ ಸ್ನಾನದ ಅಗತ್ಯ ಬಿದ್ದಾಗ ಅವನು ಸ್ನಾನ ಮಾಡಲಿ" ಎಂದು ಪ್ರವಾದಿ(ಸ) ಉತ್ತರಿಸಿದರು.

16. ಅಶುದ್ಧಾವಸ್ಥೆಯಲ್ಲಿ ಮಸೀದಿಗೆ ಪ್ರವೇಶಿಸಬಾರದು. ಮಸೀದಿಯನ್ನು ದಾಟಲೂ ಬಾರದು. ಅನಿವಾರ್ಯ ಸಂದರ್ಭಗಳಲ್ಲಿ ತಯಮ್ಮುಮ್ ಮಾಡಿ ಪ್ರವೇಶಿಸಿರಿ ಅಥವಾ ದಾಟಿರಿ.

17. ತಲೆ ಕೂದಲನ್ನು ಎಣ್ಣೆ ಹಚ್ಚಿ ಬಾಚುವ ಪರಿಪಾಠವಿಟ್ಟುಕೊಳ್ಳಿರಿ. ಗಡ್ಡದ ಅಸ್ತವ್ಯಸ್ತ ಕೂದಲುಗಳನ್ನು ಕತ್ತರಿಸಿ ಸರಿಪಡಿಸಿಕೊಳ್ಳಿರಿ. ಕಣ್ಣಿಗೆ ಸುರ್ಮಾ ಹಚ್ಚಿರಿ. ಉಗುರುಗಳನ್ನು ಕತ್ತರಿಸಿ ಶುಚಿಯಾಗಿಡಿರಿ. ಸರಳತೆ ಮತ್ತು ಸಮತೋಲನದೊಂದಿಗೆ ಅಗತ್ಯದ ಶೃಂಗಾರವನ್ನು ಮಾಡಿರಿ.

18. ಸೀನುವಾಗ ಅದರ ಹನಿಗಳು ಇತರರ ಮೇಲೆ ಬೀಳದಂತೆ ಬಾಯಿಗೆ ಕರವಸ್ತ್ರ ಹಿಡಿದುಕೊಳ್ಳಿರಿ. ಸೀನಿದಾಗ **اَلْحَمْدُ لِلّٰهِ** 'ಅಲ್‌ಹಮ್ದುಲಿಲ್ಲಾಹ್' (ಅಲ್ಲಾಹನಿಗೆ ವಂದನೆಗಳು) ಎನ್ನಿರಿ. ಇದನ್ನು ಕೇಳುವವನು **يَرْحَمُكَ اللّٰهُ** 'ಯರ್‌ಹಮುಕಲ್ಲಾಃ' (ನಿಮ್ಮ ಮೇಲೆ ಅಲ್ಲಾಹನ ಕರುಣೆ ಇರಲಿ) ಎಂದೂ ಅದಕ್ಕುತ್ತರವಾಗಿ ಸೀನಿದವನು, **يَهْدِيكَ اللّٰهُ** 'ಯಹ್ದೀಕಲ್ಲಾಹು' (ಅಲ್ಲಾಹನು ನಿನಗೆ ಸನ್ಮಾರ್ಗದರ್ಶನ ಮಾಡಲಿ) ಎಂದೂ ಹೇಳಬೇಕು.

19. ಪರಿಮಳ ದ್ರವ್ಯಗಳನ್ನು ಹೆಚ್ಚಾಗಿ ಬಳಸಿರಿ. ಪ್ರವಾದಿವರ್ಯರು(ಸ) ಸುಗಂಧವನ್ನು ಬಹಳ ಮೆಚ್ಚುತ್ತಿದ್ದರು. ನಿದ್ರೆಯಿಂದ ಎಚ್ಚೆತ್ತು ನೈಸರ್ಗಿಕ ಬೇಡಿಕೆಗಳನ್ನು ಪೂರೈಸಿದ ಬಳಿಕ ಪ್ರವಾದಿವರ್ಯರು(ಸ) ತಪ್ಪದೆ ಸುಗಂಧ ಪೂಸಿಕೊಳ್ಳುತ್ತಿದ್ದರು.

# ಆರೋಗ್ಯ

1. ಆರೋಗ್ಯವು ದೇವನ ಮಹಾ ಅನುಗ್ರಹ ಮತ್ತು ವಿಶ್ವಸ್ಥ ನಿಧಿಯಾಗಿದೆ. ಆರೋಗ್ಯವನ್ನು ಗೌರವಿಸಿರಿ. ಅದರ ಸಂರಕ್ಷಣೆಯ ಬಗ್ಗೆ ಎಂದೂ ಅಲಕ್ಷ್ಯರಾಗದಿರಿ. ಒಮ್ಮೆ ಆರೋಗ್ಯ ಕೆಟ್ಟು ಹೋಯಿತೆಂದರೆ ಅದು ಬಹಳ ಕಷ್ಟದಿಂದ ಸರಿಯಾಗುತ್ತದೆ. ಸಣ್ಣ ಗೆದ್ದಲು ದೊಡ್ಡದೊಡ್ಡ ಗ್ರಂಥಾಲಯಗಳನ್ನೇ ತಿಂದು ಮುಗಿಸುವಂತೆ ಸಾಮಾನ್ಯ ಅಲಕ್ಷ್ಯದಿಂದ ಕ್ಷುಲ್ಲಕ ರೋಗವೂ ಜೀವನವನ್ನೇ ನಾಶಗೊಳಿಸುತ್ತದೆ. ಆರೋಗ್ಯದ ಬೇಡಿಕೆಗಳ ಬಗ್ಗೆ ಅಶ್ರದ್ಧೆ ತೋರುವುದು ಮತ್ತು ಅದರ ಸಂರಕ್ಷಣೆಯಲ್ಲಿ ಕುಂದು ಮಾಡು ವುದು ಅಕ್ಷಮ್ಯ ಅವಿವೇಕವಾಗಿದೆ. ಅದು ದೇವನಿಗೆ ತೋರುವ ಕೃತಘ್ನತೆಯೂ ಹೌದು.

ಬುದ್ಧಿ, ಚಾರಿತ್ರ್ಯ, ವಿಶ್ವಾಸ ಮತ್ತು ಶ್ರದ್ಧೆ ಮನುಷ್ಯನ ಜೀವನದ ನೈಜ ತಿರುಳಾಗಿದೆ. ಇವು ಹೆಚ್ಚಾಗಿ ಶಾರೀರಿಕ ಆರೋಗ್ಯವನ್ನೇ ಅವಲಂಬಿಸಿದೆ. ಬುದ್ಧಿ-ವಿವೇಕಗಳ ಬೆಳವಣಿಗೆಗೆ, ಉನ್ನತ ಚಾರಿತ್ರ್ಯದ ಬೇಡಿಕೆಗಳು ಹಾಗೂ ಧಾರ್ಮಿಕ ಕರ್ತವ್ಯಗಳನ್ನು ಈಡೇರಿಸಲಿಕ್ಕೆ ದೈಹಿಕ ಆರೋಗ್ಯವು ಮೂಲಭೂತ ಅಗತ್ಯವಾಗಿದೆ. ಬಲಹೀನ ಮತ್ತು ರೋಗಪೀಡಿತ ಶರೀರ ದಲ್ಲಿರುವ ಬುದ್ಧಿ-ವಿವೇಕಗಳೂ ದುರ್ಬಲವಾಗಿರುತ್ತವೆ. ಅವುಗಳ ಕ್ರಿಯಾಶೀಲತೆಯೂ ನಿರಾಶಾದಾಯಕವಾಗಿರುತ್ತವೆ. ಜೀವನವು ಉತ್ಸಾಹ, ಲವಲವಿಕೆ, ಹುರುಪುಗಳಿಂದ ವಿರಹಿತವಾದಾಗ ನಿರ್ಧಾರಗಳು ಬಲಹೀನಗೊಂಡಾಗ, ಆವೇಶವು ತಣ್ಣಗಾಗಿ ಮುದುಡಿಕೊಂಡಾಗ ಇಂತಹ ಕಳೆಗುಂದಿದ ಜೀವನವು ಅಶಕ್ತ ಶರೀರಕ್ಕೆ ಕಂಟಕಪ್ರಾಯವಾಗಿ ಪರಿಣಮಿಸುತ್ತದೆ.

ಸತ್ಯವಿಶ್ವಾಸಿಗೆ ಜೀವನದಲ್ಲಿ ಅನೇಕ ಮಹತ್ಕಾರ್ಯಗಳನ್ನು ಸಾಧಿಸಲಿಕ್ಕಿದೆ. ದೇವ ಪ್ರಾತಿನಿಧ್ಯದ ಮಹಾ ಹೊಣೆಯನ್ನು ನಿರ್ವಹಿಸಲಿಕ್ಕಿದೆ. ಅದಕ್ಕೆ ಶರೀರದಲ್ಲಿ ಶಕ್ತಿ, ಬುದ್ಧಿ ವಿವೇಕದಲ್ಲಿ ಪ್ರೌಢಿಮೆ, ನಿರ್ಧಾರಗಳಲ್ಲಿ ದೃಢತೆ ಮತ್ತು ತುಂಬು ಉತ್ಸಾಹ ಅತ್ಯಗತ್ಯ. ಜೀವನವು ಹುರುಪು, ಉತ್ಸಾಹ, ಲವಲವಿಕೆ ಮತ್ತು ಮಹತ್ವಾಕಾಂಕ್ಷೆಗಳಿಂದ ತುಂಬಿರಬೇಕು. ಆರೋಗ್ಯವಂತ ಮತ್ತು ಉತ್ಸಾಹಭರಿತ ಜನರಿಂದಲೇ ಜೀವಂತ ಸಮುದಾಯಗಳಾಗುತ್ತವೆ. ಇಂತಹ ಸಮುದಾಯಗಳೇ ಉನ್ನತ ತ್ಯಾಗ, ಬಲಿದಾನಗಳನ್ನರ್ಪಿಸಿ ಲೋಕದಲ್ಲಿ ಸ್ಥಾನಮಾನ ಗಳನ್ನು ಗಳಿಸುತ್ತವೆ. ಜೀವನದ ಘನತೆ, ಗೌರವಗಳನ್ನು ಜಗತ್ತಿಗೆ ಮನವರಿಕೆ ಮಾಡಿಕೊಡುತ್ತವೆ.

2. ಸದಾ ನಕ್ಕು ನಲಿಯುತ್ತಿರಿ. ಆನಂದ ತುಂದಿಲರಾಗಿರಿ, ಚುರುಕಾಗಿರಿ. ಸಂತೋಷ, ಸಜ್ಜನಿಕೆ, ಮುಗುಳ್ನಗು ಮತ್ತು ಉತ್ಸಾಹಗಳಿಂದ ಜೀವನವನ್ನು ಶೋಭಾಯಮಾನ, ಆಕರ್ಷಕ ಮತ್ತು ಆರೋಗ್ಯವಂತವಾಗಿಡಿರಿ. ಖಿನ್ನತೆ, ಉದಾಸೀನತೆ, ಚಿಂತೆ, ಅಸೂಯೆ, ಈರ್ಷ್ಯೆ, ದ್ವೇಷ,

ಸಂಕುಚಿತತೆ, ನಿರುತ್ಸಾಹ ಮತ್ತು ಮಾನಸಿಕ ತುಮುಲಗಳಿಂದ ದೂರವಿರಿ. ಅನೈತಿಕತೆಯ ಈ ರೋಗಗಳು ಮತ್ತು ಮಾನಸಿಕ ಚಿಂತೆಗಳು ಪಚನಾಂಗಗಳನ್ನು ಪ್ರತಿಕೂಲವಾಗಿ ಬಾಧಿಸುತ್ತವೆ. ಪಚನ ಕ್ರಿಯೆಯ ದೋಷವು ಆರೋಗ್ಯದ ಅತಿದೊಡ್ಡ ಶತ್ರು. ಪ್ರವಾದಿ(ಸ) ಹೇಳುತ್ತಾರೆ: "ಸರಳತೆ, ಸಮತೋಲನ ಮತ್ತು ಪ್ರಸನ್ನತೆಯೊಂದಿಗಿರಿ." (ಮಿಷ್ಕಾತ್)

ಒಮ್ಮೆ ಒಬ್ಬ ಮುದುಕನು ತನ್ನ ಇಬ್ಬರು ಪುತ್ರರನ್ನಾಧರಿಸಿಕೊಂಡು ಅವರ ಮಧ್ಯೆ ಕುಂಟುತ್ತಾ ನಡೆಯುವುದನ್ನು ಕಂಡು ಪ್ರವಾದಿ(ಸ) ಅವರಿಗೇನಾಯಿತೆಂದು ವಿಚಾರಿಸಿದರು. "ಅವರು ಕಅಬಾ ಭವನಕ್ಕೆ ಕಾಲ್ನಡಿಗೆಯಿಂದ ಹೋಗುವ ಹರಕೆ ಹೊತ್ತಿರುವರು" ಎಂದು ಜನರು ತಿಳಿಸಿದರು. ಪ್ರವಾದಿವರ್ಯರು(ಸ) "ಮುದುಕನು ತನ್ನನ್ನು ಯಾತನೆಗೊಳಪಡಿಸ ಬೇಕೆಂದು ಅಲ್ಲಾಹನು ಬಯಸುವುದಿಲ್ಲ" ಎನ್ನುತ್ತಾ ಆ ಮುದುಕನಿಗೆ ಸವಾರಿಯ ಮೇಲೆ ಹೋಗುವಂತೆ ಆಜ್ಞಾಪಿಸಿದರು.

ಒಮ್ಮೆ ಒಬ್ಬ ಯುವಕನು ಬಲಹೀನನಂತೆ ನಡೆಯುವುದನ್ನು ಕಂಡು ಹ. ಉಮರ್(ರ) "ನಿನಗೇನು ಕಾಯಿಲೆ?" ಎಂದು ವಿಚಾರಿಸಿದರು. "ನನಗೇನೂ ಕಾಯಿಲೆ ಇಲ್ಲ"ವೆಂದು ಆತ ಉತ್ತರಿಸಿದಾಗ ತಮ್ಮ ಕೊರಡೆಯೆತ್ತಿ ಅವನನ್ನು ಗದರಿಸುತ್ತಾ ಬಲಾಢ್ಯನಂತೆ ನಡೆಯಲು ಆದೇಶಿಸಿದರು.

ಪ್ರವಾದಿ(ಸ) ರಸ್ತೆಯಲ್ಲಿ ನಡೆಯುವಾಗ ಸ್ಥಿರವಾದ ಹೆಜ್ಜೆಗಳನ್ನು ಹಾಕುತ್ತಾ ಇಳಿಜಾರು ರಸ್ತೆಯಲ್ಲಿ ನಡೆಯುವಂತೆ ಶಕ್ತಿಯುತವಾಗಿ ನಡೆಯುತ್ತಿದ್ದರು.

ಪ್ರವಾದಿವರ್ಯರಿಗಿಂತ(ಸ) ಅಧಿಕ ಪ್ರಸನ್ನವದನರಾಗಿರುವವನನ್ನು ನಾನು ಕಂಡಿಲ್ಲ ಎಂದು ಹ. ಅಬ್ದುಲ್ಲಾ ಬಿನ್ ಹಾರಿಸ್(ರ) ಹೇಳುತ್ತಾರೆ.

ಪ್ರವಾದಿ(ಸ) ತಮ್ಮ ಸಮುದಾಯಕ್ಕೆ ಕಲಿಸಿದ ಪ್ರಾರ್ಥನೆಯನ್ನೂ ಮಾಡುತ್ತಿರಿ.

اَللّٰهُمَّ اَعُوْذُ بِكَ مِنَ الْهَمِّ وَالْحُزْنِ وَالْعَجْزِ وَالْكَسْلِ وَضَلَعِ الدَّيْنِ

وَغَلَبَةِ الرِّجَالِ (بخاری، مسلم)

"ಅಲ್ಲಾಹುಮ್ಮ ಅಊದುಬಿಕ ಮಿನಲ್ ಹಮ್ಮಿ ವಲ್ ಹುಝ್ನಿ ವಲ್‌ಅಜ್‌ಝಿ ವಲ್‌ಕಸ್ಲಿ ವದಲಇದ್ದೈನಿ ವಗಲಬತಿರ್ರಿಜಾಲ್."

(ಓ ಅಲ್ಲಾಹ್! ಚಿಂತೆ, ದುಃಖ, ಅಸಹಾಯಕತೆ, ಉದಾಸೀನತೆ, ಸಾಲದ ಹೊರೆ ಹಾಗೂ ಜನರ ದಬ್ಬಾಳಿಕೆಗಳಿಂದ ನಾನು ನಿನ್ನ ಅಭಯ ಯಾಚಿಸುತ್ತೇನೆ.) (ಬುಖಾರಿ, ಮುಸ್ಲಿಮ್)

3. ಶರೀರದ ಮೇಲೆ ಶಕ್ತಿಗೆ ಮೀರಿದ ಹೊರೆಯನ್ನು ಹಾಕದಿರಿ. ಶಾರೀರಿಕ ಶಕ್ತಿಗಳನ್ನು ಅಪವ್ಯಯ ಮಾಡದಿರಿ. ಶಾರೀರಿಕ ಶಕ್ತಿಗಳ ಸಂರಕ್ಷಣೆ ಮತ್ತು ಅವುಗಳ ಶಕ್ತ್ಯಾನುಸಾರ ಸಂತುಲಿತ ಉಪಯೋಗವು ಅವುಗಳ ಹಕ್ಕಾಗಿದೆ.

ಹ. ಆಯಿಶಾ(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು, ನಿಮ್ಮ ಶಕ್ತಿಗನುಸಾರವೇ ಕಾರ್ಯವೆಸಗಿರಿ. ಏಕೆಂದರೆ ದೇವನು ಬಳಲುವುದಿಲ್ಲ. ನೀವು ಬಳಲಿ ಬಿಡುವಿರಿ. (ಬುಖಾರಿ)

ಹ. ಅಬೂಕೈಸ್(ರ) ಹೇಳುತ್ತಾರೆ "ಪ್ರವಾದಿ(ಸ) ಖುತ್ಬಾ ಮಾಡುತ್ತಿದ್ದಾಗ ನಾನು ಅವರ ಸನ್ನಿಧಿಗೆ ಹೋದೆ. ಬಿಸಿಲಲ್ಲೇ ನಿಂತು ಖುತ್ಬಾ ಆಲಿಸತೊಡಗಿದೆ. ಅನಂತರ ಪ್ರವಾದಿವರ್ಯರ(ಸ) ಆಜ್ಞೆಯ ಮೇರೆಗೆ ನೆರಳಿರುವತ್ತ ಸರಿದು ನಿಂತೆ." (ಅಲ್ ಅದಬುಲ್ ಮುಫ್ರದ್)

ಶರೀರದ ಒಂದಂಶ ಬಿಸಿಲಲ್ಲಿಯೂ ಇನ್ನೊಂದಂಶ ನೆರಳಲ್ಲಿಯೂ ಇರಿಸುವುದರಿಂದ ಪ್ರವಾದಿ(ಸ) ತಡೆದಿರುವರು.

ಬಾಹಿಲಾ ಗೋತ್ರದ ಓರ್ವ ಮಹಿಳೆ ಹ. ಮುಜೀಬಃ ಹೇಳುತ್ತಾರೆ, "ಒಮ್ಮೆ ನನ್ನ ತಂದೆ ಧಾರ್ಮಿಕ ವಿದ್ಯಾಭ್ಯಾಸಕ್ಕಾಗಿ ಪ್ರವಾದಿವರ್ಯರ(ಸ) ಬಳಿಗೆ ಹೋದರು. ಧರ್ಮದ ಬಗ್ಗೆ ಕೆಲವು ಪ್ರಧಾನ ವಿಷಯಗಳನ್ನು ಕಲಿತು ಮನೆಗೆ ಮರಳಿ ಬಂದರು. ಒಂದು ವರ್ಷದ ಬಳಿಕ ಪುನಃ ಪ್ರವಾದಿವರ್ಯರ(ಸ) ಬಳಿಗೆ ಹೋದರು. (ಪ್ರವಾದಿ(ಸ) ಅವರನ್ನು ಗುರುತಿಸಲೇ ಇಲ್ಲ) ಅವರು ಕೇಳಿದರು, ಪ್ರವಾದಿವರ್ಯರೇ! ತಾವು ನನ್ನನ್ನು ಗುರುತಿಸಲಿಲ್ಲವೇ? ಪ್ರವಾದಿ(ಸ) 'ಇಲ್ಲ, ನಾನು ಗುರುತಿಸಲಿಲ್ಲ. ನಿಮ್ಮ ಪರಿಚಯ ಹೇಳಿರಿ' ಎಂದರು. 'ನಾನು ಬಾಹಿಲಾ ಗೋತ್ರದವನು. ಕಳೆದ ವರ್ಷವೂ ತಮ್ಮ ಸನ್ನಿಧಿಯಲ್ಲಿ ಹಾಜರಾಗಿದ್ದೆ' ಎಂದು ಅವರು ತನ್ನನ್ನು ಪರಿಚಯಿಸಿದಾಗ ಪ್ರವಾದಿ(ಸ) ಕಳೆದ ವರ್ಷ ಬಂದಾಗ ನೀವು ದೃಢಕಾಯ ರಾಗಿಯೂ, ಸುಂದರವಾಗಿಯೂ ಇದ್ದಿರಲ್ಲ? ನಿಮ್ಮ ಸ್ಥಿತಿ ಹೀಗೇಕಾಯಿತು? ಎಂದು ವಿಚಾರಿ ಸಿದರು. 'ನಾನು ತಮ್ಮ ಬಳಿಯಿಂದ ಹೋದ ಆ ದಿನದಿಂದ ಈ ತನಕ ನಿತ್ಯ ಉಪವಾಸ ಆಚರಿಸುತ್ತಿದ್ದೇನೆ. ರಾತ್ರಿ ಮಾತ್ರ ಆಹಾರ ಸೇವಿಸುತ್ತೇನೆ' ಎಂದು ಅವರು ಉತ್ತರಿಸಿದರು. ಅದಕ್ಕೆ ಪ್ರವಾದಿ(ಸ) 'ನೀವು ವೃಥಾ ನಿಮ್ಮ ಶರೀರವನ್ನು ಯಾತನೆಗೊಳ ಪಡಿಸಿದಿರಿ' ಎಂದು ಹೇಳಿ, 'ರಮಝಾನ್ ತಿಂಗಳ ಪೂರ್ತಿ ಉಪವಾಸ ಆಚರಿಸಿರಿ. ಅದರ ಹೊರತು ಇತರ ತಿಂಗಳುಗಳಲ್ಲಿ ತಿಂಗಳಿಗೊಂದು ದಿನದಂತೆ ಉಪವಾಸ ಆಚರಿಸಿರಿ' ಎಂದು ನಿರ್ದೇಶಿಸಿದರು. ಅವರು ಒಂದು ದಿನಕ್ಕಿಂತ ಹೆಚ್ಚು ಉಪವಾಸದ ಅನುಮತಿ ಕೋರಿದಾಗ ತಿಂಗಳಿಗೆ ಎರಡು ದಿನ ಉಪವಾಸ ಆಚರಿಸುವಂತೆ ಪ್ರವಾದಿ(ಸ) ಉಪದೇಶಿಸಿದರು. ಅವರು ಮತ್ತೊಮ್ಮೆ ಇನ್ನೂ ಹೆಚ್ಚು ಅನುಮತಿ ನೀಡಿರೆಂದಾಗ ಪ್ರತಿ ತಿಂಗಳು ಮೂರು ದಿನ ಉಪವಾಸ ಆಚರಿಸುವ ಅನುಮತಿ ನೀಡಿದರು. ಅವರು ಮತ್ತಷ್ಟು ಉಪವಾಸದ ಅನುಮತಿ ಕೋರಿದಾಗ ಪ್ರವಾದಿ(ಸ) ಹೇಳಿದರು: 'ಮುಹರ್ರಮ್ ತಿಂಗಳುಗಳಲ್ಲಿ ಉಪವಾಸ ಆಚರಿಸಿರಿ ಮತ್ತು ತೊರೆಯಿರಿ. ಪ್ರತಿ ವರ್ಷವೂ ಹೀಗೆ ಮಾಡಿರಿ' ಎನ್ನುತ್ತಾ, ತಮ್ಮ ಮೂರು ಬೆರಳುಗಳಿಂದ ಸಂಕೇತ ಮಾಡಿದರು. ಅವುಗಳನ್ನು ಜೋಡಿಸಿ ಮತ್ತು ಬಿಡಿಸಿ ತೋರಿಸಿದರು. (ಇದರ ಉದ್ದೇಶ ರಜಬ್, ಮುಹರ್ರಮ್, ದುಲ್‌ಕಅದ್, ದುಲ್‌ಹಜ್ಜ್ ಎಂಬ ನಾಲ್ಕು ತಿಂಗಳುಗಳಲ್ಲಿ ಉಪವಾಸ ಆಚರಿಸಿರಿ ಮತ್ತು ಒಂದೊಂದು ವರ್ಷ ಬಿಟ್ಟು ಬಿಡಿರಿ ಎಂದಾಗಿತ್ತು) ಪ್ರವಾದಿ(ಸ) ಹೇಳುತ್ತಾರೆ, 'ಮೂಮಿನ್ (ಸತ್ಯವಿಶ್ವಾಸಿ) ತನ್ನನ್ನು ಕೀಳಾಗಿಸಬಾರದು.' ಜನರು ಕೇಳಿದರು 'ಸತ್ಯವಿಶ್ವಾಸಿಯು ತನ್ನನ್ನು ಕೀಳಾಗಿಸುವುದು ಹೇಗೆ?' ಪ್ರವಾದಿ(ಸ) ಹೇಳಿದರು 'ಅವನು ತನ್ನನ್ನು ಸಹಿಸಲಸಾಧ್ಯವಾದ ಪರೀಕ್ಷೆಗೆ ಒಳಪಡಿಸುವುದಾಗಿದೆ.' (ತಿರ್ಮಿದಿ)

4. ಸದಾ ಪರಿಶ್ರಮ, ಚಟುವಟಿಕೆ ಮತ್ತು ಪರಾಕ್ರಮದ ಜೀವನ ನಡೆಸಿರಿ. ಎಲ್ಲ ರೀತಿಯ ಕಷ್ಟಗಳನ್ನೂ ಕಠಿಣ ಪ್ರಸಂಗಗಳನ್ನೂ ಎದುರಿಸುವ ಅಭ್ಯಾಸ ಬೆಳೆಸಿರಿ. ದೃಢಕಾಯನಾಗಿ ಸರಳ ಹಾಗೂ ಕ್ರಿಯಾಶೀಲ ಜೀವನ ಸಾಗಿಸಿರಿ. ಸುಖಲೋಲುಪ, ಮೈಗಳ್ಳ, ಸೋಮಾರಿ, ಕೋಮಲಾಂಗಿ, ಹೇಡಿ ಮತ್ತು ಲೋಕಾರಾಧಕರಾಗದಿರಿ.

ಪ್ರವಾದಿ(ಸ) ಹ. ಮುಆದ್ ಬಿನ್ ಜಬಲ್‌ರನ್ನು(ರ) ಯಮನ್‌ನ ರಾಜ್ಯಪಾಲರಾಗಿ ನೇಮಿಸಿ ಕಳುಹಿಸುವಾಗ "ಮುಆದ್! ಸುಖಲೋಲುಪತೆಯಿಂದ ದೂರವಿರಿ. ದೇವನ ದಾಸರು ಸುಖಲೋಲುಪರಾಗಿರುವುದಿಲ್ಲ" ಎಂದು ಆದೇಶಿಸಿದ್ದರು. (ಮಿಷ್ಕಾತ್)

ಹ. ಅಬೂ ಉಮಾಮ(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು, "ಸರಳ ಜೀವನ ಸಾಗಿಸುವುದು ಸತ್ಯವಿಶ್ವಾಸದ ಲಕ್ಷಣವಾಗಿದೆ." (ಅಬೂದಾವೂದ್)

ಪ್ರವಾದಿ(ಸ) ಸದಾ ಸರಳ ಮತ್ತು ಕ್ರಿಯಾಶೀಲ ಜೀವನ ಸಾಗಿಸುತ್ತಿದ್ದರು. ತಮ್ಮ ಕ್ರಿಯಾಶಕ್ತಿಯನ್ನು ಸಂರಕ್ಷಿಸುವ ಮತ್ತು ಬೆಳೆಸುವ ಪ್ರಯತ್ನ ಮಾಡುತ್ತಿದ್ದರು. ಪ್ರವಾದಿ(ಸ) ಈಜುವುದನ್ನು ಇಷ್ಟಪಡುತ್ತಿದ್ದರು. ಏಕೆಂದರೆ ಈಜುವುದರಿಂದ ದೇಹಕ್ಕೆ ಉತ್ತಮ ವ್ಯಾಯಾಮ ಸಿಗುತ್ತದೆ. ಒಮ್ಮೆ ಪ್ರವಾದಿ(ಸ) ಮತ್ತವರ ಕೆಲವು ಸಂಗಾತಿಗಳು ಕೆರೆಯೊಂದರಲ್ಲಿ ಈಜುತ್ತಿದ್ದರು. ಪ್ರವಾದಿ(ಸ) ಈಜುತ್ತಿರುವ ಪ್ರತಿಯೊಬ್ಬನಿಗೂ ಒಬ್ಬ ಜೊತೆಗಾರನನ್ನು ಗೊತ್ತು ಪಡಿಸಿದರು. ಪ್ರತಿಯೊಬ್ಬನೂ ಈಜುತ್ತಾ ತನ್ನ ಜೊತೆಗಾರನನ್ನು ಸೇರುವಂತೆ ನಿಶ್ಚಯಿಸಿದರು. ಪ್ರವಾದಿವರ್ಯರಿಗೆ(ಸ) ಹ. ಅಬೂಬಕರ್(ರ) ಜೊತೆಗಾರರಾದರು. ಪ್ರವಾದಿ(ಸ) ಈಜುತ್ತಾ ಅವರ ಬಳಿ ಹೋಗಿ ಅವರ ಕುತ್ತಿಗೆಯನ್ನು ಹಿಡಿದರು.

ಪ್ರವಾದಿವರ್ಯರಿಗೆ(ಸ) ಕುದುರೆ ಸವಾರಿ ಬಹಳ ಇಷ್ಟವಾಗಿತ್ತು.

ಪ್ರವಾದಿ(ಸ) ಸ್ವಯಂ ತನ್ನ ಕುದುರೆಯ ಸೇವೆಗೈಯುತ್ತಿದ್ದರು. ತಮ್ಮ ಬಟ್ಟೆಯಿಂದ ಅದರ ಮುಖ ಒರೆಸಿ ಶುಚಿಗೊಳಿಸುತ್ತಿದ್ದರು. ಅದರ ಕೇಸರವನ್ನು ತಮ್ಮ ಬೆರಳುಗಳಿಂದ ಬಾಚುತ್ತಿದ್ದರು. ಇದರ ಹಣೆಯಲ್ಲಿ ಪುನರುತ್ಥಾನದ ದಿನದ ವರೆಗೆ ಒಳಿತಿದೆ ಎನ್ನುತ್ತಿದ್ದರು.

ಹ. ಉಕ್ಬಾ(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು: "ಬಿಲ್ಲು ವಿದ್ಯೆ ಕಲಿಯಿರಿ, ಕುದುರೆ ಸವಾರಿ ಮಾಡಿರಿ. ಕುದುರೆ ಸವಾರರಿಗಿಂತ ಬಿಲ್ಲು ವಿದ್ಯೆ ಪ್ರವೀಣರು ನನಗೆ ಹೆಚ್ಚು ಪ್ರಿಯರು. ಯಾರು ಬಿಲ್ಲು ವಿದ್ಯೆಯನ್ನು ಕಲಿತು ಮರೆತು ಬಿಟ್ಟನೋ ಅವನು ದೇವಾನುಗ್ರಹವನ್ನು ಅಪಮಾನಗೊಳಿಸಿದನು." (ಅಬೂದಾವೂದ್)

ಹ. ಅಬ್ದುಲ್ಲಾ ಬಿನ್ ಉಮರ್(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು, ಯಾರು ಅಪಾಯದ ಸಂದರ್ಭದಲ್ಲಿ ಧರ್ಮಯೋಧರ ರಕ್ಷಣೆಗಾಗಿ ರಾತ್ರಿ ಜಾಗರಣೆ ಮಾಡುವನೋ ಅವನ ಆ ರಾತ್ರಿಯು 'ಲೈಲತುಲ್‌ಕದ್ರ್'(ನಿರ್ಣಾಯಕ ರಾತ್ರಿ)ಗಿಂತ ಉತ್ತಮವಾಗಿದೆ.

ಸಹಾಬಿಗಳನ್ನುದ್ದೇಶಿಸಿ ಹಸಿದವರು ಮುಗಿ ಬೀಳುವಂತೆ ನನ್ನ ಸಮುದಾಯದ ಮೇಲೆ ಇತರ ಸಮುದಾಯಗಳು ಮುಗಿ ಬೀಳುವ ಕಾಲ ಬರಲಿಕ್ಕಿದೆ ಎಂದು ಹೇಳಿದಾಗ ಒಬ್ಬರು "ಓ ದೇವ ಸಂದೇಶವಾಹಕರೇ! ಈ ರೀತಿ ಇತರ ಸಮುದಾಯಗಳು ಒಗ್ಗಟ್ಟಾಗಿ ನಮ್ಮ ಮೇಲೆ

ಮುಗಿ ಬೀಳಲು ನಾವೇನು ಸಂಖ್ಯೆಯಲ್ಲಿ ಕಡಿಮೆಯಾಗಿರುವೆವೇ?" ಎಂದು ಪ್ರಶ್ನಿಸಿ ದರು. ಅದಕ್ಕೆ ಪ್ರವಾದಿ(ಸ), "ಇಲ್ಲ. ಅಂದು ನಿಮ್ಮ ಸಂಖ್ಯೆ ಕಡಿಮೆ ಇರಲಾರದು. ನೀವಾಗ ದೊಡ್ಡ ಸಂಖ್ಯೆಯಲ್ಲಿರುವಿರಿ. ಆದರೆ ನೀವಾಗ ಪ್ರವಾಹದಲ್ಲಿ ಕೊಚ್ಚಿ ಹೋಗುವ ಕಸಕಡ್ಡಿ ಗಳಂತೆ ಹಗುರವಾಗಿರುವಿರಿ. ನಿಮ್ಮ ವೈರಿಗಳ ಹೃದಯದಿಂದ ನಿಮ್ಮ ಭೀತಿ ಹೊರಟು ಹೋಗುವುದು ಮತ್ತು ನಿಮ್ಮ ಹೃದಯಗಳಲ್ಲಿ ಹೇಡಿತನ ಮನೆ ಮಾಡುವುದು" ಎಂದು ಉತ್ತರಿಸಿದರು. ಆಗ ಒಬ್ಬರು 'ನಮ್ಮ ಹೃದಯಗಳಲ್ಲಿ ಹೇಡಿತನ ಏಕೆ ಉಂಟಾಗುವುದು' ಎಂದು ಪ್ರಶ್ನಿಸಿದರು. "ಏಕೆಂದರೆ ನೀವು ಇಹಲೋಕವನ್ನು ಪ್ರೀತಿಸುವವರೂ, ಮರಣವನ್ನು ದ್ವೇಷಿಸುವವರೂ ಆಗಿ ಬಿಡುವಿರಿ" ಎಂದು ಪ್ರವಾದಿ(ಸ) ಉತ್ತರಿಸಿದರು.

ಹ. ಅಬೂ ಹುರೈರಾ(ರ) ಹೇಳುತ್ತಾರೆ, ಅಲ್ಲಾಹನ ಪ್ರವಾದಿ(ಸ) ಹೇಳಿದರು: "ತನ್ನ ಕುದುರೆಯ ಲಗಾಮು ಹಿಡಿದು ದೇವ ಮಾರ್ಗದಲ್ಲಿ ಅದನ್ನು ಹಾರಾಡಿಸುತ್ತಾ ತಿರುಗುವವನ ಜೀವನವೇ ಅತ್ಯುತ್ತಮವಾದುದು. ಆತ ಅಪಾಯದ ಸುದ್ದಿ ಸಿಕ್ಕಿದಾಗಲೆಲ್ಲಾ ಕುದುರೆ ಸವಾರಿ ಮಾಡುತ್ತಾ ಧಾವಿಸುತ್ತಾನೆ. ಮೃತ್ಯುವನ್ನೇ ಅರಸುತ್ತಿರುವವನಂತೆ ಕೊಲೆ ಮತ್ತು ಮರಣದ ಬಗ್ಗೆ ನಿಶ್ಚಿಂತನಾಗಿರುತ್ತಾನೆ." (ಮುಸ್ಲಿಮ್)

5. ಮಹಿಳೆಯರೂ ಶ್ರಮಜೀವನ ಸಾಗಿಸಬೇಕು. ಮನೆಕೆಲಸಗಳನ್ನು ಸ್ವಹಸ್ತಗಳಿಂದ ಮಾಡಬೇಕು. ಚುರುಕುತನ ಮತ್ತು ಕಷ್ಟ, ಸಹಿಷ್ಣುತೆಯನ್ನು ರೂಢಿಸಿಕೊಳ್ಳಬೇಕು. ಸುಖ ಲೋಲುಪತೆ, ಮೈಗಳ್ಳತನ ಮತ್ತು ಸೋಮಾರಿತನದಿಂದ ದೂರವಿರಬೇಕು. ಮಕ್ಕಳನ್ನು ಕಠಿಣ ಪರಿಶ್ರಮದ ಅಭ್ಯಾಸ ಉಳ್ಳವರಾಗಿಯೇ ಬೆಳೆಸಬೇಕು. ಮನೆಯಲ್ಲಿ ಕೆಲಸದಾಳುಗಳಿದ್ದರೂ ಪ್ರತಿಯೊಂದಕ್ಕೂ ಅವರನ್ನೇ ಆಶ್ರಯಿಸಿಕೊಂಡಿರಲು ಮಕ್ಕಳನ್ನು ಅನುಮತಿಸಬೇಡಿರಿ. ಮಕ್ಕಳಿಗೆ ತಮ್ಮ ಕೆಲಸಗಳನ್ನು ತಾವೇ ಮಾಡುವ ಅಭ್ಯಾಸ ಮಾಡಿಸಬೇಕು. ಸಹಾಬಿ ಮಹಿಳೆಯರು ತಮ್ಮ ಮನೆಕೆಲಸಗಳನ್ನು ತಾವೇ ಮಾಡುತ್ತಿದ್ದರು. ಅಡುಗೆಯ ಕೆಲಸವನ್ನು ತಾವೇ ಮಾಡುತ್ತಿದ್ದರು. ಧಾನ್ಯಗಳನ್ನು ಕಡೆಯುತ್ತಿದ್ದರು. ನೀರು ತುಂಬಿಸುತ್ತಿದ್ದರು, ಬಟ್ಟೆ ಒಗೆಯುತ್ತಿದ್ದರು, ಹೊಲಿಗೆ ಮತ್ತು ಕಸೂತಿ ಕೆಲಸಗಳನ್ನು ಮಾಡುತ್ತಿದ್ದರು. ಶ್ರಮಜೀವನ ಸಾಗಿಸುತ್ತಿದ್ದರು. ಸಂದರ್ಭ ಬಂದಾಗ ರಣರಂಗದಲ್ಲಿ ಗಾಯಾಳುಗಳ ಶುಶ್ರೂಷೆ ಮಾಡುತ್ತಿದ್ದರು. ಇದರಿಂದ ಮಹಿಳೆಯರ ಆರೋಗ್ಯವೂ ಚೆನ್ನಾಗಿರುತ್ತಿತ್ತು. ಚಾರಿತ್ರ್ಯವೂ ಉತ್ತಮವಾಗಿರುತ್ತಿತ್ತು. ಮಕ್ಕಳ ಮೇಲೆ ಇದು ಉತ್ತಮ ಪ್ರಭಾವ ಬೀರುತ್ತಿತ್ತು. ಮನೆವಾರ್ತೆಯ ಕೆಲಸ ಕಾರ್ಯಗಳಲ್ಲಿ ತಲ್ಲೀನ ಳಾಗಿದ್ದು, ಮುಖದಲ್ಲಿ ಅಡುಗೆ ಮನೆಯ ಹೊಗೆ, ಮಸಿ ಇತ್ಯಾದಿಗಳ ಲಕ್ಷಣಗಳೊಂದಿಗೆ ಬಳಲಿದಂತೆ ತೋರುವ ಗೃಹಿಣಿಯೇ ಇಸ್ಲಾಮಿನ ದೃಷ್ಟಿಯಲ್ಲಿ ಮೆಚ್ಚುಗೆಗೆ ಪಾತ್ರಳಾದವಳು.

"ನಾನು ಮತ್ತು ಮುಖದಲ್ಲಿ ಅಡುಗೆ ಮನೆಯ ಹೊಗೆಮಸಿಗಳ ಗುರುತಿರುವ ಮಹಿಳೆಯು ಪುನರುತ್ಥಾನ ದಿನದಂದು ಈ ರೀತಿ ನಿಕಟವಿರುವೆವು" ಎನ್ನುತ್ತಾ ಪ್ರವಾದಿ(ಸ) ತಮ್ಮ ತೋರ್ಬೆರಳು ಮತ್ತು ಮಧ್ಯ ಬೆರಳನ್ನು ಜೋಡಿಸಿ ತೋರಿಸಿರುವರು.

6. ಪ್ರಭಾತದಲ್ಲಿ ಬಹುಬೇಗ ಏಳುವ ಅಭ್ಯಾಸ ಬೆಳೆಸಿರಿ. ನಿದ್ರೆಯಲ್ಲಿ ಸಮತೋಲನ

ವನ್ನು ಕಾಪಾಡಿರಿ. ಶರೀರಕ್ಕೆ ಬೇಕಾಗುವಷ್ಟು ವಿಶ್ರಾಂತಿ ಸಿಗದೆ ಹಾಗೂ ಮೈ, ಕೈಗಳು ಬಳಲಿಕೆ ದೂರವಾಗದೆ ಇರುವಷ್ಟು ಕಡಿಮೆ ನಿದ್ರಿಸಬೇಡಿ. ಸೋಮಾರಿತನ ಬಂದು ಬಿಡುವಷ್ಟು ಹೆಚ್ಚು ನಿದ್ರಿಸಲೂ ಬೇಡಿರಿ. ರಾತ್ರಿ ಬೇಗ ಮಲಗಿ ಮುಂಜಾನೆ ಬೇಗ ಏಳುವ ಅಭ್ಯಾಸ ಬೆಳೆಸಿರಿ.

ಬೆಳಿಗ್ಗೆದ್ದು ನಮಾಝ್ ನಿರ್ವಹಿಸಿರಿ. ಬಳಿಕ ತೋಟ ಅಥವಾ ಮೈದಾನದಲ್ಲಿ ವಿಹಾರಕ್ಕಾಗಿ ಹೊರಡಿರಿ. ಮುಂಜಾನೆಯ ತಂಗಾಳಿಯು ಆರೋಗ್ಯದ ಮೇಲೆ ಉತ್ತಮ ಪ್ರಭಾವ ಬೀರುತ್ತದೆ. ನಿಮ್ಮ ದೇಹದಾರ್ಢ್ಯಕ್ಕನುಸಾರ ಪ್ರತಿನಿತ್ಯ ಸಾಮಾನ್ಯ ವ್ಯಾಯಾಮ ಮಾಡುತ್ತಲಿರಿ. ತೋಟಗಳಲ್ಲಿ ವಿಹಾರಕ್ಕೆ ಹೊರಡುವುದೆಂದರೆ ಪ್ರವಾದಿವರ್ಯರಿಗೆ(ಸ) ಬಲು ಇಷ್ಟ. ಒಮ್ಮೊಮ್ಮೆ ಪ್ರವಾದಿ(ಸ) ಸ್ವಯಂ ವಿಹಾರಕ್ಕಾಗಿ ತೋಟಗಳಿಗೆ ಹೋಗುತ್ತಿದ್ದರು. ರಾತ್ರಿ ಇಶಾ ನಮಾಝ್‌ನ ಬಳಿಕ ಜಾಗರಣೆ ಮತ್ತು ಮಾತುಕತೆಗಳನ್ನು ಪ್ರವಾದಿ(ಸ) ವಿರೋಧಿಸಿ ರುವರು. ಧಾರ್ಮಿಕ ವಿಷಯ ಅಥವಾ ಮನೆಯವರೊಂದಿಗೆ ಅಗತ್ಯದ ಮಾತುಕತೆಗಾಗಿ ಮಾತ್ರ ಇಶಾದ ಬಳಿಕ ಜಾಗರಣೆ ಮಾಡಬಹುದೆಂದೂ ಸಾರಿರುವರು.

7. ಆತ್ಮಸಂಯಮದ ಅಭ್ಯಾಸ ಬೆಳೆಸಿರಿ. ವಿಕಾರ-ವಿಚಾರಗಳ ಮೇಲೂ ಆಶೆಕಾಮನೆಗಳ ಮೇಲೂ ಹತೋಟಿಯಿಡಿರಿ. ಮನಸ್ಸನ್ನು ಚಂಚಲಗೊಳಿಸಬೇಡಿ. ವಿಚಾರಗಳನ್ನು ಗೊಂದಲಮಯಗೊಳಿಸದಿರಿ. ದೃಷ್ಟಿಯನ್ನು ನಿಯಂತ್ರಿಸಿರಿ. ದೇಹೇಚ್ಛೆಗಳ ಭ್ರಷ್ಟತೆ ಮತ್ತು ದೃಷ್ಟಿಯ ಉಡಾಳತೆಯಿಂದ ಮನ, ಮಸ್ತಿಷ್ಕಗಳ ಶಾಂತಿ ಕೆಡುತ್ತದೆ. ಅಂತಹವರ ಮುಖ ಕಾಂತಿಹೀನವಾಗುತ್ತದೆ. ಆಕರ್ಷಣೆಯನ್ನು ಕಳೆದುಕೊಳ್ಳುತ್ತದೆ. ಪುರುಷ ಸಹಜ ಗುಣಗಳು ನಷ್ಟ ಹೊಂದುತ್ತವೆ. ಜೀವನದ ಎಲ್ಲ ರಂಗಗಳಲ್ಲೂ ಆತ ನಿರುತ್ಸಾಹಿ, ಹತಾಶ ಮತ್ತು ಹೇಡಿಯಾಗಿ ಪರಿಣಮಿಸುತ್ತಾನೆ.

ಪ್ರವಾದಿ(ಸ) ಹೇಳುತ್ತಾರೆ "ಕೆಟ್ಟ ದೃಷ್ಟಿ, ಕಣ್ಣಿನ ವ್ಯಭಿಚಾರವಾಗಿದೆ ಮತ್ತು ಅಶ್ಲೀಲ ಮಾತುಕತೆ ನಾಲಗೆಯ ವ್ಯಭಿಚಾರವಾಗಿದೆ. ಶರೀರ ಬಯಸುತ್ತದೆ, ಗುಪ್ತಾಂಗವು ಅದನ್ನು ಈಡೇರಿಸುತ್ತದೆ ಅಥವಾ ನಿರಾಕರಿಸುತ್ತದೆ".

ಓರ್ವ ದಾರ್ಶನಿಕ ಈ ರೀತಿ ಹೇಳಿದ್ದಾನೆ: ಮುಸ್ಲಿಮರೇ! ವ್ಯಭಿಚಾರವನ್ನು ಸಮೀಪಿಸದಿರಿ. ಅದರಲ್ಲಿ ಆರು ಕೆಡುಕುಗಳಿವೆ. ಮೂರು ಲೌಕಿಕ, ಮೂರು ಪಾರತ್ರಿಕ. ಲೌಕಿಕ ಕೆಡುಕುಗಳು ಈ ರೀತಿ ಇವೆ: i) ಮನುಷ್ಯನ ಮುಖದ ಕಾಂತಿ ಮತ್ತು ಆಕರ್ಷಣೆ ಹೋಗಿ ಬಿಡುತ್ತದೆ. ii) ಮನುಷ್ಯನ ಮೇಲೆ ಬಡತನದ ಸಂಕಷ್ಟಗಳು ಎರಗುತ್ತವೆ. iii) ಅವನ ಆಯುಷ್ಯ ಕಡಿಮೆಯಾಗುತ್ತದೆ.

8. ಮಾದಕ ಪದಾರ್ಥಗಳನ್ನು ವರ್ಜಿಸಿರಿ. ಮಾದಕ ದ್ರವ್ಯಗಳು ಮೆದುಳನ್ನೂ ಜಠರವನ್ನೂ ಬಾಧಿಸುತ್ತವೆ. ಶರಾಬಂತೂ ನಿಷಿದ್ಧವೇ ಆಗಿದೆ. ಇನ್ನಿತರ ಮಾದಕ ವಸ್ತು ಗಳನ್ನೂ ಪೂರ್ಣವಾಗಿ ತೊರೆಯಬೇಕು.

9. ಎಲ್ಲ ಕೆಲಸಗಳಲ್ಲೂ ಸಮತೋಲನವನ್ನು ಕಾಪಾಡಿರಿ. ದೈಹಿಕ ಶ್ರಮ, ವೈಚಾರಿಕ ಶೋಧ, ದಾಂಪತ್ಯ ಸಂಬಂಧ, ಅನ್ನ-ಪಾನೀಯ ಸೇವನೆ, ನಿದ್ರೆ ಮತ್ತು ವಿಶ್ರಾಂತಿ, ಚಿಂತೆ

ಮತ್ತು ನಗು, ಮನೋರಂಜನೆ ಮತ್ತು ಆರಾಧನೆ, ನಡೆನುಡಿ ಇತ್ಯಾದಿ ಎಲ್ಲ ವಿಷಯಗಳಲ್ಲೂ ಸಮತೋಲನ ಪಾಲಿಸಿರಿ. ಇದುವೇ ಒಳಿತಿನ ಮೂಲವೆಂಬುದನ್ನು ಮನಗಾಣಿರಿ.

ಪ್ರವಾದಿ(ಸ) ಹೇಳುತ್ತಾರೆ: "ಸಿರಿವಂತಿಕೆಯಲ್ಲಿ ಸಮತೋಲನದ ಮಾರ್ಗ ಬಲು ಚೆನ್ನ. ಬಡತನದಲ್ಲಿ ಸಮತೋಲನದ ಹಾದಿ ಬಲು ಚೆನ್ನ. ಆರಾಧನೆಯಲ್ಲಿ ಸಮತೋಲನದ ರೀತಿ ಬಲು ಚೆನ್ನ." (ಕನ್ಝುಲ್ ಅಲ್‌ಮಾಲ್)

10. ಸಮಯಕ್ಕೆ ಸರಿಯಾಗಿ ಊಟ ಮಾಡಿರಿ. ಹೊಟ್ಟೆ ತುಂಬ ಉಣ್ಣಬೇಡಿರಿ. ಸದಾ ಏನನ್ನಾದರೂ ಜಗಿಯುತ್ತಿರಬೇಡಿರಿ. ಹಸಿವಾದ ಬಳಿಕವೇ ಊಟ ಮಾಡಿರಿ. ಹಸಿವು ಇನ್ನೂ ಉಳಿದಿರುವಾಗಲೇ ಊಟ ಮುಗಿಸಿರಿ. ಹಸಿವು ಶಮನವಾದ ಬಳಿಕ ಉಣ್ಣಲೇ ಬೇಡಿರಿ.

ಪ್ರವಾದಿ(ಸ) ಹೇಳುತ್ತಾರೆ, "ಸತ್ಯವಿಶ್ವಾಸಿ ಒಂದು ಕರುಳಿಗೆ ತಿಂದರೆ ಸತ್ಯನಿಷೇಧಿ ಏಳು ಕರುಳಿಗೆ ತಿನ್ನುತ್ತಾನೆ." (ತಿರ್ಮಿದಿ)

ದೇಹದ ಆರೋಗ್ಯವು ಪಚನಾಂಗಗಳ ಆರೋಗ್ಯವನ್ನು ಹೊಂದಿಕೊಂಡಿದೆ. ಹೆಚ್ಚು ತಿನ್ನುವುದರಿಂದ ಪಚನಾಂಗದ ಆರೋಗ್ಯ ಕೆಡುತ್ತದೆ. ಒಂದು ವಚನದಲ್ಲಿ ಪ್ರವಾದಿ(ಸ) ಅದನ್ನು ಈ ರೀತಿ ಸ್ಪಷ್ಟಪಡಿಸಿರುವರು: "ಪಚನಾಂಗವು ದೇಹಕ್ಕೆ ಕೊಳ ಇದ್ದಂತೆ. ನರಗಳು ಅದರಿಂದ ತಮ್ಮ ದಾಹ ನೀಗಿ ಸುತ್ತವೆ. ಆದ್ದರಿಂದ ಪಚನಾಂಗವು ಆರೋಗ್ಯವಂತವಾಗಿದ್ದರೆ ನರಗಳೂ ಸ್ವಸ್ಥವಾಗಿ ರುತ್ತವೆ. ಪಚನಾಂಗಕ್ಕೆ ಕಾಯಿಲೆಯಾದರೆ ನರಗಳು ರೋಗ ಹೀರಿಯೇ ಮರಳುತ್ತವೆ." (ಬೈಹಕಿ)

ಮಿತ ಆಹಾರ ಸೇವನೆಯನ್ನು ಪ್ರೋತ್ಸಾಹಿಸುತ್ತಾ ಪ್ರವಾದಿ(ಸ) ಈ ರೀತಿ ಹೇಳಿರುವರು, "ಒಬ್ಬನ ಊಟವು ಇಬ್ಬರಿಗೆ ಸಾಕಾಗುವುದು".

11. ಸರಳ ಆಹಾರವನ್ನೇ ಸೇವಿಸಿರಿ. ಇಡೀ ಗೋಧಿಯ ರೊಟ್ಟಿ ತಿನ್ನಿರಿ. ಹೆಚ್ಚು ಬಿಸಿಯಾದ ಆಹಾರವನ್ನು ಸೇವಿಸದಿರಿ. ಮಸಾಲೆ ಮತ್ತು ಖಾರದ ವಸ್ತುಗಳಿಂದ ಹಾಗೂ ಅನಾವಶ್ಯಕ ಸ್ವಾದಪ್ರಿಯತೆಯಿಂದ ದೂರವಿರಿ.

ಶೀಘ್ರ ಜೀರ್ಣವಾಗುವ ಆರೋಗ್ಯ ಹಾಗೂ ಶಕ್ತಿದಾಯಕ ಸರಳ ಆಹಾರಗಳನ್ನೇ ಸೇವಿಸಿರಿ. ಕೇವಲ ಬಾಯಿ ಚಪಲ ಮತ್ತು ಸುಖಲೋಲುಪತೆಯ ಹಿಂದೆ ಬೀಳಬೇಡಿರಿ. ಪ್ರವಾದಿ(ಸ) ಇಡೀ ಗೋಧಿಯ ರೊಟ್ಟಿಯನ್ನು ಇಷ್ಟಪಡುತ್ತಿದ್ದರು. ಹೆಚ್ಚು ನಯವಾದ ಮತ್ತು ಮೈದಾದ ಚಪಾತಿಯನ್ನು ಇಷ್ಟಪಡುತ್ತಿರಲಿಲ್ಲ. ಹೊಗೆಯೇಳುತ್ತಿರುವಷ್ಟು ಬಿಸಿಯಾದ ಆಹಾರವನ್ನು ಸೇವಿಸುತ್ತಿರಲಿಲ್ಲ. ಅದು ತಣ್ಣಗಾಗುವುದನ್ನು ಕಾಯುತ್ತಿದ್ದರು. ಹೆಚ್ಚು ಬಿಸಿಯಾದ ಆಹಾರದ ಬಗ್ಗೆ "ದೇವನು ನಮಗೆ ಬೆಂಕಿ ತಿನ್ನಲು ಹೇಳಲಿಲ್ಲ"ವೆಂದೂ "ಬಿಸಿಯಾದ ಆಹಾರದಲ್ಲಿ ಸಮೃದ್ಧಿ ಇಲ್ಲ"ವೆಂದೂ ಹೇಳುತ್ತಿದ್ದರು. ಮಾಂಸವನ್ನು ಪ್ರವಾದಿ(ಸ) ಇಷ್ಟಪಡುತ್ತಿದ್ದರು. ಮುಖ್ಯವಾಗಿ ತೋಳು, ಕುತ್ತಿಗೆ ಮತ್ತು ಬೆನ್ನಿನ ಮಾಂಸ ವೆಂದರೆ ಅವರಿಗೆ ಅಚ್ಚುಮೆಚ್ಚು. ದೈಹಿಕ ಶಕ್ತಿ ಮತ್ತು ಧರ್ಮಯೋಧನಂತಹ ಸ್ವಭಾವಕ್ಕೆ ಮಾಂಸವು ಅಗತ್ಯ ಹಾಗೂ ಅನಿವಾರ್ಯ ಆಹಾರವಾಗಿದೆ. ಸತ್ಯವಿಶ್ವಾಸಿಯ ಹೃದಯದಲ್ಲಿ ಧರ್ಮಯೋಧನಂತಹ ಹುರುಪು ತುಂಬಿ ತುಳುಕಬೇಕು.

ಪ್ರವಾದಿ(ಸ) ಹೇಳುತ್ತಾರೆ: "ದೇವ ಮಾರ್ಗದಲ್ಲಿ ಸಮರ ಹೂಡದೆ ಹಾಗೂ ಆ ಸಮರದ ಬಗೆಗಿನ ಆಶೆಯನ್ನು ಇಟ್ಟುಕೊಳ್ಳದೆ ಮರಣ ಹೊಂದಿದವನು ಒಂದು ವಿಧದ ಕಪಟ ವಿಶ್ವಾಸದಲ್ಲಿ ಮರಣ ಹೊಂದುವನು." (ಮುಸ್ಲಿಮ್)

12. ಊಟವನ್ನು ಸಾವಕಾಶವಾಗಿ ಮತ್ತು ಚೆನ್ನಾಗಿ ಜಗಿದು ಸೇವಿಸಿರಿ. ದುಃಖ ದುಮ್ಮಾನ, ಖೇದ ಮತ್ತು ಗಾಬರಿಯ ಸ್ಥಿತಿಯಲ್ಲಿ ಆಹಾರ ಸೇವಿಸದಿರಿ. ಸಂತೋಷ ಮತ್ತು ಮಾನಸಿಕ ನೆಮ್ಮದಿಯೊಂದಿಗೆ ಮಾಡಿದ ಊಟವು ದೇಹಕ್ಕೆ ಶಕ್ತಿಯನ್ನು ನೀಡುತ್ತದೆ. ದುಃಖ, ಚಿಂತೆ ಮತ್ತು ವ್ಯಾಕುಲತೆಯೊಂದಿಗೆ ಮಾಡಿದ ಊಟವು ಕರುಳನ್ನು ಪ್ರತಿಕೂಲವಾಗಿ ಬಾಧಿಸುತ್ತದೆ. ಅದರಿಂದ ದೇಹಕ್ಕೆ ತಕ್ಕ ಶಕ್ತಿಯೂ ಲಭಿಸುವುದಿಲ್ಲ. ಊಟದ ಮೇಜಿನಲ್ಲಿ ಖಿನ್ನರಂತೆ ಮೌನವಾಗಿ ಇರಬೇಡಿ. ಹೆಚ್ಚು ಸಂತೋಷದ ಪ್ರಕಟಣೆಗಾಗಿ ಗಹಗಹಿಸಿಯೂ ನಗಬೇಡಿರಿ. ಊಟದ ಮಧ್ಯೆ ಗಹಗಹಿಸಿ ನಗುವುದು ಕೆಲವೊಮ್ಮೆ ಪ್ರಾಣಕ್ಕೆ ಅಪಾಯಕರ ವಾದೀತು.

ಊಟದ ಮೇಜಿನಲ್ಲಿ ಸಂತುಲಿತವಾಗಿ ನಗುತ್ತಾ ಮಾತನಾಡುತ್ತಾ ಇರಿ. ಸಂತೋಷ ಮತ್ತು ಪ್ರಸನ್ನತೆಯೊಂದಿಗೆ ಊಟ ಮಾಡಿರಿ. ದೇವನ ಅನುಗ್ರಹಗಳ ಬಗ್ಗೆ ಆತನನ್ನು ವಂದಿಸಿರಿ. ರೋಗಿಯಾದಾಗ ಅಗತ್ಯದ ಪಥ್ಯವನ್ನೂ ಮಾಡಿರಿ.

ಉಮ್ಮುಮುಂದಿರ್(ರ) ಹೇಳುತ್ತಾರೆ: ಒಮ್ಮೆ ಪ್ರವಾದಿ(ಸ) ನಮ್ಮ ಮನೆಗೆ ಬಂದರು. ಮನೆಯಲ್ಲಿ ಖರ್ಜೂರದ ಗೊಂಚಲುಗಳು ನೇತಾಡುತ್ತಿದ್ದುವು. ಪ್ರವಾದಿವರ್ಯರು(ಸ) ಅದರಿಂದ ತಿನ್ನತೊಡಗಿದರು. ಅವರ ಜೊತೆಗಿದ್ದ ಹ. ಅಲೀ(ರ) ಕೂಡ ತಿನ್ನಲು ಮುಂದಾದಾಗ ಪ್ರವಾದಿ(ಸ) ಅವರನ್ನು ತಡೆದರು. "ನೀವೀಗ ಕಾಯಿಲೆಯಿಂದ ಎದ್ದವರು. ನೀವಿದನ್ನು ತಿನ್ನಬೇಡಿರಿ" ಎಂದರು. ಹ. ಅಲೀ(ರ) ಮತ್ತೆ ತಿನ್ನಲಿಲ್ಲ. ನಾನು ಸ್ವಲ್ಪ ಬಾರ್ಲಿ ಮತ್ತು ಬೀಟ್‌ರೂಟ್ ಅಡುಗೆ ಮಾಡಿದೆ. ಆಗ ಪ್ರವಾದಿ(ಸ) ಹ. ಅಲೀಯವರಿಗೆ(ರ) "ಇದನ್ನು ತಿನ್ನಿರಿ. ಇದು ನಿಮಗೆ ಒಳ್ಳೆಯದು" ಎಂದು ಹೇಳಿದರು.

ಪ್ರವಾದಿವರ್ಯರ(ಸ) ಊಟದ ಮೇಜಿನಲ್ಲಿ ಯಾರಾದರೂ ಅತಿಥಿಗಳಿದ್ದರೆ 'ತಿನ್ನಿರಿ, ತಿನ್ನಿರಿ ಇನ್ನೂ ತಿನ್ನಿರಿ' ಎಂದು ಆಗಾಗ ಹೇಳುತ್ತಿದ್ದರು. ಅತಿಥಿಯು ಚೆನ್ನಾಗಿ ತಿಂದ ಬಳಿಕ ಹಾಗೂ ಪೂರ್ಣವಾಗಿ ನಿರಾಕರಿಸಿದ ಬಳಿಕ ಮಾತ್ರ ಒತ್ತಾಯ ಮಾಡುತ್ತಿರಲಿಲ್ಲ.

ಪ್ರವಾದಿ(ಸ) ಅತ್ಯಂತ ಸಂತೋಷಕರ ವಾತಾವರಣದಲ್ಲಿ ಹಾಗೂ ಅಗತ್ಯದ ಮಾತುಕತೆಯೊಂದಿಗೇ ಊಟ ಮಾಡುತ್ತಿದ್ದರು.

13. ಮಧ್ಯಾಹ್ನ ಊಟದ ಬಳಿಕ ಸ್ವಲ್ಪ ಹೊತ್ತು ವಿಶ್ರಮಿಸಿರಿ. ರಾತ್ರಿಯ ಊಟದ ಬಳಿಕ ಸ್ವಲ್ಪ ಹೊತ್ತು ಅಡ್ಡಾಡಿರಿ. ಊಟವಾದ ಕೂಡಲೇ ಕಠಿಣ ಮಾನಸಿಕ ಅಥವಾ ದೈಹಿಕ ಶ್ರಮದ ಕೆಲಸ ಮಾಡದಿರಿ. ಅರಬಿ ಭಾಷೆಯ ಪ್ರಸಿದ್ಧ ನಾಣ್ಣುಡಿಯೊಂದಿದೆ

تَغَدَّ تَمَدَّ تَعَشَّ تَمَشَّ

'ತಗದ್ದ ತಮದ್ದ ತಅಶ್ಶ ತಮಶ್ಶ' (ಮಧ್ಯಾಹ್ನದ ಭೋಜನದ ಬಳಿಕ ವಿರಮಿಸಿರಿ, ರಾತ್ರಿ ಭೋಜನದ ಬಳಿಕ ವಿಹರಿಸಿರಿ.)

14. ಕಣ್ಣಿನ ಸಂರಕ್ಷಣೆಯ ಬಗ್ಗೆ ಆಸ್ಥೆ ವಹಿಸಿರಿ. ತೀಕ್ಷ್ಣ ಬೆಳಕನ್ನು ನೋಡದಿರಿ. ಸೂರ್ಯನತ್ತ ದಿಟ್ಟಿಸಬೇಡಿರಿ. ಹೆಚ್ಚು ತೀಕ್ಷ್ಣ ಅಥವಾ ಹೆಚ್ಚು ಮಂದವಾದ ಬೆಳಕಿನಲ್ಲಿ ಓದದಿರಿ. ಸ್ಪಷ್ಟ ಮತ್ತು ಮಧ್ಯಮ ಬೆಳಕಿನಲ್ಲೇ ಓದಿರಿ. ಹೆಚ್ಚು ಹೊತ್ತು ನಿದ್ದೆಗೆಡಬೇಡಿರಿ. ಧೂಳಿನಿಂದ ಕಣ್ಣನ್ನು ರಕ್ಷಿಸಿರಿ. ಕಣ್ಣಿಗೆ ಸುರ್ಮ ಹಚ್ಚಿರಿ. ಸದಾ ಕಣ್ಣನ್ನು ಸ್ವಚ್ಛವಾಗಿಡಲು ಪ್ರಯತ್ನಿಸಿ. ಹೊಲಗದ್ದೆಗಳಲ್ಲಿ ಹಾಗೂ ತೋಟಗಳಲ್ಲಿ ವಿಹರಿಸಿರಿ. ಹಸಿರು ನೋಡುವುದರಿಂದ ದೃಷ್ಟಿಯ ಮೇಲೆ ಉತ್ತಮ ಪರಿಣಾಮವಾಗುತ್ತದೆ. ಕೆಟ್ಟ ದೃಷ್ಟಿಯಿಂದ ಕಣ್ಣನ್ನು ರಕ್ಷಿಸಿರಿ. ಇದರಿಂದ ಕಣ್ಣುಗಳು ಕಾಂತಿಹೀನವಾಗುತ್ತವೆ. ಆರೋಗ್ಯವನ್ನೂ ಕೆಡಿಸುತ್ತದೆ. "ನಿಮ್ಮ ಮೇಲೆ ನಿಮ್ಮ ಕಣ್ಣಿನ ಹಕ್ಕು ಇದೆ" ಎಂದು ಪ್ರವಾದಿ(ಸ) ಹೇಳಿರುವರು. ಸತ್ಯ ವಿಶ್ವಾಸಿಯು ಈ ಅನುಗ್ರಹವನ್ನು ಗೌರವಿಸಬೇಕು. ಅದನ್ನು ದೇವನ ಇಚ್ಛೆಗನುಸಾರ ಬಳಸಬೇಕು. ಅದರ ಸ್ವಚ್ಛತೆ ಮತ್ತು ಸಂರಕ್ಷಣೆಯ ಬಗ್ಗೆ ಗಮನವಿರಿಸಬೇಕು. ಕಣ್ಣಿಗೆ ಪ್ರಯೋಜನವಾಗುವ ಎಲ್ಲ ಕ್ರಮಗಳನ್ನು ಕೈಗೊಳ್ಳಬೇಕು. ಕಣ್ಣಿಗೆ ತೊಂದರೆಯಾಗುವ ಎಲ್ಲ ವಿಷಯಗಳಿಂದಲೂ ದೂರವಿರಬೇಕು. ಹೀಗೆಯೇ ದೇಹದ ಇತರ ಅಂಗಾಂಗಗಳ ಸಂರಕ್ಷಣೆಯ ಬಗ್ಗೆಯೂ ಆಸ್ಥೆ ವಹಿಸಿರಿ. "ಜನರೇ! ಕಣ್ಣಿಗೆ ಸುರ್ಮ ಹಚ್ಚಿರಿ. ಸುರ್ಮ ಕಣ್ಣಿನ ಕಸವನ್ನು ದೂರೀಕರಿಸುತ್ತದೆ ಮತ್ತು ಕೂದಲನ್ನು ಬೆಳೆಸುತ್ತದೆ" ಎಂದು ಪ್ರವಾದಿ(ಸ) ಆದೇಶಿಸಿರುವರು. (ತಿರ್ಮಿದಿ)

15. ಹಲ್ಲುಗಳ ಸ್ವಚ್ಛತೆ ಮತ್ತು ರಕ್ಷಣೆಯ ಬಗ್ಗೆ ಜಾಗ್ರತೆ ವಹಿಸಿರಿ. ಹಲ್ಲುಗಳನ್ನು ಸ್ವಚ್ಛವಾಗಿಡುವುದರಿಂದ ಆಹ್ಲಾದ ಸಿಗುತ್ತದೆ. ಜೀರ್ಣಕ್ರಿಯೆ ಚುರುಕುಗೊಳ್ಳುತ್ತದೆ. ಹಲ್ಲುಗಳೂ ಗಟ್ಟಿಮುಟ್ಟಾಗಿರುತ್ತವೆ. ಹಲ್ಲುಜ್ಜುವುದನ್ನು ರೂಢಿಸಿರಿ. ದಂತಮಂಜನ ಇತ್ಯಾದಿಗಳನ್ನು ಬಳಸಿರಿ. ಎಲೆ ಅಡಿಕೆಗಳನ್ನು ಹೆಚ್ಚಾಗಿ ಉಪಯೋಗಿಸಿ ಹಲ್ಲುಗಳನ್ನು ಕೆಡಿಸಬೇಡಿರಿ. ಊಟದ ಬಳಿಕ ಹಲ್ಲುಗಳನ್ನು ಸರಿಯಾಗಿ ಶುಚಿಗೊಳಿಸಿರಿ.

ಹಲ್ಲುಗಳು ಕೊಳಕಾಗಿದ್ದರೆ ತರತರದ ರೋಗಗಳು ಬರುತ್ತವೆ. ಆದ್ದರಿಂದಲೇ ಪ್ರವಾದಿ(ಸ) ನಿದ್ದೆಯಿಂದ ಎದ್ದಾಗಲೆಲ್ಲಾ ದಂತಮಂಜನ ಮಾಡುತ್ತಿದ್ದರು. (ಮುಸ್ಲಿಮ್)

ಹ. ಅನಸ್(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು- "ನಾನು ನಿಮಗೆ ಹಲ್ಲುಜ್ಜುವ ಬಗ್ಗೆ ಬಹಳ ತಾಕೀತು ಮಾಡಿರುತ್ತೇನೆ." (ಬುಖಾರಿ)

ಹ. ಆಯಿಶಾ(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು: "ಹಲ್ಲುಜ್ಜುವುದು ಬಾಯಿಯನ್ನು ಸ್ವಚ್ಛಗೊಳಿಸುತ್ತದೆ ಮತ್ತು ದೇವನನ್ನು ಸಂತುಷ್ಟಗೊಳಿಸುತ್ತದೆ." (ನಸಾಈ)

ಪ್ರವಾದಿ(ಸ) ಹೇಳಿದರು, "ನನ್ನ ಸಮುದಾಯಕ್ಕೆ ತ್ರಾಸದಾಯಕವಾದೀತೆಂಬ ಭಯವಿಲ್ಲದಿರುತ್ತಿದ್ದರೆ ನಾನು ಹಲ್ಲುಜ್ಜುವುದನ್ನು ಎಲ್ಲ ನಮಾಝ್‌ಗಳ ವೇಳೆಯೂ ಕಡ್ಡಾಯಗೊಳಿಸುತ್ತಿದ್ದೆ." (ಅಬೂದಾವೂದ್)

ಒಮ್ಮೆ ಕೆಲವು ಮುಸ್ಲಿಮರು ಪ್ರವಾದಿವರ್ಯರ(ಸ) ಭೇಟಿಗೆ ಬಂದಾಗ ಅವರ

ಹಲ್ಲುಗಳು ಹಳದಿಯಾಗಿರುವುದನ್ನು ಕಂಡ ಪ್ರವಾದಿ(ಸ) ಅವರಿಗೆ ಹಲ್ಲುಜ್ಜುವುದನ್ನು ರೂಢಿಗೊಳಿಸಲು ಆದೇಶಿಸಿದರು. (ಮುಸ್ನದ್ ಅಹ್ಮದ್)

16. ಮಲ-ಮೂತ್ರ ವಿಸರ್ಜನೆಯ ಅಗತ್ಯ ಕಂಡಾಗಲೇ ಅದನ್ನು ಪೂರ್ತಿಗೊಳಿಸಿರಿ. ಈ ಬೇಡಿಕೆಗಳನ್ನು ತಡೆ ಹಿಡಿಯುವುದರಿಂದ ಜೀರ್ಣಾಂಗ- ಮತ್ತು ಬುದ್ಧಿಶಕ್ತಿಯ ಮೇಲೆ ಕೆಟ್ಟ ಪರಿಣಾಮ ಬೀಳುತ್ತದೆ.

17. ಶುದ್ಧತೆ, ಸ್ವಚ್ಛತೆಗಳ ಬಗ್ಗೆ ಜಾಗರೂಕರಾಗಿರಿ. ಪ್ರವಾದಿ(ಸ) ಹೇಳಿದರು, "ಸ್ವಚ್ಛತೆಯು ಸತ್ಯವಿಶ್ವಾಸದ ಅರ್ಧಾಂಶವಾಗಿದೆ."

ಸ್ವಚ್ಛತೆಯು ಇಷ್ಟು ಪ್ರಾಮುಖ್ಯವಾದುದರಿಂದಲೇ ಪ್ರವಾದಿ(ಸ) ನೈರ್ಮಲ್ಯದ ಕುರಿತು ಸವಿಸ್ತಾರವಾದ ನಿಯಮಗಳನ್ನು ನೀಡಿರುವರು ಮತ್ತು ಎಲ್ಲ ವಿಷಯದಲ್ಲೂ ಶುಚಿತ್ವವನ್ನು ಪಾಲಿಸುವಂತೆ ಆದೇಶಿಸಿರುವರು. ತಿಂಡಿತಿನಿಸುಗಳನ್ನು ಮುಚ್ಚಿಡಿರಿ. ಅವುಗಳನ್ನು ಕೆಡುವುದರಿಂದ ರಕ್ಷಿಸಿರಿ. ನೊಣಗಳಿಂದ ಕಾಪಾಡಿರಿ. ಪಾತ್ರೆಗಳನ್ನು ಶುಚಿಯಾಗಿಡಿರಿ. ಬಟ್ಟೆಬರೆ, ಪೀಠೋಪಕರಣ ಮತ್ತು ಹಾಸಿಗೆಗಳನ್ನೂ ನಿರ್ಮಲವಾಗಿಡಿರಿ. ದೇಹದ ನೈರ್ಮಲ್ಯಕ್ಕಾಗಿ ವುಝೂ ಮತ್ತು ಸ್ನಾನವನ್ನು ಮಾಡುತ್ತಲಿರಿ. ದೇಹ, ಬಟ್ಟೆಬರೆಗಳು ಮತ್ತಿತರ ಉಪಯೋಗದ ವಸ್ತುಗಳನ್ನು ಶುಚಿಯಾಗಿಡುವುದರಿಂದ ಮನಸ್ಸಿಗೆ ಶಾಂತಿ ಮತ್ತು ಸಂತೋಷ ಲಭಿಸುತ್ತದೆ. ದೇಹಕ್ಕೂ ಲವಲವಿಕೆ ಲಭಿಸುತ್ತದೆ. ಮನುಷ್ಯನ ಆರೋಗ್ಯದ ಮೇಲೆ ಇವು ಉತ್ತಮ ಪ್ರಭಾವವನ್ನು ಬೀರುತ್ತದೆ.

ಹ. ಅದೀ ಬಿನ್ ಹಾತಿಮ್(ರ) ಹೇಳುತ್ತಾರೆ, "ನಾನು ಇಸ್ಲಾಮ್ ಸ್ವೀಕರಿಸಿದಂದಿ ನಿಂದ ಪ್ರತಿಯೊಂದು ನಮಾಝ್‌ನ ವೇಳೆಯೂ ವುಝೂವಿನಿಂದ ಇರುತ್ತೇನೆ."

ಒಮ್ಮೆ ಪ್ರವಾದಿ(ಸ) ಹ. ಬಿಲಾಲ್‌ರೊಡನೆ(ರ) ಈ ರೀತಿ ಪ್ರಶ್ನಿಸಿದರು. "ನಿನ್ನೆ ನೀವು ನನಗಿಂತ ಮುಂಚೆ ಸ್ವರ್ಗಕ್ಕೆ ಹೇಗೆ ಪ್ರವೇಶಿಸಿದಿರಿ?" ಹ. ಬಿಲಾಲ್(ರ) ಹೇಳಿದರು, "ನಾನು ಅದಾನ್ ಹೇಳಿದಾಗಲೆಲ್ಲಾ ಎರಡು ರಕಅತ್ ನಮಾಝ್ ತಪ್ಪದೆ ನಿರ್ವಹಿಸುತ್ತೇನೆ. ವುಝೂ ಮುರಿದಾಗಲೆಲ್ಲಾ ವುಝೂ ಮಾಡಿಕೊಂಡು ಸದಾ ವುಝೂವಿನಿಂದ ಇರಲು ಪ್ರಯತ್ನಿಸುತ್ತೇನೆ."

ಹ. ಅಬೂ ಹುರೈರಾ(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು, "ಪ್ರತಿಯೊಬ್ಬ ಮುಸ್ಲಿಮನೂ ವಾರಕ್ಕೊಮ್ಮೆ ಸ್ನಾನ ಮಾಡಬೇಕಾದುದು ಹಾಗೂ ತಲೆ ಮತ್ತು ಶರೀರವನ್ನು ಚೆನ್ನಾಗಿ ತೊಳೆಯಬೇಕಾದುದು ದೇವನ ಹಕ್ಕಾಗಿದೆ." (ಬುಖಾರಿ)

❖ ❖ ❖ ❖

# ಉಡುಪು

1. ಉಡುಪು ನಾಚಿಕೆ, ಲಜ್ಜೆ, ಮಾನ-ಮರ್ಯಾದೆಗಳ ಬೇಡಿಕೆಗಳನ್ನು ಪೂರೈಸುವಂತಹದ್ದಾಗಿರಬೇಕು. ಶರೀರವನ್ನು ಮರೆಸುವ ಮತ್ತು ರಕ್ಷಿಸುವಂತಹದ್ದಾಗಿರಬೇಕು. ಸಂಸ್ಕೃತಿ, ಸಭ್ಯತೆ, ಅಚ್ಚುಕಟ್ಟು ಮತ್ತು ಸೌಂದರ್ಯವನ್ನು ಪ್ರಕಟಿಸುವಂತಹದ್ದಾಗಿರಬೇಕು.

ಪವಿತ್ರ ಕುರ್‌ಆನಿನಲ್ಲಿ ಅಲ್ಲಾಹನು ತನ್ನ ಈ ಕೊಡುಗೆಯ ಬಗ್ಗೆ ಪ್ರಸ್ತಾಪಿಸುತ್ತಾ ಈ ರೀತಿ ಆದೇಶಿಸಿರುವನು:

يٰبَنِيْٓ اٰدَمَ قَدْ اَنْزَلْنَا عَلَيْكُمْ لِبَاسًا يُّوَارِيْ سَوْاٰتِكُمْ وَرِيْشًا

"ಓ ಆದಮರ ಸಂತತಿಗಳೇ! ನಾವು ನಿಮ್ಮ ದೇಹದ ಲಜ್ಜಾರ್ಹ ಅಂಶಗಳನ್ನು ಮರೆ ಮಾಚಲಿಕ್ಕಾಗಿ ಹಾಗೂ ನಿಮಗೆ ರಕ್ಷಣೆ ಮತ್ತು ಸೌಂದರ್ಯವನ್ನು ಒದಗಿಸಲಿಕ್ಕಾಗಿ ನಿಮಗೆ ಉಡುಪನ್ನು ದಯಪಾಲಿಸಿರುವೆವು." (ಅಲ್ ಅಲ್‌ರಾಫ್: 26)

ಮೂಲದಲ್ಲಿರುವ 'ರೀಷ್' ಎಂಬ ಪದವನ್ನು ಹಕ್ಕಿಯ ರೆಕ್ಕೆಗಳಿಗೆ ಬಳಸಲಾಗುತ್ತದೆ. ಹಕ್ಕಿಯ ರೆಕ್ಕೆ ಅದರ ದೇಹವನ್ನು ರಕ್ಷಿಸುತ್ತದೆ. ಅದರ ಸೌಂದರ್ಯದ ಉಪಾಧಿಯೂ ಆಗಿದೆ. ಸಾಮಾನ್ಯ ಬಳಕೆಯಲ್ಲಿ 'ರೀಷ್' ಎಂಬ ಪದಕ್ಕೆ ಸೌಂದರ್ಯ ಹಾಗೂ ಉತ್ತಮ ಉಡುಪು ಎಂಬ ಅರ್ಥವಿದೆ.

ಉಡುಪಿನ ಉದ್ದೇಶ ಹವಾಗುಣದ ಪರಿಣಾಮದಿಂದ ದೇಹವನ್ನು ಹಾಗೂ ಸೌಂದರ್ಯವನ್ನು ರಕ್ಷಿಸುವುದು ಮಾತ್ರವಲ್ಲ ಅದರ ಮೂಲ ಉದ್ದೇಶ ಮಾನ ಮುಚ್ಚು ವುದಾಗಿದೆ. ದೇವನು ಲಜ್ಜೆ, ನಾಚಿಕೆಗಳನ್ನು ಮನುಷ್ಯ ಪ್ರಕೃತಿಯಲ್ಲೇ ಇಟ್ಟಿರುವನು. ಆದ್ದರಿಂದಲೇ ಆದಮ್ ಮತ್ತು ಹವ್ವಾರಿಂದ(ಅ) ಸ್ವರ್ಗದ ಉಡುಪು ಕಸಿಯಲ್ಪಟ್ಟಾಗ ಅವರು ಸ್ವರ್ಗದ ಎಲೆಗಳಿಂದ ತಮ್ಮ ಮಾನವನ್ನು ಮುಚ್ಚಿಕೊಂಡರು. ಉಡುಪಿನ ಆಯ್ಕೆಯಲ್ಲಿ ಈ ಉದ್ದೇಶಕ್ಕೆ ಪ್ರಥಮ ಪ್ರಾಶಸ್ತ್ಯ ನೀಡಬೇಕು. ಮಾನ ಮುಚ್ಚುವ ಉದ್ದೇಶ ವನ್ನು ಸರಿಯಾಗಿ ಪೂರೈಸುವ ಉಡುಪನ್ನೇ ಆರಿಸಬೇಕು. ಜೊತೆಗೆ ಉಡುಪು ಹವಾಗುಣದ ಪ್ರಭಾವದಿಂದ ರಕ್ಷಣೆ ನೀಡುವಂತಹದ್ದೂ ಆಗಿರಬೇಕು. ಸೌಂದರ್ಯ, ಅಚ್ಚುಕಟ್ಟು ಮತ್ತು ಸಂಸ್ಕೃತಿಯನ್ನು ಅಭಿವ್ಯಕ್ತಗೊಳಿಸಲೂ ಆ ಉಡುಪು ಪರ್ಯಾಪ್ತವಾಗಿರಬೇಕು. ಉಡುಪು ಧರಿಸಿದ ಬಳಿಕ ನೀವು ನಗೆಪಾಟಲಿಗೀಡಾಗು ವಂತಾಗಬಾರದು.

2. ಉಡುಪು ಧರಿಸುವಾಗ ಅದು ಅಲ್ಲಾಹನು ಮನುಷ್ಯರಿಗೆ ಮಾತ್ರ ಅನುಗ್ರಹಿಸಿದ

ಕೊಡುಗೆಯೆಂಬುದನ್ನು ಸ್ಮರಿಸಿರಿ. ಇತರ ಸೃಷ್ಟಿಗಳೆಲ್ಲವೂ ಈ ಅನುಗ್ರಹದಿಂದ ವಂಚಿತವಾಗಿವೆ. ಈ ವಿಶಿಷ್ಟ ಕೊಡುಗೆಗಾಗಿ ದೇವನನ್ನು ಸ್ತುತಿಸಿರಿ. ಈ ವಿಶಿಷ್ಟ ಅನುಗ್ರಹವನ್ನು ಪಡೆದು ದೇವನಿಗೆ ಕೃತಘ್ನರಾಗಬೇಡಿರಿ. ಅವನ ಆಜ್ಞೋಲ್ಲಂಘನೆ ಮಾಡದಿರಿ. ಉಡುಪು ದೇವನ ಒಂದು ಮಹಾನ್ ದೃಷ್ಟಾಂತ. ವಸ್ತ್ರ ಧರಿಸುವಾಗ ಈ ಭಾವನೆ ನಿಮ್ಮಲ್ಲಿ ಜಾಗ್ರತವಾಗಲಿ. ಪ್ರವಾದಿ(ಸ) ಕಲಿಸಿದ ಪ್ರಾರ್ಥನೆಯ ರೂಪದಲ್ಲಿ ನಿಮ್ಮ ಕೃತಜ್ಞತೆಯನ್ನು ಅಲ್ಲಾಹನಿಗರ್ಪಿಸಿರಿ.

3. ಧರ್ಮನಿಷ್ಠೆಯ ಉಡುಗೆಯೇ ಅತ್ಯುತ್ತಮ ಉಡುಗೆ. ಧರ್ಮನಿಷ್ಠೆಯ ಉಡುಪೆಂದರೆ ಆಂತರಿಕ ಪರಿಶುದ್ಧತೆ ಮತ್ತು ಬಾಹ್ಯ ದೇವಭಕ್ತಿಯ ವಸ್ತ್ರಧಾರಣೆ. ಅರ್ಥಾತ್ ಧರ್ಮ ಶಾಸ್ತ್ರದಂತೆ ಧರ್ಮನಿಷ್ಠರಿಗೆ ಯೋಗ್ಯವಾದ ಉಡುಗೆಯನ್ನೇ ತೊಡಿರಿ. ಅದರಿಂದ ಅಹಂಕಾರ, ದರ್ಪದ ಪ್ರದರ್ಶನವಾಗಬಾರದು. ಸ್ತ್ರೀಯರನ್ನು ಪುರುಷರಂತೆ ಮಾಡುವ ಮತ್ತು ಪುರುಷರನ್ನು ಸ್ತ್ರೀಯರಂತೆ ಮಾಡುವ ವಸ್ತ್ರವಾಗದಿರಲಿ. ಬಟ್ಟೆಯನ್ನು ಧರಿಸಿದ ಮೇಲೆ ಧರಿಸಿದವನು ಓರ್ವ ಸಜ್ಜನ ಮತ್ತು ಧರ್ಮನಿಷ್ಠ ವ್ಯಕ್ತಿಯೆಂಬುದು ಪ್ರಕಟವಾಗಬೇಕು. ಮಹಿಳೆಯರು ಅವರಿಗೆ ಧರ್ಮಶಾಸ್ತ್ರ ವಿಧಿಸಿದ ಪರಿಧಿಯೊಳಗಿದ್ದು ಮತ್ತು ಪುರುಷರು ಅವರಿಗೆ ಧರ್ಮಶಾಸ್ತ್ರ ನಿಗದಿಪಡಿಸಿದ ಮೇರೆಯೊಳಗಿದ್ದು ಬಟ್ಟೆಬರೆಗಳನ್ನು ಧರಿಸಬೇಕು.

4. ಹೊಸ ಉಡುಪನ್ನು ಧರಿಸುವಾಗ ಅದನ್ನು ದಯಪಾಲಿಸಿದ ಅಲ್ಲಾಹನನ್ನು ಸಸಂತೋಷ ಸ್ಮರಿಸಿರಿ. ಕೃತಜ್ಞತಾಭಾವದಿಂದ ಪ್ರವಾದಿ(ಸ) ಹೊಸ ಬಟ್ಟೆ ಧರಿಸುವಾಗ ಹೇಳುತ್ತಿದ್ದ ಪ್ರಾರ್ಥನೆಯನ್ನು ಹೇಳಿರಿ.

ಹ. ಅಬೂ ಸಈದ್ ಖುದ್ರೀ(ರ) ಹೇಳುತ್ತಾರೆ, ಪ್ರವಾದಿ(ಸ) ಹೊಸ ಬಟ್ಟೆಬರೆಗಳನ್ನು ತೊಡುವಾಗ ಅದರ ಹೆಸರೆತ್ತಿ ಈ ರೀತಿ ಪ್ರಾರ್ಥಿಸುತ್ತಿದ್ದರು:

اَللّٰهُمَّ لَكَ الْحَمْدُ اَنْتَ كَسَوْتَنِيْهِ، اَسْئَلُكَ خَيْرَهُ وَخَيْرَ مَا صُنِعَ لَهُ
وَاَعُوْذُ بِكَ مِنْ شَرِّهِ وَشَرِّ مَا صُنِعَ لَهُ (ابوداود)

"ಅಲ್ಲಾಹುಮ್ಮ ಲಕಲ್‌ಹಮ್ದು ಅಂತ ಕಸೌತನೀಹಿ, ಅಸ್‌ಅಲುಕ ಖೈರಹೂ ವಖೈರ ಮಾಸುನಿಅ ಲಹೂ ವಅಊದುಬಿಕ ಮಿನ್ ಶರ್‍ರಿಹೀ ವಶರ್‍ರಿ ಮಾಸುನಿಅ ಲಹೂ."

(ಅಬೂದಾವೂದ್)

(ಓ ಅಲ್ಲಾಹ್! ನಿನಗೆ ವಂದನೆ. ನೀನು ನನಗೆ ಈ ವಸ್ತ್ರ ತೊಡಿಸಿದೆ. ನಾನು ನಿನ್ನಿಂದ ಇದರ ಒಳಿತನ್ನು ಬಯಸುತ್ತೇನೆ ಮತ್ತು ಇದು ಯಾವುದಕ್ಕಾಗಿ ಮಾಡಲ್ಪಟ್ಟಿದೆಯೋ ಅದರ ಒಳಿತನ್ನೂ ಬಯಸುತ್ತೇನೆ. ಈ ವಸ್ತ್ರದ ಕೆಡುಕಿನಿಂದ ಮತ್ತು ಇದು ಯಾವುದಕ್ಕಾಗಿ ಮಾಡಲ್ಪಟ್ಟಿದೆಯೋ ಅದರ ಕೆಡುಕಿನಿಂದ ನಾನು ನಿನ್ನ ಅಭಯ ಯಾಚಿಸುತ್ತೇನೆ.)

ಪ್ರಾರ್ಥನೆಯ ತಾತ್ಪರ್ಯವೇನೆಂದರೆ ದೇವಾ! ನೀನು ದಯಪಾಲಿಸಿದ ಈ ವಸ್ತ್ರವನ್ನು

ನೀನು ಬಯಸುವ ಪಾವನ ಉದ್ದೇಶಗಳಿಗಾಗಿ ಮಾತ್ರ ಉಪಯೋಗಿಸುವಂತೆ ಅನುಗ್ರಹಿಸು. ಇದರಿಂದ ನಾನು ಮಾನ ಮುಚ್ಚುವಂತಾಗಲಿ. ಅಶ್ಲೀಲತೆಯಿಂದ ನನ್ನ ಅಂತರ್ಯವನ್ನೂ ಬಾಹ್ಯವನ್ನೂ ರಕ್ಷಿಸುವಂತಾಗಲಿ. ಧರ್ಮಶಾಸ್ತ್ರದ ಸೀಮೆಯೊಳಗಿದ್ದುಕೊಂಡು ನಾನು ನನ್ನ ಶರೀರವನ್ನು ರಕ್ಷಿಸುವಂತಾಗಲಿ. ಇದು ನನಗೆ ಸೌಂದರ್ಯದ ಸಾಧನವಾಗಲಿ. ಈ ಬಟ್ಟೆ ಧರಿಸಿ ಇತರರ ಮೇಲೆ ದರ್ಪ ತೋರುವಂತಾಗದಿರಲಿ. ಇದು ಅಹಂಭಾವದ ಪ್ರದರ್ಶನವಾಗದಿರಲಿ. ಈ ಅನುಗ್ರಹವನ್ನು ಉಪಯೋಗಿಸುವಲ್ಲಿ ನಿನ್ನ ಧರ್ಮವು ನಿನ್ನ ದಾಸದಾಸಿಯರಿಗೆ ನಿಗದಿಪಡಿಸಿದ ಮೇರೆಗಳನ್ನು ನೀನು ಮೀರುವಂತಾಗದಿರಲಿ.

ಪ್ರವಾದಿ(ಸ) ಹೇಳಿರುವುದಾಗಿ ಹ. ಉಮರ್(ರ) ವರದಿ ಮಾಡುತ್ತಾರೆ: "ಹೊಸ ಬಟ್ಟೆ ಧರಿಸುವವನು ಸಾಧ್ಯವಿದ್ದರೆ ತನ್ನ ಹಳೆಯ ಬಟ್ಟೆಯನ್ನು ಯಾವನಾದರೂ ಬಡವನಿಗೆ ದಾನ ಮಾಡಲಿ. ಹೊಸ ಬಟ್ಟೆ ಧರಿಸುವಾಗ ಈ ರೀತಿ ಪ್ರಾರ್ಥಿಸಲಿ:

اَلْحَمْدُ لِلّٰهِ الَّذِىْ كَسَانِىْ مَا اُوَارِىْ بِهٖ عَوْرَتِىْ وَاَتَجَمَّلُ بِهٖ فِىْ حَيَاتِىْ

**"ಅಲ್‌ಹಮ್ದುಲಿಲ್ಲಾಹಿಲ್ಲದೀ ಕಸಾನೀ ಮಾ ಉವಾರೀ ಬಿಹಿ ಔರತೀ ವ ಅತಜಮ್ಮಲು ಬಿಹಿ ಫೀ ಹಯಾತೀ."**

(ನಾನು ಮಾನ ಮುಚ್ಚಿಕೊಳ್ಳುವ ಮತ್ತು ಜೀವನದಲ್ಲಿ ನನ್ನ ಸೌಂದರ್ಯದ ಹೇತುವಾಗಿರುವ ಈ ವಸ್ತ್ರವನ್ನು ನನಗೆ ತೊಡಿಸಿದ ಅಲ್ಲಾಹನಿಗೆ ಸರ್ವಸ್ತುತಿ.)

ಯಾರು ಹೊಸ ಬಟ್ಟೆಯನ್ನು ಧರಿಸುವಾಗ ಈ ರೀತಿ ಪ್ರಾರ್ಥಿಸುತ್ತಾನೋ ಅಲ್ಲಾಹನು ಜೀವನದಲ್ಲಿಯೂ ಮರಣದ ಬಳಿಕವೂ ಆತನನ್ನು ತನ್ನ ರಕ್ಷಣೆಯಲ್ಲಿಡುವನು. (ತಿರ್ಮಿದಿ)

5. ಬಟ್ಟೆ ಧರಿಸುವಾಗ ಬಲ ಪಾರ್ಶ್ವವನ್ನು ನೆನಪಿಡಿರಿ. ಅಂಗಿ ಇತ್ಯಾದಿ ಧರಿಸುವಾಗ ಮೊದಲು ಬಲಕೈಗೂ ಇಜಾರು ಇತ್ಯಾದಿ ತೊಡುವಾಗ ಮೊದಲು ಬಲಕಾಲಿಗೂ ಹಾಕಿರಿ. ಪ್ರವಾದಿ(ಸ) ಅಂಗಿ ಧರಿಸುವಾಗ ಮೊದಲು ಬಲಕೈ ನಂತರ ಎಡಕೈ ಹಾಕುತ್ತಿದ್ದರು. ಹಾಗೆಯೇ ಪಾದರಕ್ಷೆ ತೊಡುವಾಗ ಮೊದಲು ಬಲಕಾಲಿಗೂ ಅನಂತರ ಎಡಕಾಲಿಗೂ ತೊಡುತ್ತಿದ್ದರು. ಪಾದರಕ್ಷೆ ಕಳಚುವಾಗ ಮೊದಲು ಎಡಕಾಲಿನಿಂದ ತರುವಾಯ ಬಲಕಾಲಿ ನಿಂದ ಕಳಚುತ್ತಿದ್ದರು.

6. ಬಟ್ಟೆ ಧರಿಸುವ ಮೊದಲು ಒಮ್ಮೆ ಅದನ್ನು ಕೊಡವಿರಿ. ಅದರಲ್ಲೇನಾದರೂ ಮಾರಕ ಜಂತುಗಳಿರಬಹುದು. ಅದರಿಂದ ಏನಾದರೂ ಹಾನಿ ತಟ್ಟಬಹುದು. ಒಮ್ಮೆ ಪ್ರವಾದಿ(ಸ) ಕಾಡಿನಲ್ಲಿ ತಮ್ಮ ಪಾದರಕ್ಷೆಯನ್ನು ತೊಡುತ್ತಿದ್ದರು. ಒಂದನ್ನು ಹಾಕಿ ಇನ್ನೊಂದನ್ನು ಹಾಕಲುದ್ಯುಕ್ತರಾಗುವಾಗ ಒಂದು ಕಾಗೆ ಬಂದು ಅದನ್ನು ಕಸಿದುಕೊಂಡು ಹಾರಿಹೋಯಿತು. ಅನಂತರ ಎತ್ತರದಿಂದ ಕೆಳಗೆ ಬಿಟ್ಟಿತು. ಕೆಳಗೆ ಬಿದ್ದ ಪೆಟ್ಟಿಗೆ ಅದರೊಳಗಿದ್ದ ಒಂದು ಹಾವು ಹೊರಗೋಡಿತು. ಇದನ್ನು ಕಂಡು ಪ್ರವಾದಿ(ಸ) ಅಲ್ಲಾಹನನ್ನು ವಂದಿಸುತ್ತಾ ಈ ರೀತಿ ಆದೇಶಿಸಿದರು: "ಪ್ರತಿಯೊಬ್ಬ ಮುಸ್ಲಿಮನೂ ಪಾದರಕ್ಷೆಯನ್ನು ಧರಿಸುವಾಗ ಅದನ್ನೊಮ್ಮೆ ಕೊಡವಿಕೊಳ್ಳಲಿ".

(ತಬ್ರಾನಿ)

7. ಬಿಳಿ ವಸ್ತ್ರ ಧರಿಸಿರಿ. ಗಂಡಸರಿಗೆ ಬಿಳಿ ವಸ್ತ್ರವೇ ಭೂಷಣ. ಪ್ರವಾದಿ(ಸ) ಹೇಳಿರುವರು: "ಬಿಳಿ ವಸ್ತ್ರ ಧರಿಸಿರಿ. ಇದು ಅತ್ಯುತ್ತಮ ಉಡುಪು. ಜೀವನದಲ್ಲೂ ಬಿಳಿ ವಸ್ತ್ರವನ್ನೇ ಧರಿಸಬೇಕು. ಮೃತದೇಹಗಳಿಗೂ ಬಿಳಿ ವಸ್ತ್ರವನ್ನೇ ತೊಡಿಸಬೇಕು". (ತಿರ್ಮಿದಿ)

ಮತ್ತೊಂದು ಸಂದರ್ಭದಲ್ಲಿ ಪ್ರವಾದಿ(ಸ) ಹೇಳಿದರು: "ಬಿಳಿ ವಸ್ತ್ರ ಧರಿಸಿ. ಬಿಳಿ ವಸ್ತ್ರವು ಹೆಚ್ಚು ಶುದ್ಧವಾಗಿರುತ್ತದೆ. ಅದನ್ನೇ ನಿಮ್ಮ ಮೃತರಿಗೂ ತೊಡಿಸಿರಿ".

ಹೆಚ್ಚು ಶುದ್ಧವಾಗಿರುವುದೆಂದರೆ ಬಿಳಿ ಬಟ್ಟೆಯ ಮೇಲೆ ಸ್ವಲ್ಪ ಕಲೆಯಾದರೂ ಕೂಡಲೇ ಕಾಣುತ್ತದೆ. ಅದನ್ನು ಕೂಡಲೇ ತೊಳೆದು ಹಾಕಬಹುದು. ಬಣ್ಣದ ಬಟ್ಟೆಯಾದರೆ ಕಲೆ ಅಷ್ಟು ಬೇಗ ಗೊತ್ತಾಗುವುದಿಲ್ಲ. ಆದ್ದರಿಂದ ಬೇಗ ತೊಳೆಯುವ ಕಡೆಗೆ ಗಮನವೂ ಹರಿಯುವುದಿಲ್ಲ.

ಪ್ರವಾದಿ(ಸ) ಬಿಳಿ ಬಟ್ಟೆಗಳನ್ನೇ ಧರಿಸುತ್ತಿದ್ದರೆಂದು ಬುಖಾರಿಯಲ್ಲಿದೆ. ಪ್ರವಾದಿ(ಸ) ತಾವೂ ಬಿಳಿ ಬಟ್ಟೆಗಳನ್ನೇ ತೊಡುತ್ತಿದ್ದರು. ತಮ್ಮ ಅನುಯಾಯಿಗಳಾದ ಪುರುಷರಿಗೂ ಅದನ್ನೇ ಆದೇಶಿಸುತ್ತಿದ್ದರು.

8. ಇಜಾರು, ಪಂಚೆ ಮುಂತಾದವುಗಳನ್ನು ಮಣಿಗಂಟಿನ ಮೇಲೆಯೇ ಇರಿಸಿ. ಅಹಂಕಾರ, ದರ್ಪದ ಕಾರಣ ತಮ್ಮ ಪೈಜಾಮ್ ಅಥವಾ ಲುಂಗಿಯನ್ನು ಮಣಿಗಂಟಿನ ಕೆಳಕ್ಕೆ ನೇತಾಡಿಸುವವರು ಪ್ರವಾದಿವರ್ಯರ(ಸ) ದೃಷ್ಟಿಯಲ್ಲಿ ಪರಾಜಿತರು ಮತ್ತು ನತದೃಷ್ಟರು. ಅವರು ಕಠಿಣ ಶಿಕ್ಷೆಗೆ ಅರ್ಹರು. ಪ್ರವಾದಿ ಹೇಳುತ್ತಾರೆ, "ಮೂರು ವಿಧದ ಜನರೊಂದಿಗೆ ಅಲ್ಲಾಹನು ನಿರ್ಣಾಯಕ ದಿನದಂದು ಮಾತಾಡಲಿಕ್ಕಿಲ್ಲ, ಅವರನ್ನು ನೋಡಲಿಕ್ಕಿಲ್ಲ ಹಾಗೂ ಅವರನ್ನು ಶುದ್ಧಗೊಳಿಸಿ ಸ್ವರ್ಗಕ್ಕೆ ಪ್ರವೇಶ ಮಾಡಿಸಲಿಕ್ಕಿಲ್ಲ. ಬದಲಾಗಿ ಅವರಿಗೆ ಅತ್ಯಂತ ವೇದನಾಜನಕ ಶಿಕ್ಷೆ ನೀಡುವನು. ಹ. ಅಬೂದರ್ ಗಿಫಾರಿ(ರ) "ಈ ಪರಾಜಿತರು ಮತ್ತು ಭಾಗ್ಯಹೀನರು ಯಾರು?" ಎಂದು ಕೇಳಿದರು. ಅದಕ್ಕೆ ಪ್ರವಾದಿ(ಸ) ಹೇಳಿದರು: "ಅಹಂಕಾರ ದರ್ಪದಲ್ಲಿ ತನ್ನ ಇಜಾರನ್ನು ಮಣಿಗಂಟಿನ ಕೆಳಗೆ ನೇತಾಡಿಸುವವನು. ಉಪಕಾರ ಮಾಡಿದ ಮೇಲೆ ಉಪಕಾರ ಭಾರ ಇರಿಸುವವನು. ಸುಳ್ಳು ಆಣೆಗಳನ್ನು ಹಾಕಿ ತನ್ನ ವ್ಯಾಪಾರದ ಅಭಿವೃದ್ಧಿ ಬಯಸುವವನು". (ಮುಸ್ಲಿಮ್)

ಹ. ಉಬೈದ್ ಬಿನ್ ಖಾಲಿದ್(ರ) ತಮ್ಮ ಒಂದು ವೃತ್ತಾಂತವನ್ನು ಈ ರೀತಿ ವಿವರಿಸಿದ್ದಾರೆ. "ಒಮ್ಮೆ ಮದೀನಾದಲ್ಲಿ ನಡೆಯುತ್ತಿರುವಾಗ ಹಿಂದಿನಿಂದ "ನಿಮ್ಮ ಪಂಚೆಯನ್ನು ಮೇಲೆತ್ತಿರಿ. ಅದರಿಂದ ಮನುಷ್ಯ ಅಂತರಂಗ, ಬಹಿರಂಗಗಳ ಕಲ್ಮಶಗಳಿಂದ ಸುರಕ್ಷಿತನಾಗುತ್ತಾನೆ" ಎಂದು ಹೇಳುವುದು ಕೇಳಿಸಿತು. ನಾನು ತಿರುಗಿ ನೋಡಿದಾಗ ಅದು ಪ್ರವಾದಿಯವರಾಗಿದ್ದರು(ಸ). ನಾನು ಹೇಳಿದೆ "ಇದೊಂದು ಸಾಮಾನ್ಯ ಚದ್ದರ. ಇದರಲ್ಲಿ ಅಹಂಭಾವ ಬರುವುದೆಂತು". ಆಗ ಪ್ರವಾದಿ(ಸ) ಕೇಳಿದರು, "ನಿಮಗೆ ನನ್ನ ಅನುಕರಣೆ ಕಡ್ಡಾಯವಲ್ಲವೇ?" ಪ್ರವಾದಿವರ್ಯರ(ಸ) ಈ ಮಾತನ್ನು ಕೇಳುತ್ತಲೇ ನನ್ನ ದೃಷ್ಟಿ ಅವರ ಪಂಚೆಯ ಮೇಲೆ ಬಿತ್ತು. ಅದು ಕಣಕಾಲಿನ ಮಧ್ಯದಷ್ಟು ಎತ್ತರದಲ್ಲಿತ್ತು".

"ಬಟ್ಟೆಯನ್ನು ಮಣಿಗಂಟಿಗಿಂತ ಮೇಲಿಡುವುದರಿಂದ ಮನುಷ್ಯನು ಅಂತರಂಗ ಬಹಿರಂಗಗಳ ಕಲ್ಮಶಗಳಿಂದ ಸುರಕ್ಷಿತನಾಗುತ್ತಾನೆ" ಎಂಬ ಮಾತು ಬಹಳ ಅರ್ಥಗರ್ಭಿತ ವಾಗಿದೆ. ಅಂದರೆ ಬಟ್ಟೆಯು ನೆಲಕ್ಕೆ ತಾಗುವಂತಿದ್ದರೆ ಅದು ಕೊಳಕಾಗಿ ಹಾಳಾಗುವುದು, ಶುದ್ಧವಾಗಿರಲಾರದು. ಇದು ಶುದ್ಧವಾಗಿರುವವರ ಪ್ರಕೃತಿಗೆ ವಿರುದ್ಧವಾಗಿದೆ. ಹೀಗೆ ಸಾಮಾನ್ಯವಾಗಿ ಅಹಂಭಾವದಿಂದ ಮಾಡಲಾಗುತ್ತದೆ. ಅಹಂಭಾವವು ಅಂತರಂಗದ ಕಲ್ಮಶವಾಗಿದೆ. ಈ ಎಲ್ಲ ಕಾರಣಗಳು ಇಲ್ಲದೆ ಇದ್ದರೂ ಸತ್ಯವಿಶ್ವಾಸಿಯ ಮಟ್ಟಿಗೆ "ನಿಮಗೆ ಪ್ರವಾದಿವರ್ಯರ(ಸ) ಜೀವನದಲ್ಲಿ ಅತ್ಯುತ್ತಮ ಮಾದರಿಯಿದೆ" ಎಂಬ ಕುರ್‌ಆನ್ ವಚನವೇ ಸಾಕಾಗುವುದು.

ಅಬೂದಾವೂದ್ ಉದ್ಧರಿಸಿದ ಒಂದು ಹದೀಸಿನಲ್ಲಂತೂ ಅದಕ್ಕೆ ದಂಗು ಬಡಿಸುವಂತಹ ಶಿಕ್ಷೆಯಿದೆಯೆಂದು ಪ್ರವಾದಿ(ಸ) ಹೇಳಿರುವರು. ಪ್ರವಾದಿ(ಸ) ಹೇಳುತ್ತಾರೆ: "ಸತ್ಯವಿಶ್ವಾಸಿಯ ಪಂಚೆಯ ಕಣಿ ಅರ್ಧದಷ್ಟಿರಬೇಕು. ಅದರ ಕೆಳಗೆ ಮಣಿಗಂಟಿನ ವರೆಗಾದರೂ ಅಡ್ಡಿಯಿಲ್ಲ. ಆದರೆ ಮಣಿಗಂಟಿನ ಕೆಳಗೆ ಪಂಚೆಯ ಎಷ್ಟು ಭಾಗ ಇರುವುದೋ ಅದು ನರಕದಲ್ಲಿ ಉರಿಯುವುದು. ಯಾವನು ಅಹಂಕಾರ, ದರ್ಪದಿಂದ ಮಣಿಗಂಟಿನ ಕೆಳಗೆ ವಸ್ತ್ರವನ್ನು ನೇತಾಡಿಸುವನೋ ಅವನ ಕಡೆಗೆ ಅಲ್ಲಾಹನು ನಿರ್ಣಾಯಕ ದಿನದಂದು ಕಣ್ಣೆತ್ತಿಯೂ ನೋಡಲಾರ."

9. ರೇಷ್ಮೆ ಬಟ್ಟೆಗಳನ್ನು ಧರಿಸದಿರಿ. ಅದು ಮಹಿಳೆಯರ ಉಡುಪು. ಪ್ರವಾದಿವರ್ಯರು, ಪುರುಷರನ್ನು ಸ್ತ್ರೀಯರಂತೆ ಬಟ್ಟೆ ಧರಿಸುವುದನ್ನು ಮತ್ತು ಅವರಂತಹ ರೂಪ ಲಾವಣ್ಯ ಮಾಡುವುದನ್ನು ಬಲವಾಗಿ ತಡೆದಿರುವರು.

ಪ್ರವಾದಿ(ಸ) ಹೇಳಿರುವುದಾಗಿ ಹ. ಉಮರ್(ರ) ವರದಿ ಮಾಡಿರುವರು: "ರೇಷ್ಮೆ ಬಟ್ಟೆಗಳನ್ನು ಧರಿಸದಿರಿ. ಯಾರು ಇಹಲೋಕದಲ್ಲಿ ರೇಷ್ಮೆ ಧರಿಸುವನೋ ಅವನು ಪರಲೋಕದಲ್ಲಿ ಅದನ್ನು ಧರಿಸಲಾರನು." (ಬುಖಾರಿ, ಮುಸ್ಲಿಮ್)

ಒಮ್ಮೆ ಪ್ರವಾದಿ(ಸ) ಹ. ಅಲೀ(ರ) ಅವರಿಗೆ ಹೇಳಿದರು, "ಈ ರೇಷ್ಮೆ ಬಟ್ಟೆ[1]ಯನ್ನು ಹರಿದು ಅದರ ಅವಗುಂಠನ ಮಾಡಿ ಫಾತಿಮಾಗಳಿಗೆ[2] ನೀಡಿರಿ." (ಮುಸ್ಲಿಮ್)

ಮಹಿಳೆಯರು ರೇಷ್ಮೆ ಧರಿಸುವುದು ಉತ್ತಮ ಎಂದು ಇದರಿಂದ ತಿಳಿದು ಬರುತ್ತದೆ. ಆದ್ದರಿಂದಲೇ ಪ್ರವಾದಿ(ಸ), ಅದರಿಂದ ಮಹಿಳೆಯರಿಗೆ ಅವಗುಂಠನ ಮಾಡಿಸಲು ಹೇಳಿದರು. ಅನ್ಯಥಾ ಆ ಬಟ್ಟೆಯನ್ನು ಬೇರೆ ಕೆಲಸಗಳಿಗೂ ಉಪಯೋಗಿಸಬಹುದಿತ್ತು.

10. ಸ್ತ್ರೀಯರು ಮೈ ಕಾಣುವಂತಹ ತೆಳ್ಳಗಿನ ಬಟ್ಟೆಗಳನ್ನು ಧರಿಸಬಾರದು. ಶರೀರದ ಉಬ್ಬುತಗ್ಗುಗಳು ಸ್ಪಷ್ಟವೂ, ಆಕರ್ಷಕವೂ ಆಗಿ ಕಾಣುವಂತಹ ಬಿಗಿಯಾದ ಉಡುಪುಗಳನ್ನು ಧರಿಸಬಾರದು. ಇದರಿಂದ ಅವರು ಬಟ್ಟೆ ಉಟ್ಟರೂ ಉಡದವರಂತೆ ಗೋಚರಿಸುತ್ತಾರೆ. ಪ್ರವಾದಿ(ಸ) ಇಂತಹ ಲಜ್ಜಾಹೀನ ಸ್ತ್ರೀಯರಿಗೆ ಕಠಿಣ ಶಿಕ್ಷೆಯ ಎಚ್ಚರಿಕೆ

---

1. ಈ ಬಟ್ಟೆಯನ್ನು ದೂಮಾದ ಅರಸ ಉಕೈದರನು ಪ್ರವಾದಿವರ್ಯರಿಗೆ(ಸ) ಪಾರಿತೋಷಕವಾಗಿ ಕಳುಹಿಸಿದ್ದನು.
2. ಫಾತಿಮಾಗಳು ಎಂದರೆ i) ಅಲೀಯವರ(ರ) ಪತ್ನಿ ಹಾಗೂ ಪ್ರವಾದಿವರ್ಯರ(ಸ) ಪುತ್ರಿ ಫಾತಿಮತು ಝುಹ್ರಾ(ರ), ii) ಅಲಿಯವರ ತಾಯಿ ಫಾತಿಮಾ ಬಿಂತಿ ಅಸದ್(ರ), iii) ಹಮ್ಝರ ಮಗಳಾದ ಫಾತಿಮಾ(ರ).

ನೀಡಿರುವರು. "ಬಟ್ಟೆ ಧರಿಸಿಯೂ ನಗ್ನರಾಗಿರುವ, ಪರ ಪುರುಷರನ್ನು ಆಕರ್ಷಿಸುವ ಮತ್ತು ಸ್ವಯಂ ಆಕರ್ಷಿತರಾಗುವ ಸ್ತ್ರೀಯರು ನರಕವಾಸಿಗಳಾಗುವರು. ಅವರ ತಲೆಯು ವೈಯಾರದಲ್ಲಿ ಒಂಟೆಯ ಡುಬ್ಬದಂತೆ ವಕ್ರವಾಗಿರುತ್ತದೆ. ಈ ಸ್ತ್ರೀಯರು ಸ್ವರ್ಗ ಪ್ರವೇಶಿಸಲಿಕ್ಕಿಲ್ಲ. ಅದರ ಸುಗಂಧವನ್ನೂ ಸವಿಯಲಿಕ್ಕಿಲ್ಲ. ವಸ್ತುತಃ ಅದರ ಸುಗಂಧವು ಬಹಳ ದೂರದ ವರೆಗೆ ಹರಡುತ್ತದೆ". (ರಿಯಾದುಸ್ಸಾಲಿಹೀನ್)

ಒಮ್ಮೆ ಹ. ಅಸ್ಮಾ(ರ) ಬಹಳ ತೆಳ್ಳಗಿನ ಬಟ್ಟೆ ಧರಿಸಿ ಪ್ರವಾದಿವರ್ಯರ(ಸ) ಮುಂದೆ ಬಂದರು. ಪ್ರವಾದಿ(ಸ) ಕೂಡಲೇ ಮುಖ ತಿರುಗಿಸಿ ಈ ರೀತಿ ಹೇಳಿದರು: "ಅಸ್ಮಾ! ಯುವತಿ ಯಾದ ಬಳಿಕ ಮಹಿಳೆಯ ಮುಖ, ಕೈಗಳ ಹೊರತು ದೇಹದ ಇತರ ಅಂಗಗಳು ಗೋಚರಿಸುವುದು ಧರ್ಮಬದ್ಧವಲ್ಲ".

11. ಪಂಚೆ ಅಥವಾ ಇಜಾರು ಧರಿಸಿಯೂ ದೇಹ ತೆರೆದು ಕಾಣುವ ರೀತಿಯಲ್ಲಿ ಕೂರುವುದು ಮತ್ತು ಮಲಗುವುದರ ಬಗ್ಗೆ ಜಾಗ್ರತೆ ವಹಿಸಿರಿ. ಪ್ರವಾದಿ(ಸ) ಹೇಳುತ್ತಾರೆ, "ಒಂದು ಕಾಲಿಗೆ ಪಾದರಕ್ಷೆ ಹಾಕಿ ನಡೆಯದಿರಿ. ಪಂಚೆ ಧರಿಸಿ ಒಂದು ಕಾಲೆತ್ತಿ ಕುಳಿತು ಕೊಳ್ಳದಿರಿ. ಎಡ ಕೈಯಿಂದ ತಿನ್ನದಿರಿ. ಕೈ ಹೊರತೆಗೆಯಲಾಗದಂತೆ ಇಡೀ ದೇಹದ ಮೇಲೆ ಚದ್ದರ ಹಾಕಿಕೊಳ್ಳದಿರಿ. ಬೋರಲು ಮಲಗಿ ಕಾಲಿನ ಮೇಲೆ ಕಾಲಿಡಬೇಡಿ." (ಇದರಿಂದಲೂ ದೇಹವು ತೆರೆದು ಕಾಣುವ ಸಂಭವವಿದೆ).

12. ಉಡುಗೆ ತೊಡುಗೆಯಲ್ಲಿ ಸ್ತ್ರೀಪುರುಷರು ಪರಸ್ಪರ ಬಣ್ಣವಿನ್ಯಾಸಗಳನ್ನು ಅನುಕರಿಸಬಾರದು. ಪ್ರವಾದಿ(ಸ) ಹೇಳುತ್ತಾರೆ: "ಸ್ತ್ರೀಯರ ಉಡುಗೆ ತೊಡುಗೆಯನ್ನು ಅನುಕರಿಸುವ ಪುರುಷರನ್ನೂ ಪುರುಷರ ಉಡುಗೆ ತೊಡುಗೆಯನ್ನು ಅನುಕರಿಸುವ ಸ್ತ್ರೀಯರನ್ನೂ ದೇವನು ಶಪಿಸಿರುವನು". (ಬುಖಾರಿ)

ಅಬೂಹುರೈರಾ(ರ) ಹೇಳುತ್ತಾರೆ "ಪ್ರವಾದಿಯವರು(ಸ) ಸ್ತ್ರೀಯರಂತಹ ವಸ್ತ್ರ ಧರಿಸುವ ಪುರುಷರನ್ನೂ ಪುರುಷರಂತಹ ವಸ್ತ್ರ ಧರಿಸುವ ಸ್ತ್ರೀಯರನ್ನೂ ಶಪಿಸಿರುವರು". (ಅಬೂದಾವೂದ್)

ಒಮ್ಮೆ ಹ. ಆಯಿಶಾರ(ರ) ಬಳಿ ಗಂಡಸರಂಥ ಪಾದರಕ್ಷೆ ಧರಿಸಿರುವ ಓರ್ವ ಸ್ತ್ರೀಯ ಬಗ್ಗೆ ಪ್ರಸ್ತಾಪಿಸಲ್ಪಟ್ಟಾಗ ಅವರು, "ಪ್ರವಾದಿವರ್ಯರು(ಸ) ಗಂಡಸಾಗಲು ಪ್ರಯತ್ನಿಸುವ ಸ್ತ್ರೀಯನ್ನು ಶಪಿಸಿರುವರು" ಎಂದು ಹೇಳಿದರು.

13. ಸ್ತ್ರೀಯರು ಸದಾ ದುಪ್ಪಟ ಧರಿಸಿರಬೇಕು. ಅದರಿಂದ ತಲೆಯನ್ನೂ ಎದೆಯನ್ನೂ ಮರೆಸಬೇಕು. ದುಪ್ಪಟ ತಲೆ ಕೂದಲು ಕಾಣಿಸುವಷ್ಟು ತೆಳುವಾಗಿರಬಾರದು. ದುಪ್ಪಟದ ಉದ್ದೇಶ ಅಲಂಕಾರವನ್ನು ಮರೆಮಾಚುವುದಾಗಿದೆ.

ಪವಿತ್ರ ಕುರ್‌ಆನಿನಲ್ಲಿ ಅಲ್ಲಾಹನು ಈ ರೀತಿ ಹೇಳಿರುವನು:

وَلْيَضْرِبْنَ بِخُمُرِهِنَّ عَلَىٰ جُيُوبِهِنَّ

"ಮತ್ತು ತಮ್ಮ ಎದೆಯ ಮೇಲೆ ತಮ್ಮ ಮೇಲು ಹೊದಿಕೆಯ ಸೆರಗನ್ನು ಹಾಕಿಕೊಂಡಿರಲಿ".

(ಅನ್ನೂರ್: 31)

ಒಮ್ಮೆ ಪ್ರವಾದಿವರ್ಯರ(ಸ) ಬಳಿ ಈಜಿಪ್ಟ್‌ನಲ್ಲಿ ನಿರ್ಮಿತವಾದ ತೆಳ್ಳಗಿನ ಮಕ್ಮಲ್ ಬಟ್ಟೆ ಬಂತು. ಪ್ರವಾದಿ(ಸ) ಅದರಿಂದ ಒಂದು ತುಂಡು ಹರಿದು ದಹಿಯಾಕಲ್ಬಿ ಎಂಬವರಿಗೆ ನೀಡಿದರು. "ಇದರ ಒಂದು ತುಂಡಿನಿಂದ ನೀವು ಅಂಗಿ ಹೊಲಿಸಿರಿ. ಇನ್ನೊಂದು ತುಂಡನ್ನು ನಿಮ್ಮ ಪತ್ನಿಗೆ ದುಪ್ಪಟ ಮಾಡಲು ಕೊಡಿ. ಆದರೆ ದೇಹವು ಹೊರಗೆ ಕಾಣದಿರಲು ಅದರ ಅಡಿಗೆ ಬೇರೆ ಬಟ್ಟೆ ಇಡಬೇಕು" ಎಂದು ಆದೇಶಿಸಿದರು. (ಅಬೂದಾವೂದ್)

ಕುರ್‌ಆನ್ ಮತ್ತು ಹದೀಸ್‌ಗೆ ಅನುಗುಣವಾಗಿ ದೇವಾಜ್ಞೆಗಳ ಉದ್ದೇಶವನ್ನು ಈಡೇರಿಸಿರಿ. ಮೂರಂಗುಲದ ಪಟ್ಟಿಯೊಂದನ್ನು ಕುತ್ತಿಗೆಯ ಹಾರದಂತೆ ಹಾಕಿ ಅಲ್ಲಾಹನ ಮತ್ತು ಪ್ರವಾದಿವರ್ಯರ(ಸ) ಆದೇಶಗಳನ್ನು ನಗೆಪಾಟಲಿಗೀಡು ಮಾಡದಿರಿ!

14. ಸದಾ ನಿಮ್ಮ ಅಂತಸ್ತಿಗೆ ತಕ್ಕ ಉಡುಪನ್ನೇ ಧರಿಸಿರಿ. ನಿಮ್ಮ ಉಡುಪು ಅಹಂಕಾರದ ಹಾಗೂ ತೋರಿಕೆಯ ವಸ್ತ್ರವಾಗಿರಬಾರದು. ಬೆಲೆಬಾಳುವ ಬಟ್ಟೆ ಧರಿಸಿ ಇತರರನ್ನು ಕೀಳಾಗಿ ಕಾಣಲೂ ಬಾರದು. ನಿಮ್ಮ ಶ್ರೀಮಂತಿಕೆಯ ಪ್ರದರ್ಶನವೂ ಆಗ ಬಾರದು. ನಿಮ್ಮ ಶಕ್ತಿಗೆ ಮಿೂರುವಷ್ಟು ಬೆಲೆಬಾಳುವ ಬಟ್ಟೆಯನ್ನು ಧರಿಸಬೇಡಿರಿ. ಇದು ನಿಮ್ಮನ್ನು ಅಪವ್ಯಯದ ಪಾಪಕ್ಕೆ ಗುರಿಪಡಿಸೀತು. ಎಲ್ಲವೂ ಇದ್ದೂ ಇಲ್ಲದವನಂತೆ ಕಾಣುವ ವಸ್ತ್ರವನ್ನು ಧರಿಸಬೇಡಿರಿ. ನಿಮ್ಮ ವೇಷ ಭೂಷಣವೇ ಯಾಚನಾತ್ಮಕವಾಗದಿರಲಿ. ಸದಾ ನಿಮ್ಮ ಅಂತಸ್ತಿಗೆ ತಕ್ಕ ಶುಭ್ರ ವಸ್ತ್ರವನ್ನೇ ಧರಿಸಿರಿ.

ಕೆಲವರು ಸದಾ ಹರಿದ ಮತ್ತು ತೇಪೆ ಹಚ್ಚಿದ ಬಟ್ಟೆಗಳನ್ನೇ ಧರಿಸುತ್ತಾರೆ. ಇದನ್ನು ಧಾರ್ಮಿಕತೆಯ ಲಕ್ಷಣವೆಂದೂ ಪರಿಗಣಿಸುತ್ತಾರೆ. ಮಾತ್ರವಲ್ಲ ಶುಭ್ರವಾದ ಉತ್ತಮ ಬಟ್ಟೆಗಳನ್ನು ಧರಿಸುವವರನ್ನು ಅವರು ಲೌಕಿಕರೆಂದು ಭಾವಿಸುತ್ತಾರೆ. ವಸ್ತುತ ಧಾರ್ಮಿಕತೆಯ ಈ ಕಲ್ಪನೆಯೇ ವಿಕೃತವಾದುದು. ಹ. ಅಬುಲ್ ಹಸನ್ ಅಲಿ ಶಾದಿಲೀ(ರ) ಅವರು ಒಮ್ಮೆ ಅತ್ಯುತ್ತಮ ಬಟ್ಟೆ ಧರಿಸಿದ್ದರು. ಓರ್ವ ಹರಿದ ಬಟ್ಟೆಧಾರಿ ಸೂಫಿಯವರು ಅವರ ಈ ಆಡಂಬರವನ್ನು ಆಕ್ಷೇಪಿಸಿದರು. ದೇವಭಕ್ತರು ಈ ರೀತಿಯ ಬೆಲೆಬಾಳುವ ಬಟ್ಟೆಗಳನ್ನು ಧರಿಸುವರೇ?" ಎಂದರು. ಹ. ಶಾದಿಲೀಯವರು(ರ) "ಇದು ದೇವನ ಕೊಡುಗೆಯ ಪ್ರದರ್ಶನ ಹಾಗೂ ಅವನ ಸ್ತುತಿಯಾಗಿದೆ ಮತ್ತು ನಿಮ್ಮ ಈ ದುರವಸ್ಥೆಯು ಯಾಚನಾತ್ಮಕವಾಗಿದೆ. ನೀವು ನಿಮ್ಮ ಈ ವೇಷ ಭೂಷಣಗಳ ಮೂಲಕ ಜನರ ಮುಂದೆ ಯಾಚಕರಾಗಿ ಮಾರ್ಪಟ್ಟಿರುವಿರಿ" ಎಂದರು. ಧಾರ್ಮಿಕತೆಯು ಹರಿದ ಮತ್ತು ತೇಪೆ ಹಚ್ಚಿದ ಬಟ್ಟೆಯಲ್ಲೋ ಆಡಂಬರದ ಉಡುಗೆ ತೊಡುಗೆಯಲ್ಲೋ ಇರುವುದಲ್ಲ. ಧರ್ಮವು ಮನುಷ್ಯನ ಉದ್ದೇಶ ಶುದ್ಧಿ ಮತ್ತು ವಿಚಾರ ಶುದ್ಧಿಯನ್ನು ಹೊಂದಿಕೊಂಡಿದೆ. ವಾಸ್ತವದಲ್ಲಿ ಮನುಷ್ಯನು ಎಲ್ಲ ವಿಷಯಗಳಲ್ಲೂ ತನ್ನ ಅಂತಸ್ತಿಗೆ ತಕ್ಕ ಸಂತುಲಿತ ವಿಧಾನವನ್ನೇ ಅವಲಂಬಿಸಬೇಕು. ಹರುಕು ಮುರುಕು ಬಟ್ಟೆ ಧರಿಸಿ ಧಾರ್ಮಿಕತೆಯ ಸೋಗು ಹಾಕಬಾರದು. ಅತ್ಯಾಕರ್ಷಕ ಉಡುಪು ಧರಿಸಿ ಹೆಮ್ಮೆ ಪಡಲೂಬಾರದು.

ಹ. ಅಬುಲ್ ಅಹ್ವಸ್‌ರ(ರ) ತಂದೆ ತಮ್ಮ ಒಂದು ವೃತ್ತಾಂತವನ್ನು ಈ ರೀತಿ ವಿವರಿಸಿ

ದ್ದಾರೆ: ಒಮ್ಮೆ ನಾನು ಅತ್ಯಂತ ನಿಕೃಷ್ಟ ಮತ್ತು ಸಾಮಾನ್ಯ ಉಡುಗೆಯಲ್ಲಿ ಪ್ರವಾದಿವರ್ಯರ(ಸ) ಸನ್ನಿಧಿಯಲ್ಲಿ ಹಾಜರಾದೆ. ಪ್ರವಾದಿ(ಸ) "ನಿಮ್ಮ ಬಳಿ ಸಂಪತ್ತು ಇದೆಯೇ?" ಎಂದು ಪ್ರಶ್ನಿಸಿದರು. ನಾನು "ಇದೆ" ಎಂದಾಗ ಯಾವ ರೀತಿಯ ಸಂಪತ್ತು ಎಂದು ವಿಚಾರಿಸಿದರು. ಅದಕ್ಕುತ್ತರವಾಗಿ ನಾನು ನನ್ನ ಬಳಿ ಎಲ್ಲ ರೀತಿಯ ಸಂಪತ್ತೂ ಇದೆ. ದೇವನು ನನಗೆ ಒಂಟೆ, ದನ, ಆಡು, ಕುದುರೆ, ಗುಲಾಮರು ಇತ್ಯಾದಿ ಎಲ್ಲವನ್ನೂ ದಯಪಾಲಿಸಿದ್ದಾನೆ" ಎಂದಾಗ, "ದೇವನು ನಿಮಗೆ ಇಷ್ಟು ಸಂಪತ್ತು ನೀಡಿರುವಾಗ ಅವನ ಅನುಗ್ರಹದ ಪ್ರಭಾವ ನಿಮ್ಮ ದೇಹದ ಮೇಲೂ ಗೋಚರಿಸಬೇಕು" ಎಂದು ಪ್ರವಾದಿ(ಸ) ಆದೇಶಿಸಿದರು. (ಮಿಷ್ಕಾತ್)

ತಾತ್ಪರ್ಯವೇನೆಂದರೆ ನಿಮಗೆ ಅಲ್ಲಾಹನು ಎಲ್ಲವನ್ನು ದಯಪಾಲಿಸಿರುವಾಗ ನೀವು ದರಿದ್ರರ ವೇಷ ಭೂಷಣದಲ್ಲಿ ಏಕಿದ್ದೀರಿ? ಇದು ಅವನಿಗೆ ತೋರುವ ಕೃತಘ್ನತೆಯಾಗಿದೆ.

ಹ. ಜಾಬಿರ್(ರ) ಹೇಳುತ್ತಾರೆ, ಒಮ್ಮೆ ಪ್ರವಾದಿ(ಸ) ನಮ್ಮಲ್ಲಿಗೆ ಭೇಟಿ ನೀಡಿದರು. ತಲೆಕೂದಲು ಚದುರಿರುವ ಹಾಗೂ ಮೈ ಕೊಳಕಾಗಿರುವ ಒಬ್ಬ ವ್ಯಕ್ತಿಯನ್ನು ಕಂಡರು. "ತನ್ನ ಕೂದಲುಗಳನ್ನು ಬಾಚಿಕೊಳ್ಳಲು ಇವನ ಬಳಿ ಒಂದು ಬಾಚಣಿಗೆಯಿಲ್ಲವೇ?" ಎಂದು ಪ್ರಶ್ನಿಸಿದರು. ಇನ್ನೊಬ್ಬ ವ್ಯಕ್ತಿ ಕೊಳಕು ಬಟ್ಟೆಯನ್ನು ಧರಿಸಿರುವುದನ್ನು ಕಂಡು "ಇವನ ಬಳಿ ಬಟ್ಟೆ ಒಗೆಯುವ ವಸ್ತು (ಸಾಬೂನು ಇತ್ಯಾದಿ) ಇಲ್ಲವೇ" ಎಂದು ಪ್ರಶ್ನಿಸಿದರು. (ಮಿಷ್ಕಾತ್)

ಒಬ್ಬ ವ್ಯಕ್ತಿ ಪ್ರವಾದಿವರ್ಯರಿಗೆ(ಸ) "ಓ ಅಲ್ಲಾಹನ ಸಂದೇಶವಾಹಕರೇ! ನನ್ನ ಉಡುಗೆ ಅತ್ಯುತ್ತಮವಾಗಿರಬೇಕು. ತಲೆಗೆ ಯಾವಾಗಲೂ ಎಣ್ಣೆ ಹಚ್ಚಿರಬೇಕು, ಪಾದರಕ್ಷೆಯೂ ಉತ್ತಮವಾಗಿರಬೇಕು" ಮಾತ್ರವಲ್ಲ ನನ್ನ ಛಡಿ ಕೂಡ ಅತ್ಯುತ್ತಮವಾಗಿರಬೇಕು" ಎಂದನು. ಇದನ್ನು ಕೇಳಿ ಪ್ರವಾದಿ(ಸ) "ಈ ಎಲ್ಲಾ ವಿಷಯಗಳೂ ಅಪೇಕ್ಷಣೀಯವೇ ಆಗಿವೆ. ದೇವನು ಈ ಉತ್ತಮ ಅಭಿರುಚಿಯನ್ನು ಒಳ್ಳೆಯ ದೃಷ್ಟಿಯಿಂದ ನೋಡುತ್ತಾನೆ" ಎಂದು ಹೇಳಿದರು. (ಮುಸ್ತದ್ರಿಕ್ ಹಾಕಿಮ್)

ಹ. ಅಬ್ದುಲ್ಲಾ ಬಿನ್ ಉಮರ್(ರ) ಹೇಳುತ್ತಾರೆ, "ನಾಜೂಕಾದ ಉತ್ತಮ ಬಟ್ಟೆ-ಬರೆ ಧರಿಸುವುದು ಅಹಂಕಾರವೆನಿಸುವುದೇ?" ಎಂದು ನಾನು ಪ್ರವಾದಿವರ್ಯರಲ್ಲಿ(ಸ) ವಿಚಾರಿಸಿದೆ. ಅಲ್ಲ, ಅದು ಸೌಂದರ್ಯವಾಗಿದೆ. ದೇವನು ಈ ಸೌಂದರ್ಯವನ್ನು ಮೆಚ್ಚುತ್ತಾನೆ" ಎಂದು ಪ್ರವಾದಿ(ಸ) ಉತ್ತರಿಸಿದರು. (ಇಬ್ನುಮಾಜಃ)

ಹ. ಅಬ್ದುಲ್ಲಾ ಬಿನ್ ಉಮರ್(ರ) ವರದಿ ಮಾಡುತ್ತಾರೆ, ಪ್ರವಾದಿ(ಸ) ಆದೇಶಿಸಿದರು, "ನಮಾಝ್‌ನಲ್ಲಿ ಎರಡೂ ಬಟ್ಟೆಗಳನ್ನು ಧರಿಸಿಕೊಂಡಿರಿ. (ಅರ್ಥಾತ್ ಸಂಪೂರ್ಣ ಉಡುಪನ್ನು ಧರಿಸಿರಿ) ದೇವಸನ್ನಿಧಿಗೆ ಹೋಗುವಾಗ ಮನುಷ್ಯನು ಉತ್ತಮ ವೇಷಭೂಷಣದೊಂದಿಗಿರಬೇಕು. ದೇವನು ಅದಕ್ಕೆ ಹೆಚ್ಚು ಅರ್ಹನು." (ಮಿಷ್ಕಾತ್)

ಹ. ಅಬ್ದುಲ್ಲಾ ಬಿನ್ ಮಸ್‌ಊದ್(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು, "ಯಾರ ಮನಸ್ಸಿನಲ್ಲಿ ಎಳ್ಳಷ್ಟು ಅಹಂಕಾರ ಇರುವುದೋ ಅವನು ಸ್ವರ್ಗ ಪ್ರವೇಶಿಸಲಾರ". ಆಗ ಒಬ್ಬರು "ಎಲ್ಲರೂ ತಮ್ಮ ಬಟ್ಟೆಬರೆ ಮತ್ತು ಪಾದರಕ್ಷೆ ಉತ್ತಮವಿರಬೇಕೆಂದು

ಬಯಸುತ್ತಾರೆ" ಎಂದರು. ಪ್ರವಾದಿ(ಸ) ಹೇಳಿದರು, "ದೇವನು ಸೌಂದರ್ಯ ಉಳ್ಳವನು. ಅವನು ಸೌಂದರ್ಯವನ್ನು ಇಷ್ಟಪಡುತ್ತಾನೆ (ಅರ್ಥಾತ್ ಉತ್ತಮ ಬಟ್ಟೆಬರೆಗಳನ್ನು ಧರಿಸುವುದು ಅಹಂಕಾರವಲ್ಲ). ಸತ್ಯದಿಂದ ವಿಮುಖವಾಗುವುದು ಮತ್ತು ಜನರನ್ನು ಕೀಳಾಗಿ ಕಾಣುವುದೇ ವಾಸ್ತವದಲ್ಲಿ ಅಹಂಕಾರವಾಗಿದೆ". (ಮುಸ್ಲಿಮ್)

15. ಉಡುಗೆ, ತೊಡುಗೆ ಹಾಗೂ ರೂಪಾಲಂಕಾರದಲ್ಲಿ ಅಚ್ಚುಕಟ್ಟು ಮತ್ತು ಶಿಸ್ತನ್ನು ಪಾಲಿಸಿರಿ. ಕೊರಳ ಪಟ್ಟಿಯನ್ನು ಬಿಚ್ಚಿಕೊಂಡೇ ನಡೆಯುವುದು, ಗುಂಡಿಗಳನ್ನು ಅಸ್ತವ್ಯಸ್ತವಾಗಿ ಹಾಕುವುದು, ಇಜಾರಿನ ಒಂದು ಕಾಲು ಮೇಲೆ ಮಾಡಿ ಇನ್ನೊಂದನ್ನು ಕೆಳಗೆ ಬಿಡುವುದು, ಒಂದೇ ಕಾಲಿಗೆ ಪಾದರಕ್ಷೆ ಹಾಕಿ ನಡೆಯುವುದು, ಕೂದಲುಗಳನ್ನು ಅಸ್ತವ್ಯಸ್ತವಾಗಿಡುವುದು ಇತ್ಯಾದಿಗಳು ಅಚ್ಚುಕಟ್ಟು ಮತ್ತು ಶಿಸ್ತಿಗೆ ವಿರುದ್ಧವಾಗಿವೆ.

ಒಮ್ಮೆ ಪ್ರವಾದಿ(ಸ) ಮಸೀದಿಯಲ್ಲಿದ್ದಾಗ ತಲೆಕೂದಲು ಮತ್ತು ಗಡ್ಡ ಅಸ್ತವ್ಯಸ್ತವಾಗಿರುವ ಓರ್ವ ವ್ಯಕ್ತಿ ಬಂದರು. ಅವುಗಳನ್ನು ಬಾಚಿಕೊಂಡು ಬರುವಂತೆ ಪ್ರವಾದಿ(ಸ) ಕೈ ಸನ್ನೆ ಮಾಡಿದರು. ಅವರು ಕೂದಲು ಬಾಚಿಕೊಂಡು ಮರಳಿದಾಗ ಪ್ರವಾದಿ(ಸ) ಹೇಳಿದರು, "ಈ ರೂಪಾಲಂಕಾರವು ಕೂದಲು ಅಸ್ತವ್ಯಸ್ತವಾಗಿರುವುದಕ್ಕಿಂತ ಉತ್ತಮವಲ್ಲವೇ? ಮೊದಲು ಅದು ಶೈತಾನ್‌ನಂತೆ ಭಾಸವಾಗುತ್ತಿತ್ತು". (ಮಿಷ್ಕಾತ್)

ಹ. ಅಬೂ ಹುರೈರಾ(ರ) ಹೇಳುತ್ತಾರೆ: ಪ್ರವಾದಿ(ಸ) ಹೇಳಿದರು, "ಒಂದು ಕಾಲಿಗೆ ಪಾದರಕ್ಷೆ ಹಾಕಿ ನಡೆಯಬೇಡಿರಿ, ಎರಡನ್ನೂ ಹಾಕಿ ನಡೆಯಿರಿ ಅಥವಾ ಎರಡನ್ನೂ ಕಳಚಿ ನಡೆಯಿರಿ". (ತಿರ್ಮಿದಿ)

ಇದೇ ಹದೀಸಿನ ಆಧಾರದಲ್ಲಿ ಒಂದೇ ತೋಳಿನ ಅಂಗಿ ಅಥವಾ ಒಂದೇ ಕಾಲ್ಚೀಲ ಧರಿಸುವುದನ್ನು ವಿದ್ವಾಂಸರು ನಿಷೇಧಿಸಿರುವರು.

16. ಕೆಂಪು ಮತ್ತು ಕಡು ಬಣ್ಣದ, ಹೊಳಪು ಥಳಪಿನ ಹಾಗೂ ಎದ್ದು ತೋರುವ ಕಪ್ಪು ಮತ್ತಿತರ ರಂಗು ರಂಗಿನ ಬಟ್ಟೆಗಳನ್ನು ಧರಿಸಬೇಡಿರಿ. ಕೆಂಪು ಮತ್ತಿತರ ಕಡು ಬಣ್ಣಗಳು ಹಾಗೂ ಹೊಳಪು ಥಳಪಿನ ಉಡುಗೆಗಳು ಸ್ತ್ರೀಯರಿಗೆ ಭೂಷಣ. ಅವರೂ ಒಂದು ಮಿತಿಯೊಳಗಿದ್ದೇ ಇವುಗಳನ್ನು ಧರಿಸಬೇಕು. ಎದ್ದು ತೋರುವ ಜುಬ್ಬಗಳು, ರಂಗು ರಂಗಿನ ಬಟ್ಟೆಗಳನ್ನು ಧರಿಸಿ ಇತರರ ಮೇಲೆ ದರ್ಪ ಪ್ರದರ್ಶಿಸುವುದು ಹಾಗೂ ದೊಡ್ಡಸ್ತಿಕೆ ತೋರಿಸುವುದು ಅಹಂಕಾರದ ಸಂಕೇತವಾಗಿದೆ. ಅಂತೆಯೇ ಜನರ ಮಧ್ಯೆ ನಗೆಪಾಟಲಿಗೀಡಾಗುವಂತಹ ಚಿತ್ರ ವಿಚಿತ್ರ ಉಡುಪುಗಳನ್ನೂ ಧರಿಸದಿರಿ.

17. ಸದಾ ಸರಳ, ನಿರಾಡಂಬರ, ಗೌರವಯುತ ಹಾಗೂ ಸುಸಂಸ್ಕೃತ ಬಟ್ಟೆಗಳನ್ನೇ ಧರಿಸಿರಿ. ಬಟ್ಟೆಬರೆಗಳಿಗೆ ಮಿತವಾಗಿಯೇ ಖರ್ಚು ಮಾಡಿರಿ. ಉಡುಗೆಯಲ್ಲಿ ಆಡಂಬರ ಪ್ರಿಯತೆ ಮತ್ತು ಹದ ಮೀರಿದ ನಯನಾಜೂಕನ್ನು ವರ್ಜಿಸಿರಿ. "ಆಡಂಬರ ಪ್ರಿಯತೆಯಿಂದ ದೂರವಿರಿ. ದೇವನ ಇಷ್ಟ ದಾಸರು ಆಡಂಬರ ಪ್ರಿಯರಾಗಿರುವುದಿಲ್ಲ" ಎಂದು ಪ್ರವಾದಿ(ಸ) ಆದೇಶಿಸಿರುವರು. (ಮಿಷ್ಕಾತ್)

"ಯಾರು ಶಕ್ತಿ ಸಾಮರ್ಥ್ಯವಿದ್ದೂ ದೀನಭಾವದಿಂದ ಉಡುಗೆತೊಡುಗೆಯಲ್ಲಿ ಸರಳತೆ

ಕೈಗೊಳ್ಳುತ್ತಾನೋ ಅವನಿಗೆ ದೇವನು ಸೌಜನ್ಯ ಮತ್ತು ಮಹಿಮೆಯ ಉಡುಪನ್ನು ತೊಡಿಸು ವನು" ಎಂದು ಪ್ರವಾದಿ(ಸ) ಹೇಳಿರುವರು. (ಅಬೂದಾವೂದ್)

ಒಮ್ಮೆ ಸಹಾಬಿಗಳು(ರ) ಕುಳಿತು ಲೋಕದ ಬಗ್ಗೆ ಮಾತನಾಡುತ್ತಿದ್ದರು. ಆಗ ಪ್ರವಾದಿ(ಸ) ಹೇಳಿದರು. "ಉಡುಗೆತೊಡುಗೆಯ ಸರಳತೆಯು ಸತ್ಯವಿಶ್ವಾಸದ ಲಕ್ಷಣಗಳ ಪೈಕಿ ಒಂದು ಲಕ್ಷಣವಾಗಿದೆ". (ಅಬೂದಾವೂದ್)

ಒಮ್ಮೆ ಪ್ರವಾದಿ(ಸ) ಹೇಳಿದರು, "ಬಾಹ್ಯಸ್ಥಿತಿಯಲ್ಲಿ ಅತ್ಯಂತ ಸರಳರಾಗಿರುವ, ಕೂದಲು ಗಳು ಧೂಳು ಮುಕ್ಕಿ ಕೆದರಿರುವ, ಸಾಮಾನ್ಯ ಉಡುಪಿನಲ್ಲಿರುವ ಅನೇಕ ದೇವ ಭಕ್ತರಿರುತ್ತಾರೆ. ಆದರೆ ದೇವನ ಬಳಿ ಅವರ ಸ್ಥಾನ ಅತ್ಯುನ್ನತವಾಗಿರುತ್ತದೆ. ಅವರು ಯಾವುದಾದರೂ ವಿಷಯದ ಬಗ್ಗೆ ಪಣತೊಟ್ಟರೆ ದೇವನು ಅವರ ಪಣವನ್ನು ನೆರವೇರಿ ಸುವನು. ಬರಾಅ್ ಬಿನ್ ಮಾಲಿಕ್(ರ) ಇಂತಹ ವ್ಯಕ್ತಿಗಳ ಪೈಕಿ ಒಬ್ಬರಾಗಿರುವರು". (ತಿರ್ಮಿದಿ)

18. ದೇವನ ಈ ಅನುಗ್ರಹಗಳಿಗೆ ಕೃತಜ್ಞತೆಯ ರೂಪದಲ್ಲಿ ಮಾನ ಮುಚ್ಚಿಕೊಳ್ಳಲು ಗತಿಯಿಲ್ಲದವರಿಗೆ ಬಟ್ಟೆ ತೊಡಿಸಿರಿ. ಪ್ರವಾದಿ(ಸ) ಹೇಳುತ್ತಾರೆ, ಯಾವ ವ್ಯಕ್ತಿ ಓರ್ವ ಮುಸ್ಲಿಮನ ಮಾನ ಮುಚ್ಚುವ ಸಲುವಾಗಿ ಅವನಿಗೆ ಬಟ್ಟೆ ತೊಡಿಸುವನೋ ಅಲ್ಲಾಹನು ನಿರ್ಣಾಯಕ ದಿನದಂದು ಸ್ವರ್ಗದ ಹಸಿರು ಬಟ್ಟೆಯಿಂದ ಅವನ ಮಾನ ಮುಚ್ಚುವನು. (ಅಬೂದಾವೂದ್)

ಪ್ರವಾದಿ(ಸ) ಹೀಗೂ ಹೇಳಿರುವರು, "ಒಬ್ಬ ಮುಸ್ಲಿಮನು ತನ್ನ ಮುಸ್ಲಿಮ್ ಸಹೋದರನಿಗೆ ಬಟ್ಟೆ ತೊಡಿಸಿದರೆ ಅಲ್ಲಾಹನು ಅವನನ್ನು ತನ್ನ ರಕ್ಷಣೆಯಲ್ಲಿರಿಸುವನು. ಆ ಬಟ್ಟೆಯನ್ನು ಅವನು ಧರಿಸಿರುವ ತನಕ". (ತಿರ್ಮಿದಿ)

19. ದಿನ ರಾತ್ರಿ ನಿಮ್ಮ ಸೇವೆಯಲ್ಲಿರುವ ನಿಮ್ಮ ನೌಕರರಿಗೂ ನಿಮ್ಮ ಸಾಮರ್ಥ್ಯಕ್ಕೆ ತಕ್ಕಂತಹ ಉತ್ತಮ ಬಟ್ಟೆಬರೆಗಳನ್ನು ತೊಡಿಸಿರಿ.

ಪ್ರವಾದಿ(ಸ) ಹೇಳಿರುವರು, "ದಾಸದಾಸಿಯರು ನಿಮ್ಮ ಬಂಧುಗಳು. ದೇವನು ಅವರನ್ನು ನಿಮ್ಮ ವಶಕ್ಕೊಪ್ಪಿಸಿರುವನು. ಆದ್ದರಿಂದ ನಿಮ್ಮ ಪೈಕಿ ಯಾರ್‍ಯಾರ ವಶಕ್ಕೆ ಅಲ್ಲಾಹನು ಅವರನ್ನು ಒಪ್ಪಿಸಿರುವನೋ ಅವರು ತಾವು ಉಣ್ಣುವುದನ್ನೇ ಅವರಿಗೂ ಉಣ್ಣಿಸಲಿ. ತಾನು ತೊಡುವುದನ್ನೇ ತೊಡಿಸಲಿ ಮತ್ತು ಅವರ ಸಾಮರ್ಥ್ಯಕ್ಕೆ ಮೀರದ ಸೇವೆಯನ್ನು ಮಾತ್ರ ಅವರಿಂದ ಮಾಡಿಸಲಿ. ಒಂದು ಕೆಲಸವನ್ನು ಅವರಿಂದ ಮಾಡಲಾಗುವುದಿಲ್ಲವಾದರೆ ಸ್ವಯಂ ಆ ಕೆಲಸದಲ್ಲಿ ಅವರಿಗೆ ನೆರವಾಗಲಿ". (ಬುಖಾರಿ, ಮುಸ್ಲಿಮ್)

# ಅನ್ನ ಪಾನೀಯಗಳು

1. ಊಟಕ್ಕೆ ಮುಂಚೆ ಕೈ ತೊಳೆಯಿರಿ. ಊಟದ ಬಟ್ಟಲಿಗೆ ಬೀಳುವ ಕೈ ಶುದ್ಧವಾಗಿರಬೇಕು. ಕೈಯ ಶುದ್ಧತೆಯ ಬಗ್ಗೆ ಪೂರ್ಣ ತೃಪ್ತಿ ಇರಬೇಕು.

2. بِسْمِ اللّٰهِ الرَّحْمٰنِ الرَّحِيْمِ 'ಬಿಸ್ಮಿಲ್ಲಾಹಿರ್ರಹ್ಮಾನಿರ್ರಹೀಮ್' ಎನ್ನುತ್ತಾ ಊಟ ಮಾಡಲು ಆರಂಭಿಸಿರಿ. ಮರೆತು ಹೋದರೆ ಮಧ್ಯದಲ್ಲಿ ನೆನಪಾದಾಗ بِسْمِ اللّٰهِ اَوَّلَهٗ وَ اٰخِرَهٗ 'ಬಿಸ್ಮಿಲ್ಲಾಹಿ ಅವ್ವಲುಹೂ ವ ಆಖಿರುಹೂ' ಎಂದು ಹೇಳಿರಿ. ದೇವನಾಮದೊಂದಿಗೆ ಆರಂಭಿಸದ ಊಟದಲ್ಲಿ ಶೈತಾನನೂ ಪಾಲ್ಗೊಳ್ಳುತ್ತಾನೆಂಬುದನ್ನು ಮರೆಯದಿರಿ.

3. ಊಟ ಮಾಡುವಾಗ ಒರಗಿಕೊಂಡು ಕುಳಿತುಕೊಳ್ಳಬೇಡಿರಿ. ವಿನಯದೊಂದಿಗೆ ಎರಡೂ ಮೊಣಕಾಲುಗಳನ್ನು ಮಡಚಿ ವೀರಾಸನದಲ್ಲಿ, ಪದ್ಮಾಸನದಲ್ಲಿ ಅಥವಾ ಒಂದು ಕಾಲು ಮಡಚಿ, ಮತ್ತೊಂದನ್ನು ಪದ್ಮಾಸನದಂತೆ ಇಟ್ಟು ಕುಳಿತುಕೊಳ್ಳಿರಿ. ಪ್ರವಾದಿ ಮುಹಮ್ಮದ್(ಸ) ಇದೇ ರೀತಿ ಕುಳಿತುಕೊಳ್ಳುತ್ತಿದ್ದರು.

4. ಸದಾ ಬಲಕೈಯಿಂದ ತಿನ್ನಿರಿ. ಅಗತ್ಯ ಬಿದ್ದಾಗ ಎಡಕೈಯನ್ನೂ ಉಪಯೋಗಿಸಬಹುದು.

5. ಮೂರು ಬೆರಳುಗಳನ್ನು ಬಳಸಿ ತಿನ್ನಿರಿ. ಅಗತ್ಯ ಬಿದ್ದರೆ ಕಿರು ಬೆರಳನ್ನು ಬಿಟ್ಟು ನಾಲ್ಕೂ ಬೆರಳುಗಳನ್ನು ಬಳಸಿರಿ. ಬೆರಳುಗಳನ್ನು ಪೂರ್ತಿಯಾಗಿ ಅನ್ನದಲ್ಲಿ ಕಲಸಬೇಡಿರಿ.

6. ತುತ್ತು ಸಣ್ಣದೂ, ದೊಡ್ಡದೂ ಆಗಿರದೆ ಮಧ್ಯಮವಾಗಿರಬೇಕು. ಒಂದು ತುತ್ತು ನುಂಗಿ ಆದ ಬಳಿಕವೇ ಇನ್ನೊಂದು ತುತ್ತನ್ನು ಬಾಯಿಗೆ ಹಾಕಿರಿ.

7. ಬೆರಳನ್ನು ರೊಟ್ಟಿಯಿಂದ ಒರೆಸದಿರಿ. ಇದು ಕೆಟ್ಟ ಚಾಳಿ.

8. ರೊಟ್ಟಿಯನ್ನು ಕೊಡವಬೇಡಿರಿ.

9. ಊಟದ ತಟ್ಟೆಯಿಂದ ನಿಮ್ಮ ಪಾರ್ಶ್ವದಲ್ಲಿರುವ ಭಾಗದಿಂದಲೇ ತಿನ್ನಿರಿ. ಮಧ್ಯಕ್ಕೆ ಅಥವಾ ಇತರರ ಭಾಗಕ್ಕೆ ಕೈ ಹಾಕದಿರಿ.

10. ಬಿದ್ದು ಹೋದ ತುತ್ತನ್ನು ಎತ್ತಿ ಶುದ್ಧಗೊಳಿಸಿ ಅಥವಾ ತೊಳೆದು ತಿನ್ನಿರಿ.

11. ಎಲ್ಲರೂ ಒಟ್ಟಾಗಿ ಕುಳಿತು ಊಟ ಮಾಡಿರಿ. ಒಟ್ಟಾಗಿ ಊಟ ಮಾಡುವುದರಿಂದ ಪ್ರೇಮವೂ ವರ್ಧಿಸುತ್ತದೆ. ಸಮೃದ್ಧಿಯೂ ಉಂಟಾಗುತ್ತದೆ.

12. ಊಟದ ಲೋಪದೋಷಗಳನ್ನು ಪ್ರಸ್ತಾಪಿಸಬೇಡಿರಿ. ಮೆಚ್ಚುಗೆಯಾಗದಿದ್ದರೆ ಬಿಟ್ಟುಬಿಡಿರಿ.

13. ಅತ್ಯಧಿಕ ಬಿಸಿಯಾದ ಊಟ ಮಾಡಬೇಡಿರಿ.

14. ಊಟದ ಮಧ್ಯೆ ಗಹಗಹಿಸಿ ನಗಬೇಡಿರಿ. ಹೆಚ್ಚು ಮಾತನಾಡಬೇಡಿರಿ.

15. ಅಗತ್ಯವಿಲ್ಲದೆ ತಿಂಡಿಯನ್ನು ಮೂಸಬೇಡಿರಿ. ಇದು ಕೆಟ್ಟ ಅಭ್ಯಾಸ. ಅಗಿಯುವ ಅನ್ನವು ಹೊರಗೆ ತೋರುವಂತೆ ಊಟದ ಮಧ್ಯೆ ಆಗಾಗ ಬಾಯಿ ತೆರೆಯಬೇಡಿರಿ. ಆಗಾಗ ಬಾಯಿಗೆ ಕೈ ಹಾಕಿ ಹಲ್ಲಿನ ಮಧ್ಯೆ ಸಿಕ್ಕಿಕೊಂಡುದನ್ನು ತೆಗೆಯದಿರಿ. ಇದರಿಂದ ನಿಮ್ಮ ಜೊತೆಯಲ್ಲಿ ಊಟ ಮಾಡುವವರಿಗೆ ಅಸಹ್ಯವಾದೀತು.

16. ಕುಳಿತುಕೊಂಡೇ ತಿನ್ನಿರಿ, ಕುಡಿಯಿರಿ. ಆದರೆ ಅಗತ್ಯ ಬಿದ್ದಾಗ ನಿಂತುಕೊಂಡೂ ಹಣ್ಣು ಹಂಪಲು ತಿನ್ನಬಹುದು, ನೀರೂ ಕುಡಿಯಬಹುದು.

17. ಊಟದ ತಟ್ಟೆಯಲ್ಲಿ ಉಳಿದಿರುವುದು ಸಾರು ಇತ್ಯಾದಿ ಆಗಿದ್ದರೆ ಕುಡಿಯಿರಿ, ಇಲ್ಲವಾದರೆ ಕೈಗಳಿಂದ ಒರೆಸಿ ನೆಕ್ಕಿರಿ.

18. ತಿನ್ನುವ, ಕುಡಿಯುವ ವಸ್ತುಗಳನ್ನು ಊದಬೇಡಿರಿ. ಬಿಡುವ ಶ್ವಾಸವು ಮಲಿನವೂ ವಿಷಯುಕ್ತವೂ ಆಗಿರುತ್ತದೆ.

19. ನೀರನ್ನು ಮೂರು ಗುಟುಕುಗಳಲ್ಲಿ ಕುಡಿಯಿರಿ. ಇದರಿಂದ ನೀರು ಬೇಕಾದಷ್ಟು ಕುಡಿಯಲು ಸಾಧ್ಯವಾಗುತ್ತದೆ. ಸುಖವೂ ಸಿಗುತ್ತದೆ. ನೀರನ್ನು ಒಮ್ಮೆಲೇ ಕುಡಿಯುವುದರಿಂದ ಕೆಲವೊಮ್ಮೆ ತೊಂದರೆಯಾಗುತ್ತದೆ.

20. ಸಾಮೂಹಿಕವಾಗಿ ಊಟ ಮಾಡುವಾಗ ನಿಧಾನವಾಗಿ ತಿನ್ನುವವರನ್ನೂ, ಬಹಳ ಹೊತ್ತು ತಿನ್ನುವವರನ್ನೂ ಅನುಲಕ್ಷಿಸಿರಿ. ಎಲ್ಲರ ಜೊತೆಗೇ ಊಟ ಮುಗಿಸಿ ಏಳಿರಿ.

21. ಊಟವಾದ ಬಳಿಕ ಬೆರಳುಗಳನ್ನು ನೆಕ್ಕಿರಿ. ಆಮೇಲೆ ಕೈ ತೊಳೆಯಿರಿ.

22. ಹಣ್ಣು ಹಂಪಲುಗಳನ್ನು ತಿನ್ನುವಾಗ ಎರಡೆರಡು ಹಣ್ಣು ಅಥವಾ ಎರಡೆರಡು ತುಣುಕುಗಳನ್ನು ಒಮ್ಮೆಲೇ ತಿನ್ನಬೇಡಿರಿ.

23. ಲೋಟೆಯ ಕಿಂಡಿ, ಹೂಜೆ ಅಥವಾ ಅಂಥದ್ದೇ ಇನ್ನಿತರ ಪಾತ್ರೆಗಳನ್ನು ಬಾಯಿಗಿರಿಸಿ ನೀರು ಕುಡಿಯಬೇಡಿರಿ. ನಿಮ್ಮ ಬಾಯೊಳಗೆ ಹೋಗುವ ನೀರನ್ನು ನಿಮಗೆ ಕಾಣುವಂತಹ ಪಾತ್ರೆಯಿಂದಲೇ ಕುಡಿಯಿರಿ. ಇದರಿಂದ ಕೊಳಕು ಅಥವಾ ಅಪಾಯಕರ ವಸ್ತುವೇನಾದರೂ ಬಾಯೊಳಗೆ ಹೋಗದಂತೆ ತಡೆಯಬಹುದು.

24. ಊಟ ಮಾಡಿ ಮುಗಿಸಿದ ಬಳಿಕ ಈ ದುಆ ಪಠಿಸಿರಿ

اَلْحَمْدُ لِلّٰهِ الَّذِىْ اَطْعَمَنَا وَسَقَانَا وَجَعَلَنَا مِنَ الْمُسْلِمِيْنَ

"ಅಲ್‌ಹಮ್ದುಲಿಲ್ಲಾಹಿಲ್ಲದೀ ಅತ್‌ಅಮನಾ ವಸಕಾನಾ ವಜಅಲನಾ ಮಿನಲ್ ಮುಸ್ಲಿಮೀನ್." (ನಮಗೆ ತಿನ್ನಿಸಿದ, ನಮಗೆ ಕುಡಿಸಿದ ಹಾಗೂ ನಮ್ಮನ್ನು ಮುಸ್ಲಿಮರಲ್ಲಿ ಸೇರಿಸಿದ ಅಲ್ಲಾಹನಿಗೆ ಸರ್ವ ಸ್ತುತಿಸ್ತೋತ್ರಗಳು.)

# ನಿದ್ರೆ ಮತ್ತು ಎಚ್ಚರ

1. ಸಂಜೆಯ ಕತ್ತಲು ಆವರಿಸ ತೊಡಗಿದಾಗ ಮಕ್ಕಳನ್ನು ಮನೆಯೊಳಗೆ ಸೇರಿಸಿರಿ. ಹೊರಗೆ ಆಡಲು ಬಿಡಬೇಡಿರಿ. ರಾತ್ರೆಯ ಒಂದಂಶ ಕಳೆದಾಗ ಹೊರಗೆ ಹೋಗಲು ಬಿಡಬಹುದು. ಆದರೆ ಅನಿವಾರ್ಯ ಅಗತ್ಯವಿಲ್ಲದೆ ಮಕ್ಕಳನ್ನು ರಾತ್ರಿಯ ಹೊತ್ತು ಮನೆಯಿಂದ ಹೊರಗೆ ಬಿಡಬೇಡಿರಿ.

ಪ್ರವಾದಿ(ಸ) ಹೇಳುತ್ತಾರೆ: "ಸಂಜೆಯಾದೊಡನೆ ಸಣ್ಣ ಮಕ್ಕಳನ್ನು ಮನೆಯೊಳಗೆ ತಡೆದಿರಿಸಿರಿ. ಆ ವೇಳೆ ಶೈತಾನನು ಎಭೂಮಿಯ ಮೇಲೆವಿ ಹರಡಿರುತ್ತಾನೆ. ಆದರೆ ರಾತ್ರಿಯ ಸ್ವಲ್ಪ ಹೊತ್ತು ಕಳೆದ ಮೇಲೆ ಮಕ್ಕಳನ್ನು ಬಿಡಬಹುದು".

(ಸಿಹಾಹುಸ್ಸಿತ್ತಾ ವರದಿ: ಹಿಸ್ನ್ ಹಸೀನ್)

2. ಸಂಜೆಯಾಗುತ್ತಲೇ ಈ ದುಆ ಪಠಿಸಿರಿ, ಪ್ರವಾದಿ(ಸ) ಸಹಾಬಿಯವರಿಗೆ ಈ ರೀತಿ ಪ್ರಾರ್ಥಿಸಲು ಆದೇಶಿಸುತ್ತಿದ್ದರು:

اَللّٰهُمَّ بِكَ اَمْسَيْنَا وَبِكَ اَصْبَحْنَا وَبِكَ نَحْيَا وَبِكَ نَمُوْتُ وَاِلَيْكَ النُّشُوْرُ (ترمذی)

"ಅಲ್ಲಾಹುಮ್ಮ ಬಿಕ ಅಮ್‌ಸೈನಾ ವಬಿಕ ಅಸ್‌ಬಹ್‌ನಾ ವಬಿಕ ನಹ್ಯಾ ವಬಿಕ ನಮೂತು ವಇಲೈಕನ್ನುಶೂರ್".

(ಓ ಅಲ್ಲಾಹ್! ನಿನ್ನ ಅನುಗ್ರಹದಿಂದಲೇ ನಾವು ಸಂಜೆ ಮಾಡಿದೆವು. ನಿನ್ನ ನೆರವಿನಿಂದಲೇ ಮುಂಜಾನೆ ಮಾಡಿದೆವು. ನಿನ್ನ ದಯೆಯಿಂದಲೇ ಬದುಕಿದ್ದೇವೆ. ನಿನ್ನ ಸಂಜ್ಞೆಯ ಮೇರೆಗೆ ಸಾಯಲಿರುವೆವು. ಅಂತಿಮವಾಗಿ ಎದ್ದು ನಿನ್ನ ಬಳಿಯೆ ಹಾಜರಾಗ ಲಿರುವೆವು.) (ತಿರ್ಮಿದಿ)

ಮಗ್ರಿಬ್‌ನ ಅದಾನ್ ಕೇಳಿದೊಡನೆ ಈ ರೀತಿ ಪ್ರಾರ್ಥಿಸಿರಿ:

اَللّٰهُمَّ هٰذَا اِقْبَالُ لَيْلِكَ وَاِدْبَارُ نَهَارِكَ وَاَصْوَاتُ دُعَاتِكَ فَاغْفِرْلِىْ

(ترمذی، ابوداود)

"ಅಲ್ಲಾಹುಮ್ಮ ಹಾದಾ ಇಕ್ಬಾಲು ಲೈಲಿಕ ವಇದ್‌ಬಾರು ನಹಾರಿಕ ವ ಅಸ್‌ವಾತು ದುಆತಿಕ ಫಗ್ಫಿರ್‌ಲೀ".

(ಓ ಅಲ್ಲಾಹ್! ಇದು ನಿನ್ನ ರಾತ್ರಿ ಆಗಮಿಸುವ, ನಿನ್ನ ದಿನ ನಿರ್ಗಮಿಸುವ ಮತ್ತು ನಿನ್ನ ಮುಅದ್ದಿನ್‌ಗಳು (ಅದಾನ್ ಹೇಳುವವರು) ಕರೆ ನೀಡುವ ಸಮಯವಾಗಿದೆ. ಆದ್ದರಿಂದ ನೀನು ನನ್ನ ಪಾಪಗಳನ್ನು ಕ್ಷಮಿಸು.) (ತಿರ್ಮಿದಿ, ಅಬೂದಾವೂದ್)

3. ಇಶಾ ನಮಾಝ್‌ಗೆ ಮೊದಲು ಮಲಗಬೇಡಿರಿ. ಇದರಿಂದ ಇಶಾ ನಮಾಝ್ ತಪ್ಪಿ ಹೋಗುವ ಸಂಭವವಿದೆ. ನಿದ್ದೆಯೆಂಬ ಈ ಮರಣದ ಬಳಿಕ ದೇವನು ನಮ್ಮ ಪ್ರಾಣವನ್ನು ಮರಳಿ ನೀಡುತ್ತಾನೋ ಅಥವಾ ಶಾಶ್ವತವಾಗಿ ತೆಗೆದು ಬಿಡುತ್ತಾನೋ ಎಂಬುದು ಹೇಗೆ ಗೊತ್ತು? ಪ್ರವಾದಿ(ಸ) ಎಂದೂ ಇಶಾಗೆ ಮುಂಚೆ ಮಲಗುತ್ತಿರಲಿಲ್ಲ.

4. ರಾತ್ರಿಯಾಗುತ್ತಲೇ ಮನೆಯಲ್ಲಿ ತಪ್ಪದೇ ಬೆಳಕು ಹಚ್ಚಿರಿ. ಬೆಳಕು ಹಚ್ಚದ ಮನೆಯಲ್ಲಿ ಪ್ರವಾದಿ(ಸ) ಮಲಗುತ್ತಿರಲಿಲ್ಲ.

5. ಹೆಚ್ಚು ರಾತ್ರಿಯಾಗುವ ತನಕ ಎಚ್ಚೆತ್ತು ಇರಬೇಡಿರಿ. ರಾತ್ರಿ ಬೇಗ ಮಲಗುವ ಮತ್ತು ಮುಂಜಾನೆ ಬೇಗ ಏಳುವ ಪರಿಪಾಠ ಇಟ್ಟುಕೊಳ್ಳಿರಿ. ಪ್ರವಾದಿ(ಸ) ಹೇಳುತ್ತಾರೆ: "ಇಶಾ ನಮಾಝ್‌ನ ಬಳಿಕ ದೇವಧ್ಯಾನ ಮತ್ತು ಮನೆಯವರೊಂದಿಗೆ ಅಗತ್ಯದ ಮಾತುಕತೆ ಗಳಿಗಾಗಿ ಮಾತ್ರ ಎಚ್ಚರದಿಂದ ಇರಬಹುದು".

6. ರಾತ್ರಿ ನಿದ್ರೆಗೆಡುವ ಮತ್ತು ಹಗಲಲ್ಲಿ ಅದನ್ನು ಪೂರ್ತಿಗೊಳಿಸುವ ಅಭ್ಯಾಸ ಮಾಡಬೇಡಿರಿ. ದೇವನು ರಾತ್ರಿಯನ್ನು ವಿಶ್ರಾಂತಿ ಮತ್ತು ನೆಮ್ಮದಿಗಾಗಿ ಮಾಡಿರುವನು. ಹಗಲನ್ನು ನಿದ್ದೆಯಿಂದ ಏಳುವ ಮತ್ತು ಆವಶ್ಯಕತೆಗಳಿಗಾಗಿ ಪರಿಶ್ರಮ ಮಾಡುವ ಸಮಯ ವೆಂದು ನಿರ್ಣಯಿಸಿರುವನು.

ಸೂರಃ ಅಲ್‌ಫುರ್ಕಾನ್ ಸೂಕ್ತ 47ರಲ್ಲಿ ಈ ರೀತಿ ಇದೆ.

وَهُوَ الَّذِىْ جَعَلَ لَكُمُ الَّيْلَ لِبَاسًا وَّ النَّوْمَ سُبَاتًا وَّجَعَلَ النَّهَارَ نُشُوْرًا ﴿٤٧﴾

"ರಾತ್ರಿಯನ್ನು ನಿಮಗೆ ಉಡುಪಾಗಿಯೂ ನಿದ್ದೆಯನ್ನು ಪ್ರಶಾಂತಿಯಾಗಿಯೂ ಹಗಲನ್ನು ಎದ್ದೇಳುವ ಸಮಯವಾಗಿಯೂ ಮಾಡಿರುವವನು ಅಲ್ಲಾಹನೇ ಆಗಿರುತ್ತಾನೆ".

ಅನ್ನಬಅ್ ಅಧ್ಯಾಯದಲ್ಲಿ (ಆಯತ್ ನಂಬ್ರ 9-11) ಈ ರೀತಿ ಇದೆ.

وَّجَعَلْنَا نَوْمَكُمْ سُبَاتًا ﴿٩﴾ وَّجَعَلْنَا الَّيْلَ لِبَاسًا ﴿١٠﴾ وَّجَعَلْنَا النَّهَارَ مَعَاشًا ﴿١١﴾

"ನಾವು ನಿದ್ರೆಯನ್ನು ನಿಮಗೆ ವಿಶ್ರಾಂತಿ, ರಾತ್ರಿಯನ್ನು ಮರೆಮಾಚುವ ಸಾಧನ ಮತ್ತು ಹಗಲನ್ನು ಜೀವನೋಪಾಯಕ್ಕಾಗಿ ಶ್ರಮಿಸುವ ಸಮಯವನ್ನಾಗಿ ಮಾಡಿರುವೆವು".

ಸೂರಃ ಅನ್ನಮ್ಲ್ ಸೂಕ್ತ 86ರಲ್ಲಿ ಈ ರೀತಿ ಇದೆ:

أَلَمْ يَرَوْا أَنَّا جَعَلْنَا اللَّيْلَ لِيَسْكُنُوا فِيهِ وَالنَّهَارَ مُبْصِرًا ۚ إِنَّ فِي ذَٰلِكَ لَآيَاتٍ لِقَوْمٍ يُؤْمِنُونَ ﴿٨٦﴾

"ನಾವು ರಾತ್ರಿಯನ್ನು ಅವರ ಪ್ರಶಾಂತಿಗಾಗಿಯೂ ಹಗಲನ್ನು ಪ್ರಕಾಶಮಾನ ವಾಗಿಯೂ ಮಾಡಿರುವುದನ್ನು ಅವರು ನೋಡಿಲ್ಲವೇ? ನಿಸ್ಸಂದೇಹವಾಗಿಯೂ ಇದರಲ್ಲಿ ಸತ್ಯವಿಶ್ವಾಸವಿಟ್ಟವರಿಗೆ ಅನೇಕ ನಿದರ್ಶನಗಳಿದ್ದುವು".

ರಾತ್ರಿಯನ್ನು ವಿಶ್ರಾಂತಿಗಾಗಿ ಅಂಧಕಾರಮಯ ಮಾಡಿರುವುದರಲ್ಲಿ ಮತ್ತು ಹಗಲನ್ನು ದುಡಿಮೆಗಾಗಿ ಪ್ರಕಾಶಮಾನವಾಗಿ ಮಾಡಿರುವುದರಲ್ಲಿ, ರಾತ್ರಿಯಲ್ಲಿ ಮಲಗಬೇಕೆಂಬ ಮತ್ತು ಹಗಲಲ್ಲಿ ತಮ್ಮ ಆವಶ್ಯಕತೆಗಳನ್ನು ಪೂರೈಸಲಿಕ್ಕಾಗಿ ದುಡಿಯಬೇಕೆಂಬ ಸೂಚನೆ ಅಡಗಿದೆ. ಹಗಲಲ್ಲಿ ನಿಮ್ಮ ಬೇಡಿಕೆಗಳನ್ನು ಪೂರೈಸಲಿಕ್ಕಾಗಿ ಶ್ರಮಪಟ್ಟು ದುಡಿಯಿರಿ. ನಿಮ್ಮ ಅಂಗಾಂಗಗಳು ಸೋಲುವ ತನಕ, ಶಕ್ತಿ ಸಾಮರ್ಥ್ಯಗಳು ಕುಂದುವ ತನಕ ದುಡಿಯಿರಿ. ಪೂರ್ಣವಾಗಿ ಬಳಲಿದಾಗ ರಾತ್ರಿಯ ಅಂಧಕಾರದಲ್ಲಿ ಪೂರ್ಣ ವಿಶ್ರಾಂತಿ ಪಡೆಯಿರಿ. ಮತ್ತೆ ಬೆಳಕಾದಾಗ ಹೊಸ ಹುರುಪಿನೊಂದಿಗೆ ಕಾರ್ಯರಂಗಕ್ಕಿಳಿಯಿರಿ. ಸೋಮಾರಿಗಳಾಗಿ ಹಗಲು ಹೊತ್ತು ಮಲಗಿ ಗೊರಕೆ ಹೊಡೆಯುವವರು ಹಾಗೂ ಸುಖ ಲೋಲುಪತೆಗಾಗಿ ಅಥವಾ ಆಟ, ವಿನೋದಗಳಿಗಾಗಿ ರಾತ್ರಿ ನಿದ್ದೆಗೆಡುವವರು ಪ್ರಕೃತಿಯ ಯುಕ್ತಿಗಳ ಕೊಲೆಗೈಯುತ್ತಾರೆ. ತಮ್ಮ ಆರೋಗ್ಯವನ್ನೂ ಬದುಕನ್ನೂ ಹಾಳು ಮಾಡುತ್ತಾರೆ. ಹಗಲಲ್ಲಿ ತುಂಬ ಹೊತ್ತು ಮಲಗುವವರು ತಮ್ಮ ಹಗಲಿನ ಕೆಲಸ ಕಾರ್ಯಗಳನ್ನೂ ಕಡೆಗಣಿಸುತ್ತಾರೆ ಮತ್ತು ಶರೀರಕ್ಕೂ ಪೂರ್ಣ ವಿಶ್ರಾಂತಿ ಸಿಗದಂತೆ ಮಾಡುತ್ತಾರೆ. ಏಕೆಂದರೆ ಹಗಲು ಹೊತ್ತಿನ ನಿದ್ರೆ ಎಂದೂ ರಾತ್ರಿಯ ನಿದ್ರೆಗೆ ಸಮಾನವಾಗಲಾರದು. ರಾತ್ರಿಯ ವೇಳೆ ನಿದ್ದೆಗೆಟ್ಟು ದೇವಾರಾಧನೆ ಮಾಡುವ ಮೂಲಕ ಶರೀರಕ್ಕೆ ಸಹಿಸಲಸಾಧ್ಯವಾಗುವಷ್ಟು ಕಷ್ಟಕೊಡುವುದನ್ನು ಕೂಡ ಪ್ರವಾದಿ(ಸ) ಮೆಚ್ಚುತ್ತಿರಲಿಲ್ಲ.

ಒಮ್ಮೆ ಪ್ರವಾದಿ(ಸ) ಹ. ಅಬ್ದುಲ್ಲಾ ಬಿನ್ ಅಮ್ರ್‌ರೊಡನೆ(ರ) ಈ ರೀತಿ ಕೇಳಿದರು: "ನೀವು ಪ್ರತಿದಿನ ಉಪವಾಸವಿರುತ್ತೀರೆಂದೂ ರಾತ್ರಿಯಿಡೀ ನಮಾಝ್ ಮಾಡುತ್ತೀರೆಂದೂ ನನಗೆ ಸಿಕ್ಕಿರುವ ವಾರ್ತೆ ಸರಿಯೇ?" ಹ. ಅಬ್ದುಲ್ಲಾ(ರ) ಹೇಳಿದರು, "ಹೌದು, ಅದು ನಿಜ." ಆಗ ಪ್ರವಾದಿ(ಸ) ಹೇಳಿದರು: "ಹಾಗೆ ಮಾಡಬೇಡಿರಿ. ಕೆಲವೊಮ್ಮೆ ಉಪವಾಸವಿರಿ, ಕೆಲವೊಮ್ಮೆ ತೊರೆಯಿರಿ. ನಿದ್ರೆಯನ್ನೂ ಮಾಡಿರಿ. ಎದ್ದು ನಮಾಝನ್ನೂ ನಿರ್ವಹಿಸಿರಿ. ಏಕೆಂದರೆ ನಿಮ್ಮ ಮೇಲೆ ನಿಮ್ಮ ಶರೀರದ ಹಕ್ಕೂ ಇದೆ. ನಿಮ್ಮ ಕಣ್ಣುಗಳ ಹಕ್ಕೂ ಇದೆ." (ಬುಖಾರಿ)

7. ಹೆಚ್ಚು ಮೆದುವಾದ ಹಾಸಿಗೆಯನ್ನು ಉಪಯೋಗಿಸಬೇಡಿರಿ. ಸತ್ಯವಿಶ್ವಾಸಿಯು ಸುಖ ಲೋಲುಪತೆ ಮತ್ತು ಆಡಂಬರ ಪ್ರಿಯತೆಯಿಂದ ದೂರವಿರಬೇಕು. ಜೀವನವೆಂಬುದು ಸತ್ಯ ವಿಶ್ವಾಸಿಯ ಮಟ್ಟಿಗೆ ಒಂದು ಸಂಘರ್ಷವಾಗಿದೆ. ಸತ್ಯವಿಶ್ವಾಸಿಯು ಕರ್ತವ್ಯನಿಷ್ಠ, ದೃಢಕಾಯ ಮತ್ತು ಶ್ರಮಜೀವಿಯಾಗಿರಬೇಕು. ಹ. ಆಯಿಶಾ(ರ) ಹೇಳುತ್ತಾರೆ: "ಪ್ರವಾದಿವರ್ಯರ(ಸ) ಹಾಸಿಗೆ ಚರ್ಮದ್ದಾಗಿತ್ತು. ಅದರೊಳಗೆ ಖರ್ಜೂರದ ತೊಗಟೆಯನ್ನು ತುಂಬಿಸಲಾಗಿತ್ತು". (ತಿರ್ಮಿದಿ)

ಹ. ಹಫ್ಸಾರನ್ನು(ರ) ಪ್ರಶ್ನಿಸಲಾಯಿತು: 'ನಿಮ್ಮ ಮನೆಯಲ್ಲಿ ಪ್ರವಾದಿವರ್ಯರ(ಸ) ಹಾಸಿಗೆ ಹೇಗಿರುತ್ತಿತ್ತು?' ಅವರು ಹೇಳಿದರು, 'ನಮ್ಮ ಬಳಿ ಒಂದು ಗೋಣಿ ಬಟ್ಟೆಯಿತ್ತು. ಅದನ್ನು ನಾವು ಇಮ್ಮಡಿಯಾಗಿ ಮಡಚಿ ಪ್ರವಾದಿವರ್ಯರಿಗೆ(ಸ) ಹಾಸುತ್ತಿದ್ದೆವು. ಅದನ್ನು ನಾಲ್ಮಡಿಯಾಗಿ ಮಡಚಿ ಹಾಸಿದರೆ ಹೆಚ್ಚು ಮೆದುವಾದೀತೆಂದು ಒಮ್ಮೆ ನನಗೆ ಭಾಸವಾಯಿತು. ನಾನು ಅದನ್ನು ನಾಲ್ಮಡಿಯಾಗಿ ಮಡಚಿ ಹಾಸಿದೆ. ಬೆಳಿಗ್ಗೆ ಪ್ರವಾದಿ(ಸ) 'ರಾತ್ರಿ ನನಗೆ ಏನನ್ನು ಹಾಸಲಾಗಿತ್ತು?' ಎಂದು ವಿಚಾರಿಸಿದರು. ನಾನು 'ಅದೇ ಗೋಣಿ ಬಟ್ಟೆ ಹಾಸಿಗೆ. ಆದರೆ ಸ್ವಲ್ಪ ಮೆದುವಾಗಲೆಂದು ರಾತ್ರಿ ನಾನದನ್ನು ನಾಲ್ಮಡಿಯಾಗಿ ಹಾಸಿದ್ದೆ' ಎಂದು ಉತ್ತರಿಸಿದೆ. ಅದಕ್ಕೆ ಪ್ರವಾದಿ(ಸ) 'ಅದು ಇಮ್ಮಡಿಯೇ ಇರಲಿ. ನಾಲ್ಮಡಿಯಾಗಿ ಹಾಸಬೇಡಿರಿ. ಹಾಸಿಗೆ ಮೆದುವಾದುದರಿಂದ ರಾತ್ರಿ ತಹಜ್ಜುದ್ ನಮಾಝ್‌ಗೆ ಏಳುವುದಕ್ಕೆ ಅಡ್ಡಿಯಾಯಿತು' ಎಂದು ಆದೇಶಿಸಿದರು. (ತಿರ್ಮಿದಿ)

ಹ. ಆಯಿಶಾ(ರ) ಹೇಳುತ್ತಾರೆ: ಒಮ್ಮೆ ನಮ್ಮ ಮನೆಗೆ ಓರ್ವ ಅನ್ಸಾರಿ ಮಹಿಳೆ ಬಂದು ಪ್ರವಾದಿವರ್ಯರ(ಸ) ಹಾಸಿಗೆಯನ್ನು ಕಂಡರು. ತಮ್ಮ ಮನೆಗೆ ಮರಳಿದ ಬಳಿಕ ಅವರು ಒಂದು ಹಾಸಿಗೆ ತಯಾರಿಸಿದರು. ಅದರಲ್ಲಿ ಉಣ್ಣೆ ತುಂಬಿಸಿ ಚೆನ್ನಾಗಿ ಮೆದು ಮಾಡಿದರು. ಅದನ್ನು ಪ್ರವಾದಿವರ್ಯರಿಗೆ(ಸ) ಕಳುಹಿಸಿಕೊಟ್ಟರು. ಪ್ರವಾದಿ(ಸ) ಮನೆಗೆ ಬಂದು ಆ ಹಾಸಿಗೆಯನ್ನು ಕಂಡು ಅದೇನೆಂದು ವಿಚಾರಿಸಿದರು. ನಾನು, "ಓರ್ವ ಅನ್ಸಾರಿ ಮಹಿಳೆ ನಮ್ಮ ಮನೆಗೆ ಬಂದವರು ತಮ್ಮ ಹಾಸಿಗೆಯನ್ನು ನೋಡಿ ಹೋಗಿದ್ದರು. ಈಗ ಅವರು ಇದನ್ನು ತಮಗಾಗಿ ಸಿದ್ಧಪಡಿಸಿ ಕಳುಹಿಸಿರುವರು" ಎಂದು ಹೇಳಿದೆ. ಪ್ರವಾದಿ(ಸ) ಅದನ್ನು ಮರಳಿಸಲು ಆಜ್ಞಾಪಿಸಿದರು. ಆ ಹಾಸಿಗೆ ನನಗೆ ಬಹಳ ಮೆಚ್ಚುಗೆಯಾಗಿತ್ತು. ಆದುದರಿಂದ ಹಿಂತಿರುಗಿಸಲು ಮನಸ್ಸು ಒಪ್ಪುತ್ತಿರಲಿಲ್ಲ. ಆದರೆ ಪ್ರವಾದಿವರ್ಯರ(ಸ) ಒತ್ತಾಯಕ್ಕೆ ಮಣಿದು ಮರಳಿಸಲೇ ಬೇಕಾಯಿತು. (ತಿರ್ಮಿದಿ)

ಒಮ್ಮೆ ಪ್ರವಾದಿ(ಸ) ಚಾಪೆಯ ಮೇಲೆ ಮಲಗಿದ್ದರು. ಅವರ ಮೈಮೇಲೆ ಚಾಪೆಯ ಅಚ್ಚು ಒತ್ತಲ್ಪಟ್ಟಿತ್ತು. ಹ. ಅಬ್ದುಲ್ಲಾ ಬಿನ್ ಮಸ್‌ಊದ್(ರ) ಹೇಳುತ್ತಾರೆ, ಅದನ್ನು ಕಂಡು ನನಗೆ ಅಳು ಬಂತು. ನಾವು ಅಳುತ್ತಿರುವುದನ್ನು ಕಂಡು ಪ್ರವಾದಿ(ಸ) ಏಕೆ ಅಳುತ್ತೀರೆಂದು ವಿಚಾರಿಸಿದರು. ನಾನು ಹೇಳಿದೆ, "ಓ ಅಲ್ಲಾಹನ ಸಂದೇಶವಾಹಕರೇ! ಕೈಸರ್ ಮತ್ತು ಕಿಸ್ರಾಗಳು ರೇಷ್ಮೆ ಮತ್ತು ಮಕ್‌ಮಲ್‌ನ ಹಾಸಿಗೆಗಳಲ್ಲಿ ಮಲಗುವಾಗ ತಾವು ಚಾಪೆಯಲ್ಲಿ ಮಲಗುವುದೇ?" ಅದಕ್ಕೆ ಪ್ರವಾದಿ(ಸ) "ಅದು ಅಳತಕ್ಕ ವಿಷಯವಲ್ಲ. ಅವರಿಗೆ ಇಹಲೋಕವಿದೆ. ನಮಗೆ ಪರಲೋಕ!" ಎಂದು ಹೇಳಿದರು.

ಒಮ್ಮೆ ಪ್ರವಾದಿ(ಸ) ಹೇಳಿದರು: "ಇಸ್ರಾಫೀಲ್ ಬಾಯಲ್ಲಿ ಸೂರ್ (ಪ್ರಳಯ ಕಹಳೆ) ಹಿಡಿದು (ಆಜ್ಞೆಗಾಗಿ) ಕಿವಿಗೊಟ್ಟು ಶಿರಬಾಗಿ ಯಾವಾಗ ಊದುವ ಆಜ್ಞೆಯಾಗುತ್ತದೆ ಎಂದು ನಿರೀಕ್ಷಿಸುತ್ತಿರುವಾಗ ನಾನು ಸುಖ, ನೆಮ್ಮದಿ ಮತ್ತು ನಿಶ್ಚಿಂತೆಯಿಂದ ಹೇಗೆ ಜೀವಿಸಲಿ". (ತಿರ್ಮಿದಿ)

ಪ್ರವಾದಿವರ್ಯರ(ಸ) ಈ ಚರ್ಯೆ ಸತ್ಯವಿಶ್ವಾಸಿಯು ಇಹಲೋಕದಲ್ಲಿ ಕಠಿಣ ಪರಿಶ್ರಮದ

ಜೀವನ ಸಾಗಿಸಬೇಕೆಂದೂ ಸುಖಲೋಲುಪತೆಯನ್ನು ವರ್ಜಿಸಬೇಕೆಂದೂ ಸಾರಿ ಹೇಳುತ್ತದೆ.

8. ಮಲಗುವುದಕ್ಕೆ ಮುಂಚೆ ವುಝೂ ಮಾಡಿಕೊಂಡು ಶುದ್ಧವಾಗುವ ಅಭ್ಯಾಸ ಮಾಡಿರಿ. ಕೈಯಲ್ಲಿ ಪಸೆ ಏನಾದರೂ ತಾಗಿದ್ದರೆ ಅದನ್ನು ಚೆನ್ನಾಗಿ ತೊಳೆದುಕೊಳ್ಳಿರಿ. ಪ್ರವಾದಿ(ಸ) ಹೇಳುತ್ತಾರೆ, "ಒಬ್ಬನು ಕೈಯಲ್ಲಿ ಪಸೆ ಇದ್ದು ಅದನ್ನವನು ತೊಳೆಯದೆ ಮಲಗಿದರೆ ಹಾಗೂ ಅವನಿಗೇನಾದರೂ ನಷ್ಟ ಸಂಭವಿಸಿದರೆ (ಅರ್ಥಾತ್ ಏನಾದರೂ ಅವನನ್ನು ಕಚ್ಚಿದರೆ) ಅವನು (ತೊಳೆಯದೆ ಮಲಗಿದುದಕ್ಕಾಗಿ) ತನ್ನನ್ನು ತಾನೇ ಆಕ್ಷೇಪಿಸಲಿ".

ಪ್ರವಾದಿ(ಸ) ಮಲಗುವಾಗಲೆಲ್ಲಾ ವುಝೂ ಮಾಡಿಕೊಂಡೇ ಮಲಗುತ್ತಿದ್ದರು. ಸ್ನಾನ ಕಡ್ಡಾಯವಾಗಿರುವ ಸಂದರ್ಭದಲ್ಲಿ ಮಲಗುವುದಾದರೆ ಅಶುದ್ಧಿ ಇರುವ ಭಾಗವನ್ನು ತೊಳೆದು ವುಝೂ ಮಾಡಿ ಮಲಗುತ್ತಿದ್ದರು.

9. ಮಲಗುವಾಗ ಮನೆಯ ಬಾಗಿಲನ್ನು ಮುಚ್ಚಿಕೊಳ್ಳಿರಿ. ತಿನ್ನುವ ಕುಡಿಯುವ ಪಾತ್ರೆಗಳನ್ನು ಮುಚ್ಚಿಡಿರಿ. ಲೈಟು ಅಥವಾ ದೀಪವನ್ನು ಆರಿಸಿರಿ. ಒಲೆಯಲ್ಲಿ ಬೆಂಕಿ ಇದ್ದರೆ ಅದನ್ನೂ ನಂದಿಸಿರಿ. ಒಮ್ಮೆ ಮದೀನಾದಲ್ಲಿ ರಾತ್ರಿ ವೇಳೆ ಒಂದು ಮನೆಗೆ ಬೆಂಕಿ ತಗುಲಿದಾಗ, ಪ್ರವಾದಿ(ಸ) ಹೇಳಿದರು: "ಬೆಂಕಿ ನಿಮ್ಮ ಶತ್ರು. ಮಲಗುವಾಗ ಬೆಂಕಿಯನ್ನು ನಂದಿಸಿ ಮಲಗಿರಿ".

ಪ್ರವಾದಿ(ಸ) ಹೇಳಿದರು, "ಸಂಜೆಯಾದ ಬಳಿಕ ಚಿಕ್ಕ ಮಕ್ಕಳನ್ನು ಮನೆಯಿಂದ ಹೊರಗೆ ಹೋಗಲು ಬಿಡಬೇಡಿರಿ. ಏಕೆಂದರೆ ಆಗ ಶೈತಾನರು ಭೂಮಿಯಲ್ಲಿ ಹರಡುತ್ತಾರೆ. ರಾತ್ರಿಯ ಒಂದಂಶ ಕಳೆದ ಬಳಿಕ ಅವರನ್ನು ಬಿಡಬಹುದು. ಬಿಸ್ಮಿಲ್ಲಾಃ (ಅಲ್ಲಾಹನ ನಾಮದೊಂದಿಗೆ) ಎನ್ನುತ್ತಾ ಬಾಗಿಲು ಹಾಕಿರಿ. ಬಿಸ್ಮಿಲ್ಲಾಃ ಎನ್ನುತ್ತಾ ದೀಪ ಆರಿಸಿರಿ. ಬಿಸ್ಮಿಲ್ಲಾಃ ಎನ್ನುತ್ತಾ ನೀರಿನ ಪಾತ್ರೆಯನ್ನು ಮುಚ್ಚಿರಿ. ಬಿಸ್ಮಿಲ್ಲಾಃ ಎನ್ನುತ್ತಾ ತಿನ್ನುವ, ಕುಡಿಯುವ ಪಾತ್ರೆಗಳನ್ನೆಲ್ಲಾ ಮುಚ್ಚಿರಿ. ಮುಚ್ಚಲು ಮುಚ್ಚಳಿಕೆ ಇತ್ಯಾದಿ ಇಲ್ಲದಿದ್ದರೆ ಬೇರಾವುದಾದರೂ ವಸ್ತುವನ್ನು ಪಾತ್ರೆಯ ಮೇಲಿಡಿರಿ". (ಸಿಹಾಹುಸ್ಸಿತ್ತ ವರದಿ ಹಿಸ್ನ್ ಹಸೀನ್)

10. ಮಲಗುವಾಗ ಕುಡಿಯುವ ನೀರು ಮತ್ತು ಲೋಟೆ, ಲಾಠಿ, ಬೆಳಕಿಗಾಗಿ ಬೆಂಕಿಪೆಟ್ಟಿಗೆ ಅಥವಾ ಟಾರ್ಚ್, ಹಲ್ಲುಜ್ಜುವ ಬ್ರಷ್, ಟವೆಲ್ ಇತ್ಯಾದಿ ವಸ್ತುಗಳನ್ನು ಹಾಸಿಗೆಯ ಬಳಿಯೇ ಇಟ್ಟುಕೊಳ್ಳಿರಿ. ನೀವು ಎಲ್ಲಾದರೂ ಅತಿಥಿಯಾಗಿದ್ದರೆ ಮಲಗುವಾಗ ಪಾಯಿಖಾನೆಯ ಬಗ್ಗೆ ವಿಚಾರಿಸಿ ತಿಳಿದಿರಿ. ಇಲ್ಲವಾದರೆ ರಾತ್ರಿಯ ವೇಳೆ ಅಗತ್ಯ ಬಂದಾಗ ಕಷ್ಟವಾದೀತು. ಪ್ರವಾದಿ(ಸ) ಮಲಗುವಾಗ ಏಳು ವಸ್ತುಗಳನ್ನು ತಮ್ಮ ತಲೆಯ ಭಾಗದಲ್ಲಿ ಇರಿಸುತ್ತಿದ್ದರು.

1. ಎಣ್ಣೆಯ ಸೀಸೆ. 2. ಬಾಚಣಿಗೆ. 3. ಸುರ್ಮಾ. 4. ಕತ್ತರಿ. 5. ಹಲ್ಲುಜ್ಜುವ ಬ್ರಷ್. 6. ಕನ್ನಡಿ. 7. ತಲೆ ತುರಿಸಿಕೊಳ್ಳುವ ಮರದ ಒಂದು ಕಡ್ಡಿ.

11. ಮಲಗುವಾಗ ನಿಮ್ಮ ಪಾದರಕ್ಷೆ ಮತ್ತು ಉಡುಪನ್ನು ಹತ್ತಿರವೇ ಇಡಿರಿ. ಇದರಿಂದ ಮಲಗಿ ಎದ್ದ ಬಳಿಕ ಹುಡುಕಾಡುವುದು ತಪ್ಪುತ್ತದೆ. ಎದ್ದಾಗಲೇ ಪಾದರಕ್ಷೆಯೊಳಗೆ ಕಾಲು ಹಾಕದಿರಿ. ಹಾಗೆಯೇ ಉಡುಪನ್ನು ಕೊಡವದೆ ಧರಿಸಬೇಡಿರಿ. ಬಟ್ಟೆ ಅಥವಾ ಪಾದರಕ್ಷೆಯಲ್ಲಿ ಏನಾದರೂ ಮಾರಕ ಜಂತು ಇದ್ದು ಅದು ನಿಮಗೆ ತೊಂದರೆ ಕೊಡಲೂ ಬಹುದು.

12. ಮಲಗುವುದಕ್ಕಿಂತ ಮುಂಚೆ ಹಾಸಿಗೆಯನ್ನು ಚೆನ್ನಾಗಿ ಕೊಡವಿರಿ. ಮಲಗಿರುವಲ್ಲಿಂದ ಏನಾದರೂ ಕೆಲಸಕ್ಕಾಗಿ ಎದ್ದರೆ ಪುನಃ ಮಲಗುವ ಮುಂಚೆ ಮತ್ತೊಮ್ಮೆ ಹಾಸಿಗೆಯನ್ನು ಕೊಡವಿರಿ. ಪ್ರವಾದಿ(ಸ) ಹೇಳಿರುವರು, "ಯಾರಾದರೂ ರಾತ್ರಿಯ ವೇಳೆ ಹಾಸಿಗೆಯಿಂದ ಎದ್ದು ಮರಳಿ ಹಾಸಿಗೆಗೆ ಹೋದಾಗ ಅದನ್ನು ತನ್ನ ಲುಂಗಿಯ ಅಂಚಿ ನಿಂದ ಮೂರು ಬಾರಿ ಕೊಡವಲಿ. ಏಕೆಂದರೆ ಅವನ ಅನುಪಸ್ಥಿತಿಯಲ್ಲಿ ಹಾಸಿಗೆಯ ಮೇಲೆ ಏನು ಬಂದಿದೆ ಎಂದು ಅವನಿಗೆ ತಿಳಿದಿರುವುದಿಲ್ಲ". (ತಿರ್ಮಿದಿ)

13. ಹಾಸಿಗೆಗೆ ಹೋಗುವಾಗ ಪ್ರಾರ್ಥಿಸಿರಿ. ಪ್ರವಾದಿವರ್ಯರ(ಸ) ಆಪ್ತ ಸೇವಕರಾದ ಹ. ಅನಸ್(ರ) ಹೇಳುತ್ತಾರೆ, ಪ್ರವಾದಿ(ಸ) ಹಾಸಿಗೆಗೆ ಹೋಗುವಾಗ ಈ ರೀತಿ ಪ್ರಾರ್ಥಿಸುತ್ತಿದ್ದರು:

اَلْحَمْدُ لِلّٰهِ الَّذِىْ اَطْعَمَنَا وَسَقَانَا وَكَفَانَا وَاٰوَانَا فَكَمْ مِّمَّنْ لَّا كَافِىَ لَهٗ وَلَا مُؤْوِىْ (شمائل ترمذی)

"ಅಲ್‌ಹಮ್ದುಲಿಲ್ಲಾಹಿಲ್ಲದೀ ಅತ್‌ಅಮನಾ ವಸಕಾನಾ ವಕಫಾನಾ ವ ಆವಾನಾ ಫಕಮ್ ಮಿಮ್ಮಲ್ಲಾ ಕಾಫಿಯ ಲಹೂ ವಲಾ ಮುಅ್‌ವೀ."

(ನಮಗೆ ತಿನ್ನಿಸಿದ, ಕುಡಿಸಿದ, ನಮ್ಮ ಕೆಲಸಗಳಲ್ಲಿ ಪೂರ್ಣವಾಗಿ ಸಹಾಯ ಮಾಡಿದ ಮತ್ತು ನಮ್ಮ ವಾಸಕ್ಕೆ ಒಂದು ಸ್ಥಳ ನೀಡಿದ ಅಲ್ಲಾಹನಿಗೆ ಸರ್ವ ಸ್ತುತಿಸ್ತೋತ್ರಗಳು. ಅದೆಷ್ಟೋ ಜನರು ಸಹಾಯಕರಿಲ್ಲದೆ ಆಶ್ರಯ ನೀಡುವವರಿಲ್ಲದೆ ಇದ್ದಾರೆ!)

14. ಹಾಸಿಗೆಯಲ್ಲಿ ಮಲಗುವಾಗ ಪವಿತ್ರ ಕುರ್‌ಆನಿನ ಸ್ವಲ್ಪ ಭಾಗವನ್ನು ತಪ್ಪದೆ ಪಠಿಸಿರಿ. ಪ್ರವಾದಿ(ಸ) ಮಲಗುವುದಕ್ಕೆ ಮುಂಚೆ ಕುರ್‌ಆನಿನ ಸ್ವಲ್ಪ ಭಾಗವನ್ನು ತಪ್ಪದೆ ಪಠಿಸುತ್ತಿದ್ದರು. ಪ್ರವಾದಿ(ಸ) ಹೇಳುತ್ತಾರೆ: "ಮಲಗುವ ಮೊದಲು ಕುರ್‌ಆನಿನ ಯಾವುದೇ ಒಂದು ಸೂರಃವನ್ನು ಪಠಿಸುವವನ ಬಳಿ ಅಲ್ಲಾಹನು ತನ್ನ ಒಬ್ಬ ದೇವಚರನನ್ನು ಕಳುಹಿಸುತ್ತಾನೆ. ಆ ದೇವಚರ ನಿದ್ರೆಯಿಂದ ಏಳುವ ತನಕ ಎಲ್ಲ ಉಪದ್ರವಕಾರಿ ವಸ್ತುಗಳಿಂದ ಅವನನ್ನು ರಕ್ಷಿಸುತ್ತದೆ. ಅವನು ಯಾವ ಸಮಯದಲ್ಲಿ ಎಚ್ಚೆತ್ತರೂ ಸರಿಯೆ". (ಅಹ್ಮದ್)

ಪ್ರವಾದಿ(ಸ) ಹೇಳಿದರು: "ಒಬ್ಬನು ಮಲಗಲಿಕ್ಕಾಗಿ ಹಾಸಿಗೆ ತಲಪಿದಾಗಲೇ ಒಬ್ಬ ದೇವಚರ ಮತ್ತು ಶೈತಾನ ಅವನ ಬಳಿ ಬರುತ್ತಾರೆ. ದೇವಚರ ಹೇಳುತ್ತದೆ: "ನಿಮ್ಮ ಕರ್ಮಗಳ ಸಮಾರೋಪ ಒಳಿತಿನಿಂದ ಮಾಡಿರಿ." ಶೈತಾನ್ ಹೇಳುತ್ತದೆ, "ನಿಮ್ಮ ಕರ್ಮಗಳ ಸಮಾರೋಪ ಕೆಡುಕಿನಿಂದ ಮಾಡಿರಿ." ಆ ಬಳಿಕ ಆ ವ್ಯಕ್ತಿ ದೇವನನ್ನು ಸ್ಮರಿಸುತ್ತಾ ಮಲಗಿದರೆ ಆ ದೇವಚರ ರಾತ್ರಿ ಇಡೀ ಅವನನ್ನು ರಕ್ಷಿಸುತ್ತದೆ."

ಹ ಆಯಿಶಾ(ರ) ಹೇಳುತ್ತಾರೆ: "ಪ್ರವಾದಿ(ಸ) ಮಲಗುವುದಕ್ಕಾಗಿ ಹಾಸಿಗೆಗೆ ಹೋದಾಗ ತಮ್ಮ ಎರಡೂ ಕೈಗಳನ್ನು ದುಆ ಮಾಡುವಂತೆ ಜೋಡಿಸಿ 'ಕುಲ್‌ಹುವಲ್ಲಾಹು ಅಹದ್...' 'ಕುಲ್ ಅಊದುಬಿರಬ್ಬಿಲ್ ಫಲಕ್...' ಮತ್ತು 'ಕುಲ್ ಅಊದುಬಿರಬ್ಬಿನ್ನಾಸ್...' ಎಂಬ

ಸೂರಃಗಳನ್ನು ಓದಿ ಕೈಗಳಿಗೆ ಊದಿ ತಮ್ಮ ತಲೆ, ಮುಖ ಮತ್ತು ಶರೀರದ ಮುಂಭಾಗದಿಂದ ಆರಂಭಿಸಿ ಶರೀರದ ಮೇಲೆ ಕೈ ತಲಪುವಲ್ಲಿಗೆಲ್ಲಾ ಅದನ್ನು ಸವರುತ್ತಿದರು. ಪ್ರವಾದಿ(ಸ) ಹೀಗೆ ಮೂರು ಸಲ ಮಾಡುತ್ತಿದ್ದರು. (ತಿರ್ಮಿದಿ)

15. ಮಲಗಲು ಸಿದ್ಧರಾದಾಗ ಬಲಕೈಯನ್ನು ಬಲ ಕೆನ್ನೆಯ ಅಡಿಯಲ್ಲಿಟ್ಟು ಬಲಪಾರ್ಶ್ವಕ್ಕೆ ಒರಗಿ ಮಲಗಿರಿ, ಹ. ಬರ್ರಾಅ್(ರ) ಹೇಳುತ್ತಾರೆ, ಪ್ರವಾದಿ ವಿಶ್ರಾಂತಿ ಪಡೆಯುವಾಗ ತಮ್ಮ ಬಲ ಕೈಯನ್ನು ಕೆಳಗಿಟ್ಟು ಈ ರೀತಿ ಹೇಳುತ್ತಿದ್ದರು:

رَبِّ قِنِىْ عَذَابَكَ يَوْمَ تَبْعَثُ عِبَادَكَ

"ರಬ್ಬಿಕಿನೀ ಅದಾಬಕ ಯೌಮ ತಬ್ಅಸು ಇಬಾದಕ." (ನನ್ನ ಪ್ರಭೂ! ನೀನು ನಿನ್ನ ದಾಸರನ್ನು ನಿನ್ನ ಸನ್ನಿಧಿಯಲ್ಲಿ ಸೇರಿಸುವ ದಿನ ನನ್ನನ್ನು ನಿನ್ನ ಶಿಕ್ಷೆಯಿಂದ ರಕ್ಷಿಸು.)

ಹಿಸ್ನ್ ಹಸೀನ್‌ನಲ್ಲಿ ಪ್ರವಾದಿ(ಸ) ಈ ವಾಕ್ಯವನ್ನು ಮೂರು ಸಲ ಹೇಳುತ್ತಿದ್ದರೆಂದು ವರದಿಯಾಗಿದೆ.

16. ಬೋರಲಾಗಿ ಮತ್ತು ಎಡಪಾರ್ಶ್ವಕ್ಕೆ ಒರಗಿ ಮಲಗಬೇಡಿರಿ. ಹ. ಮಈಶ್‌ರ(ರ) ತಂದೆ ತಫ್‌ಖತುಲ್ ಗಿಫಾರಿ(ರ) ಹೇಳುತ್ತಾರೆ, "ನಾನೊಮ್ಮೆ ಮಸೀದಿಯಲ್ಲಿ ಬೋರಲಾಗಿ ಮಲಗಿದ್ದೆ. ಯಾರೋ ತಮ್ಮ ಕಾಲಿನಿಂದ ನನ್ನನ್ನು ಅಲುಗಾಡಿಸಿ "ಈ ರೀತಿ ಮಲಗುವುದು ಅಲ್ಲಾಹನಿಗೆ ಅಪ್ರಿಯವಾಗಿದೆ ಎಂದು ಹೇಳಿದರು. ನಾನು ಹೊರಳಿ ನೋಡಿದಾಗ ಅದು ಪ್ರವಾದಿ(ಸ) ಆಗಿದ್ದರು." (ಅಬೂದಾವೂದ್)

17. ಹೊಸ ಗಾಳಿ, ಬೆಳಕು ಬರುವ ಸ್ಥಳವನ್ನೇ ನಿದ್ರೆಗಾಗಿ ಆರಿಸಿರಿ. ಹೊಸ ಗಾಳಿಗೆ ಅವಕಾಶವೇ ಇಲ್ಲದಂತಹ ಮುಚ್ಚಿದ ಕೋಣೆಯಲ್ಲಿ ಮಲಗಬೇಡಿರಿ.

18. ಮುಖಕ್ಕೆ ಹೊದಿಕೆ ಹಾಕಿ ಮಲಗಬೇಡಿರಿ. ಹೀಗೆ ಮಲಗುವುದರಿಂದ ಆರೋಗ್ಯದ ಮೇಲೆ ಕೆಟ್ಟ ಪರಿಣಾಮ ಬೀಳುತ್ತದೆ. ಮುಖವನ್ನು ತೆರೆದೇ ಮಲಗುವ ಅಭ್ಯಾಸ ಮಾಡಿರಿ. ಇದರಿಂದ ನಿಮಗೆ ತಾಜಾ ಗಾಳಿ ಸಿಗುವುದು.

19. ಅಡ್ಡ ಗೋಡೆ ಇಲ್ಲದ ತಾರಸಿನಲ್ಲಿ ಅಥವಾ ಅಟ್ಟದಲ್ಲಿ ಮಲಗಬೇಡಿರಿ. ಅಟ್ಟದಲ್ಲಿ ಮಲಗಿದ್ದರೆ ಕೆಳಗಿಳಿಯುವ ಮೊದಲು ಏಣಿಯ ಕಡೆ ಬೆಳಕು ಮಾಡಿರಿ. ಕೆಲವೊಮ್ಮೆ ಸಾಮಾನ್ಯ ತಪ್ಪಿನಿಂದ ಬಹಳ ಕಷ್ಟ ಅನುಭವಿಸಬೇಕಾಗುತ್ತದೆ.

20. ಎಷ್ಟೇ ತೀವ್ರ ಚಳಿಯಾದರೂ ಕೊಠಡಿಯಲ್ಲಿ ಬೆಂಕಿ ಹೊತ್ತಿಸಿಟ್ಟು ಮಲಗಬೇಡಿರಿ. ಮುಚ್ಚಿದ ಕೋಣೆಯಲ್ಲಿ ದೀಪ ಉರಿಸಿಟ್ಟೂ ಮಲಗಬೇಡಿರಿ. ಬೆಂಕಿ ಉರಿಯುವುದರಿಂದ ಮುಚ್ಚಿದ ಕೋಣೆಯಲ್ಲಿ ಉಂಟಾಗುವ ಅನಿಲವು ಆರೋಗ್ಯಕ್ಕೆ ಹಾನಿಕರವಾಗಿದೆ. ಮಾತ್ರವಲ್ಲ ಕೆಲವೊಮ್ಮೆ ಅದು ಪ್ರಾಣಕ್ಕೂ ಅಪಾಯಕರ.

21. ಮಲಗುವುದಕ್ಕೆ ಮುಂಚೆ ಈ ಕೆಳಗಿನ ದುಆ ಪಠಿಸಿರಿ. ಪ್ರವಾದಿ(ಸ) ಮಲಗುವ

ದಕ್ಕೆ ಮುಂಚೆ ಈ ದುಆ ಪಠಿಸುತ್ತಿದ್ದರೆಂದು ಹ. ಅಬೂ ಹುರೈರಾ(ರ) ಹೇಳುತ್ತಾರೆ:

بِاسْمِكَ رَبِّىْ وَضَعْتُ جَنْبِىْ وَبِكَ اَرْفَعُهُ اِنْ اَمْسَكْتَ نَفْسِىْ

فَارْحَمْهَا، وَاِنْ اَرْسَلْتَهَا فَاحْفَظْهَا بِمَا تَحْفَظُ بِهِ عِبَادَكَ الصَّالِحِيْنَ

(بخاری، مسلم)

"ಬಿಸ್ಮಿಕ ರಬ್ಬೀ ವದಅ್‌ತು ಜಂಬೀ ವಬಿಕ ಅರ್ಫಉಹೂ ಇನ್ ಅಮ್‌ಸಕ್ತ ನಫ್‌ಸೀ ಫರ್‌ಹಮ್‌ಹಾ ವಇನ್ ಅರ್‌ಸಲ್‌ತಹಾ ಫಹ್‌ಫಝ್‌ಹಾ ಬಿಮಾ ತಹ್‌ಫಝು ಬಿಹೀ ಇಬಾದಕಸ್ಸಾಲಿಹೀನ್."

(ಓ ನನ್ನ ಪ್ರಭೂ! ನಿನ್ನ ನಾಮದೊಂದಿಗೆ ನಾನು ನನ್ನ ಪಾರ್ಶ್ವವನ್ನು ಹಾಸಿಗೆಯ ಮೇಲಿಡುತ್ತೇನೆ. ನಿನ್ನ ಸಹಾಯದಿಂದಲೇ ಅದನ್ನು ಹಾಸಿಗೆಯಿಂದ ಎತ್ತುವೆನು. ನೀನು ರಾತ್ರಿಯೇ ನನ್ನ ಪ್ರಾಣ ತೆಗೆದರೆ ಅದರ ಮೇಲೆ ಕರುಣೆ ತೋರು. ಆದರೆ ನೀನು ಅದಕ್ಕೆ ಮತ್ತಷ್ಟು ಅವಧಿ ಕೊಟ್ಟು ಬಿಟ್ಟರೆ ಅದನ್ನು ನಿನ್ನ ಸಜ್ಜನ ದಾಸರನ್ನು ರಕ್ಷಿಸುವಂತೆ ರಕ್ಷಿಸು). (ಬುಖಾರಿ, ಮುಸ್ಲಿಮ್)

ಈ ದುಆ ನೆನಪಿಲ್ಲದಿದ್ದರೆ ಸಂಕ್ಷಿಪ್ತವಾಗಿ ಈ ರೀತಿ ಹೇಳಬೇಕು.

اَللّٰهُمَّ بِاسْمِكَ اَمُوْتُ وَاَحْىٰ (بخاری، مسلم)

"ಅಲ್ಲಾಹುಮ್ಮ ಬಿಸ್ಮಿಕ ಅಮೂತು ವಅಹ್ಯಾ."

(ಓ ಅಲ್ಲಾಹ್! ನಾನು ನಿನ್ನ ನಾಮದೊಂದಿಗೆ ಸಾಯುವೆನು ಮತ್ತು ನಿನ್ನ ನಾಮದೊಂದಿಗೇ ಜೀವಂತ ಎದ್ದೇಳುವೆನು.) (ಬುಖಾರಿ, ಮುಸ್ಲಿಮ್)

22. ರಾತ್ರಿಯ ಅಂತ್ಯ ಜಾವದಲ್ಲಿ ಎದ್ದೇಳುವ ಅಭ್ಯಾಸ ಬೆಳೆಸಿರಿ. ಆತ್ಮ ಸಂಸ್ಕರಣೆ ಮತ್ತು ದೇವ ಧ್ಯಾನಕ್ಕೆ ರಾತ್ರಿಯ ಅಂತ್ಯ ಜಾವದಲ್ಲಿ ಏಳುವುದು ಅವಶ್ಯಕ. ದೇವನು ತನ್ನ ಆಪ್ತ ದಾಸರ ಇದೇ ಗುಣ ವಿಶೇಷವನ್ನು ಈ ರೀತಿ ವಿವರಿಸಿರುವನು: "ಅವರು ರಾತ್ರಿಯ ಅಂತ್ಯ ಜಾವದಲ್ಲಿ ಎದ್ದು ದೇವ ಸನ್ನಿಧಿಯಲ್ಲಿ ರುಕೂಅ್ ಮತ್ತು ಸುಜೂದ್ ಮಾಡುತ್ತಾರೆ ಮತ್ತು ತಮ್ಮ ಪಾಪಗಳಿಗೆ ಕ್ಷಮೆ ಯಾಚಿಸುತ್ತಾರೆ."

ರಾತ್ರಿಯ ಪ್ರಥಮ ಜಾವದಲ್ಲಿ ಮಲಗಿ ಕೊನೆಯ ಜಾವದಲ್ಲಿ ಎದ್ದು ಪ್ರಾರ್ಥನೆಯಲ್ಲಿ ನಿರತರಾಗುವುದು ಪ್ರವಾದಿವರ್ಯರ(ಸ) ರೂಢಿಯಾಗಿತ್ತು.

23. ನಿದ್ದೆಯಿಂದ ಎಚ್ಚೆತ್ತ ಕೂಡಲೇ ಈ ದುಆ ಪಠಿಸಿರಿ:

اَلْحَمْدُ لِلّٰهِ الَّذِىْ اَحْيَانَا بَعْدَ مَا اَمَاتَنَا وَاِلَيْهِ النُّشُوْرُ (بخاری، مسلم)

"ಅಲ್‌ಹಮ್ದು ಲಿಲ್ಲಾಹಿಲ್ಲದೀ ಅಹ್ಯಾನಾ ಬಅ್‌ದ ಮಾ ಅಮಾತನಾ ವ ಇಲೈಹಿನ್ನುಶೂರ್".

"ನಮ್ಮನ್ನು ಮರಣದ ಬಳಿಕ ಜೀವಂತ ಎದ್ದೇಳಿಸಿದ ಅಲ್ಲಾಹನಿಗೆ ಸರ್ವಸ್ತುತಿ ಸ್ತೋತ್ರಗಳು. ಅವನ ಸನ್ನಿಧಿಯಲ್ಲೇ ನಾವು ಹಾಜರಾಗಬೇಕಾಗಿದೆ". (ಬುಖಾರಿ, ಮುಸ್ಲಿಮ್)

24. ಯಾವುದೇ ಒಳ್ಳೆಯ ಕನಸು ಕಂಡಾಗ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಿರಿ. ಅದನ್ನು ಒಂದು ಸುವಾರ್ತೆಯೆಂದು ತಿಳಿಯಿರಿ. ಪ್ರವಾದಿ(ಸ) ಹೇಳುತ್ತಾರೆ, "ಇನ್ನು ಪ್ರವಾದಿತ್ವದಲ್ಲಿ ಕೇವಲ ಸುವಾರ್ತೆಗಳಲ್ಲದೆ ಇನ್ನೇನೂ ಉಳಿದಿಲ್ಲ. ಜನರು 'ಸುವಾರ್ತೆಯ ತಾತ್ಪರ್ಯವೇನು?' ಎಂದು ಪ್ರಶ್ನಿಸಿದಾಗ; ಪ್ರವಾದಿ(ಸ) 'ಉತ್ತಮ ಕನಸು' ಎಂದರು. (ಬುಖಾರಿ)

"ಯಾರು ಹೆಚ್ಚು ಸತ್ಯವಂತನಾಗಿರುತ್ತಾನೋ ಅವನ ಕನಸುಗಳು ಹೆಚ್ಚು ಸತ್ಯವಾಗಿರುವುದು" ಎಂದೂ ಪ್ರವಾದಿ(ಸ) ಹೇಳಿರುವರು. ಪ್ರವಾದಿ(ಸ) ಈ ರೀತಿ ಆದೇಶಿಸಿರುವರು, "ಉತ್ತಮ ಕನಸೊಂದನ್ನು ಕಂಡಾಗ ದೇವನನ್ನು ಸ್ತುತಿಸಿರಿ ಮತ್ತು ಅದನ್ನು ಬೇರೆಯವರಿಗೆ ಹೇಳಿರಿ. ಆದರೆ ಸ್ನೇಹಿತರಿಗೆ ಮಾತ್ರ ಹೇಳಬೇಕು." ಪ್ರವಾದಿ(ಸ) ಒಳ್ಳೆಯ ಕನಸೇನಾದರೂ ಕಂಡರೆ ಸಹಾಬಿಗಳೊಂದಿಗೆ(ರ) ಅದನ್ನು ಹೇಳುತ್ತಿದ್ದರು. ನೀವೇನಾದರೂ ಕನಸು ಕಂಡಿದ್ದರೆ ಹೇಳಿ, ನಾನು ಅದರ ವ್ಯಾಖ್ಯಾನ ಹೇಳುತ್ತೇನೆ' ಎಂದೂ ಪ್ರವಾದಿ(ಸ) ಹೇಳುತ್ತಿದ್ದರು. (ಬುಖಾರಿ)

25. ಪ್ರವಾದಿ(ಸ) ಅವರ ಮೇಲೆ ದರೂದ್ (ಸ್ವಸ್ತಿವಚನ) ಹೆಚ್ಚೆಚ್ಚು ಪಠಿಸಿರಿ. ದೇವಾನುಗ್ರಹವಿದ್ದರೆ ಕನಸಿನಲ್ಲಿ ಪ್ರವಾದಿವರ್ಯರ(ಸ) ದರ್ಶನದ ಭಾಗ್ಯ ಲಭಿಸೀತು.

ಮೌ| ಮುಹಮ್ಮದ್ ಅಲೀ ಮೂಂಗೇರಿಯವರು ಒಂದು ಸಲ ಫಝ್ಲುರ್ರಹ್ಮಾನ್ ಗಂಜ್ ಮುರಾದಾಬಾದಿಯೊಂದಿಗೆ ಸ್ವಪ್ನದಲ್ಲಿ ಪ್ರವಾದಿವರ್ಯರ(ಸ) ದರ್ಶನ ಭಾಗ್ಯ ಲಭಿಸುವಂತಹ ಯಾವುದಾದರೂ ವಿಶೇಷ ಸ್ವಸ್ತಿವಚನವನ್ನು ಹೇಳಿ ಕೊಡುವಂತೆ ಬಿನ್ನವಿಸಿದರು. ಅವರು ಅದಕ್ಕೆ ಯಾವುದೇ ಪ್ರತ್ಯೇಕ ಸ್ವಸ್ತಿ ವಚನವಿಲ್ಲವೆಂದೂ ಪ್ರಾಮಾಣಿಕತೆಯನ್ನು ಬೆಳೆಸಬೇಕೆಂದೂ ಹೇಳಿದರು. ತರುವಾಯ ಸ್ವಲ್ಪ ತಡೆದು ಈ ರೀತಿ ಹೇಳಿದರು. ಸಯ್ಯದ್ ಹಸನ್‌ರಿಗೆ ಈ ಸ್ವಸ್ತಿ ವಚನದ ನಿತ್ಯ ರೂಢಿಯಿಂದ ಬಯಕೆ ಸಿದ್ಧಿಸಿದೆ.

اَللّٰهُمَّ صَلِّ عَلٰى مُحَمَّدٍ وَعِتْرَتِهٖ بِعَدَدِ كُلِّ مَعْلُوْمٍ لَّكَ

"ಅಲ್ಲಾಹುಮ್ಮ ಸಲ್ಲಿ ಅಲಾ ಮುಹಮ್ಮದಿನ್ ವ ಇತ್ರತಿಹೀ ಬಿಅದದಿ ಕುಲ್ಲಿ ಮಅ್‌ಲೂಮಿಲ್ಲಕ". (ಓ ಅಲ್ಲಾಹ್! ನಿನ್ನ ತಿಳುವಳಿಕೆಯಲ್ಲಿರುವ ಎಲ್ಲ ವಸ್ತುಗಳ ಸಂಖ್ಯೆಯಷ್ಟು ಪ್ರವಾದಿ ಮುಹಮ್ಮದ್‌ರ(ಸ) ಮೇಲೆ ಅನುಗ್ರಹ ವರ್ಷಿಸು.)

ಪ್ರವಾದಿ(ಸ) ಹೇಳಿರುವರು: "ಯಾರು ಕನಸಿನಲ್ಲಿ ನನ್ನನ್ನು ಕಂಡನೋ ಅವನು ನನ್ನನ್ನೇ ಕಂಡನು. ಏಕೆಂದರೆ ಶೈತಾನನು ನನ್ನ ರೂಪದಲ್ಲಿ ಬರಲು ಸಾಧ್ಯವಿಲ್ಲ". (ತಿರ್ಮಿದಿ)

ಹ. ಯಝೀದ್ ಫಾರ್ಸಿಯವರು ಪವಿತ್ರ ಕುರ್‌ಆನನ್ನು ಬರೆಯುತ್ತಿದ್ದರು. ಅವರಿಗೆ ಒಮ್ಮೆ ಸ್ವಪ್ನದಲ್ಲಿ ಪ್ರವಾದಿವರ್ಯರ(ಸ) ದರ್ಶನವಾಯಿತು. ಆಗ ಹ. ಇಬ್ನು ಅಬ್ಬಾಸ್(ರ) ಜೀವಿಸಿದ್ದರು. ಹ. ಯಝೀದ್‌ರವರು(ರ) ತನ್ನ ಸ್ವಪ್ನವನ್ನು ಹ. ಇಬ್ನು ಅಬ್ಬಾಸ್‌ರಿಗೆ(ರ) ಹೇಳಿದಾಗ ಅವರು ಪ್ರವಾದಿವರ್ಯರ(ಸ) ಈ ಹದೀಸನ್ನು ಹೇಳಿದರು.

"ಯಾರು ಸ್ವಪ್ನದಲ್ಲಿ ನನ್ನನ್ನು ಕಂಡನೋ ಅವನು ನಿಜವಾಗಿ ನನ್ನನ್ನೇ ಕಂಡನು. ಏಕೆಂದರೆ ಶೈತಾನನು ನನ್ನ ರೂಪದಲ್ಲಿ ಬರಲು ಶಕ್ತನಲ್ಲ". ಆ ಬಳಿಕ ಹೇಳಿದರು, "ನೀವು ಸ್ವಪ್ನದಲ್ಲಿ ಕಂಡವರ ರೂಪವನ್ನು ವರ್ಣಿಸಬಹುದೇ?" ಹ. ಯಝೀದ್‌ರು ಹೇಳಿದರು, "ಪ್ರವಾದಿವರ್ಯರ(ಸ) ದೇಹದಾರ್ಢ್ಯ ಮತ್ತು ಎತ್ತರ ಬಹಳ ಸಂತುಲಿತವಾಗಿತ್ತು. ಅವರ ಬಣ್ಣವು ಬಿಳಿ ವರ್ಣದತ್ತ ವಾಲುವ ಕಂದು ವರ್ಣವಾಗಿತ್ತು. ಕಣ್ಣುಗಳು ಕಪ್ಪಾಗಿದ್ದು, ಪ್ರಸನ್ನ ಹಾಗೂ ಸುಂದರ ಉರುಟು ಮುಖವನ್ನು ಹೊಂದಿದ್ದರು. ಸಂಪೂರ್ಣ ಮುಖವನ್ನು ಆವರಿಸುವ ದಟ್ಟವಾದ ಗಡ್ಡವಿತ್ತು. ಅದು ಎದೆಯ ಮೇಲೆ ಹರಡಿತ್ತು". ಆಗ ಹ. ಇಬ್ನು ಅಬ್ಬಾಸ್(ರ) ಹೇಳಿದರು, "ನೀವು ಜೀವಮಾನದಲ್ಲಿ ಪ್ರವಾದಿವರ್ಯರನ್ನು(ಸ) ಕಂಡಿದ್ದರೂ, ಇದಕ್ಕಿಂತ ಹೆಚ್ಚು ಅವರ ರೂಪವನ್ನು ವರ್ಣಿಸಲು ಸಾಧ್ಯವಿರಲಿಲ್ಲ". (ಅರ್ಥಾತ್ ನೀವು ವಿವರಿಸಿದ ರೂಪ ಪ್ರವಾದಿವರ್ಯರದ್ದೇ(ಸ) ಆಗಿತ್ತು.) (ತಿರ್ಮಿದಿ)

26. ದುರದೃಷ್ಟವಶಾತ್ ಎಂದಾದರೂ ಭೀಕರ ಸ್ವಪ್ನವೇನಾದರೂ ಕಂಡರೆ ಅದರ ಬಗ್ಗೆ ಯಾರ ಬಳಿಯೂ ಪ್ರಸ್ತಾಪಿಸಬೇಡಿರಿ. ಆ ಸ್ವಪ್ನದ ಕೇಡಿನಿಂದ ಅಲ್ಲಾಹನ ಅಭಯ ಯಾಚಿಸಿರಿ. ದೇವನಿಚ್ಛಿಸಿದರೆ ನೀವು ಅದರ ಕೇಡಿನಿಂದ ಸುರಕ್ಷಿತರಾಗುವಿರಿ. ಹ. ಅಬೂಸಲ್ಮಾ(ರ) ಹೇಳುತ್ತಾರೆ, ನಾನು ಭೀಕರ ಕನಸುಗಳಿಂದಾಗಿ ಹೆಚ್ಚಿನ ವೇಳೆ ರೋಗ ಪೀಡಿತನಾಗಿರುತ್ತಿದ್ದೆ. ಒಮ್ಮೆ ನಾನು ಅಬೂ ಕತಾದಃರೊಡನೆ(ರ) ಆ ಬಗ್ಗೆ ಪ್ರಸ್ತಾಪಿಸಿದಾಗ ಅವರು ನನಗೆ ಪ್ರವಾದಿವರ್ಯರ(ಸ) ಈ ಹದೀಸ್ ಹೇಳಿದರು: "ಒಳ್ಳೆಯ ಸ್ವಪ್ನವು ದೇವನ ವತಿಯಿಂದ ಆಗಿರುತ್ತದೆ. ನಿಮ್ಮ ಪೈಕಿ ಯಾರಾ ದರೂ ಒಳ್ಳೆಯ ಸ್ವಪ್ನ ಕಂಡರೆ ನಿಮ್ಮ ಆಪ್ತ ಮಿತ್ರರ ಹೊರತು ಇನ್ನಾರ ಬಳಿಯೂ ಆ ಬಗ್ಗೆ ಪ್ರಸ್ತಾಪಿಸಬೇಡಿರಿ. ನಿಮ್ಮ ಪೈಕಿ ಯಾರಾದರೂ ಕೆಟ್ಟ ಕನಸು ಕಂಡರೆ ಅದನ್ನು ಯಾರಲ್ಲೂ ಪ್ರಸ್ತಾಪಿಸಬೇಡಿರಿ. ಎಚ್ಚರವಾಗುತ್ತಲೇ, 'ಅಊದುಬಿಲ್ಲಾಹಿ ಮಿನಶ್ಶೈತಾನಿರ್ರಜೀಮ್' ಎಂದು ಹೇಳಿ ಮೂರು ಸಲ ಎಡಪಾರ್ಶ್ವಕ್ಕೆ ತಿರುಗಿ 'ಥೂ' ಎನ್ನುತ್ತಾ ಬಲಭಾಗಕ್ಕೆ ಒರಗಲಿ. ಆಗ ಅವನು ಆ ಸ್ವಪ್ನದ ಕೇಡಿನಿಂದ ಸುರಕ್ಷಿತನಾಗುವನು". (ರಿಯಾದುಸ್ಸಾಲಿಹೀನ್, ಮುಸ್ಲಿಮ್)

27. ಸ್ವಯಂ ಕಲ್ಪಿತ ಸುಳ್ಳು ಸ್ವಪ್ನವನ್ನು ಎಂದೂ ವಿವರಿಸಬೇಡಿರಿ. ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಹೇಳುತ್ತಾರೆ: ಪ್ರವಾದಿ(ಸ) ಹೇಳಿದರು, "ಯಾರು ಸ್ವಪ್ನ ನೋಡದೆಯೇ ಸ್ವಯಂ ಕಲ್ಪಿತ ವಿಷಯಗಳನ್ನು ಸ್ವಪ್ನವೆಂದು ಜನರಿಗೆ ವಿವರಿಸುವನೋ ಅಲ್ಲಾಹನು ಅವನಿಗೆ ಶಿಕ್ಷೆಯ ರೂಪದಲ್ಲಿ ಜೋಳದ ಎರಡು ಧಾನ್ಯಗಳನ್ನು ಗಂಟು ಹಾಕುವಂತೆ ಆಜ್ಞಾಪಿಸುವನು. ಅವನೆಂದೂ ಅದನ್ನು ಮಾಡಲಾರನು". (ಮುಸ್ಲಿಮ್)

"ತನ್ನ ಕಣ್ಣು, ಕಾಣದೆ ಇರುವುದನ್ನು ಹೇಳುವುದು ದೊಡ್ಡ ಅಪವಾದವಾಗಿರುತ್ತದೆ" ಎಂದೂ ಪ್ರವಾದಿ(ಸ) ಹೇಳಿರುವರು. (ಬುಖಾರಿ)

28. ನಿಮ್ಮ ಮಿತ್ರರು ಯಾರಾದರೂ ತನ್ನ ಸ್ವಪ್ನವನ್ನು ವಿವರಿಸಿದಾಗ ಅದರ ಉತ್ತಮ ವ್ಯಾಖ್ಯೆಯನ್ನು ಹೇಳಿರಿ ಮತ್ತು ಅವನಿಗಾಗಿ ಪ್ರಾರ್ಥಿಸಿರಿ. ಒಮ್ಮೆ ಓರ್ವ ವ್ಯಕ್ತಿ ಪ್ರವಾದಿ

ವರ್ಯರ(ಸ) ಬಳಿ ತನ್ನ ಸ್ವಪ್ನವನ್ನು ವಿವರಿಸಿದರು. ಆಗ ಪ್ರವಾದಿ(ಸ) ಹೇಳಿದರು, "ನೀವು ಉತ್ತಮ ಕನಸನ್ನು ಕಂಡಿರುವಿರಿ. ಅದರ ಫಲವೂ ಉತ್ತಮವಾಗುವುದು".

ಪ್ರವಾದಿ(ಸ) ಸಾಮಾನ್ಯವಾಗಿ ಪ್ರಭಾತ ನಮಾಝ್‌ನ ಬಳಿಕ ಪದ್ಮಾಸನದಲ್ಲಿ ಕುಳಿತು ಜನರಿಗೆ ಹೇಳುತ್ತಿದ್ದರು, "ನಿಮ್ಮ ಪೈಕಿ ಯಾರಾದರೂ ಸ್ವಪ್ನ ಕಂಡಿದ್ದರೆ ಹೇಳಿರಿ" ಮತ್ತು ಸ್ವಪ್ನವನ್ನು ಕೇಳುವುದಕ್ಕೆ ಮುಂಚೆ ಈ ರೀತಿ ಹೇಳುತ್ತಿದ್ದರು:

خَيْرًا تَلَقَّاهُ وَشَرًّا تَوَقَّاهُ وَخَيْرًا لَّنَا وَشَرًّا عَلٰى اَعْدَآئِنَا وَالْحَمْدُ لِلّٰهِ رَبِّ الْعَالَمِيْنَ

**"ಖೈರನ್ ತಲಕ್ಕಾಹು ವಶರ್‍ರನ್ ತವಕ್ಕಾಹು ವಖೈರಲ್ಲನಾ ವ ಶರ್‍ರನ್ ಅಲಾ ಅಅ್‌ದಾಇನಾ ವಲ್‌ಹಮ್ದುಲಿಲ್ಲಾಹಿರಬ್ಬಿಲ್ ಆಲಮೀನ್".**

(ಈ ಸ್ವಪ್ನದ ಒಳಿತು ನಿಮಗೆ ದೊರಕಲಿ, ಇದರ ಕೇಡಿನಿಂದ ನಿಮಗೆ ರಕ್ಷಣೆ ದೊರಕಲಿ. ನಮ್ಮ ಪಾಲಿಗೆ ಒಳಿತು ಮತ್ತು ನಮ್ಮ ಶತ್ರುಗಳ ಪಾಲಿಗೆ ಶಾಪವಾಗಲಿ ಮತ್ತು ಸರ್ವಸ್ತುತಿಯೂ ಸರ್ವಲೋಕ ಪರಿಪಾಲಕನಾದ ಆ ಅಲ್ಲಾಹನಿಗೆ.)

29. ಎಂದಾದರೂ ಸ್ವಪ್ನದಲ್ಲಿ ಹೆದರಿ ಹೋದರೆ ಅಥವಾ ಭೀಕರ ಸ್ವಪ್ನ ಕಂಡು ಚಿಂತಿತರಾದರೆ ಚಿಂತೆ ತೊಲಗಿಸಲಿಕ್ಕಾಗಿ ಈ ದುಆ ಪಠಿಸಿರಿ ಮತ್ತು ನಿಮ್ಮ ಮಕ್ಕಳಿಗೂ ಈ ದುಆ ಕಲಿಸಿಕೊಡಿ. ಹ. ಅಬ್ದುಲ್ಲಾ ಬಿನ್ ಅಮ್ರ್ ಬಿನ್ ಆಸ್(ರ) ಹೇಳುತ್ತಾರೆ, "ಯಾರಾದರೂ ಸ್ವಪ್ನದಲ್ಲಿ ಚಿಂತಾಕ್ರಾಂತರಾದರೆ ಚಿಂತೆಯನ್ನು ದೂರೀಕರಿಸಲಿಕ್ಕಾಗಿ ಅವರಿಗೆ ಪ್ರವಾದಿ(ಸ) ಈ ದುಆವನ್ನು ಉಪದೇಶಿಸುತ್ತಿದ್ದರು".

اَعُوْذُ بِكَلِمَاتِ اللّٰهِ التَّآمَّةِ مِنْ غَضَبِهٖ وَعِقَابِهٖ وَشَرِّ عِبَادِهٖ وَمِنْ هَمَزَاتِ الشَّيَاطِيْنِ وَاَنْ يَّحْضُرُوْنَ (ابوداود، ترمذی)

**"ಅಊದು ಬಿಕಲಿಮಾತಿಲ್ಲಾಹಿತ್ತಾಮ್ಮತಿ ಮಿನ್ ಗದಬಿಹೀ ವ ಇಕಾಬಿಹಿ ವ ಶರ್ರಿ ಇಬಾದಿಹಿ ವಮಿನ್ ಹಮಝಾತಿಶ್ಶಯಾತೀನಿ ವಅಂಯಹ್‌ದುರೂನ್".** (ಅಲ್ಲಾಹನ ಕೋಪ ತಾಪಗಳಿಂದ ಅವನ ಶಿಕ್ಷೆಯಿಂದ ಹಾಗೂ ಅವನ ದಾಸರ ಕೇಡಿನಿಂದ, ಶೈತಾನರ ದುಷ್ಪ್ರೇರಣೆಯಿಂದ ಮತ್ತು ಅವರು ನನ್ನ ಬಳಿ ಬರುವುದರಿಂದ ನಾನು ಅಲ್ಲಾಹನ ಸಮಗ್ರ ವಚನಗಳ ಅಭಯ ಯಾಚಿಸುತ್ತೇನೆ.) (ಅಬೂದಾವೂದ್, ತಿರ್ಮಿದಿ)

❖ ❖ ❖ ❖

# ರಸ್ತೆಯ ಮರ್ಯಾದೆಗಳು

1. ರಸ್ತೆಯಲ್ಲಿ ಮಧ್ಯಮ ತರದ ನಡೆ ನಡೆಯಿರಿ. ಜನರಿಗೊಂದು ತಮಾಷೆಯಾಗುವಂತೆ ದಾಪುಗಾಲು ಹಾಕುತ್ತಾ ನಡೆಯದಿರಿ. ಜನರು ರೋಗಿ ಎಂದು ತಿಳಿದು ಕ್ಷೇಮ ವಿಚಾರಿಸುವ ಹಾಗೆ ಕಾಲೆಳೆಯುತ್ತಲೂ ನಡೆಯಬೇಡಿರಿ. ಪ್ರವಾದಿ(ಸ) ದೊಡ್ಡ ದೊಡ್ಡ ಹೆಜ್ಜೆಗಳನ್ನಿಟ್ಟು ನಡೆಯುತ್ತಿದ್ದರು. ಪ್ರತಿ ಹೆಜ್ಜೆಯನ್ನೂ ಎತ್ತಿ ಇಡುತ್ತಿದ್ದರು. ಕಾಲುಗಳನ್ನು ಎಳೆಯುತ್ತಾ ನಡೆಯುತ್ತಿರಲಿಲ್ಲ.

2. ವಿನಯ ಮತ್ತು ಗೌರವದೊಂದಿಗೆ ದೃಷ್ಟಿಯನ್ನು ಕೆಳಗಿರಿಸಿ ನಡೆಯಿರಿ. ರಸ್ತೆಯ ಆಚೀಚೆ ಪ್ರತಿಯೊಂದು ವಸ್ತುವನ್ನೂ ನೋಡುತ್ತಾ ನಡೆಯದಿರಿ. ಇದು ಗೌರವ ಮತ್ತು ಸಭ್ಯತೆಗೆ ಕುಂದು. ಪ್ರವಾದಿ(ಸ) ನಡೆಯುವಾಗ ಎತ್ತರದಿಂದ ಇಳಿಯುವವರಂತೆ ತಮ್ಮ ದೇಹವನ್ನು ಮುಂದಕ್ಕೆ ವಾಲಿಸಿ ನಡೆಯುತ್ತಿದ್ದರು. ಘನತೆಯೊಂದಿಗೆ ಸ್ವಲ್ಪ ವೇಗದ ಹೆಜ್ಜೆಗಳನ್ನಿಡುತ್ತಾ ನಡೆಯುತ್ತಿದ್ದರು. ದೇಹವನ್ನು ಚುರುಕಾಗಿಯೂ ನೆಟ್ಟಗಾಗಿಯೂ ಇಡುತ್ತಿದ್ದರು. ಅತ್ತಿತ್ತ ನೋಡುತ್ತಾ ನಡೆಯುತ್ತಿರಲಿಲ್ಲ.

3. ವಿನಯದೊಂದಿಗೆ ಹೆಜ್ಜೆಗಳನ್ನು ಹಗುರವಾಗಿ ಇರಿಸಿರಿ. ದರ್ಪದೊಂದಿಗೆ ನಡೆಯಬೇಡಿರಿ. ನೀವು ಭೂಮಿಯನ್ನು ಕಾಲ್ತುಳಿತದಿಂದ ಸೀಳಲಾರಿರಿ, ಪರ್ವತದ ಉನ್ನತಿಯನ್ನೂ ತಲುಪಲಾರಿರಿ. ಮತ್ತೆ ಈ ದರ್ಪ ಏತಕ್ಕೆ?

4. ಸದಾ ಪಾದರಕ್ಷೆ ಧರಿಸಿಯೇ ನಡೆಯಿರಿ. ಬರಿಗಾಲಲ್ಲಿ ನಡೆಯದಿರಿ. ಪಾದರಕ್ಷೆಯು ಕಲ್ಲು, ಮುಳ್ಳುಗಳಿಂದಲೂ, ಹಾನಿಕಾರಕ ಜಂತುಗಳಿಂದಲೂ ನಿಮ್ಮನ್ನು ರಕ್ಷಿಸುತ್ತದೆ. ಪ್ರವಾದಿ(ಸ) ಹೇಳಿದರು, "ಹೆಚ್ಚಾಗಿ ಪಾದರಕ್ಷೆ ಧರಿಸಿಯೇ ಇರಿ. ಪಾದರಕ್ಷೆ ಒಂದು ವಿಧದ ಸವಾರಿಯಾಗಿದೆ."

5. ರಸ್ತೆಯ ಮೇಲೆ ನಡೆಯುತ್ತಿರುವಾಗ ಸೌಜನ್ಯ, ಸಭ್ಯತೆ ಮತ್ತು ಘನತೆಯ ಬಗ್ಗೆ ಗಮನವಿರಿಸಿರಿ. ಎರಡೂ ಕಾಲುಗಳಿಗೆ ಪಾದರಕ್ಷೆ ಹಾಕಿ ನಡೆಯಿರಿ ಅಥವಾ ಎರಡನ್ನೂ ಕಳಚಿ ನಡೆಯಿರಿ. ಒಂದು ಕಾಲಿಗೆ ಪಾದರಕ್ಷೆ ಹಾಕಿ ನಡೆಯುವುದು ಹಾಸ್ಯಾಸ್ಪದ ವಿಷಯ. ಯಾವುದಾದರೂ ಅನಿವಾರ್ಯ ಅಡಚಣೆ ಇಲ್ಲದಿದ್ದರೆ ಎಂದೂ ಇಂತಹ ಕೃತ್ಯವೆಸಗಬೇಡಿರಿ. ಪ್ರವಾದಿ(ಸ) ಹೇಳುತ್ತಾರೆ, "ಯಾರೂ ಒಂಟಿ ಕಾಲಿಗೆ ಪಾದರಕ್ಷೆ ಧರಿಸಿ ನಡೆಯಬಾರದು. ಎರಡೂ ಕಾಲುಗಳಿಗೆ ಪಾದರಕ್ಷೆ ಧರಿಸಿ ಅಥವಾ ಎರಡನ್ನೂ ಕಳಚಿ ನಡೆಯಬೇಕು." (ತಿರ್ಮಿದಿ)

6. ನಡೆಯುವಾಗ ನಿಮ್ಮ ಬಟ್ಟೆಗಳ ಅಂಚು ಎಲ್ಲಿಯೂ ತಾಗದಂತೆ ಜಾಗರೂಕತೆ ವಹಿಸಿರಿ. ಪ್ರವಾದಿ(ಸ) ನಡೆಯುವಾಗ ತಮ್ಮ ಲುಂಗಿಯನ್ನು ಸ್ವಲ್ಪ ಮೇಲೆತ್ತಿ ಬಿಗಿಯುತ್ತಿದ್ದರು.

7. ಸದಾ ನಿರಾಡಂಬರವಾಗಿ ಸಹಚರರೊಂದಿಗೇ ನಡೆಯಿರಿ. ಮುಂದೆ ಮುಂದೆ ನಡೆಯುತ್ತಾ ದೊಡ್ಡಸ್ತಿಕೆಯನ್ನು ತೋರಬೇಡಿರಿ. ಕೆಲವೊಮ್ಮೆ ನಿಸ್ಸಂಕೋಚವಾಗಿ ನಿಮ್ಮ ಸಹ ಚರನ ಕೈಹಿಡಿದು ನಡೆಯಿರಿ. ಪ್ರವಾದಿವರ್ಯರು(ಸ) ತಮ್ಮ ಸಂಗಾತಿಗಳೊಂದಿಗೆ ನಡೆಯುವಾಗ ಎಂದೂ ತಮ್ಮ ಪ್ರತ್ಯೇಕತೆಯನ್ನು ಪ್ರದರ್ಶಿಸುತ್ತಿರಲಿಲ್ಲ. ಪ್ರವಾದಿ(ಸ) ಹೆಚ್ಚಾಗಿ ತಮ್ಮ ಸಂಗಾತಿಗಳ ಹಿಂದೆಯೇ ನಡೆಯುತ್ತಿದ್ದರು. ಒಮ್ಮೊಮ್ಮೆ ನಿಸ್ಸಂಕೋಚವಾಗಿ ತಮ್ಮ ಸಹಚರನ ಕೈ ಹಿಡಿದು ನಡೆಯುತ್ತಿದ್ದರು.

8. ರಸ್ತೆಯ ಹಕ್ಕುಗಳನ್ನು ಪಾಲಿಸಿರಿ. ರಸ್ತೆಯಲ್ಲಿ ನಿಂತು ಅಥವಾ ಕುಳಿತು ಆಚೀಚೆ ಹೋಗುವವರನ್ನು ದಿಟ್ಟಿಸಬೇಡಿರಿ. ರಸ್ತೆಯಂಚಿನಲ್ಲಿ ನಿಲ್ಲುವ ಅಥವಾ ಕುಳಿತುಕೊಳ್ಳುವ ಸಂದರ್ಭ ಬಂದಾಗ ರಸ್ತೆಯ ಈ ಕೆಳಗಿನ ಆರು ಹಕ್ಕುಗಳನ್ನು ಪಾಲಿಸಿರಿ:

i) ದೃಷ್ಟಿಯನ್ನು ಕೆಳಗಿರಿಸಿರಿ. ii) ರಸ್ತೆಯಲ್ಲಿರುವ ಉಪದ್ರವಕಾರಿ ವಸ್ತುಗಳನ್ನು ನೀಗಿಸಿರಿ. iii) ಸಲಾಮ್‌ಗೆ ಉತ್ತರ ಹೇಳಿರಿ. iv) ಒಳಿತನ್ನು ಉಪದೇಶಿಸಿರಿ, ಕೆಡುಕನ್ನು ವಿರೋಧಿಸಿರಿ. v) ದಾರಿ ತಪ್ಪಿದವರಿಗೆ ಮಾರ್ಗದರ್ಶನ ಮಾಡಿರಿ. vi) ಸಂತ್ರಸ್ತರಿಗೆ ನೆರವಾಗಿರಿ.

9. ರಸ್ತೆಯಲ್ಲಿ ಸದಾ ಉತ್ತಮ ವ್ಯಕ್ತಿಗಳೊಂದಿಗೆ ನಡೆಯಿರಿ. ದುಷ್ಟ ವ್ಯಕ್ತಿಗಳ ಜೊತೆ ನಡೆಯಬೇಡಿರಿ.

10. ರಸ್ತೆಯಲ್ಲಿ ಸ್ತ್ರೀ, ಪುರುಷರು ಜೊತೆಯಾಗಿ ನಡೆಯಬೇಡಿರಿ. ಸ್ತ್ರೀಯರು ರಸ್ತೆಯ ನಡುವೆ ಓಡಾಡಬಾರದು. ಅವರು ರಸ್ತೆಯ ಬದಿಯಲ್ಲೇ ಸಂಚರಿಸಬೇಕು. ಪುರುಷರು ನಡೆಯುವಾಗ ಸ್ತ್ರೀಯರಿಂದ ದೂರವಾಗಿಯೇ ನಡೆಯಬೇಕು. ಪ್ರವಾದಿ(ಸ) ಹೇಳುತ್ತಾರೆ, "ಧೂಳು ಮುಕ್ಕಿದ ಅಥವಾ ಕೆಸರಿನಲ್ಲಿ ತೊಯ್ದ ಹಂದಿ ತಾಗಿದರೂ ಚಿಂತಿಲ್ಲ. ಆದರೆ ಪರ ಸ್ತ್ರೀಯರನ್ನು ಪುರುಷನ ತೋಳು ಢಿಕ್ಕಿ ಹೊಡೆಯಬಾರದು."

11. ಸಭ್ಯ ಮಹಿಳೆಯರು ಅಗತ್ಯದ ಸಂದರ್ಭಗಳಲ್ಲಿ ರಸ್ತೆಯಲ್ಲಿ ನಡೆಯುವಾಗ ಬುರ್ಖಾ ಅಥವಾ ಚದ್ದರದಿಂದ ತಮ್ಮ ವಸ್ತ್ರಾಲಂಕಾರಗಳನ್ನೂ ಸೌಂದರ್ಯವನ್ನೂ ಮರೆಸಬೇಕು. ಮುಖದ ಮೇಲೂ ಅವಗುಂಠನ ಹಾಕಿಕೊಳ್ಳಬೇಕು.

12. ಕಣಕಣ ಶಬ್ದ ಬರುವ ಆಭರಣಗಳನ್ನು ಧರಿಸಿ ನಡೆಯದಿರುವುದೇ ಲೇಸು. ಒಂದು ವೇಳೆ ಹಾಗೆ ನಡೆದಾಗ ಅದರ ಶಬ್ದವು ಪರಪುರುಷರಿಗೆ ಕೇಳಿಸದಂತೆ ಸಾವಧಾನದಿಂದ ನಡೆಯಿರಿ.

13. ಘಮಘಮಿಸುವ ಸುಗಂಧ ದ್ರವ್ಯಗಳನ್ನು ಪೂಸಿ ಮಹಿಳೆಯರು ದಾರಿಯಲ್ಲಿ ನಡೆದಾಡಬಾರದು. ಅಂತಹ ಸ್ತ್ರೀಯರ ಬಗ್ಗೆ ಪ್ರವಾದಿ(ಸ) ತೀವ್ರವಾಗಿ ಆಕ್ಷೇಪಿಸಿರುವರು.

14. ಮನೆಯಿಂದ ಹೊರಡುವಾಗ ಆಕಾಶದತ್ತ ಮುಖ ಮಾಡಿ ಈ ರೀತಿ ಪ್ರಾರ್ಥಿಸಿರಿ:

بِسْمِ اللّٰهِ تَوَكَّلْتُ عَلَى اللّٰهِ اَللّٰهُمَّ اِنِّىْ اَعُوْذُ بِكَ مِنْ اَنْ نَّزِلَّ اَوْ نُزَلَّ
وَاَنْ نَّضِلَّ اَوْ نُضَلَّ اَوْ نَظْلِمَ اَوْ يُظْلَمَ عَلَيْنَا اَوْ نَجْهَلَ اَوْ يُجْهَلَ عَلَيْنَا
(مسند احمد)

"ಬಿಸ್ಮಿಲ್ಲಾಹಿ ತವಕ್ಕಲ್ತು ಅಲ್ಲಲ್ಲಾಹಿ ಅಲ್ಲಾಹುಮ್ಮ ಇನ್ನೀ ಅಊದುಬಿಕ ಮಿನ್ ಅನ್ನರ್ರಿಖಿಲ್ಲ ಔ ನುರ್ಝಿಲ್ಲ ವಅನ್‌ನದಿಲ್ಲ ಔ ನುದಲ್ಲ ಔ ನರ್ಝ್‌ಲಿಮ ಔ ಯುರ್ಝ್‌ಲಮ ಅಲೈನಾ ಔನಜ್‌ಹಲ ಔಯುಜ್‌ಹಲ ಅಲೈನಾ".

(ಅಲ್ಲಾಹನ ನಾಮದೊಂದಿಗೆ ನಾನು ಹೊರಗೆ ಕಾಲಿಡುತ್ತೇನೆ. ಅವನ ಮೇಲೆಯೇ ನನ್ನ ಭರವಸೆ ಇದೆ. ಓ ಅಲ್ಲಾಹ್! ನಮ್ಮಿಂದ ಮೋಸವಾಗಿ ಬಿಡುವುದರಿಂದ ಮತ್ತು ನಾವು ಮೋಸ ಹೋಗುವುದರಿಂದ ನಾವು ಪಥಭ್ರಷ್ಟರಾಗುವುದರಿಂದ ಮತ್ತು ಇತರರು ನಮ್ಮನ್ನು ಪಥಭ್ರಷ್ಟಗೊಳಿಸುವುದರಿಂದ ನಾವು ಅಕ್ರಮವೆಸಗುವುದರಿಂದ ಮತ್ತು ಇತರರ ಅಕ್ರಮಕ್ಕೆ ಒಳಗಾಗುವುದರಿಂದ ನಾವು ತಿಳಿಗೇಡಿಗಳಾಗುವುದರಿಂದ ಮತ್ತು ಇತರರ ತಿಳಿಗೇಡಿತನದ ವರ್ತನೆಗೆ ಗುರಿಯಾಗುವುದರಿಂದ ನಿನ್ನ ಅಭಯ ಯಾಚಿಸುತ್ತೇವೆ.) (ಮುಸ್ನದ್ ಅಹ್ಮದ್)

15. ಪೇಟೆಗೆ ಹೋಗುವಾಗ ಈ ರೀತಿ ಪ್ರಾರ್ಥಿಸಿರಿ:

بِسْمِ اللّٰهِ اَللّٰهُمَّ اِنِّىْ اَسْئَلُكَ خَيْرَ هٰذِهِ السُّوْقِ وَخَيْرَ مَا فِيْهَا وَاَعُوْذُ بِكَ مِنْ شَرِّهَا وَشَرِّ مَا فِيْهَا، اَللّٰهُمَّ اِنِّىْ اَعُوْذُبِكَ اَنْ اُصِيْبَ بِهَا يَمِيْنًا فَاجِرَةً اَوْ صَفْقَةً خَاسِرَةً

"ಬಿಸ್ಮಿಲ್ಲಾಹಿ ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಖೈರ ಹಾದಿಹಿಸ್ಸೂಕಿ ವಖೈರ ಮಾಫೀಹಾ ವ ಅಊದುಬಿಕ ಮಿನ್ ಶರ್‍ರಿಹಾ ವ ಶರ್‍ರಿ ಮಾಫೀಹಾ ಅಲ್ಲಾಹುಮ್ಮ ಇನ್ನೀ ಅಊದುಬಿಕ ಅನ್ ಉಸೀಬ ಬಿಹಾ ಯಮೀನನ್ ಫಾಜಿರತನ್ ಔ ಸಫಕತನ್ ಖಾಸಿರಃ".

(ಅಲ್ಲಾಹನ ನಾಮದೊಂದಿಗೆ (ನಾನು ಪೇಟೆಗೆ ಪ್ರವೇಶಿಸುತ್ತೇನೆ). ಓ ಅಲ್ಲಾಹ್! ನಾನು ನಿನ್ನಿಂದ ಈ ಪೇಟೆಯ ಮತ್ತು ಇದರಲ್ಲಿರುವುದರ ಒಳಿತನ್ನು ಅಪೇಕ್ಷಿಸುತ್ತೇನೆ ಮತ್ತು ನಾನು ಈ ಪೇಟೆಯ ಮತ್ತು ಇದರಲ್ಲಿರುವುದರ ಕೆಡುಕಿನಿಂದ ನಿನ್ನ ಅಭಯ ಯಾಚಿಸು ತ್ತೇನೆ. ನಾನು ಸುಳ್ಳು ಆಣೆ ಹಾಕುವುದರಿಂದ ಮತ್ತು ನಷ್ಟದ ವ್ಯವಹಾರ ಮಾಡುವುದ ರಿಂದಲೂ ನಿನ್ನ ಅಭಯ ಯಾಚಿಸುತ್ತೇನೆ.)

ಹ. ಉಮರ್ ಬಿನ್ ಖತ್ತಾಬ್(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು, ಯಾವ ವ್ಯಕ್ತಿ ಪೇಟೆಗೆ ಪ್ರವೇಶಿಸುವಾಗ ಈ ರೀತಿ ಪ್ರಾರ್ಥಿಸುವನೋ ಅಲ್ಲಾಹನು ಅವನ ಕರ್ಮಪತ್ರದಲ್ಲಿ ದಶಲಕ್ಷ ಒಳಿತನ್ನು ಬರೆಯುವನು. ಅವನ ಹತ್ತುಲಕ್ಷ ಕೆಡುಕುಗಳನ್ನು ಕ್ಷಮಿಸುವನು ಮತ್ತು ಹತ್ತುಲಕ್ಷ ಸ್ಥಾನವನ್ನು ಏರಿಸುವನು.

لَآ اِلٰـهَ اِلَّا اللّٰهُ وَحْدَهُ لَا شَرِيْكَ لَهُ لَهُ الْمُلْكُ وَلَهُ الْحَمْدُ يُحْيِ وَيُمِيْتُ وَهُوَ حَيٌّ لَا يَمُوْتُ بِيَدِهِ الْخَيْرُ وَهُوَ عَلٰى كُلِّ شَيْءٍ قَدِيْرٌ (ترمذی)

"ಲಾ ಇಲಾಹ ಇಲ್ಲಲ್ಲಾಹು ವಹ್ದಹೂ ಲಾಶರೀಕಲಹೂ ಲಹುಲ್ ಮುಲ್ಕು ವಲಹುಲ್ ಹಮ್ದು ಯುಹ್ಯೀ ವಯುಮೀತು ವಹುವ ಹಯ್ಯುನ್ ಲಾಯಮೂತು ಬಿಯದಿಹಿಲ್ ಖೈರು ವಹುವ ಅಲಾಕುಲ್ಲಿ ಶೈಇನ್ ಕದೀರ್".

(ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲ. ಅವನು ಏಕೈಕನು. ಅವನಿಗಾರೂ ಸಹಭಾಗಿಗಳಿಲ್ಲ. ಸರ್ವಾಧಿಕಾರ ಅವನಿಗೇ ಮೀಸಲು. ಅವನೇ ಸ್ತುತಿ ಸ್ತೋತ್ರಗಳಿಗೆ ಅರ್ಹನು. ಜೀವನವನ್ನೂ ಮರಣವನ್ನೂ ಅವನೇ ನೀಡುತ್ತಾನೆ. ಅವನು ಚಿರಂತನನು. ಅವನಿಗೆ ಮರಣವಿಲ್ಲ. ಒಳಿತು ಸರ್ವವೂ ಅವನ ಹಸ್ತದಲ್ಲಿದೆ. ಅವನು ಸರ್ವಶಕ್ತನಾಗಿರುತ್ತಾನೆ.)

(ತಿರ್ಮಿದಿ)

# ಪ್ರಯಾಣ

1. ಅತ್ಯಲ್ಪ ಸಮಯದಲ್ಲಿ ಗುರಿ ಮುಟ್ಟುವ ಹಾಗೆ ತಕ್ಕ ಸಮಯದಲ್ಲಿ ಪ್ರಯಾಣಕ್ಕೆ ಹೊರಡಬೇಕು. ಪ್ರಯಾಣ ಮಾಡುವ ಮೊದಲೇ ನಮಾಝ್‌ನ ಸಮಯಗಳ ಬಗ್ಗೆ ಗಮನವಿರಿಸಬೇಕು. ಪ್ರವಾದಿ(ಸ) ಸ್ವಯಂ ಪ್ರಯಾಣಿಸುವಾಗ ಅಥವಾ ಇತರರನ್ನು ಪ್ರಯಾಣಕ್ಕೆ ರವಾನಿಸುವಾಗ ಹೆಚ್ಚಾಗಿ ಗುರುವಾರದ ದಿನವನ್ನೇ ಆಯ್ಕೆ ಮಾಡುತ್ತಿದ್ದರು.

2. ಒಬ್ಬಂಟಿಗನಾಗಿ ಯಾತ್ರೆ ಹೊರಡಬೇಡಿರಿ. ಸಾಧ್ಯವಿದ್ದರೆ ಮೂರು ಮಂದಿ ಜೊತೆಯಾಗಿ ಹೋಗಿರಿ. ಇದರಿಂದ ಪ್ರಯಾಣ ವೇಳೆಯಲ್ಲಿ ಸಾಮಾನುಗಳ ಸುರಕ್ಷಿತತೆ ಮತ್ತು ಇತರ ವಿಷಯಗಳಿಗೆ ಸಹಾಯಕವಾಗುತ್ತದೆ. ಇದರಿಂದ ಅನೇಕ ಅಪಾಯಗಳು ತಪ್ಪುತ್ತವೆ. ಪ್ರವಾದಿ(ಸ) ಹೇಳಿದರು, "ಒಬ್ಬಂಟಿಗನಾಗಿ ಯಾತ್ರೆ ಮಾಡುವುದರ ಬಗ್ಗೆ ನನಗೆ ತಿಳಿದ ಕೆಡುಕುಗಳು ಜನರಿಗೆ ತಿಳಿದರೆ ಯಾರೂ ರಾತ್ರಿ ವೇಳೆ ಒಬ್ಬಂಟಿಗನಾಗಿ ಪ್ರಯಾಣ ಬೆಳೆಸಲಾರ" (ಬುಖಾರಿ)

ಒಮ್ಮೆ ದೂರ ಪ್ರದೇಶವೊಂದರಿಂದ ಓರ್ವ ವ್ಯಕ್ತಿ ಪ್ರವಾದಿವರ್ಯರ(ಸ) ಬಳಿ ಬಂದರು. ಪ್ರವಾದಿ(ಸ) "ನಿಮ್ಮ ಜೊತೆ ಯಾರಿದ್ದಾರೆ?" ಎಂದು ಪ್ರಯಾಣಿಕನನ್ನು ಪ್ರಶ್ನಿಸಿದರು. ಆಗ ಅವರು, "ಯಾರೂ ಇಲ್ಲ. ನಾನು ಒಂಟಿಯಾಗಿಯೇ ಬಂದಿದ್ದೇನೆ" ಎಂದು ಉತ್ತರಿಸಿದರು. ಆಗ ಪ್ರವಾದಿ(ಸ) ಈ ರೀತಿ ಹೇಳಿದರು, "ಒಂಟಿ ಯಾತ್ರಿಕ ಶೈತಾನ, ಇಬ್ಬರು ಯಾತ್ರಿಕರೂ ಶೈತಾನರು, ಮೂವರು ಯಾತ್ರಿಕರು ಮಾತ್ರ ನೈಜ ಯಾತ್ರಿಕರು." (ತಿರ್ಮಿದಿ)

3. ಸ್ತ್ರೀಯರು ಆಪ್ತ ಬಂಧುಗಳ ಜೊತೆಯಲ್ಲಿ ಮಾತ್ರ ಪ್ರಯಾಣ ಮಾಡಬೇಕು. ಹತ್ತಿರದ ಸಾಮಾನ್ಯ ಪ್ರಯಾಣವಾದರೆ ಚಿಂತಿಲ್ಲ. ಆದರೆ ಮಹಿಳೆ ಒಬ್ಬಳೇ ಪ್ರಯಾಣ ಹೊರಡದಿರುವುದೇ ಉತ್ತಮ. ಯಾವ ಮಹಿಳೆ ಅಲ್ಲಾಹನ ಮೇಲೆ ಮತ್ತು ಪರಲೋಕದ ಮೇಲೆ ವಿಶ್ವಾಸವಿರಿಸುತ್ತಾಳೋ ಅವಳಿಗೆ ಮೂರು ದಿನ ಮತ್ತು ಅದಕ್ಕಿಂತ ಹೆಚ್ಚಿನ ಪ್ರಯಾಣವನ್ನು ಏಕಾಂಗಿಯಾಗಿ ಮಾಡುವುದು ನಿಷಿದ್ಧ. ಇಷ್ಟು ದೀರ್ಘ ಯಾತ್ರೆ ಮಾಡಬೇಕಾದರೆ ಆಕೆಯೊಂದಿಗೆ ತಂದೆ, ಸಹೋದರ, ಪತಿ, ಮಗ ಅಥವಾ ಇನ್ನಾರಾದರೂ ಆಪ್ತ ಬಂಧು ಇರಬೇಕು. (ಬುಖಾರಿ)

ಪ್ರವಾದಿ(ಸ) ಹೀಗೂ ಹೇಳಿರುವರು: "ಮಹಿಳೆ ಒಂದು ದಿನ ಅಥವಾ ಒಂದು ರಾತ್ರಿಯ ದೂರಕ್ಕೂ ಒಬ್ಬಳೇ ಪ್ರಯಾಣ ಬೆಳೆಸಬಾರದು." (ಬುಖಾರಿ, ಮುಸ್ಲಿಮ್)

4. ಪ್ರಯಾಣಕ್ಕೆ ಹೊರಟು ವಾಹನದಲ್ಲಿ ಕುಳಿತು ವಾಹನವು ಚಲಿಸಲು ಆರಂಭಿಸುವಾಗ ಈ ರೀತಿ ಪ್ರಾರ್ಥಿಸಿರಿ:

سُبْحٰنَ الَّذِیْ سَخَّرَ لَنَا هٰذَا وَمَا كُنَّا لَهٗ مُقْرِنِیْنَ وَاِنَّآ اِلٰی رَبِّنَا لَمُنْقَلِبُوْنَ
اَللّٰهُمَّ اِنَّا نَسْئَلُكَ فِیْ سَفَرِنَا هٰذَا الْبِرَّ وَالتَّقْوٰی وَمِنَ الْعَمَلِ مَا تَرْضٰی
اَللّٰهُمَّ هَوِّنْ عَلَیْنَا سَفَرَنَا هٰذَا وَاطْوِعَنَّا بُعْدَهٗ اَللّٰهُمَّ اَنْتَ الصَّاحِبُ فِی
السَّفَرِ وَالْخَلِیْفَةُ فِی الْاَهْلِ، اَللّٰهُمَّ اِنِّیْ اَعُوْذُ بِكَ مِنْ وَعْثَاءِ السَّفَرِ
وَكَآبَةِ الْمَنْظَرِ، وَسُوْءِ الْمُنْقَلَبِ فِی الْمَالِ وَالْاَهْلِ وَالْوَلَدِ وَالْحَوْرِ
بَعْدَ الْكَوْرِ وَدَعْوَةِ الْمَظْلُوْمِ (مُسلم، ابوداود، ترمذی)

"ಸುಬ್‌ಹಾನಲ್ಲದೀ ಸಖ್ಖರ ಲನಾ ಹಾದಾ ವಮಾ ಕುನ್ನಾ ಲಹೂ ಮುಕ್ರಿನೀನ್. ವಇನ್ನಾ ಇಲಾ ರಬ್ಬಿನಾ ಲಮುಂಕಲಿಬೂನ್. ಅಲ್ಲಾಹುಮ್ಮ ಇನ್ನಾ ನಸ್‌ಅಲುಕ ಫೀ ಸಫರಿನಾ ಹಾದಲ್ ಬಿರ್ರ ವತ್ತಕ್‌ವಾ ವಮಿನಲ್ ಅಮಲಿ ಮಾತರ್ದಾ, ಅಲ್ಲಾಹುಮ್ಮ ಹವ್ವಿನ್ ಅಲೈನಾ ಸಫರನಾ ಹಾದಾ ವತ್‌ವಿ ಅನ್ನಾ ಬುಅ್‌ದಹೂ ಅಲ್ಲಾಹುಮ್ಮ ಅಂತಸ್ಸಾಹಿಬು ಫಿಸ್ಸಫರಿ ವಲ್ ಖಲೀಫತು ಫಿಲ್ ಅಹ್ಲಿ. ಅಲ್ಲಾಹುಮ್ಮ ಇನ್ನೀ ಅಊದುಬಿಕ ಮಿನ್ ವಅ್‌ಸಾಇಸ್ಸಫರಿ ವಕಅಬತಿಲ್ ಮನ್‌ಝರಿ ವಸೂಇಲ್ ಮುಂಕಲಬಿ ಫಿಲ್‌ಮಾಲಿ ವಲ್‌ಅಹ್ಲಿ ವಲ್‌ವಲದಿ ವಲ್‌ಹೌರಿ ಬಅ್‌ದಲ್‌ಕೌರಿ ವದಅ್‌ವತಿಲ್ ಮಝ್ಲೂಮ್."

(ನಮಗೆ ಈ ವಾಹನವನ್ನು ಅಧೀನಗೊಳಿಸಿದ ಅಲ್ಲಾಹನೇ ಪರಮ ಪಾವನನು, ನಾವಿದನ್ನು ಅಧೀನಗೊಳಿಸಲು ಶಕ್ತರಾಗಿರಲಿಲ್ಲ. ಖಂಡಿತ ನಾವು ನಮ್ಮ ಪ್ರಭುವಿನೆಡೆಗೆ ಮರಳುವವರಿದ್ದೇವೆ. ಓ ಅಲ್ಲಾಹ್! ನಾವು ಈ ಯಾತ್ರೆಯಲ್ಲಿ ನಿನ್ನಿಂದ ಪುಣ್ಯ ಮತ್ತು ದೇವ ನಿಷ್ಠೆಯನ್ನು ಯಾಚಿಸುತ್ತೇವೆ. ನಿನ್ನ ಸಂಪ್ರೀತಿಯ ಕಾರ್ಯಗಳ ಸೌಭಾಗ್ಯವನ್ನು ಯಾಚಿಸು ತ್ತೇವೆ. ಓ ಅಲ್ಲಾಹ್! ಈ ಪ್ರಯಾಣವನ್ನು ನಮಗೆ ಸುಲಭಗೊಳಿಸು. ಇದರ ದೂರವನ್ನು ನಮಗೆ ಸಂಕ್ಷಿಪ್ತಗೊಳಿಸು. ಓ ಅಲ್ಲಾಹ್! ನೀನೇ ನಮ್ಮ ಯಾತ್ರೆಯ ಸಂಗಾತಿ. ನಮ್ಮ ಮನೆಯವರಲ್ಲಿ ನಮ್ಮ ಪ್ರತಿನಿಧಿ ಮತ್ತು ಸಂರಕ್ಷಕನಾಗಿರುತ್ತೀ. ಓ ಅಲ್ಲಾಹ್! ಪ್ರಯಾಣದ ಸಂಕಷ್ಟಗಳಿಂದ ಮತ್ತು ಅಪ್ರಿಯ ದೃಶ್ಯಗಳಿಂದ ನಾನು ನಿನ್ನ ಅಭಯ ಯಾಚಿಸುತ್ತೇನೆ. ನನ್ನ ಸೊತ್ತಿನೆಡೆಗೆ, ನನ್ನವರ ಬಳಿಗೆ, ನನ್ನ ಮಕ್ಕಳ ಬಳಿಗೆ ಕೆಟ್ಟ ಮರಳುವಿಕೆಯಿಂದ, ಏಳಿತಿನ ಬಳಿಕ ಕೆಡುಕಿನಿಂದ ಹಾಗೂ ಮರ್ದಿತನ ಪ್ರಾರ್ಥನೆಯಿಂದ ನಾನು ನಿನ್ನ ಅಭಯ ಯಾಚಿಸುತ್ತೇನೆ.) (ಮುಸ್ಲಿಮ್, ಅಬೂದಾವೂದ್, ತಿರ್ಮಿದಿ)

5. ಪ್ರಯಾಣದ ವೇಳೆ ಇತರರ ಸೌಲಭ್ಯ ಮತ್ತು ಸುಖದ ಬಗ್ಗೆ ಗಮನವಿರಿಸಿರಿ. ನಿಮ್ಮ

ಮೇಲೆ ರಸ್ತೆಯ ಸಂಗಾತಿಯ ಹಕ್ಕೂ ಇದೆ. ಕುರ್‌ಆನ್ ಹೇಳುತ್ತದೆ, وَالصَّاحِبِ بِالْجَنْبِ "ನಿಮ್ಮ ಸಂಗಾತಿಯೊಂದಿಗೂ ಉತ್ತಮ ರೀತಿಯಲ್ಲಿ ವರ್ತಿಸಿರಿ". ಇಲ್ಲಿ ಸಂಗಾತಿ ಎಂಬುದರ ಉದ್ದೇಶ ಎಲ್ಲಿಯಾದರೂ, ಯಾವಾಗಲಾದರೂ ನೀವು ಸಂಧಿಸುವ ಯಾವನೇ ವ್ಯಕ್ತಿ. ಪ್ರಯಾಣದ ಅಲ್ಪಾವಧಿಯ ಸಂಗಾತಿಯಾಗಿದ್ದರೂ ಆತ ನೊಂದಿಗೆ ಅತ್ಯುತ್ತಮ ರೀತಿಯಲ್ಲಿ ವ್ಯವಹರಿಸಬೇಕಾದುದು ಹಾಗೂ ಆತನಿಗೆ ನಿಮ್ಮ ನಡೆನುಡಿಗಳಿಂದ ಯಾವುದೇ ತರದ ಮಾನಸಿಕ ಅಥವಾ ಶಾರೀರಿಕ ತೊಂದರೆಯಾಗದಂತೆ ಪ್ರಯತ್ನಿಸುವುದು ನಿಮ್ಮ ಕರ್ತವ್ಯವಾಗಿದೆ. ಪ್ರವಾದಿ(ಸ) ಹೇಳುತ್ತಾರೆ, "ಜನರ ನಾಯಕನು ಅವರ ಸೇವಕನಾಗಿರುತ್ತಾನೆ. ಜನಸೇವೆಯಲ್ಲಿ ಸ್ಪರ್ಧಾತ್ಮಕವಾಗಿ ಮುಂದುವರಿಯುವ ವ್ಯಕ್ತಿಯನ್ನು ಪುಣ್ಯದಲ್ಲಿ ಮೀರಿಸುವವನಿದ್ದರೆ ಅದು ದೇವ ಮಾರ್ಗದಲ್ಲಿ ಹುತಾತ್ಮನಾದವನು ಮಾತ್ರ". (ಮಿಷ್ಕಾತ್)

6. ಪ್ರಯಾಣಕ್ಕೆ ಹೊರಡುವ ಮೊದಲು ಮತ್ತು ಹಿಂತಿರುಗಿದ ಬಳಿಕ ವಂದನಾ ರ್ಪಣೆಯ ರೂಪದಲ್ಲಿ ಎರಡು ರಕಅತ್ ಐಚ್ಛಿಕ ನಮಾಝ್ ನಿರ್ವಹಿಸಿರಿ. ಪ್ರವಾದಿ(ಸ) ಹೀಗೆಯೇ ಮಾಡುತ್ತಿದ್ದರು.

7. ನಿಮ್ಮ ವಾಹನ ಎತ್ತರಕ್ಕೆ ಏರುವಾಗ ಅಥವಾ ಹಾರುವಾಗ ಈ ರೀತಿ ಪ್ರಾರ್ಥಿಸಿರಿ:

اَللّٰهُمَّ لَكَ الشَّرَفُ عَلٰى كُلِّ شَرَفٍ وَلَكَ الْحَمْدُ عَلٰى كُلِّ حَالٍ

"ಅಲ್ಲಾಹುಮ್ಮ ಲಕಶ್ಶರಫು ಅಲಾ ಕುಲ್ಲಿ ಶರಫಿನ್ ವಲಕಲ್ ಹಮ್ದು ಅಲಾಕುಲ್ಲಿ ಹಾಲಿನ್".

(ಓ ಅಲ್ಲಾಹ್! ನಿನಗೆ ಎಲ್ಲ ಮೇಲ್ಮೆಗಳಲ್ಲೂ ಮೇಲ್ಮೆ ಪ್ರಾಪ್ತವಿದೆ. ಸ್ತುತಿಸ್ತೋತ್ರ ಗಳೆಲ್ಲವೂ ಎಲ್ಲ ಸ್ಥಿತಿಯಲ್ಲೂ ನಿನಗೇ ಮೀಸಲು.)

8. ರಾತ್ರಿ ಎಲ್ಲಾದರೂ ಉಳಿಯಬೇಕಾಗಿ ಬಂದರೆ ಸುರಕ್ಷಿತ ಸ್ಥಳದಲ್ಲೇ ತಂಗಿರಿ. ಕಳ್ಳ ಕಾಕರ ಭಯವಿಲ್ಲದ ಮತ್ತು ಉಪದ್ರವಕಾರಿ ಜಂತುಗಳ ಅಪಾಯವಿಲ್ಲದ ಸ್ಥಳವನ್ನೇ ಆರಿಸಿರಿ.

9. ಪ್ರಯಾಣದ ಉದ್ದೇಶ ಪೂರ್ತಿಯಾದೊಡನೆ ಮನೆಗೆ ಮರಳುವಲ್ಲಿ ಧಾವತಿ ಪಡಿರಿ. ಅನಗತ್ಯವಾಗಿ ತಿರುಗಾಡಬೇಡಿರಿ.

10. ಪ್ರಯಾಣದಿಂದ ಮರಳಿದ ಕೂಡಲೇ ಸೂಚನೆಯಿಲ್ಲದೆ ಏಕಾಏಕಿ ಮನೆಗೆ ನುಗ್ಗಬೇಡಿರಿ. ಮುನ್ಸೂಚನೆ ನೀಡಿರಿ ಅಥವಾ ಮಸೀದಿಯಲ್ಲಿ ಎರಡು ರಕಅತ್ ನಫಿಲ್ (ಐಚ್ಛಿಕ) ನಮಾಝ್ ಮಾಡಿರಿ. ಇದರಿಂದ ಮನೆಯವರಿಗೆ ನಿಮ್ಮನ್ನು ಉತ್ತಮ ರೀತಿಯಲ್ಲಿ ಬರಮಾಡಿಕೊಳ್ಳಲು ಸಿದ್ಧತೆಗೆ ಸಮಯ ಸಿಗುವುದು.

11. ಪ್ರಯಾಣದಲ್ಲಿ ಯಾವುದಾದರೂ ಪ್ರಾಣಿ ಜೊತೆಗಿದ್ದರೆ ಅದರ ಯೋಗ ಕ್ಷೇಮದ ಬಗೆಗೂ ಗಮನವಿರಿಸಿ. ಸವಾರಿ ಏನಾದರೂ ಇದ್ದರೆ ಅದರ ಅಗತ್ಯಗಳ ಮತ್ತು ಸುರಕ್ಷಿತತೆಯ ವ್ಯವಸ್ಥೆಯನ್ನು ಮಾಡಿರಿ.

12. ಚಳಿಗಾಲದಲ್ಲಿ ಅಗತ್ಯದ ಹಾಸಿಗೆಯನ್ನು ಜೊತೆಗಿಡಿರಿ. ನಿಮ್ಮ ಆತಿಥೇಯನನ್ನು ವೃಥಾ ತೊಂದರೆಗೆ ಸಿಲುಕಿಸಬೇಡಿರಿ.

13. ನೀರಿನ ಪಾತ್ರೆ ಮತ್ತು ನಮಾಝ್‌ಗೆ ಹಾಸುವ ಬಟ್ಟೆಯನ್ನು ಪ್ರಯಾಣದಲ್ಲಿ ಜೊತೆಗಿರಿಸಿರಿ. ಇದರಿಂದ ನೀವು ಮಲಮೂತ್ರ ವಿಸರ್ಜನೆ, ನಮಾಝ್ ಮತ್ತು ಕುಡಿಯುವ ನೀರಿನ ತೊಂದರೆಯಿಂದ ಸುರಕ್ಷಿತರಾಗುತ್ತೀರಿ.

14. ಹಲವು ವ್ಯಕ್ತಿಗಳು ಜೊತೆಯಾಗಿ ಪ್ರಯಾಣಿಸುವಾಗ ಒಬ್ಬನನ್ನು ಯಾತ್ರಾ ತಂಡದ ನಾಯಕನಾಗಿ ಆರಿಸಿಕೊಳ್ಳಿರಿ. ಆದರೆ ಪ್ರತಿಯೊಬ್ಬನೂ ತನ್ನ ಟಿಕೇಟು, ಸಾಕಷ್ಟು ಹಣ ಮತ್ತಿತರ ಅಗತ್ಯದ ವಸ್ತುಗಳನ್ನು ತನ್ನ ವಶದಲ್ಲೇ ಇರಿಸಿಕೊಳ್ಳಬೇಕು.

15. ಪ್ರಯಾಣದ ವೇಳೆ ಎಲ್ಲಾದರೂ ರಾತ್ರಿಯಾದರೆ ಈ ರೀತಿ ಪ್ರಾರ್ಥಿಸಿರಿ:

يَا أَرْضُ! رَبِّي وَرَبُّكِ اللّٰهُ أَعُوْذُ بِاللّٰهِ مِنْ شَرِّكِ وَشَرِّ مَا خُلِقَ فِيْكِ
وَشَرِّ مَا يَدِبُّ عَلَيْكِ وَأَعُوْذُ بِاللّٰهِ مِنْ أَسَدٍ وَّأَسْوَدَ وَمِنَ الْحَيَّةِ
وَالْعَقْرَبِ وَمِنْ شَرِّ سَاكِنِي الْبَلَدِ وَمِنْ وَّالِدٍ وَّمَا وَلَدَ (ابوداؤد)

"ಯಾ ಅರ್ದು! ರಬ್ಬೀ ವರಬ್ಬುಕಲ್ಲಾಹು ಅಊದುಬಿಲ್ಲಾಹಿ ಮಿನ್ ಶರ್ರಿಕಿ ವಶರ್ರಿ ಮಾ ಖುಲಿಕ ಫೀಕಿ ವಶರ್ರಿ ಮಾ ಯದಿಬ್ಬು ಅಲೈಕಿ ವ ಅಊದುಬಿಲ್ಲಾಹಿ ಮಿನ್ ಅಸದಿನ್ ವ ಅಸ್‌ವದ ವ ಮಿನಲ್ ಹಯ್ಯತಿ ವಲ್ ಅಕ್‌ರಬಿ ವ ಮಿನ್ ಶರ್ರಿ ಸಾಕಿನಿಲ್ ಬಲದಿ ವ ಮಿನ್ ವಾಲಿದಿನ್ ವಮಾವಲದ್".

(ಓ ಭೂಮಿ! ನನ್ನ ಮತ್ತು ನಿನ್ನ ಪ್ರಭು ಅಲ್ಲಾಹ್ ಆಗಿರುತ್ತಾನೆ. ನಿನ್ನ ಕೇಡಿನಿಂದ, ನಿನ್ನಲ್ಲಿ ದೇವನು ಸೃಷ್ಟಿಸಿದವುಗಳ ಕೇಡಿನಿಂದ, ನಿನ್ನ ಮೇಲೆ ನಡೆದಾಡುವ ಜೀವಿಗಳ ಕೇಡಿನಿಂದ ನಾನು ಅಲ್ಲಾಹನ ಅಭಯ ಯಾಚಿಸುತ್ತೇನೆ. ಸಿಂಹದಿಂದ, ಕಪ್ಪು ಹೆಡೆಯ ಸರ್ಪದಿಂದ, ಹಾವುಚೇಳುಗಳಿಂದ, ಈ ನಗರ ನಿವಾಸಿಗಳಿಂದ ಹಾಗೂ ಪ್ರತಿಯೊಬ್ಬ ತಂದೆ ಮತ್ತು ಮಗನ ಕೇಡಿನಿಂದ ನಾನು ಅಲ್ಲಾಹನ ಅಭಯ ಯಾಚಿಸುತ್ತೇನೆ.) (ಅಬೂದಾವೂದ್)

16. ಪ್ರಯಾಣದಿಂದ ಮನೆಗೆ ಮರಳಿದಾಗ ಈ ರೀತಿ ಪ್ರಾರ್ಥಿಸಿರಿ:

اَوْبًا اَوْبًا لِرَبِّنَا تَوْبًا لَا يُغَادِرُ عَلَيْنَا حَوْبًا (حصن حصين)

"ಔಬನ್ ಔಬನ್ ಲಿರಬ್ಬಿನಾ ತೌಬನ್ ಲಾ ಯುಗಾದಿರು ಅಲೈನಾ ಹೌಬಾ".

(ಮರಳಬೇಕು, ನಮ್ಮ ಪ್ರಭುವಿನೆಡೆಗೆ ಮರಳಬೇಕು ಮತ್ತು ನಮ್ಮ ಪ್ರಭುವಿನಲ್ಲಿಯೇ ಪಶ್ಚಾತ್ತಾಪ ಪಟ್ಟು ಮರಳಬೇಕು, ನಮ್ಮಲ್ಲಿ ಪಾಪದ ಯಾವ ಕುರುಹನ್ನೂ ಉಳಿಸದಂತಹ ಪಶ್ಚಾತ್ತಾಪ.) (ಹಿಸ್ನ್ ಹಸೀನ್)

17. ಯಾರನ್ನಾದರೂ ಪ್ರಯಾಣಕ್ಕಾಗಿ ಬೀಳ್ಕೊಡುವಾಗ ಸ್ವಲ್ಪ ದೂರ ಆತನ ಜೊತೆ ಹೋಗಿರಿ. ಬೀಳ್ಕೊಡುತ್ತಾ ಆತನಲ್ಲಿಯೂ ಪ್ರಾರ್ಥಿಸಲಿಕ್ಕಾಗಿ ಅಪೇಕ್ಷಿಸಿರಿ ಹಾಗೂ ಆತನಿ ಗಾಗಿ ಈ ರೀತಿ ಪ್ರಾರ್ಥಿಸಿರಿ:

اَسْتَوْدِعُ اللّٰهَ دِيْنَكَ وَاَمَانَتَكَ وَخَوَاتِيْمَ عَمَلِكَ (حصن حصين)

"ಅಸ್ತೌದಿಉಲ್ಲಾಹ ದೀನಕ ವ ಅಮಾನತಕ ವ ಖವಾತೀಮ ಅಮಲಿಕ".

(ನಾನು ನಮ್ಮ ಧರ್ಮ, ಅಮಾನತ್ತು ಮತ್ತು ಕರ್ಮ ಸಮಾಪ್ತಿಯನ್ನು ಅಲ್ಲಾಹನ ವಶ ಒಪ್ಪಿಸುತ್ತೇನೆ.) (ಹಿಸ್ನ್ ಹಸೀನ್)

18. ಯಾರಾದರೂ ಪ್ರಯಾಣದಿಂದ ಮರಳಿದಾಗ ಅವರನ್ನು ಸ್ನೇಹಾದರದ ಮಾತು ಗಳಿಂದ ಸ್ವಾಗತಿಸಿರಿ. ಸಂದರ್ಭಾನುಸಾರ ಹಸ್ತಲಾಘವ ಅಥವಾ ಆಲಿಂಗನ ಮಾಡಿರಿ.

# ದುಃಖ ದುಮ್ಮಾನ

1. ಸಂಕಷ್ಟಗಳನ್ನು ತಾಳ್ಮೆಯೊಂದಿಗೆ ಎದುರಿಸಿರಿ. ಎಂದೂ ಧೈರ್ಯಗೆಡಬೇಡಿರಿ. ದುಃಖ ದುಮ್ಮಾನಗಳಲ್ಲೆಂದೂ ಸಮತೋಲನ ಕಳಕೊಳ್ಳದಿರಿ. ಜೀವನದಲ್ಲಿ ಯಾರೂ ದುಃಖ, ದುಮ್ಮಾನ, ಸಂಕಟ, ಅಳಲು, ಅಪಾಯ, ಅಪಜಯ ಹಾಗೂ ನಷ್ಟಗಳಿಂದ ಸುರಕ್ಷಿತನಾಗಿರುವುದು ಅಸಂಭವ. ಆದರೆ ಸತ್ಯವಿಶ್ವಾಸಿ ಮತ್ತು ಸತ್ಯನಿಷೇಧಿಯ ನಡವಳಿಕೆಯಲ್ಲಿ ವ್ಯತ್ಯಾಸವಿದೆ. ಸತ್ಯನಿಷೇಧಿಯು ದುಃಖ ದುಮ್ಮಾನಗಳ ಹೆಚ್ಚಳದಿಂದ ಬೇಸತ್ತು ಕಂಗೆಡುತ್ತಾನೆ. ನಿರಾಶೆಗೆ ಗುರಿಯಾಗಿ ನಿಶ್ಚಲನಾಗುತ್ತಾನೆ. ಕೆಲವೊಮ್ಮೆ ದುಃಖ ತಾಳಲಾರದೆ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಸತ್ಯವಿಶ್ವಾಸಿ ದೊಡ್ಡ ದೊಡ್ಡ ಸಂಕಷ್ಟದ ವೇಳೆಯಲ್ಲೂ ತಾಳ್ಮೆ ಕಳಕೊಳ್ಳುವುದಿಲ್ಲ. ಸಹನೆಯ ಪ್ರತಿರೂಪವಾಗಿ ಬಂಡೆಯಂತೆ ಸ್ಥಿರವಾಗಿರುತ್ತಾನೆ. ಆದದ್ದೆಲ್ಲಾ ದೇವೇಚ್ಛೆಯಂತೆ ಆಯಿತೆಂದೂ ಅವನ ಎಲ್ಲ ಕಾರ್ಯಗಳು ಯುಕ್ತಿಯುಕ್ತವಾಗಿರುತ್ತವೆಂದೂ ಅವನು ಭಾವಿಸುತ್ತಾನೆ. ದೇವನು ಮಾಡುವುದೆಲ್ಲವೂ ತನ್ನ ದಾಸರ ಒಳಿತಿಗಾಗಿಯೇ ಮಾಡುತ್ತಾನೆ. ಅದರಲ್ಲಿ ಖಂಡಿತ ಒಳಿತಿನ ಅಂಶವೂ ಇರಬಹುದು ಎಂದು ಭಾವಿಸುವ ಮೂಲಕ ಸತ್ಯವಿಶ್ವಾಸಿಗೆ ಆಧ್ಯಾತ್ಮಿಕ ಶಾಂತಿ ಸಮಾಧಾನಗಳು ಸಿಗುತ್ತವೆ. ದುಃಖದ ಹೊಡೆತದಲ್ಲೂ ಆತನಿಗೆ ಸವಿ ಅನುಭವವಾಗುತ್ತದೆ. ವಿಧಿಯ ಮೇಲಿರುವ ಈ ವಿಶ್ವಾಸ ಎಲ್ಲ ಕಷ್ಟಗಳನ್ನು ಸುಲಭಗೊಳಿಸುತ್ತದೆ. ಅಲ್ಲಾಹನು ಹೇಳುತ್ತಾನೆ:

مَآ أَصَابَ مِن مُّصِيبَةٍ فِى ٱلْأَرْضِ وَلَا فِىٓ أَنفُسِكُمْ إِلَّا فِى كِتَٰبٍ مِّن قَبْلِ

أَن نَّبْرَأَهَآ ۚ إِنَّ ذَٰلِكَ عَلَى ٱللَّهِ يَسِيرٌ ۝ لِّكَيْلَا تَأْسَوْا۟ عَلَىٰ مَا فَاتَكُمْ

**"ಭೂಮಿಯ ಮೇಲೆ ಅಥವಾ ನಿಮ್ಮ ಮೇಲೆ ಎರಗುವ ಯಾವ ಸಂಕಷ್ಟವೂ ನಾವು ಅದನ್ನು ಸೃಷ್ಟಿಸುವುದಕ್ಕೆ ಮುಂಚೆ ಒಂದು ಗ್ರಂಥದಲ್ಲಿ (ವಿಧಿ ಲಿಖಿತದಲ್ಲಿ) ಬರೆದಿಟ್ಟುಕೊಳ್ಳದೆ ಇಲ್ಲ. ಖಂಡಿತವಾಗಿಯೂ ಹೀಗೆ ಮಾಡುವುದು ಅಲ್ಲಾಹನಿಗೆ ಅತ್ಯಂತ ಸುಲಭ ಕಾರ್ಯವಾಗಿದೆ. (ಹೀಗೇಕೆಂದರೆ) ನಿಮಗುಂಟಾಗುವ ಯಾವುದೇ ನಷ್ಟಕ್ಕಾಗಿ ನೀವು ಖೇದಿಸಬಾರದು."**

**(ಪವಿತ್ರ ಕುರ್‌ಆನ್, 57:22-23)**

ಅರ್ಥಾತ್ ವಿಧಿ ನಿರ್ಣಯದ ಮೇಲೆ ಇರುವ ವಿಶ್ವಾಸದ ಕಾರಣ ಸತ್ಯವಿಶ್ವಾಸಿಗೆ ಅವನ ಸಂಕಷ್ಟಗಳಿಗೆ ಪರಿಹಾರ ದೊರಕುತ್ತದೆ. ಅದರಿಂದಾಗಿ ಅವನು ಚಿಂತೆಗೀಡಾಗುವುದಿಲ್ಲ. ಎಲ್ಲ ವಿಷಯಗಳನ್ನು ಅವನು ತನ್ನ ಕರುಣಾಮಯಿ ದೇವನ ಮೇಲೆ ಬಿಟ್ಟು ಅದರ ಒಳಿತಿನ

ಅಂಶದತ್ತಲೇ ಗಮನಹರಿಸುತ್ತಾನೆ. ತಾಳ್ಮೆ ಮತ್ತು ನಮ್ರತೆಯೊಂದಿಗೆ ಎಲ್ಲ ಕೆಡುಕುಗಳಲ್ಲೂ ತನ್ನ ಪಾಲಿನ ಒಳಿತನ್ನು ಪಡೆಯಲು ಶ್ರಮಿಸುತ್ತಾನೆ. ಪ್ರವಾದಿ(ಸ) ಹೇಳುತ್ತಾರೆ: "ಸತ್ಯವಿಶ್ವಾಸಿಯ ಸ್ಥಿತಿ ಅತಿ ವಿಚಿತ್ರವಾಗಿದೆ. ಅವನು ಯಾವ ಸ್ಥಿತಿಯಲ್ಲಿದ್ದರೂ ಒಳಿತನ್ನೇ ಶೇಖರಿಸುತ್ತಾನೆ. ಅವನು ರೋಗರುಜಿನ, ದುಃಖದುಮ್ಮಾನ ಮತ್ತು ಆರ್ಥಿಕ ಸಂಕಷ್ಟಗಳಿಗೆ ಬಲಿಯಾದಾಗ ತಾಳ್ಮೆಯೊಂದಿಗೆ ಅದನ್ನು ಸ್ಥೈರಿಸಿಕೊಳ್ಳುತ್ತಾನೆ ಹಾಗೂ ಈ ಪರೀಕ್ಷೆ ಅವನ ಪಾಲಿಗೆ ಒಳಿತನ್ನೇ ತರುತ್ತದೆ. ಅವನಿಗೆ ಸುಖಸಂತೋಷ ಹಾಗೂ ಸುಸ್ಥಿತಿ ಲಭ್ಯವಾದಾಗ ಅವನು ದೇವನಿಗೆ ಕೃತಜ್ಞನಾಗಿರುತ್ತಾನೆ. ಈ ಸುಸ್ಥಿತಿಯೂ ಅವನ ಪಾಲಿಗೆ ಒಳಿತೇ ಆಗುತ್ತದೆ". (ಮುಸ್ಲಿಮ್)

2. ದುಃಖ ವಾರ್ತೆಯನ್ನು ಕೇಳಿದಾಗ, ಏನಾದರೂ ಕಷ್ಟನಷ್ಟ ಸಂಭವಿಸಿದಾಗ ಹೀಗೆ ಹೇಳಿರಿ:

إِنَّا لِلَّهِ وَإِنَّا إِلَيْهِ رَاجِعُوْنَ

"ಇನ್ನಾ ಲಿಲ್ಲಾಹಿ ವ ಇನ್ನಾ ಇಲೈಹಿ ರಾಜಿಊನ್".

(ನಾವು ಅಲ್ಲಾಹನಿಗೆ ಸೇರಿದವರು, ಅವನಲ್ಲಿಗೇ ಮರಳಿ ಹೋಗಬೇಕಾದವರು.)

ಅರ್ಥಾತ್ ನಮ್ಮ ಬಳಿ ಇರುವುದೆಲ್ಲವೂ ಅಲ್ಲಾಹನವೇ ಆಗಿವೆ. ಅವನೇ ಕೊಡುವವನು, ಅವನೇ ಮರಳಿ ಪಡೆಯುವವನು. ನಾವೂ ಅವನವರೇ. ಅವನಲ್ಲಿಗೆ ಮರಳಿ ಹೋಗಲಿದ್ದೇವೆ. ನಾವು ಎಲ್ಲ ಸ್ಥಿತಿಯಲ್ಲೂ ಅವನ ಇಚ್ಛೆಯ ಮೇಲೆ ಸಂತೃಪ್ತರಾಗಿದ್ದೇವೆ. ಅವನ ಎಲ್ಲ ಕಾರ್ಯಗಳೂ ಯುಕ್ತಿ, ಉದ್ದೇಶ ಮತ್ತು ನ್ಯಾಯದಿಂದ ಕೂಡಿರುತ್ತದೆ. ಅವನು ಮಾಡುವುದೆಲ್ಲವೂ ಯಾವುದಾದರೂ ದೊಡ್ಡ ಒಳಿತಿಗೇ ಆಗಿರುತ್ತದೆ. ನಿಷ್ಠ ದಾಸನಲ್ಲೇನೂ ಆ ಬಗ್ಗೆ ಯಾವ ಕಳವಳ ಉಂಟಾಗಬಾರದು. ಅಲ್ಲಾಹನು ಹೇಳುತ್ತಾನೆ:

وَلَنَبْلُوَنَّكُمْ بِشَيْءٍ مِّنَ الْخَوْفِ وَالْجُوعِ وَنَقْصٍ مِّنَ الْأَمْوَالِ وَالْأَنفُسِ وَالثَّمَرَاتِ ۗ

وَبَشِّرِ الصَّابِرِينَ ﴿١٥٥﴾ الَّذِينَ إِذَا أَصَابَتْهُم مُّصِيبَةٌ قَالُوا إِنَّا لِلَّهِ وَإِنَّا إِلَيْهِ

رَاجِعُونَ ﴿١٥٦﴾ أُولَٰئِكَ عَلَيْهِمْ صَلَوَاتٌ مِّن رَّبِّهِمْ وَرَحْمَةٌ ۖ وَأُولَٰئِكَ هُمُ الْمُهْتَدُونَ ﴿١٥٧﴾

"ನಾವು ನಿಮ್ಮನ್ನು ಭಯಾಶಂಕೆ, ಹಸಿವು, ಧನಹಾನಿ, ಜೀವಹಾನಿ ಮತ್ತು ಉತ್ಪನ್ನಗಳ ನಾಶಗಳಿಗೊಳಪಡಿಸಿ ಅವಶ್ಯವಾಗಿಯೂ ಪರೀಕ್ಷಿಸುವೆವು. ಇಂತಹ ಸನ್ನಿವೇಶಗಳಲ್ಲಿ ತಾಳ್ಮೆ ವಹಿಸಿದವರಿಗೆ ಸುವಾರ್ತೆ ನೀಡಿರಿ. ಅಂತಹವರ ಮೇಲೆ ವಿಪತ್ತೇನಾದರೂ ಎರಗಿದಾಗ ಅವರು ನಿಶ್ಚಯವಾಗಿಯೂ ನಾವು ಅಲ್ಲಾಹನವರು ಮತ್ತು ಅಲ್ಲಾಹನೆಡೆಗೇ ನಮಗೆ ಮರಳಲಿಕ್ಕಿದೆ ಎನ್ನುವರು. ಅವರ ಮೇಲೆ ಅವರ ಪ್ರಭುವಿನ ಕಡೆಯಿಂದ ಮಹಾ ಅನುಗ್ರಹಗಳಿರುವುವು. ಅವನ ಕಾರುಣ್ಯವು ಅವರನ್ನು ಆಚ್ಛಾದಿಸುವುದು ಮತ್ತು ಇಂತಹವರೇ ಸನ್ಮಾರ್ಗ ಹೊಂದಿದವರಾಗಿರುತ್ತಾರೆ". (ಪವಿತ್ರ ಕುರ್‌ಆನ್: 2:155-157)

ಪ್ರವಾದಿ(ಸ) ಹೇಳುತ್ತಾರೆ, "ಒಬ್ಬ ದಾಸನು ಆಪತ್ತು ಬಂದೆರಗಿದಾಗ 'ಇನ್ನಾಲಿಲ್ಲಾಹಿ....' ಹೇಳಿದರೆ ಅಲ್ಲಾಹನು ಅವನ ಆಪತ್ತನ್ನು ನೀಗಿಸುತ್ತಾನೆ. ಅವನ ಅಂತ್ಯವನ್ನು ಉತ್ತಮಗೊಳಿಸುತ್ತಾನೆ. ಅದಕ್ಕೆ ಪ್ರತಿಫಲವಾಗಿ ಅವನು ಮೆಚ್ಚುವ ವಸ್ತುವನ್ನು ಅವನಿಗೆ ದಯ ಪಾಲಿಸುತ್ತಾನೆ".

ಒಮ್ಮೆ ಮನೆಯ ದೀಪ ಆರಿದಾಗ ಪ್ರವಾದಿವರ್ಯರು(ಸ) "ಇನ್ನಾಲಿಲ್ಲಾಹಿ ವ ಇನ್ನಾ ಇಲೈಹಿ ರಾಜಿಊನ್" ಎಂದರು. ಆಗ ಒಬ್ಬರು ಕೇಳಿದರು. "ಓ ಅಲ್ಲಾಹನ ಸಂದೇಶವಾಹಕರೇ? ದೀಪ ಆರಿ ಹೋಗುವುದು ಸಹ ಒಂದು ಆಪತ್ತೇ?" ಪ್ರವಾದಿ(ಸ) ಹೇಳಿದರು, "ಹೌದು, ಯಾವ ವಿಷಯದ ಬಗ್ಗೆ ಸತ್ಯವಿಶ್ವಾಸಿ ಖಿನ್ನನಾಗುತ್ತಾನೋ ಅದು ಆಪತ್ತಾಗಿದೆ".

ಪ್ರವಾದಿ(ಸ) ಹೇಳುತ್ತಾರೆ: "ಯಾವನೇ ಮುಸ್ಲಿಮನಿಗೆ ಮಾನಸಿಕ ಕ್ಲೇಶ, ದೈಹಿಕ ತೊಂದರೆ ಮತ್ತು ರೋಗರುಜಿನ ಅಥವಾ ಇನ್ನಾವುದೇ ತರದ ದುಃಖ ದುಮ್ಮಾನ ಉಂಟಾದಾಗ, ಅಷ್ಟೇಕೆ ಅವನ ಕಾಲಿಗೆ ಒಂದು ಮುಳ್ಳು ತಾಗಿದಾಗಲೂ (ಅವನು ಅದನ್ನು ಸೈರಿಸಿ ಕೊಂಡರೆ) ಅಲ್ಲಾಹನು ಅವನ ಪಾಪಗಳನ್ನು ಕ್ಷಮಿಸುತ್ತಾನೆ." (ಬುಖಾರಿ, ಮುಸ್ಲಿಮ್)

ಹ. ಅನಸ್(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು: "ಪರೀಕ್ಷೆ ಮತ್ತು ಆಪತ್ತು ಎಷ್ಟು ತೀವ್ರವಾಗಿರುತ್ತದೋ ಅದರ ಪ್ರತಿಫಲವೂ ಅಷ್ಟೇ ದೊಡ್ಡದಾಗಿರುತ್ತದೆ. ದೇವನು ಒಂದು ಸಮುದಾಯವನ್ನು ಪ್ರೀತಿಸುವಾಗ ಅದನ್ನು (ಮತ್ತಷ್ಟು ಸಂಸ್ಕರಿಸಲು ಮತ್ತು ಪುಟವಿಡಲು) ಪರೀಕ್ಷೆಗೊಳಪಡಿಸುತ್ತಾನೆ. ಆ ಬಳಿಕ ಯಾರು ದೇವವಿಧಿಯಲ್ಲಿ ಸಂತೃಪ್ತರಾಗಿರುತ್ತಾರೋ ಅಲ್ಲಾಹನೂ ಅವರಿಂದ ಸಂಪ್ರೀತನಾಗುತ್ತಾನೆ. ಯಾರು ಆ ಪರೀಕ್ಷೆಯ ವೇಳೆ ಅಲ್ಲಾಹನೊಂದಿಗೆ ಕುಪಿತನಾಗುತ್ತಾರೋ ದೇವನೂ ಅವರಿಂದ ಕುಪಿತನಾಗುತ್ತಾನೆ". (ತಿರ್ಮಿದಿ)

ಹ. ಅಬೂಮೂಸಾ ಅಶ್‌ಅರೀ(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು:

"ಒಬ್ಬನ ಮಗುವೊಂದು ತೀರಿಕೊಂಡಾಗ ಅಲ್ಲಾಹನು ತನ್ನ ಮಲಕ್ (ದೇವಚರ)ಗಳನ್ನು ಪ್ರಶ್ನಿಸುತ್ತಾನೆ; 'ನೀವು ನನ್ನ ದಾಸನ ಮಗುವಿನ ಆತ್ಮವನ್ನು ವಶಪಡಿಸಿಕೊಂಡಿರಾ?' ಅವರು ಹೌದೆಂದಾಗ ಮತ್ತೆ ಪ್ರಶ್ನಿಸುತ್ತಾನೆ, 'ನೀವು ಅವನ ಕರುಳ ಕುಡಿಯ ಪ್ರಾಣ ತೆಗೆದಿರಾ?' ಅವರು ಹೌದೆಂದಾಗ ಮತ್ತೆ ಪ್ರಶ್ನಿಸುತ್ತಾನೆ, 'ನನ್ನ ದಾಸ ಏನೆಂದ?' ಅವರು ಉತ್ತರಿಸಿದರು, ಈ ಆಪತ್ತು ಎರಗಿದಾಗ ಅವನು ನಿನ್ನನ್ನು ಸ್ತುತಿಸಿದನು ಮತ್ತು 'ಇನ್ನಾಲಿಲ್ಲಾಹಿ ವಇನ್ನಾ ಇಲೈಹಿ ರಾಜಿಊನ್' ಓದಿದನು. ಆಗ ಅಲ್ಲಾಹನು ಅವರಿಗೆ ಹೇಳುತ್ತಾನೆ, 'ನನ್ನ ಈ ದಾಸನಿಗಾಗಿ ಸ್ವರ್ಗದಲ್ಲಿ ಒಂದು ಭವನ ನಿರ್ಮಿಸಿರಿ ಮತ್ತು ಅದರ ಹೆಸರು 'ಬೈತುಲ್‌ಹಮ್ದ್' (ಕೃತಜ್ಞತೆಯ ಮನೆ) ಎಂದಿಡಿರಿ". (ತಿರ್ಮಿದಿ)

3. ಸಂಕಷ್ಟ ಮತ್ತು ಆಪತ್ತಿನ ವೇಳೆ ಶೋಕತಪ್ತರಾಗುವುದು ಸ್ವಾಭಾವಿಕ. ಆದರೆ ಅಂತಹ ಸಂದರ್ಭಗಳಲ್ಲಿಯೂ ಬಾಯಿಯಿಂದ ಸತ್ಯಕ್ಕೆ ವಿರುದ್ಧವಾದ ಯಾವ ಮಾತೂ ಹೊರಡದಂತೆ ಹಾಗೂ ಸಹನೆ ತಪ್ಪಿ ಹೋಗದಂತೆ ಜಾಗ್ರತೆ ವಹಿಸಬೇಕು.

ಪ್ರವಾದಿವರ್ಯರ(ಸ) ಪುತ್ರ ಇಬ್ರಾಹೀಮ್ ಪ್ರವಾದಿವರ್ಯರ(ಸ) ಮಡಿಲಲ್ಲಿದ್ದರು. ಪ್ರಾಣಪಕ್ಷಿ ಹಾರಿ ಹೋಗುವ ಸಮಯವಾಗಿತ್ತು. ಈ ದಾರುಣ ದೃಶ್ಯವನ್ನು ಕಂಡು ಪ್ರವಾದಿ

ಯವರ(ಸ) ಕಣ್ಣುಗಳಿಂದ ಅಶ್ರುಧಾರೆ ಹರಿಯತೊಡಗಿತು, "ಇಬ್ರಾಹೀಮ್ ನಿನ್ನ ಅಗಲಿಕೆಯಿಂದ ನಾನು ಶೋಕತಪ್ತನಾಗಿರುವೆನು. ಆದರೆ ದೇವೇಚ್ಛೆಗೆ ಬದ್ಧವಾದ ಮಾತು ಮಾತ್ರ ನನ್ನ ಬಾಯಿಯಿಂದ ಹೊರಡುವುದು" ಎಂದವರು ಹೇಳಿದರು. (ಮುಸ್ಲಿಮ್)

4. ದುಃಖಾತಿರೇಕದ ವೇಳೆಯಲ್ಲಿ ದೇವನ ಬಗ್ಗೆ ಕೃತಘ್ನತೆ ಅಥವಾ ಆಕ್ಷೇಪ ವ್ಯಕ್ತವಾಗುವಂತಹ ಮತ್ತು ಧರ್ಮಶಾಸ್ತ್ರಕ್ಕೆ ವಿರುದ್ಧವಾದ ಯಾವ ಕೃತ್ಯವನ್ನೂ ಎಸಗ ಬಾರದು. ರೋದಿಸುವುದು, ತೊಟ್ಟ ಬಟ್ಟೆಯನ್ನು ಹರಿಯುವುದು, ತನ್ನ ಕೆನ್ನೆಗೆ ಏಟು ಕೊಡುವುದು, ಆರ್ಭಟಿಸುವುದು ಹಾಗೂ ತಲೆ ಮತ್ತು ಎದೆ ಬಡಿದುಕೊಳ್ಳುವುದು ಸತ್ಯವಿಶ್ವಾಸಿಗೆ ಯಾವ ರೀತಿಯಲ್ಲೂ ಧರ್ಮಸಮ್ಮತವಲ್ಲ. ಪ್ರವಾದಿ(ಸ) ಹೇಳುತ್ತಾರೆ: "ತನ್ನ ಬಟ್ಟೆಗಳನ್ನು ಹರಿಯುವ, ತನ್ನ ಕೆನ್ನೆಗೆ ಹೊಡೆಯುವ, ಅಜ್ಞಾನ ಕಾಲದ ರೂಢಿಯಂತೆ ಆರ್ಭಟಿಸುವ ಮತ್ತು ರೋದಿಸು ವವನು ನನ್ನ ಸಮುದಾಯಕ್ಕೆ ಸೇರಿದವನಲ್ಲ". (ತಿರ್ಮಿದಿ)

ಹ. ಜಅ್‌ಫರ್ ತಯ್ಯಾರ್‌ರವರು(ರ) ಹುತಾತ್ಮರಾದಾಗ ಹಾಗೂ ಅವರು ಹುತಾತ್ಮ ರಾದ ವಿಷಯ ಮನೆಯವರಿಗೆ ತಿಳಿದಾಗ ಮನೆಯ ಮಹಿಳೆಯರು ಆರ್ಭಟಿಸಲು ಮತ್ತು ರೋದಿಸಲು ಆರಂಭಿಸಿದರು. ಪ್ರವಾದಿವರ್ಯರು(ಸ) ಹಾಗೆ ಮಾಡದಿರುವಂತೆ ಅವರಿಗೆ ಹೇಳಿ ಕಳುಹಿಸಿದರು. ಆದರೆ ಅವರು ಅದನ್ನೇ ಮುಂದುವರಿಸಿದರು. ಎರಡನೆಯ ಸಲ ಪ್ರವಾದಿ(ಸ) ಅವರಿಗೆ ಹೇಳಿ ಕಳುಹಿಸಿದರು. ಆಗಲೂ ಅವರು ಸುಮ್ಮನಾಗದಿದ್ದಾಗ ಪ್ರವಾದಿ(ಸ) ಅವರ ಬಾಯಿಗೆ ಮಣ್ಣು ಹಾಕುವಂತೆ ಆಜ್ಞಾಪಿಸಿದರು. (ಬುಖಾರಿ)

ಒಮ್ಮೆ ಪ್ರವಾದಿ(ಸ) ಒಂದು ಮರಣ ಯಾತ್ರೆಯಲ್ಲಿ ಪಾಲ್ಗೊಂಡಿದ್ದರು. ಒಬ್ಬ ಮಹಿಳೆ ಒಂದು ಬೆಂಕಿಯ ಕೆಂಡ ತಂದಳು. ಪ್ರವಾದಿ(ಸ) ಆಕೆಯನ್ನು ಜೋರಾಗಿ ಗದರಿಸಿದಾಗ ಅಲ್ಲಿಂದ ಆಗಲೇ ಓಡಿ ಹೋದಳು. (ಸೀರತುನ್ನಬಿ, ಭಾಗ - 6)

ಪ್ರವಾದಿ(ಸ) ಹೇಳುತ್ತಾರೆ: "ಶವ ಯಾತ್ರೆಯ ಹಿಂದಿನಿಂದ ಯಾರೂ ಬೆಂಕಿ ಅಥವಾ ಶೋಕ ಸಂಗೀತವನ್ನು ಒಯ್ಯಬಾರದು".

ಅರೇಬಿಯಾದ ರೂಢಿಯಂತೆ ಶವ ಯಾತ್ರೆಯ ಹಿಂದಿನಿಂದ ನಡೆಯುತ್ತಿದ್ದವರು ತಮ್ಮ ಚದ್ದರವನ್ನು ಶೋಕ ಸೂಚಕವಾಗಿ ಎಸೆದು ಬಿಡುತ್ತಿದ್ದರು. ನಿಲುವಂಗಿಯನ್ನು ಮಾತ್ರ ತೊಟ್ಟು ಕೊಳ್ಳುತ್ತಿದ್ದರು. ಒಮ್ಮೆ ಪ್ರವಾದಿವರ್ಯರು(ಸ) ಜನರು ಈ ರೀತಿ ಮಾಡುವುದನ್ನು ಕಂಡು, "ಅಜ್ಞಾನ ಕಾಲದ ಸಂಪ್ರದಾಯವನ್ನು ಪಾಲಿಸುತ್ತೀರಾ? ನನಗಂತೂ ನೀವು ವಿರೂಪಿಗಳಾಗಿ ರೆಂದು ಶಪಿಸಬೇಕೆಂದು ತೋಚಿತು" ಎಂದರು. ಜನರು ಕೂಡಲೇ ತಂತಮ್ಮ ಚದ್ದರಗಳನ್ನು ಎತ್ತಿಕೊಂಡರು. ಆ ಬಳಿಕ ಎಂದೂ ಆ ಕೃತ್ಯವನ್ನೆಸಗಲಿಲ್ಲ. (ಇಬ್ನುಮಾಜಃ)

5. ರೋಗವನ್ನು ಹಳಿಯದಿರಿ. ಅದರ ಬಗ್ಗೆ ಯಾವ ರೀತಿಯ ಆಕ್ಷೇಪಾರ್ಹ ಮಾತೂ ಎತ್ತಬೇಡಿ. ಅತ್ಯಂತ ತಾಳ್ಮೆಯಿಂದಿರಿ ಮತ್ತು ಪರಲೋಕದ ಪ್ರತಿಫಲವನ್ನು ಬಯಸಿರಿ.

ರೋಗಪೀಡಿತನಾಗುವುದರಿಂದ ಮತ್ತು ಸಂಕಷ್ಟಗಳನ್ನು ಸಹಿಸುವುದರಿಂದ ಸತ್ಯವಿಶ್ವಾಸಿಯ ಪಾಪಗಳು ತೊಳೆಯಲ್ಪಟ್ಟು ಅವನು ಪಾವನನಾಗುತ್ತಾನೆ. ಪರಲೋಕದಲ್ಲಿ ಮಹತ್ತಾದ ಪ್ರತಿ

ಫಲವೂ ಲಭಿಸುತ್ತದೆ. ಪ್ರವಾದಿ(ಸ) ಹೇಳಿದರು: "ಸತ್ಯವಿಶ್ವಾಸಿಗೆ ರೋಗ, ದೈಹಿಕ ಬೇನೆ, ಬಳಲಿಕೆ ಅಥವಾ ಇನ್ನಾವುದೇ ರೀತಿಯಲ್ಲಿ ದುಃಖವಾದರೆ ದೇವನು ಅದಕ್ಕೆ ಪ್ರತಿಯಾಗಿ ಮರದಿಂದ ಎಲೆಗಳನ್ನು ಉದುರಿಸುವಂತೆ ಅವನ ಪಾಪಗಳನ್ನು ಉದುರಿಸುತ್ತಾನೆ".

(ಬುಖಾರಿ, ಮುಸ್ಲಿಮ್)

ಒಮ್ಮೆ ಓರ್ವ ಸ್ತ್ರೀ ಕಂಪಿಸುತ್ತಿರುವುದನ್ನು ಕಂಡು ಪ್ರವಾದಿ(ಸ) ವಿಚಾರಿಸಿದರು: "ಓ ಉಮ್ಮು ಸಾಇಬ್ ಅಥವಾ ಮುಸಯ್ಯಬ್! ಏನಾಯಿತು? ನೀವೇಕೆ ಕಂಪಿಸುತ್ತಿದ್ದೀರಿ?" ಅವರು "ನನಗೆ ಜ್ವರ ಬರುತ್ತಿದೆ. ದೇವನು ಅದನ್ನು ಶಪಿಸಲಿ" ಎಂದರು. ಆಗ ಪ್ರವಾದಿ(ಸ) ಹೇಳಿದರು, "ಜ್ವರವನ್ನು ಹಳಿಯದಿರಿ, ಏಕೆಂದರೆ ಬೆಂಕಿಯು ಕಬ್ಬಿಣವನ್ನು ಶುಚಿಗೊಳಿಸುವಂತೆ ಜ್ವರವು ಆದಮರ ಮಕ್ಕಳನ್ನು ಪಾಪಗಳಿಂದ ಶುದ್ಧಗೊಳಿಸುತ್ತದೆ". (ಮುಸ್ಲಿಮ್)

ಹ. ಅತಾಅ್ ಬಿನ್ ರಬಾಹ್(ರ) ತಮ್ಮ ಒಂದು ವೃತ್ತಾಂತವನ್ನು ಈ ರೀತಿ ವಿವರಿಸಿದ್ದಾರೆ: "ಒಮ್ಮೆ ಕಅಬಾದ ಬಳಿ ಹ. ಅಬ್ಬಾಸ್(ರ) ನನ್ನೊಂದಿಗೆ ಈ ರೀತಿ ಹೇಳಿದರು, "ನಿಮಗೆ ಓರ್ವ ಸ್ವರ್ಗದ ಮಹಿಳೆಯನ್ನು ತೋರಿಸಲೇ" ನಾನು "ಖಂಡಿತ ತೋರಿಸಿ" ಎಂದಾಗ ಹ. ಅಬ್ಬಾಸ್(ರ) ಹೇಳಿದರು: "ನೋಡಿ ಆ ಕರ್‍ರಗಿನ ಮೈ ಬಣ್ಣದ ಮಹಿಳೆ ಒಮ್ಮೆ ಪ್ರವಾದಿವರ್ಯರ(ಸ) ಬಳಿ ಬಂದು ಹೇಳಿದರು "ನನಗೆ ಅಪಸ್ಮಾರ ಬಾಧಿಸಿದಾಗ ನನಗೆ ಮೈ ಕೈಯ ಪರಿವೆಯೇ ಇರುವುದಿಲ್ಲ. ಆಗ ನಾನು ಸಂಪೂರ್ಣ ನಗ್ನಳಾಗಿ ಬಿಡುತ್ತೇನೆ. ಓ ಪ್ರವಾದಿವರ್ಯರೇ(ಸ) ನನಗಾಗಿ ಅಲ್ಲಾಹನಲ್ಲಿ ಪ್ರಾರ್ಥಿಸಿರಿ." ಪ್ರವಾದಿ(ಸ) ಹೇಳಿದರು, "ನೀವು ಈ ಸಂಕಷ್ಟವನ್ನು ತಾಳ್ಮೆಯಿಂದ ಸಹಿಸುತ್ತಿದ್ದರೆ ಅಲ್ಲಾಹನು ನಿಮಗೆ ಸ್ವರ್ಗವನ್ನು ದಯಪಾಲಿಸುವನು ಮತ್ತು ನೀವು ಬಯಸುವುದಾದರೆ ನಾನು ಅಲ್ಲಾಹನಲ್ಲಿ ಪ್ರಾರ್ಥಿಸುತ್ತೇನೆ". ಆ ಮಹಿಳೆ "ಓ ಪ್ರವಾದಿವರ್ಯರೇ(ಸ) ನಾನು ಈ ಸಂಕಷ್ಟವನ್ನು ತಾಳ್ಮೆಯಿಂದ ಸಹಿಸಿ ಕೊಳ್ಳುವೆನು. ಆದರೆ ಆ ಸಂದರ್ಭದಲ್ಲಿ ನಾನು ನಗ್ನಳಾಗದಂತೆ ಪ್ರಾರ್ಥಿಸಿರಿ" ಎಂದು ಹೇಳಿದರು. ಆಗ ಪ್ರವಾದಿ(ಸ) ಪ್ರಾರ್ಥಿಸಿದರು. ಹ. ಅತಾಅ್(ರ) ಹೇಳುತ್ತಾರೆ "ನಾನು ಆ ನೀಳಕಾಯದ ಮಹಿಳೆ ಉಮ್ಮು ಝುಫರ್‌ರನ್ನು ಕಅಬಾದ ಹೊಸ್ತಿಲಲ್ಲಿ ಕಂಡೆನು".

6. ಯಾವ ಮರಣಕ್ಕೂ ಮೂರು ದಿನಕ್ಕಿಂತ ಮಿಕ್ಕಿ ಶೋಕ ಆಚರಿಸದಿರಿ. ಆಪ್ತೇಷ್ಟರ ಮರಣಕ್ಕಾಗಿ ದುಃಖಿಸುವುದು ಮತ್ತು ಕಣ್ಣೀರು ಸುರಿಸುವುದು ಸ್ವಾಭಾವಿಕ. ಆದರೆ ಅದರ ಗರಿಷ್ಠ ಅವಧಿ ಮೂರು ದಿನಗಳಾಗಿವೆ. ಪ್ರವಾದಿ(ಸ) ಹೇಳಿದರು, "ಯಾರ ಬಗ್ಗೆಯೂ ಮೂರು ದಿನಕ್ಕಿಂತ ಹೆಚ್ಚು ಶೋಕ ಆಚರಿಸುವುದು ಸತ್ಯವಿಶ್ವಾಸಿಗೆ ಧರ್ಮಸಮ್ಮತವಲ್ಲ. ಆದರೆ ವಿಧವೆಯ ಶೋಕಾಚರಣೆಯ ಅವಧಿ ನಾಲ್ಕು ತಿಂಗಳು, ಹತ್ತು ದಿನಗಳು. ಈ ಅವಧಿಯಲ್ಲಿ ಆಕೆ ಬಣ್ಣದ ಉಡುಪು ಧರಿಸಬಾರದು, ಪರಿಮಳ ದ್ರವ್ಯ ಉಪಯೋಗಿಸಬಾರದು ಹಾಗೂ ಶೃಂಗಾರ ಮಾಡಬಾರದು". (ತಿರ್ಮಿದಿ)

ಹ. ಝೈನಬ್ ಬಿಂತಿ ಜಹಶ್‌ರ(ರ) ಸಹೋದರ ತೀರಿ ಹೋದರು. ನಾಲ್ಕನೆಯ ದಿನ ಸಂತಾಪ ಸೂಚನೆಗೆ ಕೆಲವು ಮಹಿಳೆಯರು ಬಂದರು. ಆಗ ಝೈನಬ್(ರ) ಎಲ್ಲರ

ಮುಂದೆಯೇ ಪರಿಮಳ ದ್ರವ್ಯ ಪೂಸುತ್ತಾ, "ನನಗೆ ಈಗ ಪರಿಮಳ ದ್ರವ್ಯ ಪೂಸುವ ಬಯಕೆ ಇಲ್ಲ. ಆದರೆ ಪ್ರವಾದಿ(ಸ) 'ಯಾವ ಮುಸ್ಲಿಮ್ ಸ್ತ್ರೀಯೂ ತನ್ನ ಪತಿಯ ಹೊರತು ಇನ್ನಾರ ಮರಣಕ್ಕೂ ಮೂರು ದಿನಕ್ಕಿಂತ ಹೆಚ್ಚು ಶೋಕ ಆಚರಿಸಬಾರದು' ಎಂದು ಹೇಳಿರುವ ಕಾರಣ ನಾನು ಈ ಪರಿಮಳವನ್ನು ಪೂಸುತ್ತಿರುವೆನು" ಎಂದು ಹೇಳಿದರು.

7. ದುಃಖ, ದುಮ್ಮಾನ ಮತ್ತು ಸಂಕಷ್ಟಗಳ ವೇಳೆ ಪರಸ್ಪರ ಸಹನೆಯ ಉಪದೇಶ ಮಾಡಿರಿ. ತಬೂಕ್ ಯುದ್ಧದಿಂದ ಪ್ರವಾದಿ(ಸ) ಮರಳಿದಾಗ ಕೆಲವು ಮಹಿಳೆಯರು ತಂತಮ್ಮ ಬಂಧುಗಳ ಮತ್ತು ಆಪ್ತರ ಸ್ಥಿತಿಗತಿಗಳನ್ನು ವಿಚಾರಿಸಲಿಕ್ಕಾಗಿ ಬಂದರು. ಹ. ಹುಮ್ನ ಬಿಂತಿ ಜಹಶ್(ರ) ಪ್ರವಾದಿವರ್ಯರ(ಸ) ಎದುರು ಬಂದಾಗ ಪ್ರವಾದಿ(ಸ) ಅವರಿಗೆ ಸಹನೆಯ ಉಪದೇಶ ಮಾಡುತ್ತಾ, "ನಿಮ್ಮ ಸಹೋದರನಾದ ಅಬ್ದುಲ್ಲಾರ(ರ) ಬಗ್ಗೆ ಸಹನೆ ವಹಿಸಿರಿ" ಎಂದರು. ಅವರು 'ಇನ್ನಾಲಿಲ್ಲಾಹಿ ವಇನ್ನಾ ಇಲೈಹಿ ರಾಜಿಊನ್' ಎನ್ನುತ್ತಾ ಅವರ ಪಾಪ ವಿಮೋಚನೆಗಾಗಿ ಪ್ರಾರ್ಥಿಸಿದರು. ಆ ಬಳಿಕ ಪ್ರವಾದಿ(ಸ) ಹೇಳಿದರು, "ನಿಮ್ಮ ಸೋದರ ಮಾವ ಹಂಝಾರ(ರ) ಬಗ್ಗೆಯೂ ಸಹನೆ ವಹಿಸಿರಿ". ಅವರು ಮತ್ತೊಮ್ಮೆ "ಇನ್ನಾಲಿಲ್ಲಾಹಿ ವಇನ್ನಾ ಇಲೈಹಿ ರಾಜಿಊನ್" ಎನ್ನುತ್ತಾ ಅವರ ಮೋಕ್ಷಕ್ಕಾಗಿ ಪ್ರಾರ್ಥಿಸಿದರು.

ಹ. ಅಬೂತಲ್ಹಾರ(ರ) ಮಗನಿಗೆ ಕಾಯಿಲೆಯಾಗಿತ್ತು. ಅವರು ಮಗುವನ್ನು ಅದೇ ಸ್ಥಿತಿ ಯಲ್ಲಿ ಬಿಟ್ಟು ಕೆಲಸಕ್ಕೆ ಹೋಗಿದ್ದರು. ಅವರು ಹೋದ ಬಳಿಕ ಆ ಮಗು ತೀರಿ ಹೋಯಿತು. ಅಬೂತಲ್ಹಾರ(ರ) ಪತ್ನಿ ತನ್ನ ಪತಿಗೆ ಈ ವಿಷಯ ತಿಳಿಸದಿರುವಂತೆ ಜನರಿಗೆ ಹೇಳಿದರು. ಅವರು ಸಂಜೆ ಕೆಲಸ ಮುಗಿಸಿ ಮನೆಗೆ ಮರಳಿದಾಗ ಮಗುವಿನ ಸ್ಥಿತಿ ಹೇಗಿದೆ ಎಂದು ವಿಚಾರಿಸಿ ದರು. ಆಗ ಅವರು "ಹಿಂದಿಗಿಂತಲೂ ಈಗ ಶಾಂತಿಯಿಂದ ಇದ್ದಾನೆ" ಎಂದು ಹೇಳಿ ಅಬೂ ತಲ್ಹಾರಿಗೆ ಊಟ ಬಡಿಸಿದರು. ಅವರು ಸುಖವಾಗಿ ಉಂಡು ಮಲಗಿದರು. ಬೆಳಗಾದಾಗ ಪತ್ನಿ ಯುಕ್ತಿಪೂರ್ಣವಾಗಿ ಈ ರೀತಿ ವಿಚಾರಿಸಿದರು, "ಒಂದು ವಸ್ತುವನ್ನು ಒಬ್ಬರು ಸಾಲ ರೂಪವಾಗಿ ನೀಡಿ ಆ ಬಳಿಕ ಅದನ್ನು ಮರಳಿ ಕೇಳಿದರೆ ಅದನ್ನು ಕೊಡದಿರುವ ಹಕ್ಕು ಅವನಿ ಗಿದೆಯೇ" ಅಬೂತಲ್ಹಾ ಹೇಳಿದರು, "ಇಲ್ಲ ಅವನಿಗೆ ಆ ಹಕ್ಕು ಎಲ್ಲಿಂದ ಬಂತು!" ಆಗ ಸಹನಾಮೂರ್ತಿಯಾದ ಆ ಪತ್ನಿ ಹೇಳಿದರು, "ನಿಮ್ಮ ಮಗುವಿನ ಬಗ್ಗೆಯೂ ಸಹನೆ ವಹಿಸಿರಿ".

**(ಮುಸ್ಲಿಮ್)**

8. ಸತ್ಯದ ಹಾದಿಯಲ್ಲಿ ಬರುವ ಸಂಕಷ್ಟಗಳನ್ನು ಪ್ರಸನ್ನವದನರಾಗಿ ಎದುರಿಸಿರಿ. ಈ ಮಾರ್ಗದಲ್ಲಿ ಆಗುವ ದುಃಖದ ಬಗ್ಗೆ ಖೇದಪಡುವ ಬದಲು ಸಂತೋಷಪಡಿರಿ. ದೇವನು ತನ್ನ ಮಾರ್ಗದಲ್ಲಿ ನಿಮ್ಮ ಈ ತ್ಯಾಗವನ್ನು ಸ್ವೀಕರಿಸಿದ್ದಕ್ಕಾಗಿ ಆತನಿಗೆ ಕೃತಜ್ಞತೆ ಗಳನ್ನರ್ಪಿಸಿರಿ.

ಹ. ಅಬ್ದುಲ್ಲಾ ಬಿನ್ ಝುಬೈರ್‌ರ(ರ) ತಾಯಿ ಹ. ಅಸ್ಮಾ(ರ) ತೀವ್ರ ಕಾಯಿಲೆಯಲ್ಲಿ ಬಿದ್ದಿದ್ದರು. ಹ. ಅಬ್ದುಲ್ಲಾ(ರ) ಅವರ ಸಂದರ್ಶನಕ್ಕಾಗಿ ಬಂದರು. ತಾಯಿ ಹೇಳಿದರು, "ಮಗನೇ! ಎರಡು ವಿಷಯಗಳ ಪೈಕಿ ಒಂದನ್ನು ನೋಡುವ ತನಕ ದೇವನು ನನ್ನನ್ನು ಬದುಕಿಸಲಿ" ಎಂದು ಬಯಸುತ್ತೇನೆ. ಒಂದೋ ನೀನು ದೇವಮಾರ್ಗದಲ್ಲಿ ಹುತಾತ್ಮನಾದ

ವಾರ್ತೆ ಸಿಕ್ಕಿ ನಾನು ಸಹನೆ ವಹಿಸುವ ಸೌಭಾಗ್ಯ ಗಳಿಸಬೇಕು, ಇಲ್ಲವೇ ನೀನು ಜಯಗಳಿಸಿ ಬಂದಾಗ ನಿನ್ನನ್ನು ಕಂಡು ನನ್ನ ಕಣ್ಣು ತಂಪಾಗಬೇಕು." ದೇವೇಚ್ಛೆಯಂತೆ ತಾಯಿಯ ಜೀವಿತ ಕಾಲದಲ್ಲೇ ಹ. ಅಬ್ದುಲ್ಲಾ ಬಿನ್ ಝುಬೈರ್(ರ) ಹುತಾತ್ಮರಾದರು. ಹುತಾತ್ಮರಾದ ಬಳಿಕ ಅವರನ್ನು ಹಜ್ಜಾಜ್ ಶಿಲುಬೆಗೇರಿಸಿದನು. ಹ. ಅಸ್ಮಾ(ರ) ಆಗ ಬಹಳ ಬಲಹೀನರಾಗಿದ್ದರು. ಆದರೂ ಈ ದಾರುಣ ದೃಶ್ಯವನ್ನು ಕಣ್ಣಾರೆ ಕಾಣಲು ಆಗಮಿಸಿದರು. ತನ್ನ ಕರುಳ ಕುಡಿಯ ಮೃತದೇಹವನ್ನು ಕಂಡು ರೋದಿಸುವ ಬದಲಿಗೆ ಹಜ್ಜಾಜ್‌ರನ್ನು ಉದ್ದೇಶಿಸಿ ಹೇಳಿದರು, "ಈ ಸವಾರನಿಗೆ ಇನ್ನೂ ಕುದುರೆಯಿಂದ ಇಳಿಯುವ ಸಮಯ ಬಂದಿಲ್ಲ!"

9. ಸಂಕಷ್ಟದಲ್ಲಿ ಪರಸ್ಪರ ನೆರವಾಗಿರಿ. ಮಿತ್ರರ ದುಃಖ ದುಮ್ಮಾನಗಳಲ್ಲಿ ಪಾಲ್ಗೊಳ್ಳಿರಿ. ಅವರ ದುಃಖ ನೀಗಿಸಲು ಸಾಧ್ಯವಿದ್ದಷ್ಟು ಪ್ರಯತ್ನಿಸಿ. ಪ್ರವಾದಿ(ಸ) ಹೇಳಿದರು: "ಎಲ್ಲಾ ಮುಸ್ಲಿಮರೂ ಸೇರಿ ಒಬ್ಬ ವ್ಯಕ್ತಿಯ ಶರೀರವಿದ್ದಂತೆ. ಆತನ ಕಣ್ಣು ನೋವಾದರೆ ಇಡೀ ಶರೀರ ನೋವು ಅನುಭವಿಸುತ್ತದೆ. ತಲೆನೋವಾದರೆ ಇಡೀ ಶರೀರ ಕಷ್ಟಪಡುತ್ತದೆ". (ಮುಸ್ಲಿಮ್)

ಹ. ಜಅ್‌ಫರ್ ತಯ್ಯಾರ್(ರ) ಹುತಾತ್ಮರಾದಾಗ ಪ್ರವಾದಿ(ಸ) ಹೇಳಿದರು: "ಜಅ್‌ಫರ್‌ರ ಮನೆಗೆ ಊಟ ಕಳುಹಿಸಿ. ಅವರು ಇಂದು ದುಃಖದಿಂದಾಗಿ ಊಟ ತಯಾರಿಸಲಾರರು".

(ಅಬೂದಾವೂದ್)

ಹ. ಅಬೂಹುರೈರಾ(ರ) ಹೇಳುತ್ತಾರೆ: ಪ್ರವಾದಿ(ಸ) ಹೇಳಿದರು, "ತನ್ನ ಮಗುವನ್ನು ಕಳಕೊಂಡ ಓರ್ವ ಮಹಿಳೆಗೆ ಸಂತಾಪ ಸೂಚಿಸುವವನನ್ನು ಸ್ವರ್ಗದಲ್ಲಿ ಪ್ರವೇಶಗೊಳಿಸ ಲಾಗುವುದು ಮತ್ತು ಅವನಿಗೆ ಸ್ವರ್ಗದ ಚದ್ದರವನ್ನು ತೊಡಿಸಲಾಗುವುದು". (ತಿರ್ಮಿದಿ)

ಪ್ರವಾದಿ(ಸ) ಹೇಳುತ್ತಾರೆ, "ಸಂಕಷ್ಟಕ್ಕೊಳಗಾದವನಿಗೆ ಸಂತಾಪ ಸೂಚಿಸುವ ವ್ಯಕ್ತಿಗೆ ಸಂಕಷ್ಟಕ್ಕೊಳಗಾದವನಷ್ಟೇ ಪುಣ್ಯ ಲಭಿಸುವುದು". (ತಿರ್ಮಿದಿ)

ಪ್ರವಾದಿ(ಸ) ಶವ ಸಂಸ್ಕಾರದಲ್ಲಿ ಪಾಲ್ಗೊಳ್ಳುವಂತೆಯೂ ಆದೇಶಿಸಿದ್ದಾರೆ. ಅಬೂ ಹುರೈರಾ(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು: "ಯಾರು ಶವಸಂಸ್ಕಾರದಲ್ಲಿ ಭಾಗವಹಿಸಿ ಜನಾಝಾ ನಮಾಝ್ ನಿರ್ವಹಿಸುತ್ತಾನೋ ಅವನಿಗೆ ಒಂದು ಕೀರಾತ್‌ನಷ್ಟು ಪುಣ್ಯ ದೊರೆ ಯುವುದು. ಯಾರು ಜನಾಝಾ ನಮಾಝ್‌ನ ಬಳಿಕ ದಫನ ಕಾರ್ಯದಲ್ಲೂ ಪಾಲ್ಗೊಳ್ಳುವನೋ ಅವನಿಗೆ ಎರಡು ಕೀರಾತ್‌ನಷ್ಟು ಪುಣ್ಯ ಲಭಿಸುವುದು. ಆಗ ಒಬ್ಬರು ಕೇಳಿದರು, 'ಎರಡು ಕೀರಾತ್ ಎಷ್ಟು ದೊಡ್ಡದಿರಬಹುದು?' ಪ್ರವಾದಿ(ಸ) ಹೇಳಿದರು, ಎರಡು ಪರ್ವತಗಳಷ್ಟು".

(ಬುಖಾರಿ)

10. ಸಂಕಷ್ಟಗಳು ಎರಗಿದಾಗ ಮತ್ತು ದುಃಖ ಆವರಿಸಿದಾಗ ಅಲ್ಲಾಹನತ್ತ ಮರಳಿರಿ. ನಮಾಝ್ ನಿರ್ವಹಿಸಿ ಅತ್ಯಂತ ದೀನಭಾವದೊಂದಿಗೆ ಪ್ರಾರ್ಥಿಸಿರಿ. ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಇದೆ:

يَاَيُّهَا الَّذِيْنَ اٰمَنُوا اسْتَعِيْنُوْا بِالصَّبْرِ وَ الصَّلٰوةِ ؕ

"ಸತ್ಯವಿಶ್ವಾಸಿಗಳೇ! (ಸಂಕಷ್ಟಗಳ ವೇಳೆ) ಸಹನೆ ಮತ್ತು ನಮಾಝ್‌ನ ಮೂಲಕ ಸಹಾಯ ಯಾಚಿಸಿರಿ". (ಅಲ್ ಬಕರಃ: 153)

ದುಃಖಿತರಾದಾಗ ಕಣ್ಣೀರಿಡುವುದು ಹಾಗೂ ಖೇದವಾಗುವುದು ಸಹಜ. ಆದರೆ ಅರ್ಭಟಿಸುತ್ತಾ ರೋದಿಸುವುದನ್ನು ತೊರೆಯಿರಿ. ಪ್ರವಾದಿ(ಸ) ಅಳುವಾಗ ಶಬ್ದವಾಗುತ್ತಿರಲಿಲ್ಲ. ನಿಟ್ಟುಸಿರು ಬಿಡುತ್ತಿದ್ದರು. ಕಣ್ಣೀರು ಹರಿಯುತ್ತಿತ್ತು. ಒಲೆಯ ಮೇಲಿಟ್ಟ ಮಡಕೆಯಿಂದ ಶಬ್ದ ಬರುವಂತೆ ಪ್ರವಾದಿವರ್ಯರ(ಸ) ಎದೆಯಿಂದ ಶಬ್ದ ಬರುತ್ತಿತ್ತು ಅಥವಾ ಕಡೆಯುವ ಕಲ್ಲಿನಂತೆ ಶಬ್ದವಾಗುತ್ತಿತ್ತು. ತನ್ನ ಅಳಲನ್ನು ಪ್ರವಾದಿ(ಸ) ಸ್ವತಃ ಈ ರೀತಿ ವಿವರಿಸಿರುವರು:

"ಕಣ್ಣುಗಳು ನೀರು ಸುರಿಸುತ್ತಿವೆ, ಹೃದಯ ದುಃಖತಪ್ತವಾಗಿರುತ್ತದೆ, ನಾಲಗೆಯಿಂದ ಮಾತ್ರ ದೇವಸಂಪ್ರೀತಿಗೆ ನಿಲುಕುವ ಮಾತೇ ಹೊರಡುತ್ತದೆ."

ಹ. ಅಬೂ ಹುರೈರಾ(ರ) ಹೇಳುತ್ತಾರೆ, ಪ್ರವಾದಿ(ಸ) ಚಿಂತೆಗೀಡಾದಾಗ ಆಕಾಶದತ್ತ ತಲೆ ಎತ್ತಿ ಹೇಳುತ್ತಿದ್ದರು, سُبْحَانَ اللّٰهِ الْعَظِيْمِ **"ಸುಬ್‌ಹಾನಲ್ಲಾಹಿಲ್ ಅಝೀಮ್"** (ಮಹೋನ್ನತನಾದ ಅಲ್ಲಾಹನು ಪರಮ ಪಾವನನು). ದುಃಖವು ಉಮ್ಮಳಿಸಿ ಬಂದಾಗ ಪ್ರಾರ್ಥನೆಯಲ್ಲಿ ಹೆಚ್ಚು ತಲ್ಲೀನರಾಗಿ ಈ ರೀತಿ ಹೇಳುತ್ತಿದ್ದರು. يَا حَيُّ يَا قَيُّوْمُ **"ಯಾ ಹಯ್ಯು ಯಾ ಕಯ್ಯೂಮ್"** (ಓ ಚಿರಂತನನೇ! ಓ ಸ್ವಯಂ ಸ್ಥಿರನೇ!).

11. ದುಃಖ ದುಮ್ಮಾನಗಳ ಆಧಿಕ್ಯದ ವೇಳೆ, ಸಂಕಷ್ಟಗಳು ಎರಗಿದಾಗ, ವ್ಯಾಕುಲ ಚಿತ್ತರಾದಾಗ ಈ ಪ್ರಾರ್ಥನೆಯನ್ನು ಹೇಳಿರಿ. ಹ. ಸಅದ್ ಬಿನ್ ಅಬೀ ವಕ್ಕಾಸ್(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು: "ದುನ್ನೂನ್ ಅರ್ಥಾತ್ ಹ. ಯೂನುಸ್‌ರು(ಅ) ಮೀನಿನ ಉದರದಲ್ಲಿ ಈ ರೀತಿ ಪ್ರಾರ್ಥಿಸಿದ್ದರು:

لَآ إِلٰهَ إِلَّآ أَنْتَ سُبْحٰنَكَ إِنِّيْ كُنْتُ مِنَ الظّٰلِمِيْنَ ﴿٨٧﴾

"ಲಾ ಇಲಾಹ ಇಲ್ಲಾ ಅಂತ ಸುಬ್‌ಹಾನಕ ಇನ್ನೀ ಕುಂತು ಮಿನಝ್ಝಾಲಿಮೀನ್".

(ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ. ನೀನು ಪರಮ ಪಾವನನು, ನಾನೇ ನನ್ನ ಮೇಲೆ ಅಕ್ರಮವೆಸಗಿರುತ್ತೇನೆ.)

ಆದ್ದರಿಂದ ಯಾವ ಮುಸ್ಲಿಮನು ತನ್ನ ಕಷ್ಟ ಕೋಟಲೆಗಳ ವೇಳೆ ಈ ರೀತಿ ಪ್ರಾರ್ಥಿಸುವನೋ, ದೇವನು ಅದನ್ನು ಖಂಡಿತ ಸ್ವೀಕರಿಸುವನು. ಹ. ಇಬ್ನು ಅಬ್ಬಾಸ್(ರ) ಹೇಳುತ್ತಾರೆ, ಪ್ರವಾದಿ(ಸ) ಯಾವುದಾದರೂ ದುಃಖಕ್ಕೆ ಈಡಾದಾಗ ಈ ರೀತಿ ಪ್ರಾರ್ಥಿಸುತ್ತಿದ್ದರು.

لَآ إِلٰهَ إِلَّا اللّٰهُ رَبُّ الْعَرْشِ الْعَظِيْمِ، لَآ إِلٰهَ إِلَّا اللّٰهُ رَبُّ السَّمٰوَاتِ وَرَبُّ الْأَرْضِ رَبُّ الْعَرْشِ الْكَرِيْمِ (بخاری، مسلم)

"ಲಾ ಇಲಾಹ ಇಲ್ಲಲ್ಲಾಹು ರಬ್ಬುಲ್ ಅರ್ಶಿಲ್ ಅಝೀಮ್ ಲಾ ಇಲಾಹ ಇಲ್ಲಲ್ಲಾಹು ರಬ್ಬುಸ್ಸಮಾವಾತಿ ವರಬ್ಬುಲ್ ಅರ್ದಿ ರಬ್ಬುಲ್ ಅರ್ಶಿಲ್ ಕರೀಮ್".

(ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲ. ಅವನು ಮಹೋನ್ನತ ವಿಶ್ವ ಸಿಂಹಾಸನದ ಒಡೆಯನು. ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲ. ಅವನು ಆಕಾಶ ಭೂಮಿಗಳ ಒಡೆಯನು. ಸನ್ಮಾನ್ಯ ವಿಶ್ವಸಿಂಹಾಸನದ ಒಡೆಯನು.) (ಬುಖಾರಿ, ಮುಸ್ಲಿಮ್)

ಹ. ಅಬೂಮೂಸಾ ಅಶ್‌ಅರೀ(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು:

لَا حَوْلَ وَلَا قُوَّةَ اِلَّا بِاللّٰهِ وَلَا مَلْجَأَ مِنَ اللّٰهِ اِلَّآ اِلَيْهِ

"ಲಾ ಹೌಲ ವಲಾ ಕುವ್ವತ ಇಲ್ಲಾ ಬಿಲ್ಲಾಹಿ ವಲಾ ಮಲ್‌ಜಅ ಮಿನಲ್ಲಾಹಿ ಇಲ್ಲಾ ಇಲೈಹಿ".

(ಪಾಪ ಕೃತ್ಯಗಳಿಂದ ದೂರವಿರುವ ಶಕ್ತಿ ಮತ್ತು ಸತ್ಕರ್ಮಗಳ ಸೌಭಾಗ್ಯ ದಯಪಾಲಿಸುವ ಸಾಮರ್ಥ್ಯವನ್ನು ಅಲ್ಲಾಹನು ಮಾತ್ರ ಕೊಡಬಲ್ಲನು. ಅವನ ಯಾತನೆಯಿಂದ ರಕ್ಷಿಸಬಲ್ಲ ಆಶ್ರಯ ಅವನ ಅಸ್ತಿತ್ವ ಮಾತ್ರ [ಅರ್ಥಾತ್ ಅವನ ಅಭಯಾಶ್ರಯ ಪಡಕೊಂಡವನು ಮಾತ್ರ ಅವನ ಶಿಕ್ಷೆಯಿಂದ ರಕ್ಷಣೆ ಪಡೆಯಬಲ್ಲನು.])

ಈ ವಾಕ್ಯವು 99 ರೋಗಗಳ ಔಷಧವಾಗಿದೆ. ಅತ್ಯಂತ ಕಡಿಮೆಯೆಂದರೆ ಅದನ್ನು ಪಠಿಸುವವನು ದುಃಖದುಮ್ಮಾನಗಳಿಂದ ಸುರಕ್ಷಿತವಿರುತ್ತಾನೆ.

ಹ. ಅಬ್ದುಲ್ಲಾ ಬಿನ್ ಮಸ್‌ಊದ್(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು: "ಯಾವನೇ ದಾಸನಿಗೆ ದುಃಖ ಅಥವಾ ತೊಂದರೆಯಾದಾಗ ಅವನು ಈ ರೀತಿ ಪ್ರಾರ್ಥಿಸಿದರೆ ದೇವನು ಅವನ ದುಃಖದುಮ್ಮಾನವನ್ನು ಸುಖಸಂತೋಷವಾಗಿ ಪರಿವರ್ತಿಸುವನು".

اَللّٰهُمَّ اِنِّىْ عَبْدُكَ وَابْنُ عَبْدِكَ وَابْنُ اَمَتِكَ نَاصِيَتِىْ بِيَدِكَ، مَاضٍ فِىَّ حُكْمُكَ، عَدْلٌ فِىَّ قَضَآئُكَ اَسْئَلُكَ بِكُلِّ اِسْمٍ هُوَ لَكَ سَمَّيْتَ بِهٖ نَفْسَكَ اَوْ اَنْزَلْتَهُ فِىْ كِتَابِكَ اَوْ عَلَّمْتَهُ اَحَدًا مِّنْ خَلْقِكَ اَوِ اسْتَأْثَرْتَ بِهٖ فِىْ عِلْمِ الْغَيْبِ عِنْدَكَ اَنْ تَجْعَلَ الْقُرْاٰنَ الْعَظِيْمَ رَبِيْعَ قَلْبِىْ، وَنُوْرَ بَصَرِىْ وَجَلَاءَ حُزْنِىْ وَذَهَابَ هَمِّىْ

(احمد، ابن حبان، حصن حصين)

"ಅಲ್ಲಾಹುಮ್ಮ ಇನ್ನೀ ಅಬ್ದುಕ ವಬ್ನು ಅಬ್ದಿಕ ವಬ್ನು ಅಮತಿಕ ನಾಸಿಯತೀ ಬಿಯದಿಕ

ಮಾದಿನ್ ಫಿಯ್ಯ ಹುಕ್ಮುಕ ಅದ್‌ಲುನ್ ಫಿಯ್ಯ ಕದಾಉಕ ಅಸ್‌ಅಲುಕ ಬಿಕುಲ್ಲಿಸ್ಮಿನ್ ಹುವ ಲಕ ಸಮ್ಮೈತ ಬಿಹೀ ನಫ್‌ಸಕ ಔ ಅನ್‌ಝುಲ್‌ತಹೂ ಫೀ ಕಿತಾಬಿಕ ಔ ಅಲ್ಲಮ್ತುಹೂ ಅಹದನ್ ಮ್ಮಿನ್ ಖಲ್‌ಕಿಕ ಅವಿಸ್ತಅ್‌ಸರ್ತ ಬಿಹೀ ಫೀ ಇಲ್ಮಿಲ್ ಗೈಬಿ ಇಂದಕ ಅನ್ ತಜ್‌ಅಲಲ್ ಕುರ್‌ಆನಲ್ ಅಝೀಮ ರಬೀಅ ಕಲ್‌ಬೀ ವನೂರ ಬಸರೀ ವಜಲಾಅ ಹುಝ್ನೀ ವದಹಾಬ ಹಮ್ಮೀ."

(ಓ ಅಲ್ಲಾಹ್! ನಾನು ನಿನ್ನ ದಾಸ, ನನ್ನ ತಂದೆಯೂ ನಿನ್ನ ದಾಸ, ನನ್ನ ತಾಯಿಯೂ ನಿನ್ನ ದಾಸಿ, ನನ್ನ ಜುಟ್ಟು ನಿನ್ನ ವಶದಲ್ಲಿದೆ. (ಅರ್ಥಾತ್ ನಾನು ಅಡಿಯಿಂದ ಮುಡಿಯ ತನಕ ನಿನ್ನ ವಶವೇ ಇರುವೆನು) ನನ್ನ ಬಗ್ಗೆ ನಿನ್ನ ಆಜ್ಞೆಯೇ ಜಾರಿಯಲ್ಲಿದೆ. ನನ್ನ ಬಗ್ಗೆ ನಿನ್ನ ಪ್ರತಿಯೊಂದು ಆಜ್ಞೆ ಸಾದ್ಯಂತ ನ್ಯಾಯಪೂರ್ಣವಾಗಿದೆ. ನೀನು ನಿನಗೆ ಇಟ್ಟುಕೊಂಡ, ನಿನ್ನ ಗ್ರಂಥದಲ್ಲಿ ಅವತರಿಸಿದ, ನಿನ್ನ ಸೃಷ್ಟಿಗಳ ಪೈಕಿ ಯಾರಿಗಾದರೂ ಕಲಿಸಿದ ಅಥವಾ ನಿನ್ನ ಬಳಿ ರಹಸ್ಯವಾಗಿಯೇ ಇರಿಸಿದ ನಿನ್ನ ನಾಮದೊಂದಿಗೆ ನಿನ್ನನ್ನು ಪ್ರಾರ್ಥಿಸುತ್ತೇನೆ. ಮಹೋನ್ನತ ಕುರ್‌ಆನನ್ನು ನನ್ನ ಹೃದಯದ ಶಾಂತಿಯಾಗಿಯೂ ನನ್ನ ಕಣ್ಣಿನ ಕಾಂತಿಯಾಗಿಯೂ ನನ್ನ ದುಃಖಗಳ ಪರಿಹಾರವಾಗಿಯೂ ನನ್ನ ಕಳವಳದ ಶಮನವಾಗಿಯೂ ಮಾಡಿಕೊಡೆಂದು ನಿನ್ನಲ್ಲಿ ಬೇಡಿಕೊಳ್ಳುತ್ತೇನೆ.) (ಅಹ್ಮದ್, ಇಬ್ನು ಹಿಬ್ಬಾನ್ ಹಿಸ್ನ್ ಹಸ್ವೀನ್‌ರಿಂದ ಉಲ್ಲೇಖಿತ)

12. ದುರದೃಷ್ಟವಶಾತ್ ಎಂದಾದರೂ ಜೀವನವೇ ದುರ್ಭರವಾಗುವಷ್ಟು ಸಂಕಷ್ಟಗಳು ಆವರಿಸಿ ಬಿಟ್ಟಾಗ ಹಾಗೂ ಜೀವನವೇ ಒಂದು ಯಾತನೆಯಾಗಿ ಮಾರ್ಪಡುವಷ್ಟು ದುಃಖ ದುಮ್ಮಾನಗಳು ಭೀಕರ ರೂಪ ತಾಳಿದಾಗ ಮೃತ್ಯುವನ್ನು ಬಯಸಲೇಬೇಡಿರಿ. ಆತ್ಮಹತ್ಯೆಯಂತಹ ಅತ್ಯಂತ ನೀಚ ಕಾರ್ಯದ ಬಗ್ಗೆ ಎಂದೂ ಯೋಚಿಸದಿರಿ. ಇದು ಹೇಡಿತನ, ಅತ್ಯಂತ ನೀಚಮಟ್ಟದ ಆತ್ಮವಂಚನೆ ಮತ್ತು ಘೋರ ಪಾಪಕಾರ್ಯವಾಗಿದೆ. ಇಂತಹ ವ್ಯಾಕುಲತೆ ಮತ್ತು ಅಶಾಂತಿಯ ವೇಳೆ ದೇವನಲ್ಲಿ ಈ ರೀತಿ ಪ್ರಾರ್ಥಿಸಿರಿ:

اَللّٰهُمَّ اَحْيِنِىْ مَا كَانَتِ الْحَيٰوةُ خَيْرًا لِّىْ وَتَوَفَّنِىْ اِذَا كَانَتِ الْوَفَاةُ خَيْرًا لِّىْ (بخاری، مسلم)

"ಅಲ್ಲಾಹುಮ್ಮ ಅಹ್ಯಿನೀ ಮಾ ಕಾನತಿಲ್ ಹಯಾತು ಖೈರಲ್ಲೀ ವತವಫ್ಫನೀ ಇದಾ ಕಾನತಿಲ್ ವಫಾತು ಖೈರಲ್ಲೀ".

(ಓ ಅಲ್ಲಾಹ್ ನಾನು ಬದುಕಿರುವುದು ನನ್ನ ಮಟ್ಟಿಗೆ ಉತ್ತಮವಾಗಿರುವ ತನಕ ನನ್ನನ್ನು ಬದುಕಿಸು. ನಾನು ಸಾಯುವುದು ನನ್ನ ಮಟ್ಟಿಗೆ ಉತ್ತಮವಾದಾಗ ನನ್ನನ್ನು ಸಾಯಿಸು.) (ಬುಖಾರಿ, ಮುಸ್ಲಿಮ್)

13. ಯಾರಾದರೂ ಸಂಕಷ್ಟದಲ್ಲಿ ಸಿಲುಕಿರುವುದನ್ನು ಕಂಡಾಗ ಈ ರೀತಿ ಪ್ರಾರ್ಥಿಸಿರಿ.

ಪ್ರವಾದಿ(ಸ) ಈ ರೀತಿ ಹೇಳಿರುವುದಾಗಿ ಹ. ಅಬೂ ಹುರೈರಾ(ರ) ವರದಿ ಮಾಡಿದ್ದಾರೆ: "ಯಾರನ್ನಾದರೂ ಸಂಕಷ್ಟದಲ್ಲಿ ಕಂಡಾಗ ಈ ರೀತಿ ಪ್ರಾರ್ಥಿಸುವ ವ್ಯಕ್ತಿ ಆ ಸಂಕಷ್ಟದಿಂದ ಸುರಕ್ಷಿತವಾಗಿರುವನು".

اَلْحَمْدُ لِلّٰهِ الَّذِىْ عَافَانِىْ مِمَّا ابْتَلَاكَ اللّٰهُ بِهٖ وَفَضَّلَنِىْ عَلٰى كَثِيْرٍ مِّمَّنْ خَلَقَ تَفْضِيْلًا (ترمذی)

"ಅಲ್‌ಹಮ್ದು ಲಿಲ್ಲಾಹಿಲ್ಲದೀ ಆಫಾನೀ ಮಿಮ್ಮಬ್‌ತಲಾಕಲ್ಲಾಹು ಬಿಹೀ ವ ಫದ್ದಲನೀ ಅಲಾ ಕಸೀರಿಮ್ಮಿಮ್ಮನ್ ಖಲಕ ತಫ್‌ದೀಲಾ".

(ನೀವು ಸಿಲುಕಿರುವ ಈ ಸಂಕಷ್ಟದಿಂದ ನನ್ನನ್ನು ಸಂರಕ್ಷಿಸಿದ ಹಾಗೂ ತನ್ನ ಅನೇಕ ಸೃಷ್ಟಿಗಳಿಗಿಂತ ನನಗೆ ಶ್ರೇಷ್ಠತೆ ನೀಡಿದ ಅಲ್ಲಾಹನಿಗೆ ಸರ್ವಸ್ತುತಿ.) (ತಿರ್ಮಿದಿ)

❖ ❖ ❖ ❖

# ಭಯ ಮತ್ತು ಗಾಬರಿ

1. ಧರ್ಮ ವಿರೋಧಿಗಳು ಮಾಡುವ ಕೊಲೆ ಸುಲಿಗೆಗಳಿರಲಿ, ಅಕ್ರಮ-ಅತ್ಯಾಚಾರಗಳಿರಲಿ, ಕ್ಷೋಭೆ-ಗೊಂದಲಗಳಿರಲಿ, ಪ್ರಕೃತಿ ವಿಕೋಪದ ನಾಶನಷ್ಟಗಳ ಭಯವಿರಲಿ ಎಲ್ಲ ಪರಿಸ್ಥಿತಿಗಳಲ್ಲೂ ಸತ್ಯವಿಶ್ವಾಸ ಸಹಜವಾದ ಮುನ್ನೋಟದೊಂದಿಗೆ ಅದರ ನೈಜ ಕಾರಣಗಳನ್ನು ಶೋಧಿಸಿರಿ. ಕೇವಲ ಬಾಹ್ಯರೂಪದ ಪರಿಹಾರೋಪಾಯಗಳ ಮೂಲಕ ಸಮಯ ಪೋಲು ಮಾಡುವ ಬದಲು ಕುರ್‌ಆನ್ ಮತ್ತು ಪ್ರವಾದಿಚರ್ಯೆಯ ಆಧಾರದಲ್ಲಿರುವ ನೈಜ ಪರಿಹಾರೋಪಾಯಗಳಿಗೆ ನಿಮ್ಮ ಪೂರ್ಣ ಶಕ್ತಿ ಸಾಮರ್ಥ್ಯವನ್ನು ಕೇಂದ್ರೀಕರಿಸಿರಿ. ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಇದೆ:

وَمَآ أَصَابَكُم مِّن مُّصِيبَةٍ فَبِمَا كَسَبَتْ أَيْدِيكُمْ وَيَعْفُوا عَن كَثِيرٍ ﴿٣٠﴾

"ನಿಮಗೆ ಒದಗಿರುವ ಯಾವುದೇ ಸಂಕಷ್ಟವು ನಿಮ್ಮ ಕೈಗಳ ಗಳಿಕೆಯಿಂದಲೇ ಆಗಿದೆ. ಅನೇಕ ಪಾಪಗಳನ್ನು ಅವನು ಹಾಗೆಯೇ ಕ್ಷಮಿಸಿ ಬಿಡುತ್ತಾನೆ". (ಅಶ್ಶೂರಾ: 30)

وَتُوبُوٓا إِلَى اللَّهِ جَمِيعًا أَيُّهَ الْمُؤْمِنُونَ لَعَلَّكُمْ تُفْلِحُونَ ﴿٣١﴾

"ಓ ಸತ್ಯವಿಶ್ವಾಸಿಗಳೇ! ನೀವೆಲ್ಲರೂ ಸೇರಿ ಅಲ್ಲಾಹನೆಡೆಗೆ ಪಶ್ಚಾತ್ತಾಪ ಪಟ್ಟು ಮರಳಿರಿ. ನೀವು ಯಶಸ್ವಿಯಾಗಬಹುದು". (ಅನ್ನೂರ್: 31)

ತೌಬಾ ಎಂದರೆ ಮರಳುವಿಕೆ. ಪಾಪಗಳ ಭಯಾನಕ ಕೂಪದಲ್ಲಿ ಬಿದ್ದಿರುವ ಒಂದು ಸಮುದಾಯವು ತನ್ನ ಪಾಪಗಳ ಬಗ್ಗೆ ಮರುಗಿ ದಾಸ್ಯಭಾವದೊಂದಿಗೆ ದೇವನೆಡೆಗೆ ಮರಳಿದಾಗ ಹಾಗೂ ತನ್ನ ಪಶ್ಚಾತ್ತಾಪದ ಕಣ್ಣೀರಿನಿಂದ ಪಾಪದ ಕೊಳೆಯನ್ನು ತೊಳೆದು ದೇವನ ಮುಂದೆ ತನ್ನ ನಿಷ್ಠೆಯ ಕರಾರನ್ನು ನವೀಕರಿಸಿದಾಗ ಆ ಪರಿಸ್ಥಿತಿಯನ್ನು ಪವಿತ್ರ ಕುರ್‌ಆನ್ 'ತೌಬಾ' ಎಂದು ಪರಿಗಣಿಸುತ್ತದೆ. ಈ ರೀತಿಯ ಪಶ್ಚಾತ್ತಾಪವೇ ಎಲ್ಲ ತರದ ಕ್ಷೋಭೆ, ಗೊಂದಲಗಳ ಹಾಗೂ ಭಯಾಶಂಕೆಗಳ ನೈಜ ಪರಿಹಾರವಾಗಿದೆ.

2. ಧರ್ಮ ವಿರೋಧಿಗಳ ಅಕ್ರಮ, ದೌರ್ಜನ್ಯದಿಂದ ಭಯಭೀತರಾಗಿ ಅಧೀರರಾಗಬೇಡಿ. ದಯೆ ದಾಕ್ಷಿಣ್ಯವಿಲ್ಲದವರಲ್ಲಿ ಕರುಣೆಯ ಭಿಕ್ಷೆ ಬೇಡುವ ಮೂಲಕ ನಿಮ್ಮ ಸಮುದಾಯಕ್ಕೆ ಅಪಚಾರ ವೆಸಗಬೇಡಿರಿ. ನಿಮ್ಮಲ್ಲಿ ಹೇಡಿತನ ಉಂಟಾಗಲು ಮತ್ತು ಧರ್ಮ ವಿರೋಧಿಗಳಿಗೆ ನಿಮ್ಮ ಮೇಲೆ ಕೈ ಮಾಡುವ ಧೈರ್ಯ ಬಂದುದಕ್ಕೆ ಕಾರಣವಾದ ದೌರ್ಬಲ್ಯವನ್ನು ಹೋಗಲಾಡಿಸಲಿಕ್ಕಾಗಿ ಟೊಂಕ ಕಟ್ಟಿರಿ. ಪ್ರವಾದಿ(ಸ) ಈ ಹೇಡಿತನಕ್ಕೆ ಎರಡು ಕಾರಣಗಳನ್ನು ವಿವರಿಸಿರುವರು.

i) ಲೋಕ ಮೋಹ. ii) ಮರಣದ ಭಯ.

ಈ ಹಿಡುಗುಗಳಿಂದ ನಿಮ್ಮ ಹೃದಯವನ್ನೂ ಸಮುದಾಯದ ಹೃದಯವನ್ನೂ ಮುಕ್ತಗೊಳಿಸಲಿಕ್ಕಾಗಿ ಪಣತೊಡಿರಿ. ಪ್ರವಾದಿ(ಸ) ಹೇಳುತ್ತಾರೆ:

"ನನ್ನ ಸಮುದಾಯಕ್ಕೆ ಒಂದು ಕಾಲ ಬರಲಿಕ್ಕಿದೆ. ಆಗ ಹಸಿದವನು ಊಟದ ಬಟ್ಟಲಿಗೆ ಮುಗಿ ಬೀಳುವಂತೆ ಇತರ ಸಮುದಾಯಗಳು ನಿಮ್ಮ ಮೇಲೆ ಮುಗಿ ಬೀಳುವುವು." ಆಗ ಒಬ್ಬರು ಕೇಳಿದರು, "ಓ ಪ್ರವಾದಿವರ್ಯರೇ(ಸ), ಇತರ ಸಮುದಾಯಗಳು ಒಂದಾಗಿ ನಮ್ಮನ್ನು ನುಂಗಿ ಬಿಡಲು, ನಮ್ಮ ಮೇಲೆ ಮುಗಿ ಬೀಳಲು ನಾವೇನು ಆಗ ಸಂಖ್ಯೆಯಲ್ಲಿ ಕಡಿಮೆ ಇರುವೆವೇ?" ಪ್ರವಾದಿ(ಸ) ಹೇಳಿದರು, "ಇಲ್ಲ, ನಿಮ್ಮ ಸಂಖ್ಯೆ ಆಗ ಕಡಿಮೆ ಇರಲಾರದು. ಆದರೆ ನೀವು ನೆರೆಯಲ್ಲಿ ಕೊಚ್ಚಿ ಹೋಗುವ ಕಸಕಡ್ಡಿಗಳಂತೆ ಹಗುರವಾಗಿ ಬಿಡುವಿರಿ ಮತ್ತು ನಿಮ್ಮ ಘನತೆ ಹೊರಟು ಹೋಗುವುದು. ನಿಮ್ಮ ಹೃದಯಗಳಲ್ಲಿ ಹೇಡಿತನ ಮತ್ತು ಅಧೈರ್ಯ ಹುಟ್ಟಿಕೊಳ್ಳುವುದು." ಆಗ ಒಬ್ಬರು ಕೇಳಿದರು, "ಈ ಹೇಡಿತನ ಏಕೆ ಹುಟ್ಟುವುದು?" ಪ್ರವಾದಿ(ಸ) ಹೇಳಿದರು, "ಏಕೆಂದರೆ ನೀವು ಲೋಕವನ್ನು ಮೋಹಿಸಲಾರಂಭಿಸುವಿರಿ. ಮರಣದಿಂದ ಓಡಿಹೋಗಲು ಮತ್ತು ಅದನ್ನು ದ್ವೇಷಿಸಲು ತೊಡಗುವಿರಿ". (ಅಬೂದಾವೂದ್)

3. ದೇಹೇಚ್ಛೆಗಳ ದಾಸ್ಯ, ವಿಲಾಸ ಪ್ರಿಯತೆ ಹಾಗೂ ಮಹಿಳೆಯ ನಾಯಕತ್ವದಿಂದ ನಿಮ್ಮ ಸಮಾಜವನ್ನು ಮುಕ್ತಗೊಳಿಸಿರಿ. ನಿಮ್ಮ ಸಂಘಟನೆಯನ್ನು ಅತ್ಯಂತ ಬಲಾಢ್ಯವಾಗಿ ಪರಿವರ್ತಿಸಿ, ಸಂಘಟಿತ ಶಕ್ತಿಗಳ ಮೂಲಕ ಅಕ್ರಮ, ಅತ್ಯಾಚಾರಗಳ ನಿರ್ಮೂಲನಕ್ಕಾಗಿ ಹಾಗೂ ಸಮುದಾಯದಲ್ಲಿ ಪರಾಕ್ರಮ, ಚೈತನ್ಯ ಮತ್ತು ಸ್ಫೂರ್ತಿ ಮೂಡಿಸಲು ಪ್ರಯತ್ನಿಸಿ. ಪ್ರವಾದಿ(ಸ) ಹೇಳುತ್ತಾರೆ:

"ನಿಮ್ಮ ಆಡಳಿತಾಧಿಕಾರಿಗಳು ಉತ್ತಮ ವ್ಯಕ್ತಿಗಳಾಗಿರುವಾಗ, ನಿಮ್ಮ ಶ್ರೀಮಂತರು ದಾನಿಗಳೂ ಉದಾರಿಗಳೂ ಆಗಿರುವಾಗ ಹಾಗೂ ನಿಮ್ಮ ಸಾಮೂಹಿಕ ವ್ಯವಹಾರಗಳು ಪರಸ್ಪರ ಸಮಾಲೋಚನೆಯೊಂದಿಗೆ ನಡೆಯುತ್ತಿರುವಾಗ ನಿಮ್ಮ ಮಟ್ಟಿಗೆ ಖಂಡಿತ ಭೂಮಿಯ ಬೆನ್ನು (ಜೀವನ) ಅದರ ಹೊಟ್ಟೆಗಿಂತ (ಮರಣ) ಉತ್ತಮ. ಆದರೆ ನಿಮ್ಮ ಆಡಳಿತಾಧಿಕಾರಿಗಳು ದುರಾಚಾರಿಗಳಾದಾಗ, ನಿಮ್ಮ ಶ್ರೀಮಂತರು ಧನಪೂಜಕರೂ ಲೋಭಿಗಳೂ ಆದಾಗ ನಿಮ್ಮ ವ್ಯವಹಾರಗಳು ನಿಮ್ಮ ಮಹಿಳೆಯರ ಅಧೀನ ಬಂದಾಗ ನಿಮ್ಮ ಮಟ್ಟಿಗೆ ಭೂಮಿಯ ಹೊಟ್ಟೆ(ಮರಣ)ಯು ಅದರ ಬೆನ್ನಿ(ಜೀವನ)ಗಿಂತ ಎಷ್ಟೋ ಉತ್ತಮ". (ತಿರ್ಮಿದಿ)

4. ಎಂತಹ ಭೀಕರ ಪರಿಸ್ಥಿತಿಯಿರಲಿ, ಸತ್ಯದ ಪಕ್ಷ ವಹಿಸುವ ಬಗ್ಗೆ ಎಂದೂ ಸಂಕೋಚ ಮಾಡದಿರಿ. ಅಧರ್ಮ ಮತ್ತು ಅವಮಾನದ ಬದುಕಿಗಿಂತ ಸತ್ಯದ ಪಕ್ಷ ವಹಿಸಿ ಸಾಯುವುದು ಎಷ್ಟೋ ಮೇಲು. ಅತ್ಯಂತ ಕಠಿಣ ಪರೀಕ್ಷಾ ಘಟ್ಟದಲ್ಲಿಯೂ, ತೀವ್ರ ಭಯದ ವಾತಾವರಣದಲ್ಲಿಯೂ ಸತ್ಯವನ್ನೆಂದೂ ತೊರೆಯಬೇಡಿರಿ. ಯಾರಾದರೂ ಮರಣದ ಬಗ್ಗೆ ಬೆದರಿಕೆ ಹಾಕಿದರೆ ಅದಕ್ಕೆ ಪ್ರತಿಯಾಗಿ ಮಂದಹಾಸ ಬೀರಿರಿ. ಹುತಾತ್ಮತೆಯ ಸಂದರ್ಭ ಬಂದಾಗ ಆವೇಶದೊಂದಿಗೆ ಅದನ್ನು ಸ್ವಾಗತಿಸಿರಿ. ಪ್ರವಾದಿ(ಸ) ಹೇಳುತ್ತಾರೆ:

"ಇಸ್ಲಾಮಿನ ಚಕ್ರವು ತಿರುಗುತ್ತಿದೆ. ಕುರ್‌ಆನ್ ಯಾವ ದಿಕ್ಕಿಗಿದೆಯೋ ನೀವೂ ಅದೇ ದಿಕ್ಕಿಗೆ ತಿರುಗಿರಿ. ಎಚ್ಚರಿಕೆ! ಕುರ್‌ಆನ್ ಮತ್ತು ಆಧಿಪತ್ಯಗಳು ಸದ್ಯೋಭವಿಷ್ಯದಲ್ಲಿ ಪರಸ್ಪರ ಬೇರ್ಪಡಲಿವೆ. ಜಾಗ್ರತೆ! ನೀವು ಕುರ್‌ಆನನ್ನು ಎಂದೂ ತೊರೆಯಬೇಡಿರಿ. ನಿಮ್ಮ ಬಗ್ಗೆ (ಮನ ಬಂದಂತೆ) ತೀರ್ಮಾನ ಮಾಡುವ ಆಡಳಿತಗಾರರು ಬರಲಿರುವರು. ನೀವು ಅವರನ್ನು ಅನುಸರಿಸಿದರೆ ಅವರು ನಿಮ್ಮನ್ನು ಮಾರ್ಗಭ್ರಷ್ಟಗೊಳಿಸುವರು. ನೀವು ಅವರನ್ನು ಅನುಸರಿಸದೆ ಇದ್ದರೆ ಅವರು ನಿಮ್ಮನ್ನು ಕೊಲೆಗೈಯುವರು. "ಓ ಪ್ರವಾದಿವರ್ಯರೇ! ಆಗ ನಾವೇನು ಮಾಡಬೇಕು?" ಎಂದು ಸಹಾಬಿಗಳು(ರ) ಕೇಳಿದರು. ಪ್ರವಾದಿ(ಸ) ಹೇಳಿದರು, "ಆಗ ನೀವು ಈ ಸಾರ(ಅ) ಅನುಯಾಯಿಗಳು ಮಾಡಿದಂತೆಯೇ ಮಾಡಿರಿ. ಅವರು ಗರಗಸದಿಂದ ಸೀಳಲ್ಪಟ್ಟರು; ಗಲ್ಲಿಗೇರಿಸಲ್ಪಟ್ಟರು. ದೇವಾಜ್ಞೋಲ್ಲಂಘನೆಯಲ್ಲಿ ಜೀವಿಸುವುದಕ್ಕಿಂತ ದೇವಾಜ್ಞೆಗಳ ಅನು ಸರಣೆ ಮಾಡುತ್ತಾ ಸಾಯುವುದೇ ಎಷ್ಟೋ ಮೇಲು".

5. ಸಮಾಜದ ಮೇಲೆ ಭಯ ಭೀತಿಯ ಕಾರ್ಮೋಡಗಳು ಆವರಿಸಲು ಕಾರಣವಾಗುವ ಬಡತನ, ಬರ, ಕೊಲೆ, ರಕ್ತಪಾತ, ಸಾರ್ವತ್ರಿಕವಾಗುವ ಮತ್ತು ವೈರಿಗಳ ಆಕ್ರಮಣಗಳಿಗೆ ರಾಷ್ಟ್ರವು ಬಲಿಯಾಗಲು ಹೇತುವಾಗುವ ಸಾಮಾಜಿಕ ಪಿಡುಗುಗಳ ವಿರುದ್ಧ ನಿರಂತರ ಹೋರಾಡಿರಿ.

ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಹೇಳುತ್ತಾರೆ, "ಯಾವ ಸಮಾಜದಲ್ಲಿ ಅಪ್ರಾಮಾಣಿಕತೆ ಸಾರ್ವತ್ರಿಕವಾಗುವುದೋ ಅಲ್ಲಾಹನು ಆ ಸಮಾಜದ ಮನದಲ್ಲಿ ವೈರಿಯ ಭಯಭೀತಿಯನ್ನು ಇರಿಸುತ್ತಾನೆ. ವ್ಯಭಿಚಾರ ಯಾವ ಸಮುದಾಯದಲ್ಲಿ ವ್ಯಾಪಕವಾಗುವುದೋ ಆ ಸಮುದಾಯ ವಿನಾಶ ಕೂಪಕ್ಕೆ ಬೀಳುವುದು. ಯಾವ ಸಮುದಾಯದಲ್ಲಿ ತೂಕ ಅಳತೆಗಳಲ್ಲಿ ವಂಚನೆ ನಡೆಯುತ್ತದೋ ಅದು ಖಂಡಿತ ಹಸಿವು, ದಾರಿದ್ರ್ಯಗಳಿಗೆ ಗುರಿಯಾಗು ವುದು. ಅನ್ಯಾಯದ ತೀರ್ಮಾನಗಳು ಎಲ್ಲಿ ನಡೆಯುವುದೋ ಅಲ್ಲಿ ರಕ್ತಪಾತ ಸಾರ್ವತ್ರಿಕ ವಾಗುವುದು. ಯಾವ ಸಮುದಾಯ ವಚನಭಂಗ ಮಾಡುವುದೋ ಅದರ ಮೇಲೆ ಶತ್ರುವಿನ ಆಕ್ರಮಣ ಆಗಿಯೇ ತೀರುವುದು". (ಮಿಷ್ಕಾತ್)

6. ಶತ್ರುಗಳ ಕಡೆಯಿಂದ ಭಯಭೀತರಾಗಿರುವಾಗ ಈ ರೀತಿ ಪ್ರಾರ್ಥಿಸಿರಿ:

اَللّٰهُمَّ اِنَّا نَجْعَلُكَ فِىْ نُحُوْرِهِمْ وَنَعُوْذُ بِكَ مِنْ شُرُوْرِهِمْ

(ابوداود، نسائی، حصن حصین)

"ಅಲ್ಲಾಹುಮ್ಮ ಇನ್ನಾ ನಜ್‌ಅಲುಕ ಫೀ ನುಹೂರಿಹಿಮ್ ವನಊದುಬಿಕ ಮಿನ್ ಶುರೂರಿಹಿಮ್".

(ಓ ಅಲ್ಲಾಹ್! ನಾವು ಈ ಶತ್ರುಗಳ ಮುಂದೆ ನಿನ್ನನ್ನು ನಮ್ಮ ಗುರಾಣಿಯಾಗಿಸುತ್ತೇವೆ ಮತ್ತು ಅವರ ಕೇಡಿನಿಂದ ನಿನ್ನ ಅಭಯ ಯಾಚಿಸುತ್ತೇವೆ.)

(ಅಬೂದಾವೂದ್, ನಸಾಈಯಿಂದ ಹಿಸ್ನ್‌ಹಸೀನ್‌ನಲ್ಲಿ)

7. ನೀವು ಶತ್ರುಗಳಿಂದ ಸುತ್ತುವರಿಯಲ್ಪಟ್ಟಾಗ ಈ ರೀತಿ ಪ್ರಾರ್ಥಿಸಿರಿ:

اَللّٰهُمَّ اسْتُرْعَوْرَاتِنَا وَاٰمِنْ رَوْعٰتِنَا

"ಅಲ್ಲಾಹುಮ್ಮಸ್‌ತುರ್ ಔರಾತಿನಾ ವ ಆಮಿನ್ ರೌಆತಿನಾ".

(ಓ ಅಲ್ಲಾಹ್! ನಮ್ಮ ಮಾನ ಮರ್ಯಾದೆಗಳನ್ನು ರಕ್ಷಿಸು ಮತ್ತು ಭಯಭೀತಿಯಿಂದ ನಮಗೆ ಮುಕ್ತಿ ನೀಡು.) (ಅಹ್ಮದ್, ಹಿಸ್ನ್‌ಹಸೀನ್ ಉದ್ಧರಿತ)

8. ಚಂಡಮಾರುತ ಅಥವಾ ಕಾರ್ಮೋಡ ಏಳುವುದನ್ನು ಕಂಡಾಗ ಭಯಭೀತರಾಗಿರಿ. ಹ. ಆಯಿಶಾ(ರ) ಹೇಳುತ್ತಾರೆ: "ಪ್ರವಾದಿವರ್ಯರನ್ನು(ಸ) ಪೂರ್ಣ ಬಾಯಿ ತೆರೆಯುವಂತೆ ಗಹಗಹಿಸಿ ನಗುವುದಾಗಿ ಎಂದೂ ಕಂಡಿಲ್ಲ. ಅವರು ಕೇವಲ ಮಂದಹಾಸ ಬೀರುತ್ತಿದ್ದರು. ಚಂಡಮಾರುತ ಮತ್ತು ಕಾರ್ಮೋಡ ಎದ್ದಾಗ ಭಯಭೀತರಾಗಿ ಪ್ರಾರ್ಥನೆಯಲ್ಲಿ ನಿರತರಾಗಿರುತ್ತಿದ್ದರು. ಭಯದಿಂದಾಗಿ ಒಮ್ಮೆ ಏಳುತ್ತಿದ್ದರು, ಒಮ್ಮೆ ಕುಳಿತುಕೊಳ್ಳುತ್ತಿದ್ದರು. ಮಳೆ ಸುರಿಯಲಾರಂಭಿಸುವ ತನಕ ಇದೇ ಪರಿಸ್ಥಿತಿ ಇರುತ್ತಿತ್ತು". ನಾನು ಅವರೊಂದಿಗೆ, "ಜನರು ಮೋಡವನ್ನು ಕಂಡು ಮಳೆಯ ಆಶೆಯಿಂದ ಸಂತೋಷ ಪಡುವಾಗ ತಾವೇಕೆ ಭಯಚಕಿತರಾಗುತ್ತೀರಿ" ಎಂದು ಪ್ರಶ್ನಿಸಿದೆ. ಆಗ ಪ್ರವಾದಿ(ಸ) ಹೇಳಿದರು: "ಆದ್ ಜನಾಂಗಕ್ಕೆ ಇದೇ ಮೋಡದ ಮೂಲಕ ದೇವಯಾತನೆ ಎರಗಿರುವಾಗ ಅಂತಹ ಯಾತನೆ ಎರಗದು ಎಂದು ನಿಶ್ಚಿಂತನಾಗುವುದು ಹೇಗೆ? ಆದ್ ಜನಾಂಗದವರೂ ಆ ಮೋಡವನ್ನು ಕಂಡಾಗ ಇದು ನಮ್ಮ ಮೇಲೆ ಮಳೆಗರೆಯಲಿದೆ ಎಂದು ಹೇಳಿದ್ದರು" ಎನ್ನುತ್ತಾ ಈ ರೀತಿ ಪ್ರಾರ್ಥಿಸಿದರು:

اَللّٰهُمَّ اجْعَلْهَا رِيَاحًا وَلَا تَجْعَلْهَا رِيْحًا اَللّٰهُمَّ اجْعَلْهَا رَحْمَةً وَلَا تَجْعَلْهَا عَذَابًا (طبرانی)

"ಅಲ್ಲಾಹುಮ್ಮಜ್‌ಅಲ್‌ಹಾ ರಿಯಾಹನ್ ವಲಾ ತಜ್‌ಅಲ್‌ಹಾ ರೀಹನ್ ಅಲ್ಲಾಹುಮ್ಮಜ್‌ಅಲ್‌ಹಾ ರಹ್ಮತನ್ ವಲಾ ತಜ್‌ಅಲ್‌ಹಾ ಅದಾಬಾ".

(ಓ ಅಲ್ಲಾಹ್! ನೀನಿದನ್ನು ಒಳಿತಿನ ಗಾಳಿಯಾಗಿ ಮಾಡು. ಕೇಡಿನ ಗಾಳಿಯಾಗಿಸಬೇಡ. ಇದನ್ನು ಅನುಗ್ರಹಿಸು, ಯಾತನೆಯಾಗಿಸಬೇಡ.) (ತಬ್ರಾನಿ)

ಚಂಡಮಾರುತದೊಂದಿಗೆ ಗಾಢ ಅಂಧಕಾರವೂ ಇದ್ದರೆ, 'ಕುಲ್ ಅಊದುಬಿರಬ್ಬಿಲ್ ಫಲಕ್' ಮತ್ತು 'ಕುಲ್ ಅಊದುಬಿರಬ್ಬಿನ್ನಾಸ್' ಎಂಬ ಕುರ್‌ಆನ್ ಅಧ್ಯಾಯಗಳನ್ನು ಓದಿರಿ. (ಅಬೂದಾವೂದ್)

ಹ. ಆಯಿಶಾ(ರ) ಹೇಳುತ್ತಾರೆ, ಪ್ರವಾದಿ(ಸ) ಚಂಡಮಾರುತ ಏಳುವಾಗ ಈ ರೀತಿ ಪ್ರಾರ್ಥಿಸುತ್ತಿದ್ದರು:

اَللّٰهُمَّ اِنِّیْ اَسْئَلُكَ خَیْرَهَا وَخَیْرَ مَا فِیْهَا وَخَیْرَ مَا اُرْسِلَتْ بِهٖ وَاَعُوْذُ

بِكَ مِنْ شَرِّهَا وَشَرِّ مَا فِیْهَا وَشَرِّ مَا اُرْسِلَتْ بِهٖ (مسلم، ترمذی)

"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಖೈರಹಾ ವಖೈರ ಮಾಫೀಹಾ ವಖೈರ ಮಾ ಉರ್ಸಿಲತ್ ಬಿಹೀ, ವಅಊದುಬಿಕ ಮಿನ್ ಶರ್‍ರಿಹಾ ವಶರ್‍ರಿ ಮಾಫೀಹಾ ವಶರ್‍ರಿ ಮಾ ಉರ್ಸಿಲತ್ ಬಿಹೀ".

(ಓ ಅಲ್ಲಾಹ್! ನಾನು ನಿನ್ನಿಂದ ಈ ಮಾರುತದ, ಅದರಲ್ಲಿರುವುದರ ಹಾಗೂ ಅದು ಕಳುಹಿಸಲ್ಪಟ್ಟಿರುವ ಉದ್ದೇಶದ ಒಳಿತನ್ನು ಬಯಸುತ್ತೇನೆ. ಓ ಅಲ್ಲಾಹ್! ಈ ಮಾರುತದ, ಅದರಲ್ಲಿರುವುದರ ಹಾಗೂ ಅದು ಕಳುಹಿಸಲ್ಪಟ್ಟಿರುವ ಉದ್ದೇಶದ ಕೇಡಿನಿಂದ ನಾನು ನಿನ್ನ ಅಭಯ ಯಾಚಿಸುತ್ತೇನೆ.) (ಮುಸ್ಲಿಮ್, ತಿರ್ಮಿದಿ)

9. ಮಳೆಯ ಆಧಿಕ್ಯದಿಂದ ತೊಂದರೆಯಾಗುವ ಸಂಭವವಿದ್ದಾಗ ಈ ರೀತಿ ಪ್ರಾರ್ಥಿಸಿರಿ:

اَللّٰهُمَّ حَوَالَیْنَا لَا عَلَیْنَا اَللّٰهُمَّ عَلَی الْاٰكَامِ وَالظِّرَابِ وَبُطُوْنِ الْاَوْدِیَةِ

وَمَنَابِتِ الشَّجَرِ (بخاری، مسلم)

"ಅಲ್ಲಾಹುಮ್ಮ ಹವಾಲೈನಾ ಲಾ ಅಲೈನಾ ಅಲ್ಲಾಹುಮ್ಮ ಅಲಲ್ ಆಕಾಮಿ, ವಝ್ಝಿರಾಬಿ ವ ಬುತೂನಿಲ್ ಔದಿಯತಿ ವ ಮನಾಬಿತಿಶ್ಶಜರಿ". (ಬುಖಾರಿ, ಮುಸ್ಲಿಮ್)

(ಓ ಅಲ್ಲಾಹ್! ನಮ್ಮ ಪರಿಸರಗಳಲ್ಲಿ ಸುರಿಯಲಿ, ನಮ್ಮ ಮೇಲೆ ಸುರಿಯದಿರಲಿ. ಓ ಅಲ್ಲಾಹ್! ಪರ್ವತಗಳ ಮೇಲೆ, ಬೆಟ್ಟಗಳ ಮೇಲೆ, ನದಿಗಳ ಮೇಲೆ, ಗದ್ದೆಗಳ ಮೇಲೆ ಹಾಗೂ ವೃಕ್ಷಗಳು ಮೊಳೆಯುವ ಸ್ಥಳಗಳ ಮೇಲೆ ವರ್ಷಿಸಲಿ.)

10. ಗುಡುಗು ಮಿಂಚಿನ ಶಬ್ದ ಕೇಳಿದಾಗ ಮಾತುಕತೆ ನಿಲ್ಲಿಸಿ ಪವಿತ್ರ ಕುರ್‌ಆನಿನ ಈ ಸೂಕ್ತವನ್ನು ಪಠಿಸಲಾರಂಭಿಸಿರಿ.

وَيُسَبِّحُ الرَّعْدُ بِحَمْدِهٖ وَالْمَلٰٓئِكَةُ مِنْ خِيْفَتِهٖ

"ವಯುಸಬ್ಬಿಹುರ್ರಅ್‌ದು ಬಿಹಮ್ದಿಹೀ ವಲ್‌ಮಲಾಇಕತು ಮಿನ್ ಖೀಫತಿಹೀ".

(ಮೋಡಗಳ ಘರ್ಜನೆಯು ಅವನ ಸ್ತೋತ್ರದೊಂದಿಗೆ ಅವನ ಕೀರ್ತನೆ ಮಾಡುತ್ತದೆ ಮತ್ತು ದೇವಚರರು ಅವನ ಭೀತಿಯಿಂದ ನಡುಗುತ್ತ ಅವನ ಕೀರ್ತನೆ ಮಾಡುತ್ತಾರೆ.)

(ಅರ್‍ರಅ್‌ದ್: 13)

ಹ. ಅಬ್ದುಲ್ಲಾ ಬಿನ್ ಝುಬೈರ್(ರ) ಗುಡುಗಿನ ಗರ್ಜನೆ ಕೇಳಿದಾಗ ಮಾತುಕತೆ ನಿಲ್ಲಿಸಿ

ಇದೇ ಸೂಕ್ತವನ್ನು ಪಠಿಸುತ್ತಿದ್ದರು. (ಅಲ್ ಅದಬುಲ್ ಮುಫ್ರದ್)

ಹ. ಕಅಬ್(ರ) ಹೇಳುತ್ತಾರೆ, 'ಈ ಸೂಕ್ತವನ್ನು ಗುಡುಗಿನ ವೇಳೆ ಮೂರು ಸಲ ಓದುವ ವ್ಯಕ್ತಿ ಅದರ ಆಪತ್ತಿನಿಂದ ಸುರಕ್ಷಿತನಾಗುತ್ತಾನೆ'. (ತಿರ್ಮಿದಿ)

ಗುಡುಗು ಮಿಂಚಿನ ಗರ್ಜನೆ ಕೇಳಿದಾಗ ಪ್ರವಾದಿ(ಸ) ಈ ರೀತಿ ಪ್ರಾರ್ಥಿಸುತ್ತಿದ್ದರು:

اَللّٰهُمَّ لَا تَقْتُلْنَا بِغَضَبِكَ وَلَا تُهْلِكْنَا بِعَذَابِكَ وَعَافِنَا قَبْلَ ذٰلِكَ

"ಅಲ್ಲಾಹುಮ್ಮ ಲಾ ತಕ್‌ತುಲ್‌ನಾ ಬಿಗದಬಿಕ ವಲಾ ತುಹ್‌ಲಿಕ್‌ನಾ ಬಿಅದಾಬಿಕ ವ ಆಫಿನಾ ಕಬ್ಲ ದಾಲಿಕ".

(ಓ ಅಲ್ಲಾಹ್! ನಮ್ಮನ್ನು ನಿನ್ನ ಕ್ರೋಧದಿಂದ ಕೊಲ್ಲಬೇಡ. ನಿನ್ನ ಯಾತನೆಯಿಂದ ನಾಶಗೊಳಿಸಬೇಡ. ಅಂತಹ ಸಮಯ ಬರುವುದಕ್ಕಿಂತ ಮುಂಚೆಯೇ ನಮ್ಮನ್ನು ನಿನ್ನ ಕೃಪಾಶ್ರಯದಲ್ಲಿರಿಸು.) (ಅಲ್ ಅದಬುಲ್ ಮುಫ್ರದ್)

11. ಬೆಂಕಿ ತಗುಲಿದಾಗ ಅದನ್ನು ನಂದಿಸುವ ಪೂರ್ಣ ಶ್ರಮ ಮಾಡಿರಿ. ಜೊತೆಗೇ ಅಲ್ಲಾಹು ಅಕ್ಬರ್, ಎನ್ನುತ್ತಿರಿ. ಪ್ರವಾದಿ(ಸ) ಹೇಳುತ್ತಾರೆ, "ಬೆಂಕಿ ತಗಲುವುದನ್ನು ಕಂಡಾಗ ಅಲ್ಲಾಹು ಅಕ್ಬರ್ ಎನ್ನಿರಿ. ದೇವ ಕೀರ್ತನೆಯು ಬೆಂಕಿಯನ್ನು ಶಮನಿಸುತ್ತದೆ".

12. ಭಯಭೀತಿ ಆವರಿಸಿದಾಗ ಈ ರೀತಿ ಪ್ರಾರ್ಥಿಸಿರಿ: 'ಅಲ್ಲಾಹನಿಚ್ಛಿಸಿದರೆ ಭಯಭೀತಿ ತೊಲಗಿ ಶಾಂತಿ ಪ್ರಾಪ್ತವಾಗುವುದು'.

سُبْحَانَ اللّٰهِ الْمَلِكِ الْقُدُّوْسِ رَبِّ الْمَلَائِكَةِ وَالرُّوْحِ جَلَّلْتَ السَّمٰوَاتِ وَالْاَرْضَ بِالْعِزَّةِ وَالْجَبَرُوْتِ

"ಸುಬ್‌ಹಾನಲ್ಲಾಹಿಲ್ ಮಲಿಕಿಲ್ ಕುದ್ದೂಸಿ ರಬ್ಬಲ್ ಮಲಾಇಕತಿ ವರ್ರೂಹಿ ಜಲ್ಲಲ್ತಸ್ಸಮಾವಾತಿ ವಲ್ ಅರ್ದ ಬಿಲ್ ಇಝ್ಝತಿ ವಲ್ ಜಬರೂತಿ".

(ನೈಜ ಪ್ರಭುವಾದ ಅಲ್ಲಾಹ್ ಪರಮಪಾವನನು. ನ್ಯೂನತೆಗಳಿಂದ ಮುಕ್ತನು. ಓ ದೇವಚರರ ಮತ್ತು ಜಿಬ್ರೀಲರ ಪ್ರಭುವೇ! ನಿನ್ನ ಆಧಿಪತ್ಯ ಮತ್ತು ಮಹಿಮೆಯೇ ಆಕಾಶ ಭೂಮಿಗಳನ್ನು ಆವರಿಸಿದೆ.)

ಹ. ಬರಾಅ್ ಬಿನ್ ಆಝಿಬ್(ರ) ಹೇಳುತ್ತಾರೆ, "ನನ್ನ ಮೇಲೆ ಭಯಭೀತಿ ಆವರಿಸಿರುತ್ತದೆ" ಎಂದು ಒಬ್ಬರು ಪ್ರವಾದಿವರ್ಯರ(ಸ) ಬಳಿ ನಿವೇದಿಸಿದರು. ಪ್ರವಾದಿ(ಸ) ಅವರಿಗೆ ಈ ದುಆ ಪಠಿಸುತ್ತಿರುವಂತೆ ಆಜ್ಞಾಪಿಸಿದರು. ಅವರು ಈ ಪ್ರಾರ್ಥನೆಯನ್ನು ಜಪಿಸಿದರು. ಆಗ ಅಲ್ಲಾಹನು ಅವರ ಮನದಿಂದ ಭಯಭೀತಿಯನ್ನು ನೀಗಿಸಿದನು. (ತಬ್ರಾನಿ)

❖ ❖ ❖ ❖

# ಸುಖ ಸಂತೋಷ

1. ಸಂತೋಷದ ಸಂದರ್ಭಗಳಲ್ಲಿ ಸಂತೋಷ ಪಡಬೇಕು. ಸಂತೋಷವು ಮನುಷ್ಯ ಪ್ರಕೃತಿಯ ಒಂದು ಸಹಜ ಬಯಕೆ. ಪ್ರಕೃತಿ ಧರ್ಮವಾದ ಇಸ್ಲಾಮ್ ಅಂತಹ ಪ್ರಾಕೃತಿಕ ಬಯಕೆ ಗಳ ಪ್ರಾಮುಖ್ಯತೆಯನ್ನು ಮನ್ನಿಸುತ್ತದೆ. ಕೆಲವು ಅಗತ್ಯದ ಮಿತಿ ಮೇರೆಗಳೊಂದಿಗೆ ಆ ಬಯಕೆ ಗಳನ್ನು ಈಡೇರಿಸಲು ಪ್ರೇರೇಪಿಸುತ್ತದೆ. ನೀವು ಸದಾ ಕೃತಕ ಪ್ರತಿಷ್ಠೆ, ಇಲ್ಲದ ಗಾಂಭೀರ್ಯತೆ, ಸದಾ ನೀರವತೆ ಮತ್ತು ನಿಸ್ತೇಜಗಳಿಂದ ನಿಮ್ಮ ವ್ಯಕ್ತಿತ್ವದ ಆಕರ್ಷಣೆಯನ್ನು ಕಳೆದುಕೊಳ್ಳ ಬೇಕೆಂದು ಧರ್ಮ ಎಂದೂ ಬಯಸುವುದಿಲ್ಲ. ಅದು ಸುಖದ ಎಲ್ಲ ಸಂದರ್ಭಗಳಲ್ಲೂ ಸಂತೋಷ ಪಡುವ ಪೂರ್ಣಾಧಿಕಾರ ನಿಮಗೆ ನೀಡುತ್ತದೆ. ನೀವು ಸದಾ ಉನ್ನತ ಆಶೆ, ಲವಲವಿಕೆ ಮತ್ತು ಸ್ಫೂರ್ತಿಯಿಂದ ಇರಬೇಕೆಂದು ಅದು ಬಯಸುತ್ತದೆ. ಧರ್ಮಸಮ್ಮತವಾಗಿ ಸುಖ ಪಡುವ ಸಂದರ್ಭಗಳಲ್ಲಿ ಸಂತೋಷ ವ್ಯಕ್ತಪಡಿಸದೆ ಇರುವುದು ಮತ್ತು ಸಂತೋಷಪಡುವುದನ್ನು ಧರ್ಮಬಾಹಿರವೆಂದು ಪರಿಗಣಿಸುವುದು ಧರ್ಮ ಜ್ಞಾನದ ಕೊರತೆಯ ಸಂಕೇತವಾಗಿದೆ.

ನಿಮಗೆ ಯಾವುದಾದರೂ ಧಾರ್ಮಿಕ ಹೊಣೆಯನ್ನು ನಿರ್ವಹಿಸುವ ಸಂದರ್ಭ ಬಂದಾಗ, ನೀವು ಅಥವಾ ನಿಮ್ಮ ಆಪ್ತೇಷ್ಟರು ವಿದ್ಯೆ ಬುದ್ಧಿಯಲ್ಲಿ ಉನ್ನತ ಪದವಿಯನ್ನು ಗಳಿಸಿದಾಗ, ದೇವನು ಸೊತ್ತು ವಿತ್ತಗಳಿಂದ ನಿಮ್ಮನ್ನು ಅನುಗ್ರಹಿಸಿದಾಗ, ನಿಮಗೆ ಇನ್ನಾವುದೇ ಅನುಗ್ರಹ ಪ್ರಾಪ್ತವಾದಾಗ, ನಿಮ್ಮ ಬಂಧುಗಳಾರಾದರೂ ದೀರ್ಘ ಯಾತ್ರೆಯಿಂದ ಮರಳಿ ಬಂದಾಗ, ನಿಮ್ಮಲ್ಲಿಗೆ ಅತಿಥಿಗಳು ಯಾರಾದರೂ ಆಗಮಿಸಿದಾಗ, ಮನೆಯಲ್ಲಿ ಮದುವೆ ಅಥವಾ ಇನ್ನಿತರ ಸಮಾರಂಭಗಳು ಜರುಗಿದಾಗ, ಮಕ್ಕಳು ಜನಿಸಿದಾಗ, ಬಂಧುಗಳ ರೋಗ ಮುಕ್ತಿಯ ಸುದ್ದಿ ತಲುಪಿದಾಗ, ಸತ್ಯವಿಶ್ವಾಸಿಗಳ ವಿಜಯದ ಸುದ್ದಿ ಸಿಕ್ಕಿದಾಗ ಅಥವಾ ಹಬ್ಬಗಳಾದಾಗ ಸಂತೋಷ ಪಡಬೇಕಾದುದು ನಿಮ್ಮ ಪ್ರಕೃತಿ ಸಹಜ ಹಕ್ಕು. ಇಸ್ಲಾಮ್ ಇಂತಹ ಸಂದರ್ಭಗಳಲ್ಲಿ ಸಂತೋಷ ಪಡುವ ಅನುಮತಿ ನೀಡಿರುವುದು ಮಾತ್ರವಲ್ಲ ಅದನ್ನು ಧರ್ಮ ಕಾರ್ಯವೆಂದೇ ಪರಿಗಣಿಸಿದೆ.

ಹ. ಕಅಬ್ ಬಿನ್ ಮಾಲಿಕ್(ರ) ಹೇಳುತ್ತಾರೆ, "ಅಲ್ಲಾಹನು ನನ್ನ ಪಶ್ಚಾತ್ತಾಪವನ್ನು ಸ್ವೀಕರಿಸಿದ ಸುವಾರ್ತೆ ನನಗೆ ತಲುಪಿದಾಗಲೇ ನಾನು ಪ್ರವಾದಿವರ್ಯರ(ಸ) ಸನ್ನಿಧಿಗೆ ಹೋದೆ. ನಾನು ಸಲಾಮ್ ಹೇಳಿದಾಗ ಪ್ರವಾದಿವರ್ಯರ(ಸ) ಮುಖವೂ ಸಂತೋಷದಿಂದ ಬೆಳಗುತ್ತಿತ್ತು. ಪ್ರವಾದಿವರ್ಯರಿಗೆ(ಸ) ಸಂತೋಷವಾದಾಗಲೆಲ್ಲಾ ಅವರ ಮುಖವು ಚಂದ್ರ ನಂತೆ ಶೋಭಿಸುತ್ತಿತ್ತು. ನಾವು ಪ್ರವಾದಿವರ್ಯರ(ಸ) ಮುಖದ ಶೋಭೆಯನ್ನು ಕಂಡೇ ಅವರು ಅತೀವ ಸಂತೋಷದಲ್ಲಿದ್ದಾರೆಂದು ತಿಳಿಯುತ್ತಿದ್ದೆವು". (ರಿಯಾದುಸ್ಸಾಲಿಹೀನ್)

2. ಹಬ್ಬದ ದಿನಗಳಲ್ಲಿ ಮನಬಿಚ್ಚಿ ಸಂತೋಷ ಆಚರಿಸಿರಿ. ಪ್ರವಾದಿ(ಸ) ಮದೀನಾಕ್ಕೆ ಆಗಮಿಸಿದಾಗ ಈ ರೀತಿ ಹೇಳಿದರು: "ನೀವು ವರ್ಷದ ಎರಡು ದಿನಗಳಲ್ಲಿ ಸಂತೋಷ ಆಚರಿಸುತ್ತಿದ್ದೀರಿ. ಈಗ ಅಲ್ಲಾಹನು ಅವುಗಳಿಗಿಂತ ಉತ್ತಮ ದಿನಗಳನ್ನು ನಿಗದಿಪಡಿಸಿರುತ್ತಾನೆ. ಈದುಲ್ ಫಿತ್ರ್ ಮತ್ತು ಈದುಲ್ ಅಝ್‌ಹಾ".

ಆದ್ದರಿಂದ ವರ್ಷದ ಈ ಎರಡೂ ಇಸ್ಲಾಮೀ ಹಬ್ಬಗಳನ್ನು ಸಂಭ್ರಮೋಲ್ಲಾಸದೊಂದಿಗೆ ಆಚರಿಸಿರಿ. ಮನಬಿಚ್ಚಿ ಸಂತೋಷ ಪಡಿರಿ ಮತ್ತು ಸಹಜವಾದ ಮನೋರಂಜನೆಯನ್ನು ಸಾಮೂಹಿಕವಾಗಿ ಆಚರಿಸಿರಿ. ಈ ಕಾರಣಕ್ಕಾಗಿಯೇ ಈ ಎರಡು ಹಬ್ಬದ ದಿನಗಳಂದು ಉಪವಾಸ ಆಚರಿಸುವುದನ್ನು ನಿಷೇಧಿಸಲಾಗಿದೆ. ಪ್ರವಾದಿ(ಸ) ಹೇಳುತ್ತಾರೆ: "ಈ ದಿನಗಳು ಆಹಾರ ಪಾನೀಯಗಳನ್ನು ಸೇವಿಸುವ, ಪರಸ್ಪರ ಒಟ್ಟುಗೂಡಿ ಸಂತೋಷಪಡುವ ಮತ್ತು ದೇವಸ್ಮರಣೆಯ ದಿನಗಳಾಗಿವೆ." (ಶರಹ್ ಮಆನಿಲ್ ಆಸಾರ್)

ಹಬ್ಬದ ದಿನ ಸ್ನಾನ ಮಾಡಿ ಶುಭ್ರ ಬಟ್ಟೆಗಳನ್ನು ಧರಿಸಿರಿ. ನಿಮ್ಮ ಅಂತಸ್ತಿಗೆ ತಕ್ಕಂತೆ ಅತ್ಯುತ್ತಮ ಬಟ್ಟೆ ಬರೆಗಳನ್ನೇ ಧರಿಸಿರಿ. ಸುಗಂಧ ದ್ರವ್ಯವನ್ನು ಪೂಸಿರಿ. ಉತ್ತಮ ಭಕ್ಷ್ಯ, ಪಾನೀಯಗಳನ್ನು ಸೇವಿಸಿರಿ. ಮಕ್ಕಳಿಗೆ ಧರ್ಮಸಮ್ಮತವಾದ ಎಲ್ಲ ರೀತಿಯ ಆಟ ಮನೋರಂಜನೆಗಳಿಗೆ ಅವಕಾಶ ಮಾಡಿಕೊಡಿರಿ.

ಹ. ಆಯಿಶಾ(ರ) ಹೇಳುತ್ತಾರೆ, "ಅಂದು ಹಬ್ಬದ ದಿನವಾಗಿತ್ತು. ಕೆಲವು ದಾಸಿಯರು ಕುಳಿತು ಬುಆಸ್* ಯುದ್ಧದ ವೇಳೆ ಅನ್ಸಾರಿಗಳು ಹಾಡಿದ ಗೀತೆಯನ್ನು ಹಾಡುತ್ತಿದ್ದರು". ಆಗ ಹ. ಅಬೂಬಕರ್(ರ) ಆಗಮಿಸಿದರು. "ಇದೇನು ಪ್ರವಾದಿವರ್ಯರ(ಸ) ಮನೆಯಲ್ಲಿ ಹಾಡುಗಾರಿಕೆಯೇ?' ಎಂದು ಪ್ರಶ್ನಿಸಿದರು. ಆಗ ಪ್ರವಾದಿ(ಸ) "ಹಾಡಲಿ ಬಿಡಿ. ಎಲ್ಲ ಜನಾಂಗಗಳಿಗೂ ಹಬ್ಬದ ದಿನವಿರುತ್ತದೆ. ಈ ದಿನ ನಮ್ಮ ಹಬ್ಬದ ದಿನ" ಎಂದು ಹೇಳಿದರು.

ಒಂದು ಹಬ್ಬದ ದಿನ ಕೆಲವು ಹಬಶೀಗಳು ಸೈನಿಕ ಕವಾಯತುಗಳನ್ನು ಪ್ರದರ್ಶಿಸುತ್ತಿದ್ದರು. ಪ್ರವಾದಿ(ಸ) ಇದನ್ನು ಸ್ವಯಂ ವೀಕ್ಷಿಸಿದರಲ್ಲದೆ ಹ. ಆಯಿಶಾರಿಗೂ(ರ) ತೋರಿಸಿದರು. ಪ್ರವಾದಿ(ಸ) ಆ ಹಬಶೀಗಳನ್ನು ಹುರಿದುಂಬಿಸುತ್ತಿದ್ದರು. ಹ. ಆಯಿಶಾ(ರ) ಅದನ್ನು ನೋಡಿ ದಣಿದಾಗಲೇ ಪ್ರವಾದಿ(ಸ) "ಇನ್ನು ಹೋಗೋಣ" ಎಂದರು. (ಬುಖಾರಿ)

3. ಸಂತೋಷದ ಸಂದರ್ಭದಲ್ಲಿ ಇಸ್ಲಾಮೀ ಶಿಷ್ಟಾಚಾರ ಮತ್ತು ಇಸ್ಲಾಮೀ ಆದೇಶಗಳನ್ನು ಪಾಲಿಸಿರಿ. ಸಂತೋಷವಾದಾಗಲೆಲ್ಲಾ ನಿಮ್ಮನ್ನು ಸಂತೋಷಪಡಿಸಿದ ಅಲ್ಲಾಹನನ್ನು ವಂದಿಸಿರಿ. ಸಂತೋಷದ ಆಧಿಕ್ಯದಿಂದ ಇಸ್ಲಾಮೀ ಪ್ರವೃತ್ತಿಗೆ ನಿಲುಕದ ಯಾವುದೇ ಕೃತ್ಯವನ್ನೆಸಗಬೇಡಿರಿ. ಇಸ್ಲಾಮಿನ ನಿರ್ದೇಶ ಮತ್ತು ಶಿಷ್ಟಾಚಾರಗಳನ್ನು ಉಲ್ಲಂಘಿಸಬೇಡಿರಿ. ಸಂತೋಷ ಪ್ರಕಟನೆಯಲ್ಲೂ ಸಮತೋಲನವನ್ನು ಪಾಲಿಸಿರಿ. ಅದು ದರ್ಪ ಮತ್ತು ಅಹಂಕಾರದ ಪ್ರದರ್ಶನವಾಗದಿರಲಿ. ದಾಸ್ಯ ಮತ್ತು ದೀನಭಾವವನ್ನು ಎಂದೂ ಕೈಬಿಡದಿರಿ. ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಬಂದಿದೆ:

* ಅಜ್ಞಾನ ಕಾಲದಲ್ಲಿ ಅನ್ಸಾರರ ಎರಡು ಗೋತ್ರಗಳಾದ ಔಸ್ ಮತ್ತು ಖಝ್ರಜ್‌ಗಳ ಮಧ್ಯೆ ನಡೆದ ಯುದ್ಧ.

وَلَا تَفْرَحُوا بِمَا آتَاكُمْ ۗ وَاللَّهُ لَا يُحِبُّ كُلَّ مُخْتَالٍ فَخُورٍ

"ಅಲ್ಲಾಹನು ನಿಮಗೆ ಏನನ್ನು ದಯಪಾಲಿಸಿರುವನೋ ಅದರ ಬಗ್ಗೆ ಹಿಗ್ಗಬಾರದು. ಅಲ್ಲಾಹನು ಆತ್ಮ ಪ್ರಶಂಸಕರನ್ನು ಮತ್ತು ದುರಭಿಮಾನಿಗಳನ್ನು ಮೆಚ್ಚುವುದಿಲ್ಲ". (57: 23)

ದೇವಸ್ಮರಣೆಯಿಂದಲೇ ದೂರವಾಗುವ ರೀತಿಯಲ್ಲಿ ಸಂತೋಷದಲ್ಲಿ ಮೈಮರೆಯದಿರಿ. ಸಂತೋಷ ದಯಪಾಲಿಸಿದವನನ್ನು ಅತ್ಯಧಿಕ ಸ್ಮರಿಸುವುದರಲ್ಲೇ ಸತ್ಯವಿಶ್ವಾಸಿಯ ಸಂತೋಷ ಅಡಗಿದೆ. ಅವನ ಮುಂದೆ ಕೃತಜ್ಞತಾಪೂರ್ವಕ ಸಾಷ್ಟಾಂಗವೆರಗಿರಿ. ನಿಮ್ಮ ನಡೆನುಡಿಗಳಿಂದ ಅವನ ಮಹಿಮೆಯ ಪ್ರದರ್ಶನವಾಗಲಿ.

ರಮಝಾನ್‌ನ ಪೂರ್ತಿ ತಿಂಗಳಲ್ಲಿ ಉಪವಾಸ ಆಚರಿಸಿ ರಾತ್ರೆಗಳಲ್ಲಿ ಕುರ್‌ಆನ್ ಪಠಣ ಮತ್ತು ತರಾವೀಹ್ ನಮಾಝ್ ಮಾಡುವ ಸೌಭಾಗ್ಯ ಲಭಿಸಿದುದಕ್ಕಾಗಿ ಈದುಲ್ ಫಿತ್ರ್‌ನ ಚಂದ್ರದರ್ಶನವಾದೊಡನೆ ನೀವು ಸಂತೋಷದಲ್ಲಿ ನಲಿಯುತ್ತೀರಿ. ನಿಮ್ಮ ಸೊತ್ತಿನಲ್ಲಿರುವ ಬಡಬಗ್ಗರಾದ ಬಂಧುಗಳ ಹಕ್ಕನ್ನು ಅವರಿಗೆ ನೀಡುತ್ತೀರಿ. ತನ್ಮೂಲಕ ಉಪವಾಸ ಆಚರಣೆಯಲ್ಲಿ ಮತ್ತು ದೇವಾರಾಧನೆಗಳಲ್ಲಿ ಮನುಷ್ಯ ಸಹಜವಾಗಿ ಸಂಭವಿಸಬಹುದಾದ ಕೊರತೆ ನ್ಯೂನತೆಗಳಿಗೆ ಪ್ರಾಯಶ್ಚಿತ್ತ ಮಾಡುತ್ತೀರಿ. ದೇವನ ಬಡಬಗ್ಗರಾದ ದಾಸರೂ ನಿಮ್ಮೊಂದಿಗೆ ಹಬ್ಬದ ಸಂತೋಷದಲ್ಲಿ ಸಹಭಾಗಿಯಾಗುವಂತೆ ನೆರವಾಗುತ್ತೀರಿ. ಹಬ್ಬದಂದು ಮುಂಜಾನೆ ಎರಡು ರಕಅತ್ ವಿಶೇಷ ನಮಾಝ್ ಮಾಡಿ ಅಲ್ಲಾಹನಿಗೆ ವಂದನೆಗಳನ್ನರ್ಪಿಸುತ್ತೀರಿ ಮತ್ತು ನಿಮ್ಮ ಸಂತೋಷ ವ್ಯಕ್ತಪಡಿಸುತ್ತೀರಿ.

ಇದೇ ರೀತಿ ಈದುಲ್ ಅಝ್‌ಹಾದ ದಿವಸ ಹ. ಇಬ್ರಾಹೀಮ್(ಅ) ಮತ್ತು ಇಸ್ಮಾಈಲ್‌ರ(ಅ) ಮಹಾ ತ್ಯಾಗವನ್ನು ಸ್ಮರಿಸುತ್ತೀರಿ. ಅಂತಹ ತ್ಯಾಗ ಮನೋಭಾವವನ್ನು ಬೆಳೆಸುತ್ತೀರಿ. ಪ್ರಾಣಿ ಬಲಿಗಳನ್ನು ನೀಡುತ್ತೀರಿ. ದೇವನ ಮುಂದೆ ಸಾಷ್ಟಾಂಗವೆರಗುತ್ತೀರಿ. ನಿಮ್ಮ ಮನೆ-ಕೇರಿಗಳಲ್ಲಿ ದೇವಕೀರ್ತನೆಯ ಧ್ವನಿ ಮಾರ್ದನಿಸುತ್ತದೆ. ಹಬ್ಬದ ದಿನಗಳಲ್ಲಿ ಅತ್ಯುತ್ತಮವಾದುದನ್ನು ಉಂಡುಟ್ಟು ಸಂತೋಷ ಪಡುತ್ತೀರಿ. ಸಂತೋಷ ಪ್ರಕಟನೆಯ ಎಲ್ಲ ಧರ್ಮಸಮ್ಮತ ಮಾರ್ಗಗಳನ್ನು ಅನುಸರಿಸುತ್ತೀರಿ. ದೇವಾದೇಶಗಳಿಗೆ ಬದ್ಧವಾಗಿ ನೀವು ಮಾಡುವ ಎಲ್ಲ ಕಾರ್ಯಗಳೂ ದೇವಸ್ಮರಣೆಯೇ ಆಗಿ ಮಾರ್ಪಡುತ್ತವೆ.

4. ನಿಮ್ಮ ಸಂತೋಷದಲ್ಲಿ ಇತರರನ್ನೂ ಸೇರಿಸಿರಿ. ಇತರರ ಸಂತೋಷದಲ್ಲಿ ನೀವೂ ಭಾಗಿಗಳಾಗಿ. ಅವರ ಸಂತೋಷವನ್ನು ವರ್ಧಿಸಿರಿ. ಸಂತೋಷದ ಸಂದರ್ಭಗಳಲ್ಲಿ ಪರಸ್ಪರ ಶುಭಾಶಯ ವಿನಿಮಯ ಮಾಡಿರಿ.

ಹ. ಕಅಬ್ ಬಿನ್ ಮಾಲಿಕ್‌ರ(ರ) ಪಶ್ಚಾತ್ತಾಪ ಸ್ವೀಕರಿಸಲ್ಪಟ್ಟಾಗ ಮುಸ್ಲಿಮರು ತಂಡೋಪತಂಡವಾಗಿ ಬಂದು ಅವರನ್ನು ಅಭಿನಂದಿಸಿದರು, ಸಂತೋಷ ವ್ಯಕ್ತಪಡಿಸಿದರು. ಹ. ತಲ್ಹಾರು(ರ) ಬಂದು ಅಭಿನಂದಿಸಿದ ಘಟನೆಯಿಂದ ಹ. ಕಅಬ್ ಬಿನ್ ಮಾಲಿಕ್ ಬಹಳ ಪ್ರಭಾವಿತರಾಗಿದ್ದರು. ಜೀವನದಾದ್ಯಂತ ಅವರು ಅದನ್ನು ಜ್ಞಾಪಿಸುತ್ತಿದ್ದರು. ತಮ್ಮ

ವೃದ್ಧಾಪ್ಯದಲ್ಲಿ ಮಗ ಅಬ್ದುಲ್ಲಾರಿಗೆ ತಮ್ಮ ಸತ್ವಪರೀಕ್ಷೆ ಮತ್ತು ಪಶ್ಚಾತ್ತಾಪದ ಘಟನೆಯನ್ನು ವಿವರಿಸುತ್ತಾ ಹ. ತಲ್ಹಾರ(ರ) ಅಭಿನಂದನೆ ಮತ್ತು ಸಂತೋಷ ಪ್ರಕಟನೆಯನ್ನು ಮುಖ್ಯವಾಗಿ ಪ್ರಸ್ತಾಪಿಸಿದ್ದರು. ನಾನು ತಲ್ಹಾರ(ರ) ಅಭಿನಂದನೆ ಮತ್ತು ಸಂತೋಷ ಪ್ರಕಟನೆಯನ್ನು ಎಂದೂ ಮರೆಯಲಾರೆ ಎಂದರು. ಸ್ವಯಂ ಪ್ರವಾದಿ(ಸ) ಹ. ಕಅಬ್‌ರಿಗೆ(ರ) ಪಶ್ಚಾತ್ತಾಪ ಸ್ವೀಕಾರದ ಸುವಾರ್ತೆ ನೀಡುತ್ತಾ ಸಂತೋಷ ಪ್ರಕಟಿಸಿ "ಇದು ನಿಮ್ಮ ಜೀವನದ ಅತ್ಯಂತ ಸಂತೋಷದ ದಿನ"ವೆಂದು ಹೇಳಿದರು. (ರಿಯಾದುಸ್ಸಾಲಿಹೀನ್)

ಯಾರಲ್ಲಾದರೂ ಮದುವೆ, ಮಗುವಿನ ಜನನ ಇತ್ಯಾದಿ ಸಂತೋಷದ ಸಂದರ್ಭ ಬಂದಾಗ ಅವರ ಸಂತೋಷದಲ್ಲಿ ಭಾಗವಹಿಸಿ, ಅವರನ್ನು ಅಭಿನಂದಿಸಿರಿ. ಹ. ಅಬೂ ಹುರೈರಾ(ರ) ಹೇಳುತ್ತಾರೆ, ಪ್ರವಾದಿ(ಸ) ವಿವಾಹ ಸಂದರ್ಭಗಳಲ್ಲಿ ಈ ರೀತಿ ಅಭಿನಂದಿಸುತ್ತಿದ್ದರು.

بَارَكَ اللّٰهُ لَكَ وَبَارَكَ عَلَيْكُمَا وَجَمَعَ بَيْنَكُمَا فِيْ خَيْرٍ

"ಬಾರಕಲ್ಲಾಹು ಲಕ ವಬಾರಕ ಅಲೈಕುಮಾ ವಜಮಅ ಬೈನಕುಮಾ ಫೀಖೈರ್".

(ದೇವನು ನಿಮ್ಮನ್ನು ಉತ್ತಮವಾಗಿರಿಸಲಿ, ನಿಮ್ಮಿರ್ವರ ಮೇಲೆ ಸಮೃದ್ಧಿಯನ್ನು ವರ್ಷಿಸಲಿ. ನಿಮ್ಮೊಳಗೆ ಅತ್ಯುತ್ತಮ ಸಂಬಂಧವನ್ನೇರ್ಪಡಿಸಲಿ.) (ತಿರ್ಮಿದಿ)

ಒಮ್ಮೆ ಹ. ಹುಸೈನ್(ರ) ಒಬ್ಬರಿಗೆ ಮಗು ಹುಟ್ಟಿದ ಬಗ್ಗೆ ಅಭಿನಂದಿಸಲು ಕಲಿಸುತ್ತಾ ಈ ರೀತಿ ಹೇಳಬೇಕೆಂದು ಆದೇಶಿಸಿದರು. "ದೇವನು ನಿಮಗೆ ಈ ಕೊಡುಗೆಯಲ್ಲಿ ಒಳಿತು ಮತ್ತು ಸಮೃದ್ಧಿಯನ್ನು ದಯ ಪಾಲಿಸಲಿ. ಆತನಿಗೆ ಕೃತಜ್ಞತೆಯನ್ನರ್ಪಿಸುವ ಸೌಭಾಗ್ಯ ನೀಡಲಿ. ಮಗುವಿಗೆ ಯೌವನದ ಸವಿಯುಣಿಸಲಿ, ಅದನ್ನು ನಿಮಗೆ ವಿಧೇಯವಾಗಿ ಬೆಳೆಸಲಿ".

5. ನಿಮ್ಮ ಬಂಧು ಮಿತ್ರಾದಿಗಳು ದೂರದ ಪ್ರಯಾಣದಿಂದ ಮರಳಿದಾಗ ಅವರನ್ನು ಸ್ವಾಗತಿಸಿರಿ. ಅವರ ಸುಖಾಗಮನ ಮತ್ತು ಪ್ರಯಾಣದ ಉದ್ದೇಶದ ಸಾಫಲ್ಯಕ್ಕೆ ಅಭಿನಂದನೆ ಸಲ್ಲಿಸಿರಿ. ಪ್ರಯಾಣದಿಂದ ಮರಳಿದ ಬಳಿಕ ಸಂತೋಷ ಕೂಟ ಏರ್ಪಡಿಸಿದ್ದರೆ ಅದರಲ್ಲಿ ಪಾಲ್ಗೊಳ್ಳಿರಿ. ನೀವು ಪ್ರಯಾಣ ಮುಗಿಸಿ ಬಂದಾಗ ಅಂತಹ ಸಂತೋಷ ಕೂಟವನ್ನೇರ್ಪಡಿಸಿ ಬಂಧು ಮಿತ್ರರನ್ನು ಅದರಲ್ಲಿ ಪಾಲ್ಗೊಳಿಸಿರಿ. ಆದರೆ ಅಪವ್ಯಯ ಮತ್ತು ಡಂಬಾಚಾರಗಳಿಂದ ದೂರವಿರಿ. ನಿಮ್ಮ ಶಕ್ತಿಗೆ ಮೀರಿದ ಯಾವುದೇ ಖರ್ಚನ್ನು ಮಾಡದಿರಿ.

ಪ್ರವಾದಿ(ಸ) ತಬೂಕ್ ಯುದ್ಧದಿಂದ ಮರಳಿದಾಗ ಮುಸ್ಲಿಮ್ ಪುರುಷರೂ ಮಕ್ಕಳೂ ಅವರನ್ನು ಸ್ವಾಗತಿಸಲು 'ಸನಿಯ್ಯತುಲ್ ವದಾಅ್' ಎಂಬಲ್ಲಿಯ ತನಕ ಹೋಗಿದ್ದರು. (ಅಬೂದಾವೂದ್)

ಪ್ರವಾದಿ(ಸ) ಮಕ್ಕಾದಿಂದ ಹಿಜ್ರತ್ ಮಾಡಿ ಮದೀನಾಕ್ಕೆ ಬಂದು ದಕ್ಷಿಣ ಭಾಗ ದಿಂದ ನಗರ ಪ್ರವೇಶಿಸಿದಾಗ ಎಲ್ಲಾ ಮುಸ್ಲಿಮ್ ಪುರುಷರೂ ಸ್ತ್ರೀಯರೂ ಮಕ್ಕಳೂ ಅವರನ್ನು

ಸ್ವಾಗತಿಸಲು ಹೊರಟು ನಿಂತರು. ಅನ್ಸಾರೀ ಬಾಲಕಿಯರು ಸಂತೋಷದಿಂದ ಹಾಡಿದರು.

طَلَعَ الْبَدْرُ عَلَيْنَا مِنْ ثَنِيَّاتِ الْوَدَاعِ
وَجَبَ الشُّكْرُ عَلَيْنَا مَا دَعَا لِلّٰهِ دَاعِ
أَيُّهَا الْمَبْعُوثُ فِيْنَا جِئْتَ بِالْأَمْرِ الْمُطَاعِ

"ತಲಅಲ್ ಬದ್‌ರು ಅಲೈನಾ ಮಿನ್ ಸನಿಯ್ಯಾತಿಲ್ ವದಾಇ
ವಜಬಶ್ಶುಕ್ರು ಅಲೈನಾ ಮಾ ದಅಲಿಲ್ಲಾಹಿದಾಇ,*
ಅಯ್ಯುಹಲ್ ಮಬ್‌ಊಸು ಫೀನಾ ಜಿಲ್‌ತ ಬಿಲ್ ಅಮ್ರಿಲ್ ಮುತಾಇ".

(ದಕ್ಷಿಣ ಪರ್ವತ ಸನಿಯ್ಯಾತುಲ್ ವದಾಇಯಿಂದ (ಇಂದು) ನಮಗೆ ಹುಣ್ಣಿಮೆ ಚಂದ್ರೋದಯವಾಯಿತು. ಕರೆ ನೀಡುವವನು ನಮ್ಮನ್ನು ದೇವನತ್ತ ಕರೆಯುವ ಶಿಕ್ಷಣ ನೀಡಿದುದಕ್ಕಾಗಿ ಕೃತಜ್ಞತೆ ನಮಗೆ ಕಡ್ಡಾಯವಾಯಿತು. ನಮ್ಮ ಮಧ್ಯೆ ಕಳುಹಿಸಲ್ಪಟ್ಟ ಸಂದೇಶವಾಹಕರೇ! ನೀವು ನಮಗೆ ಅನುಸರಿಸಲು ಯೋಗ್ಯವಾದ ಧರ್ಮವನ್ನು ತಂದಿರುವಿರಿ.)

ಒಮ್ಮೆ ಪ್ರವಾದಿ(ಸ) ಒಂದು ಪ್ರಯಾಣದಿಂದ ಮರಳಿ ಮದೀನಾ ತಲಪಿದಾಗ, ಒಂಟೆ ಅಥವಾ ದನವನ್ನು ದಿಬ್ಹ ಮಾಡಿ (ಇಸ್ಲಾಮೀ ವಿಧಿಯನುಸಾರ ವಧಿಸಿ) ಜನರಿಗೆ ಔತಣ ನೀಡಿದರು. (ಅಬೂದಾವೂದ್)

6. ವಿವಾಹದ ಸಂದರ್ಭದಲ್ಲಿ ಸಂತೋಷ ಆಚರಿಸಿರಿ. ನಿಮ್ಮ ಸಂತೋಷದಲ್ಲಿ ಬಂಧು ಮಿತ್ರರನ್ನೂ ಪಾಲ್ಗೊಳಿಸಿರಿ. ಈ ಸಂದರ್ಭದಲ್ಲಿ ದಫ್ ಬಾರಿಸಿ ಒಳ್ಳೆಯ ಹಾಡುಗಳನ್ನು ಹಾಡುವ ಅನುಮತಿಯನ್ನೂ ಪ್ರವಾದಿ(ಸ) ನೀಡಿರುವರು. ಇದರಿಂದ ನಿಮ್ಮ ಸಂತೋಷ ಪ್ರಕಟನೆಯಾಗುವುದಲ್ಲದೆ ಮದುವೆಯ ಬಗ್ಗೆ ಜನರಿಗೂ ತಿಳಿಯುತ್ತದೆ.

ಹ. ಆಯಿಶಾ(ರ) ತಮ್ಮ ಸಂಬಂಧದ ಓರ್ವ ಮಹಿಳೆಯನ್ನು ಓರ್ವ ಅನ್ಸಾರಿ ಯೊಂದಿಗೆ ವಿವಾಹ ಮಾಡಿಸಿದರು. ಆ ಮದುಮಗಳನ್ನು ಬೀಳ್ಕೊಡುವಾಗ ಪ್ರವಾದಿ(ಸ) 'ಅವರೊಂದಿಗೆ ದಫ್ ಬಾರಿಸಿ ಹಾಡುವ ದಾಸಿಯರನ್ನು ಯಾಕೆ ಕಳುಹಿಸಲಿಲ್ಲ' ಎಂದು ಕೇಳಿದರು. (ಬುಖಾರಿ)

ಹ. ರಬೀಅ್ ಬಿಂತು ಮುಅವ್ವದ್‌ರ(ರ) ವಿವಾಹವಾದಾಗ ಕೆಲವು ಬಾಲಕಿಯರು ದಫ್ ಬಾರಿಸಿ ಬದ್ರ್ ಹುತಾತ್ಮರ ಗುಣಗಾನದ ಗೀತೆ ಹಾಡಿದರು. ಆ ಬಳಿಕ ಓರ್ವ ಬಾಲಕಿ ಈ ರೀತಿ ಹಾಡತೊಡಗಿದಳು:

* ಮದೀನಾದ ದಕ್ಷಿಣದಲ್ಲಿ ಒಂದು ಪರ್ವತವಿದೆ. ಜನರು ತಮ್ಮ ಯಾತ್ರಿಕರನ್ನು ಬೀಳ್ಕಕೊಡಲು ಆ ಪರ್ವತದ ತನಕ ಹೋಗುತ್ತಿದ್ದರು. ಆದ್ದರಿಂದಲೇ ಅದರ ಹೆಸರು 'ಸನಿಯ್ಯತುಲ್ ವದಾಅ್' ಅರ್ಥಾತ್ 'ಬೀಳ್ಕೊಡುವ ಪರ್ವತ' ಎಂದಾಯಿತು.

'ನಾಳೆ ಏನಾಗಲಿದೆ ಎಂಬುದನ್ನರಿಯುವ ಓರ್ವ ಪ್ರವಾದಿ ನಮ್ಮ ಮಧ್ಯೆ ಇದ್ದಾರೆ.'

ಆಗ ಪ್ರವಾದಿ(ಸ) ಆಕೆಯನ್ನು ತಡೆದು "ನೀನು ಮೊದಲು ಹಾಡಿದ ಹಾಡನ್ನೇ ಹಾಡು" ಎಂದು ಆದೇಶಿಸಿದರು. (ಬುಖಾರಿ)

7. ವಿವಾಹದ ಸಂತೋಷದಲ್ಲಿ ನಿಮ್ಮ ಶಕ್ತ್ಯಾನುಸಾರ ಬಂಧುಮಿತ್ರರಿಗೆ ಸತ್ಕಾರ ಕೂಟವನ್ನೇರ್ಪಡಿಸಿರಿ. ಪ್ರವಾದಿ(ಸ) ತಮ್ಮ ಮದುವೆಗೂ 'ವಲೀಮಾ' ನೀಡಿದರು. ಇತರರನ್ನು ಅದಕ್ಕಾಗಿ ಪ್ರೇರೇಪಿಸಿದರು. 'ಏನಿಲ್ಲದಿದ್ದರೂ ಒಂದು ಆಡನ್ನಾದರೂ ಕೊಯ್ದು ಉಣಿಸಿರಿ' ಎಂದು ಪ್ರವಾದಿ(ಸ) ಆದೇಶಿಸಿದರು. (ಬುಖಾರಿ)

ಮದುವೆಯಲ್ಲಿ ಪಾಲ್ಗೊಳ್ಳುವುದು ಸಾಧ್ಯವಾಗದೆ ಹೋದರೆ ಕನಿಷ್ಠಪಕ್ಷ ಶುಭಾಶಯ ಸಂದೇಶವನ್ನಾದರೂ ಕಳುಹಿಸಿ. ವಿವಾಹಾದಿ ಸಮಾರಂಭಗಳ ವೇಳೆ ಪಾರಿತೋಷಕಗಳನ್ನು ನೀಡಿದರೆ ಅದು ಸಂಬಂಧ ವರ್ಧನೆಗೆ ಸಹಾಯಕವಾಗುತ್ತದೆ. ಇದರಿಂದ ಪ್ರೇಮವು ಹೆಚ್ಚುತ್ತದೆ. ಆದರೆ ಪಾರಿತೋಷಕ ನಿಮ್ಮ ಅಂತಸ್ತಿಗೆ ನಿಲುಕುವಂತಹದ್ದಾಗಿರಬೇಕು. ಡಂಬಾಚಾರದ ಪ್ರದರ್ಶನವಾಗಬಾರದು. ಈ ಬಗ್ಗೆ ನಿಮ್ಮ ಪ್ರಾಮಾಣಿಕತೆಯ ಆತ್ಮ ಪರಿಶೋಧನೆ ಅಗತ್ಯ ಮಾಡಿಕೊಳ್ಳಿರಿ.

ಅಧ್ಯಾಯ - ಎರಡು

# ಆರಾಧನಾ ಕರ್ಮಗಳು

## ಮಸೀದಿಯ ಮರ್ಯಾದೆಗಳು

1. ಅಲ್ಲಾಹನ ದೃಷ್ಟಿಯಲ್ಲಿ ಮಸೀದಿ ನಿರ್ಮಿಸಲ್ಪಟ್ಟ ಸ್ಥಳವು ಭೂಮುಖದ ಅತ್ಯುತ್ತಮ ಭಾಗ. ಮಸೀದಿಯನ್ನು ಪ್ರೀತಿಸುವುದು ಅಲ್ಲಾಹನ ಮೇಲಿರುವ ಪ್ರೀತಿಯ ಲಕ್ಷಣವಾಗಿದೆ. ಮಸೀದಿಯಲ್ಲೇ ಮನಸ್ಸು ಕೇಂದ್ರೀಕೃತವಾಗಿದ್ದಂತಹ ದಾಸನನ್ನು ಎಲ್ಲೆಲ್ಲೂ ನೆರಳೇ ಇಲ್ಲದ ಅತಿ ಭಯಾನಕ ನಿರ್ಣಾಯಕ ದಿನದಂದು ಅಲ್ಲಾಹನು ತನ್ನ ವಿಶ್ವಸಿಂಹಾಸನದ ನೆರಳಲ್ಲಿರಿ ಸುವನು. ಪ್ರವಾದಿ(ಸ) ಹೇಳುತ್ತಾರೆ: "ಮಸೀದಿಯಲ್ಲೇ ಮನಸ್ಸು ಕೇಂದ್ರೀಕೃತವಾಗಿದ್ದಂತಹ ವ್ಯಕ್ತಿ ವಿಶ್ವಸಿಂಹಾಸನದ ನೆರಳಲ್ಲಿರುವನು." (ಬುಖಾರಿ)

2. ಮಸೀದಿಯ ಸೇವೆಗೈಯಿರಿ. ಅದನ್ನು ಸದಾ ನಿಬಿಡವಾಗಿರಿಸಿ. ಮಸೀದಿಯ ಸೇವೆ ಮತ್ತು ಅದನ್ನು ಜನನಿಬಿಡಗೊಳಿಸುವ ಯತ್ನ ಸತ್ಯವಿಶ್ವಾಸದ ಲಕ್ಷಣವಾಗಿದೆ. ಅಲ್ಲಾಹನು ಹೇಳುತ್ತಾನೆ:

إِنَّمَا يَعْمُرُ مَسَٰجِدَ ٱللَّهِ مَنْ ءَامَنَ بِٱللَّهِ وَٱلْيَوْمِ ٱلْءَاخِرِ

**"ಅಲ್ಲಾಹ್ ಮತ್ತು ಅಂತಿಮ ದಿನದ ಮೇಲೆ ವಿಶ್ವಾಸವಿರಿಸುವವರೇ ಅಲ್ಲಾಹನ ಮಸೀದಿಗಳನ್ನು ನೆಲೆಗೊಳಿಸುವವ(ಮೇಲ್ವಿಚಾರಕ ಮತ್ತು ಸೇವಕ)ರಾಗಬಲ್ಲರು".**

**(ಪವಿತ್ರ ಕುರ್‌ಆನ್, 9:18)**

3. ಕಡ್ಡಾಯ ನಮಾಝ್‌ಗಳನ್ನು ಸದಾ ಮಸೀದಿಯಲ್ಲಿ ಸಾಮೂಹಿಕವಾಗಿಯೇ ನಿರ್ವಹಿಸಿರಿ. ಮಸೀದಿಯಲ್ಲಿ ಸಾಮೂಹಿಕ ನಮಾಝ್ ಮತ್ತು ಅದಾನ್ (ನಮಾಝ್‌ನ ಕರೆ)ಗಳನ್ನು ಸಮಯಕ್ಕೆ ಸರಿಯಾಗಿ ಏರ್ಪಡಿಸಿರಿ. ನಿಮ್ಮ ಸಂಪೂರ್ಣ ಜೀವನವನ್ನು ನಮಾಝ್‌ನ ಸಮಯಕ್ಕನುಗುಣವಾಗಿ ಪರಿವರ್ತಿಸಿರಿ. ಮಸೀದಿ ಸತ್ಯವಿಶ್ವಾಸಿಯ ಕೇಂದ್ರವಾಗಿದೆ. ಸತ್ಯವಿಶ್ವಾಸಿಯ ಸಂಪೂರ್ಣ ಜೀವನ ಅದರ ಸುತ್ತ ತಿರುಗುತ್ತದೆ. ಪ್ರವಾದಿ(ಸ) ಹೇಳುತ್ತಾರೆ: "ಮುಸ್ಲಿಮರಲ್ಲಿ ಕೆಲವರು ಮಸೀದಿಗಳಲ್ಲಿ ಸ್ಥಿರವಾಗಿರುತ್ತಾರೆ. ಅಲ್ಲಿಂದ ಕದಲುವುದಿಲ್ಲ. ದೇವಚರರು ಇಂಥವರ ಸಂಗಾತಿಗಳಾಗುತ್ತಾರೆ. ಇವರು ಅದೃಶ್ಯರಾದಾಗ ದೇವಚರರು ಇವರನ್ನು ಹುಡುಕಾಡುತ್ತಾರೆ. ಇವರು ರೋಗಗ್ರಸ್ತರಾದಾಗ ದೇವಚರರು ಇವರನ್ನು ಸಂದರ್ಶಿಸುತ್ತಾರೆ.

ಇವರು ಯಾವುದಾದರೂ ಕಾರ್ಯದಲ್ಲಿ ನಿರತರಾದರೆ ದೇವಚರರು ಇವರಿಗೆ ನೆರವಾಗುತ್ತಾರೆ. ಮಸೀದಿಯಲ್ಲಿ ಕುಳಿತಿರುವವರು ದೇವಾನುಗ್ರಹದ ನಿರೀಕ್ಷಕರಾಗಿರುತ್ತಾರೆ." (ಮುಸ್ನದ್ ಅಹ್ಮದ್)

4. ನಮಾಝ್‌ಗಾಗಿ ಉತ್ಸಾಹ ಮತ್ತು ಹುಮ್ಮಸ್ಸಿನೊಂದಿಗೆ ಮಸೀದಿಗೆ ತೆರಳಿರಿ. "ಸಂಜೆ-ಮುಂಜಾನೆಗಳಲ್ಲಿ ನಮಾಝ್‌ಗಾಗಿ ಮಸೀದಿಗೆ ಹೋಗುವುದು ಜಿಹಾದ್ (ಧರ್ಮಯುದ್ಧ)ಗೆ ಹೋದಂತೆಯೇ" ಎಂದು ಪ್ರವಾದಿ(ಸ) ಹೇಳಿರುವರು. "ನಸುಕಿನ ಕತ್ತಲೆಯಲ್ಲಿ ಮಸೀದಿಗೆ ಹೋಗುವವರ ಜೊತೆಗೆ ನಿರ್ಣಾಯಕ ದಿನದಂದು ಪೂರ್ಣ ಬೆಳಕಿರುವುದು" ಎಂದೂ "ಸಾಮೂಹಿಕ ನಮಾಝ್‌ಗೆ ಮಸೀದಿಗೆ ಹೋಗುವ ದಾರಿಯಲ್ಲಿಡುವ ಪ್ರತಿಯೊಂದು ಹೆಜ್ಜೆಗೆ ಪ್ರತಿಯಾಗಿ ಒಂದು ಪುಣ್ಯ ಲಭಿಸುತ್ತದೆ ಮತ್ತು ಒಂದು ಪಾಪ ಅಳಿಯುತ್ತದೆ" ಎಂದೂ ಪ್ರವಾದಿ(ಸ) ಹೇಳಿರುವರು. (ಇಬ್ನು ಹಿಬ್ಬಾನ್)

5. ಮಸೀದಿಯನ್ನು ಅಚ್ಚುಕಟ್ಟಾಗಿ ಇಡಿರಿ. ಕಸಕಡ್ಡಿಗಳನ್ನು ಗುಡಿಸಿ ಶುಚಿಯಾಗಿಡಿರಿ. ಸುಗಂಧ ಕಡ್ಡಿಗಳನ್ನು ಹೊತ್ತಿಸಿರಿ. ವಿಶೇಷವಾಗಿ ಶುಕ್ರವಾರದಂದು ಮಸೀದಿಯನ್ನು ಸುಗಂಧ ಭರಿತವಾಗಿರಿಸಿರಿ. ಪ್ರವಾದಿ(ಸ) ಹೇಳುತ್ತಾರೆ, "ಮಸೀದಿಯನ್ನು ಗುಡಿಸುವುದು, ಮಸೀದಿಯನ್ನು ಅಚ್ಚುಕಟ್ಟಾಗಿರಿಸುವುದು, ಮಸೀದಿಯ ಕಸಕಡ್ಡಿಯನ್ನು ತೆಗೆದು ಹೊರ ಹಾಕುವುದು, ಮಸೀದಿಯಲ್ಲಿ ಸುಗಂಧ ಹೊತ್ತಿಸುವುದು, ವಿಶೇಷವಾಗಿ ಶುಕ್ರವಾರದಂದು ಮಸೀದಿಯನ್ನು ಸುಗಂಧಭರಿತವಾಗಿರಿಸುವುದು- ಇವೆಲ್ಲಾ ಸ್ವರ್ಗಕ್ಕೆ ದಾರಿ ಮಾಡುವ ಕರ್ಮಗಳಾಗಿವೆ". (ಇಬ್ನುಮಾಜಃ)

ಪ್ರವಾದಿ(ಸ) ಹೀಗೂ ಹೇಳಿರುವರು, "ಮಸೀದಿಯ ಕಸಕಡ್ಡಿಗಳನ್ನು ಗುಡಿಸುವುದು ಸುಂದರ ನಯನಗಳ ಅಪ್ಸರೆಯ ಮಹರ್ (ವಿವಾಹ ಧನ) ಆಗಿದೆ". (ತಬ್ರಾನಿ)

6. ನಯ-ವಿನಯದೊಂದಿಗೆ ಮಸೀದಿಯೊಳಗೆ ಪ್ರವೇಶಿಸಿರಿ. ಪ್ರವೇಶಿಸುವಾಗ "ಅಸ್ಸಲಾಮು ಅಲೈಕುಮ್" ಎನ್ನುತ್ತಾ ಮೌನವಾಗಿ ಕುಳಿತು ದೇವನ ಮಹಾನತೆ ಹಾಗೂ ಪ್ರತಾಪ ನಿಮ್ಮ ಹೃದಯವನ್ನಾವರಿಸುವಂತೆ ಅವನ ಧ್ಯಾನ ಮಾಡಿರಿ. ನಗುತ್ತಾ ಮಾತಾಡುತ್ತಾ ಮಸೀದಿಯೊಳಗೆ ಅಲಕ್ಷ್ಯರಾಗಿ ಪ್ರವೇಶಿಸುವುದು ದೇವಭಯ ವಿರಹಿತ ಅಶ್ರದ್ಧರ ಮತ್ತು ಅಶಿಷ್ಟರ ಕಾರ್ಯ. ಕೆಲವರು ರಕಅತ್ ಸಿಗುವಂತಾಗಲು ಇಮಾಮ್ (ನಮಾಝ್‌ನ ನೇತೃತ್ವ ವಹಿಸುವವರು)ರ ಜೊತೆಗೆ ರುಕೂಅ್(ಬಾಗುವಿಕೆ) ಮಾಡುವ ಸಲುವಾಗಿ ಮಸೀದಿಯಲ್ಲಿ ಓಡುತ್ತಾರೆ. ಇದು ಮಸೀದಿಯ ಗೌರವಾದರಗಳಿಗೆ ವಿರುದ್ಧವಾಗಿದೆ. ರಕಅತ್ (ನಮಾಝ್‌ನ ಒಂದು ಪ್ರಮಾಣ) ಸಿಗಲಿ ಸಿಗದಿರಲಿ- ಗಾಂಭೀರ್ಯ, ನಯ-ವಿನಯ ಮತ್ತು ಗೌರವದೊಂದಿಗೆ ಮಸೀದಿಗೆ ಪ್ರವೇಶಿಸಿರಿ. ಮಸೀದಿಯಲ್ಲಿ ಓಡಾಡದಿರಿ.

7. ಮಸೀದಿಯಲ್ಲಿ ಶಾಂತಚಿತ್ತರಾಗಿ ಕುಳಿತುಕೊಳ್ಳಿರಿ. ಲೌಕಿಕ ಸಂಭಾಷಣೆಯಲ್ಲಿ ನಿರತರಾಗಬೇಡಿರಿ. ಮಸೀದಿಯಲ್ಲಿ ಗುಲ್ಲು-ಗದ್ದಲವೆಬ್ಬಿಸುವುದು, ತಮಾಷೆ ಮಾಡುವುದು, ಪೇಟೆಧಾರಣೆಯ ಬಗ್ಗೆ ಚರ್ಚಿಸುವುದು, ಲೌಕಿಕ ಸ್ಥಿತಿಗತಿಗಳನ್ನು ಪ್ರಸ್ತಾಪಿಸುವುದು, ಕ್ರಯ-ವಿಕ್ರಯ ಮಾಡುವುದು ಇತ್ಯಾದಿ ಮಸೀದಿಯ ಗೌರವಕ್ಕೆ ಕುಂದಾಗಿದೆ. ಮಸೀದಿ ದೇವಾರಾಧನೆಯ ಸ್ಥಳ. ಅಲ್ಲಿ ಕೇವಲ ಆರಾಧನೆಯನ್ನೇ ಮಾಡಿರಿ.

8. ಮಸೀದಿಯ ಗೌರವದ ಪ್ರಜ್ಞೆ ಇನ್ನೂ ಮೂಡಿರದ ಚಿಕ್ಕ ಬಾಲಕರನ್ನು ಮಸೀದಿಗೆ ಕರೆದುಕೊಂಡು ಹೋಗಬೇಡಿರಿ. ಅವರು ಅಲ್ಲಿ ಮಲಮೂತ್ರ ವಿಸರ್ಜನೆ ಮಾಡುವ ಅಥವಾ ಉಗುಳುವ ಸಂಭವವಿದೆ.

9. ಮಸೀದಿಯನ್ನು ದಾರಿಯಂತೆ ಬಳಸಬೇಡಿರಿ. ಮಸೀದಿಯ ಬಾಗಿಲೊಳಗೆ ಪ್ರವೇಶಿಸಿದ ಬಳಿಕ ಅದರಲ್ಲಿ ನಮಾಝ್ ಮಾಡುವುದು, ಕುಳಿತುಕೊಂಡು ದೇವಧ್ಯಾನ ಮಾಡುವುದು ಅಥವಾ ಕುರ್‌ಆನ್ ಪಠನ ಮಾಡುವುದು ಮಸೀದಿಯ ಹಕ್ಕಾಗಿದೆ.

10. ನಿಮ್ಮ ವಸ್ತುವೇನಾದರೂ ಹೊರಗೆ ಕಾಣೆಯಾಗಿದ್ದರೆ ಆ ಬಗ್ಗೆ ಮಸೀದಿಯಲ್ಲಿ ಘೋಷಿಸಬೇಡಿರಿ. ಪ್ರವಾದಿವರ್ಯರ(ಸ) ಮಸೀದಿಯಲ್ಲಿ ಯಾರಾದರೂ ಹೀಗೆ ಮಾಡಿದರೆ ಪ್ರವಾದಿ(ಸ) ಕ್ರುದ್ಧರಾಗುತ್ತಿದ್ದರು ಮತ್ತು لَا رَدَّ اللّٰهُ عَلَيْكَ ضَالَّتَكَ "ನೀನು ಕಳೆದು ಕೊಂಡ ವಸ್ತುವನ್ನು ಅಲ್ಲಾಹನು ನಿನಗೆ ಕೊಡಿಸದಿರಲಿ!" ಎಂದು ಹೇಳುತ್ತಿದ್ದರು.

11. ಮಸೀದಿಗೆ ಪ್ರವೇಶಿಸುವಾಗ ಮೊದಲು ಬಲ ಹೆಜ್ಜೆ ಇರಿಸಿ ಪ್ರವಾದಿವರ್ಯರ(ಸ) ಮೇಲೆ ಸ್ವಸ್ತಿ ವಚನ (ಸಲಾತ್) ಪಠಿಸಿರಿ. ಆ ಬಳಿಕ ಪ್ರಾರ್ಥಿಸಿರಿ. ಪ್ರವಾದಿ(ಸ) ಹೇಳುತ್ತಾರೆ, "ನಿಮ್ಮ ಪೈಕಿ ಯಾರಾದರೂ ಮಸೀದಿಗೆ ಬಂದಾಗ ಮೊದಲು ಪ್ರವಾದಿಯ ಮೇಲೆ ಸಲಾತ್ ಹೇಳಲಿ, ತರುವಾಯ ಈ ದುಆ(ಪ್ರಾರ್ಥನೆ) ಪಠಿಸಲಿ".

اَللّٰهُمَّ افْتَحْ لِیْ اَبْوَابَ رَحْمَتِكَ (مسلم)

"ಅಲ್ಲಾಹುಮ್ಮಫ್‌ತಹ್‌ಲೀ ಅಬ್‌ವಾಬ ರಹ್ಮತಿಕ".

(ಓ ಅಲ್ಲಾಹ್! ನನಗೆ ನಿನ್ನ ಕರುಣೆಯ ದ್ವಾರಗಳನ್ನು ತೆರೆ.) (ಮುಸ್ಲಿಮ್)

ಮಸೀದಿಗೆ ಪ್ರವೇಶಿಸಿದ ಕೂಡಲೇ ಎರಡು ರಕಅತ್ ಐಚ್ಛಿಕ ನಮಾಝ್ ನಿರ್ವಹಿಸಿರಿ. ಇದನ್ನು ತಹಿಯ್ಯತುಲ್ ಮಸ್ಜಿದ್ ಎನ್ನುತ್ತಾರೆ. ಅಂತೆಯೇ ಪ್ರಯಾಣದಿಂದ ಮರಳಿದಾಗಲೂ ಮೊದಲು ಮಸೀದಿಗೆ ತೆರಳಿ ಎರಡು ರಕಅತ್ ನಮಾಝ್ ಮಾಡಿರಿ. ಆ ಬಳಿಕ ಮನೆಗೆ ಹೋಗಿರಿ. ಪ್ರವಾದಿ(ಸ) ಪ್ರಯಾಣದಿಂದ ಮರಳಿದಾಗ ಮೊದಲು ಮಸೀದಿಗೆ ಹೋಗಿ ಐಚ್ಛಿಕ ನಮಾಝ್ ನಿರ್ವಹಿಸುತ್ತಿದ್ದರು. ತರುವಾಯ ತಮ್ಮ ಮನೆಗೆ ತೆರಳುತ್ತಿದ್ದರು.

12. ಮಸೀದಿಯಿಂದ ಹೊರಡುವಾಗ ಮೊದಲು ಎಡ ಹೆಜ್ಜೆಯನ್ನಿಡಿರಿ. ತರುವಾಯ ಈ ರೀತಿ ಪ್ರಾರ್ಥಿಸಿರಿ,

اَللّٰهُمَّ اِنِّیْ اَسْئَلُكَ مِنْ فَضْلِكَ (مسلم)

"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಮಿನ್ ಫದ್‌ಲಿಕ".

(ಓ ಅಲ್ಲಾಹ್! ನಾನು ನಿನ್ನಿಂದ ನಿನ್ನ ಅನುಗ್ರಹಗಳನ್ನು ಯಾಚಿಸುತ್ತೇನೆ.) (ಮುಸ್ಲಿಮ್)

13. ಮಸೀದಿಯಲ್ಲಿ ಅದಾನ್ ಮತ್ತು ಸಾಮೂಹಿಕ ನಮಾಝ್ ಕ್ರಮಪ್ರಕಾರ ನಡೆಯುವಂತೆ ವ್ಯವಸ್ಥೆ ಮಾಡಿರಿ. ನಿಮ್ಮಲ್ಲಿ ಧರ್ಮ ಮತ್ತು ಚಾರಿತ್ರ್ಯದಲ್ಲಿ ಅತ್ಯುತ್ತಮವಾಗಿರು

ವವರನ್ನೇ ಮುಅದ್ದಿನ್ (ನಮಾಝ್‌ನ ಕರೆ ನೀಡುವವರು) ಮತ್ತು ಇಮಾಮ್ ಆಗಿ ನೇಮಿಸಿರಿ. ಸಾಧ್ಯವಿದ್ದಷ್ಟು ಈ ಕಾರ್ಯವನ್ನು ಸಂಬಳ ಪಡೆಯದೆಯೇ ಸ್ವಇಚ್ಛೆಯಿಂದ ಪರಲೋಕದ ಪ್ರತಿಫಲಕ್ಕಾಗಿ ನೆರವೇರಿಸುವವರಿಗೆ ವಹಿಸಿಕೊಡಲು ಪ್ರಯತ್ನಿಸಿರಿ.

14. ಅದಾನ್ ಆದ ಬಳಿಕ ಈ ರೀತಿ ಪ್ರಾರ್ಥಿಸಿರಿ:

اَللّٰهُمَّ رَبَّ هٰذِهِ الدَّعْوَةِ التَّامَّةِ وَالصَّلٰوةِ الْقَائِمَةِ اٰتِ مُحَمَّدَنِ الْوَسِيْلَةَ

وَالْفَضِيْلَةَ وَالدَّرَجَةَ الرَّفِيْعَةَ وَابْعَثْهُ مَقَامًا مَّحْمُوْدًانِ الَّذِىْ وَعَدْتَّهُ

**"ಅಲ್ಲಾಹುಮ್ಮ ರಬ್ಬಹಾದಿಹಿದ್ದಅ್‌ವತಿತ್ತಾಮ್ಮತಿ ವಸ್ಸಲಾತಿಲ್ ಕಾಇಮತಿ ಆತಿ ಮುಹಮ್ಮದನಿಲ್ ವಸೀಲತ ವಲ್ ಫದೀಲತ ವಬ್‌ಅಸ್‌ಹು ಮಕಾಮಮ್ಮಹ್‌ಮೂದನಿಲ್ಲದೀ ವಅತ್ತಹೂ".**

(ಓ ಅಲ್ಲಾಹ್! ಈ ಪರಿಪೂರ್ಣ ಕರೆ ಮತ್ತು ಈ ನಿಲ್ಲುವ ನಮಾಝ್‌ನ ಒಡೆಯನೇ! ಮುಹಮ್ಮದ್‌ರಿಗೆ(ಸ) ನಿನ್ನ ಸಾಮೀಪ್ಯ ಮತ್ತು ಔನ್ನತ್ಯವನ್ನು ದಯಪಾಲಿಸು! ನೀನು ಅವರಿಗೆ ವಾಗ್ದಾನ ಮಾಡಿರುವ ಮಕಾಮುಮಹ್ಮೂದ್ (ಅತ್ಯುನ್ನತ ಸ್ತುತ್ಯರ್ಹ ಸ್ಥಾನ)ನಲ್ಲಿ ಅವರನ್ನು ಪ್ರತಿಷ್ಠಾಪಿಸು.)

"ಯಾರು ಅದಾನ್ ಕೇಳಿದ ಬಳಿಕ ಈ ರೀತಿ ಪ್ರಾರ್ಥಿಸುವರೋ ಅವರು ನಿರ್ಣಾಯಕ ದಿನದಂದು ನನ್ನ ಶಿಫಾರಸಿಗೆ ಅರ್ಹರಾಗುವರು" ಎಂದು ಪ್ರವಾದಿ(ಸ) ಹೇಳಿರುವರು. (ಬುಖಾರಿ)

15. ಮುಅದ್ದಿನ್ ಅದಾನ್ ಕರೆ ಕೊಡುವಾಗ ನೀವು ಆ ವಾಕ್ಯಗಳನ್ನು ಪುನರುಚ್ಚರಿಸಿರಿ. ಆದರೆ ಅವರು 'ಹಯ್ಯ ಅಲಸ್ಸಲಾತ್' ಮತ್ತು 'ಹಯ್ಯ ಅಲಲ್ ಫಲಾಹ್' ಎಂದಾಗ ನೀವು

لَا حَوْلَ وَلَا قُوَّةَ اِلَّا بِاللّٰهِ الْعَلِىِّ الْعَظِيْمِ

**"ಲಾ ಹೌಲ ವಲಾ ಕುವ್ವತ ಇಲ್ಲಾ ಬಿಲ್ಲಾಹಿಲ್ ಅಲಿಯ್ಯಿಲ್ ಅಝೀಮ್".**

(ಅತ್ಯುನ್ನತನೂ ಮಹಾನನೂ ಆದ ಅಲ್ಲಾಹನ ಹೊರತು ಇನ್ನಾರಲ್ಲಿಯೂ ಶಕ್ತಿ ಸಾಮರ್ಥ್ಯಗಳಿಲ್ಲ.) 'ಮುಅದ್ದಿನ್' ಪ್ರಭಾತದ ನಮಾಝ್ ಕರೆಯಲ್ಲಿ **'ಅಸ್ಸಲಾತು ಖೈರುಮ್ಮಿನನ್ನೌಮ್'** ಎಂದಾಗ 'ಸದಕ್ತವಬರರ್ತ' ಅರ್ಥಾತ್ 'ನೀವು ಸತ್ಯ ಹೇಳಿದಿರಿ, ಒಳಿತು ನುಡಿದಿರಿ' ಎಂದು ಉತ್ತರಿಸಿರಿ.

16. ತಕ್ಬೀರ್ (ನಮಾಝ್‌ಗೆ ನಿಲ್ಲುವಾಗ ಕೊಡುವ ಕರೆ) ಹೇಳುವವರು 'ಕದ್ ಕಾಮತಿಸ್ಸಲಾತು' ಎಂದಾಗ ಉತ್ತರದ ರೂಪದಲ್ಲಿ ಈ ರೀತಿ ಹೇಳಿರಿ,

اَقَامَهَا اللّٰهُ وَاَدَامَهَا

**"ಅಕಾಮಹಲ್ಲಾಹು ವ ಅದಾಮಹಾ".** (ಅಲ್ಲಾಹನು ಇದನ್ನು ಸದಾ ಉಳಿಸಲಿ.)

17. ಮಹಿಳೆಯರು ಮಸೀದಿಗೆ ಹೋಗುವ ಬದಲು ಮನೆಗಳಲ್ಲೇ ನಮಾಝ್ ನಿರ್ವಹಿಸಲಿ. ಒಮ್ಮೆ ಹ. ಅಬೂ ಹುಮೈದ್ ಸಾಇದೀ ಅವರ ಪತ್ನಿ ಪ್ರವಾದಿವರ್ಯರಲ್ಲಿ(ಸ) ಈ ರೀತಿ ಬಿನ್ನವಿಸಿದರು: "ಓ ಅಲ್ಲಾಹನ ಸಂದೇಶವಾಹಕರೇ! ನನಗೆ ನಿಮ್ಮೊಂದಿಗೆ ನಮಾಝ್ ಮಾಡುವ ಅತೀವ ಬಯಕೆಯಿದೆ.' ಆಗ ಪ್ರವಾದಿ(ಸ), "ನನಗೆ ನಿಮ್ಮ ಬಯಕೆಯ ಬಗ್ಗೆ ತಿಳಿದಿದೆ. ಆದರೆ ನೀವು ಮನೆಯ ಕೋಣೆಯಲ್ಲಿ ನಮಾಝ್ ಮಾಡುವುದು ಜಗಲಿಯಲ್ಲಿ ನಮಾಝ್ ಮಾಡುವುದಕ್ಕಿಂತ ಉತ್ತಮ. ಜಗಲಿಯಲ್ಲಿ ನಮಾಝ್ ಮಾಡುವುದು ಹೊರಾಂಗಣ ದಲ್ಲಿ ನಮಾಝ್ ಮಾಡುವುದಕ್ಕಿಂತ ಉತ್ತಮ" ಎಂದು ಹೇಳಿದರು.

ಆದರೆ ಮಹಿಳೆಯರೂ ಮಸೀದಿಯ ಆವಶ್ಯಕತೆಗಳನ್ನು ಪೂರೈಸಲು ಸಾಧ್ಯವಿದ್ದಷ್ಟು ಶ್ರಮಿಸಬೇಕು. ಅವರು ನೀರಿನ ವ್ಯವಸ್ಥೆ, ಚಾಪೆಯ ವ್ಯವಸ್ಥೆಯಲ್ಲಿ ನೆರವಾಗಲಿ. ಸುಗಂಧ ದ್ರವ್ಯಗಳನ್ನು ರವಾನಿಸಬೇಕು. ಮಸೀದಿಯೊಂದಿಗೆ ಹೃದಯಂಗಮವಾದ ಸಂಬಂಧವಿರಿಸಿ ಕೊಳ್ಳಬೇಕು.

18. ದೊಡ್ಡ ಹುಡುಗರನ್ನು ನಿಮ್ಮ ಜೊತೆ ಮಸೀದಿಗೆ ಕರೆದೊಯ್ಯಿರಿ. ಮಾತೆಯರು ತಮ್ಮ ಮಕ್ಕಳಿಗೆ ಮಸೀದಿಗೆ ಹೋಗಲು ಪ್ರೇರಣೆ ನೀಡುತ್ತಿರಬೇಕು. ಇದರಿಂದ ಮಕ್ಕಳಲ್ಲಿ ನಮಾಝ್‌ನ ಬಗ್ಗೆ ಉತ್ಸಾಹ ಮೂಡುತ್ತದೆ. ಮಸೀದಿಯಲ್ಲಿ ಮಕ್ಕಳೊಂದಿಗೆ ಅತ್ಯಂತ ನಯವಾಗಿ ಪ್ರೀತಿ-ವಾತ್ಸಲ್ಯದಿಂದ ವರ್ತಿಸಿರಿ. ಅವರೇನಾದರೂ ತುಂಟತನ ಮಾಡಿದರೆ ಜರೆಯಬೇಡಿರಿ, ಶಪಿಸಬೇಡಿರಿ. ಪ್ರೀತಿಪೂರ್ವಕ ಅವರಿಗೆ ತಿಳಿಹೇಳಿರಿ. ಒಳಿತಿನ ಉಪದೇಶ ಮಾಡಿರಿ.

# ನಮಾಝ್

1. ನಮಾಝ್‌ಗಾಗಿ ನೈರ್ಮಲ್ಯದ ಬಗ್ಗೆ ಪೂರ್ಣ ಗಮನ ಹರಿಸಿರಿ. ವುಝೂ ಮಾಡು ವಾಗ ಹಲ್ಲುಜ್ಜುವ ಪರಿಪಾಠವಿಟ್ಟುಕೊಳ್ಳಿರಿ. ಪ್ರವಾದಿ(ಸ) ಈ ರೀತಿ ಹೇಳಿರುವರು. "ನಿರ್ಣಾಯಕ ದಿನದಂದು ನನ್ನ ಸಮುದಾಯದ ಚಿಹ್ನೆ ಅವರ ಹಣೆ ಮತ್ತು ವುಝೂವಿನ ಅಂಗಗಳ ಕಾಂತಿಯಾಗಿರುವುದು. ಯಾರು ತನ್ನ ಕಾಂತಿಯನ್ನು ವೃದ್ಧಿಸಬಯಸುವನೋ ವೃದ್ಧಿಸಲಿ".

2. ಶುದ್ಧ, ನಿರ್ಮಲ, ಗಂಭೀರ, ಸುಸಂಸ್ಕೃತ ಮತ್ತು ಯೋಗ್ಯ ಬಟ್ಟೆಬರೆಗಳನ್ನು ಧರಿಸಿಯೇ ನಮಾಝ್ ಮಾಡಿರಿ. ಪವಿತ್ರ ಕುರ್‌ಆನ್ ಈ ರೀತಿ ಹೇಳುತ್ತದೆ:

يَٰبَنِيٓ ءَادَمَ خُذُواْ زِينَتَكُمۡ عِندَ كُلِّ مَسۡجِدٖ

**"ಓ ಆದಮರ ಸಂತತಿಯವರೇ, ಉಪಾಸನೆಯ ಎಲ್ಲ ಸಂದರ್ಭಗಳಲ್ಲೂ ನಿಮ್ಮ 'ಅಲಂಕಾರ'ಗಳಿಂದ ಭೂಷಿತರಾಗಿರಿ". (ಪವಿತ್ರ ಕುರ್‌ಆನ್: 7:31)**

3. ನಮಾಝನ್ನು ಸಮಯ ನಿಷ್ಠೆಯೊಂದಿಗೆ ನೆರವೇರಿಸಿರಿ.

إِنَّ ٱلصَّلَوٰةَ كَانَتۡ عَلَى ٱلۡمُؤۡمِنِينَ كِتَٰبٗا مَّوۡقُوتٗا ﴿١٠٣﴾

**"ಸತ್ಯವಿಶ್ವಾಸಿಗಳ ಮೇಲೆ ಸಮಯ ನಿಷ್ಠೆಯೊಂದಿಗೆ ನಮಾಝ್ ಕಡ್ಡಾಯಗೊಳಿಸ ಲಾಗಿದೆ." (ಪವಿತ್ರ ಕುರ್‌ಆನ್, 4:103)**

ಒಮ್ಮೆ ಹ. ಅಬ್ದುಲ್ಲಾ ಬಿನ್ ಮಸ್‌ಊದ್(ರ) ಪ್ರವಾದಿವರ್ಯರಲ್ಲಿ(ಸ) ಈ ರೀತಿ ಪ್ರಶ್ನಿಸಿದರು, "ಓ ಪ್ರವಾದಿವರ್ಯರೇ! ಅಲ್ಲಾಹನ ಬಳಿ ಅತ್ಯಂತ ಪ್ರಿಯವಾದ ಕರ್ಮ ಯಾವುದು?" ಆಗ ಪ್ರವಾದಿ(ಸ) ಹೇಳಿದರು: "ನಮಾಝನ್ನು ಅದರ ಸಮಯದಲ್ಲಿ ನೆರವೇರಿ ಸುವುದು" ಪ್ರವಾದಿ(ಸ) ಹೀಗೂ ಹೇಳಿರುವರು: "ಅಲ್ಲಾಹನು ಐದು ಹೊತ್ತಿನ ನಮಾಝನ್ನು ಕಡ್ಡಾಯಗೊಳಿಸಿರುವನು. ಯಾರು ಒಳ್ಳೆಯ ರೀತಿಯಲ್ಲಿ ವುಝೂ ಮಾಡಿ ಸಮಯಕ್ಕೆ ಸರಿ ಯಾಗಿ ಭಯಭಕ್ತಿಯೊಂದಿಗೆ ಈ ನಮಾಝ್‌ಗಳನ್ನು ನೆರವೇರಿಸುತ್ತಾನೋ ಅವನನ್ನು ಕ್ಷಮಿಸು ವುದು ಅಲ್ಲಾಹನ ಮೇಲೆ ಅವನ ಹಕ್ಕಾಗಿ ಬಿಡುತ್ತದೆ. ಯಾರು ಈ ನಮಾಝ್‌ಗಳಲ್ಲಿ ಕುಂದು ಕೊರತೆ ಮಾಡುವರೋ ಅವರ ಕ್ಷಮೆ ಮತ್ತು ಮುಕ್ತಿಯ ಹೊಣೆ ಅಲ್ಲಾಹನ ಮೇಲಿಲ್ಲ. ಅವನು ಬಯಸಿದರೆ ಶಿಕ್ಷಿಸಬಹುದು ಅಥವಾ ಕ್ಷಮಿಸಲೂ ಬಹುದು". (ಮಾಲಿಕ್)

4. ನಮಾಝನ್ನು ಸದಾ ಸಂಘಟಿತವಾಗಿಯೇ ನೆರವೇರಿಸಿರಿ. ಒಂದು ವೇಳೆ ಸಂಘಟಿತ ನಮಾಝ್ ನೆರವೇರಿಸಲು ಸಾಧ್ಯವಾಗದೆ ಹೋದರೆ ಕಡ್ಡಾಯ ನಮಾಝ್‌ಗಳನ್ನು ಮಸೀದಿಯಲ್ಲೇ ನಿರ್ವಹಿಸಲು ಪ್ರಯತ್ನಿಸಿರಿ. ಐಚ್ಛಿಕ ನಮಾಝ್‌ಗಳನ್ನು ಮನೆಯಲ್ಲಿ ನಿರ್ವಹಿಸಿದರೂ ಉತ್ತಮವೇ. ಪ್ರವಾದಿ(ಸ) ಹೇಳಿರುವರು "ಓರ್ವ ವ್ಯಕ್ತಿ ನಲ್ವತ್ತು ದಿನಗಳ ತನಕ ಮೊದಲ ತಕ್ಬೀರ್‌ನೊಂದಿಗೆ ಸಂಘಟಿತ ನಮಾಝ್ ನೆರವೇರಿಸಿದರೆ ಅವನು ನಿಫಾಕ್ (ಕಪಟವಿಶ್ವಾಸ) ಮತ್ತು ನರಕಗಳೆರಡರಿಂದಲೂ ರಕ್ಷಿಸಲ್ಪಡುವನು". ಪ್ರವಾದಿ(ಸ) ಹೀಗೂ ಹೇಳಿರುವರು "ಜನರಿಗೆ ಸಂಘಟಿತ ನಮಾಝ್‌ನ ಪುಣ್ಯಫಲಗಳ ಬಗ್ಗೆ ತಿಳಿದರೆ ಅವರು ಸಹಸ್ರ ಅಡೆತಡೆಗಳಿದ್ದರೂ ಓಡೋಡಿ ಬರುವರು. ಸಾಮೂಹಿಕ ನಮಾಝ್‌ನ ಮೊದಲ ಪಂಕ್ತಿ ದೇವಚರರ (ಮಲಾಇಕ್) ಪಂಕ್ತಿಯಿದ್ದಂತೆ. ಒಬ್ಬಂಟಿಗನಾಗಿ ನಮಾಝ್ ಮಾಡುವುದಕ್ಕಿಂತ ಇಬ್ಬರ ಸಂಘಟಿತ ನಮಾಝ್ ಉತ್ತಮ. ಸಂಘಟಿತ ನಮಾಝ್‌ನಲ್ಲಿ ಜನರು ಹೆಚ್ಚಿದಂತೆಯೇ ಅದು ಅಲ್ಲಾಹನಿಗೆ ಪ್ರಿಯವಾಗುತ್ತದೆ. (ಅಬೂದಾವೂದ್)

5. ನಮಾಝ್ ಪೂರ್ಣ ಶಾಂತಿ ಸಮಾಧಾನದೊಂದಿಗೆ ಮಾಡಿರಿ. ರುಕೂಅ್(ಬಾಗುವಿಕೆ) ಮತ್ತು ಸುಜೂದ್ (ಸಾಷ್ಟಾಂಗ)ಗಳನ್ನು ಸಾವಕಾಶವಾಗಿ ನೆರವೇರಿಸಿರಿ. 'ರುಕೂಅ್'ನಿಂದ ಎದ್ದು ನೇರವಾಗಿ ಸಾವಧಾನವಾಗಿ ನಿಲ್ಲಿರಿ. ಆ ಬಳಿಕ ಸುಜೂದ್ ಮಾಡಿರಿ. ಅಂತೆಯೇ ಎರಡು ಸುಜೂದ್‌ಗಳ ಮಧ್ಯೆ ಸಾವಧಾನವಾಗಿ ಕುಳಿತು ಈ ರೀತಿ ಪ್ರಾರ್ಥಿಸಿರಿ:

اَللّٰهُمَّ اغْفِرْلِىْ وَارْحَمْنِىْ وَاهْدِنِىْ وَاجْبُرْنِىْ وَعَافِنِىْ وَارْزُقْنِىْ

**"ಅಲ್ಲಾಹುಮ್ಮಗ್‌ಫಿರ್‌ಲೀ ವರ್‌ಹಮ್ನೀ ವಹ್‌ದಿನೀ ವಜ್‌ಬುರ್‌ನೀ ವಆಫಿನೀ ವರ್‌ಝುಕ್‌ನೀ".**

(ಓ ಅಲ್ಲಾಹ್! ನನ್ನನ್ನು ಕ್ಷಮಿಸು, ನನ್ನ ಮೇಲೆ ಕರುಣೆ ತೋರು, ನನ್ನನ್ನು ಸನ್ಮಾರ್ಗ ದಲ್ಲಿ ನಡೆಸು, ನನ್ನ ದುರ್ದೆಶೆಯನ್ನು ನೀಗಿಸು, ನನಗೆ ಶಾಂತಿ ನೀಡು ಮತ್ತು ನನಗೆ ಆಹಾರ ವೊದಗಿಸು.) (ಅಬೂದಾವೂದ್)

ಪ್ರವಾದಿ(ಸ) ಹೇಳುತ್ತಾರೆ: "ಯಾರು ನಮಾಝನ್ನು ಚೆನ್ನಾಗಿ ನೆರವೇರಿಸುವನೋ 'ನಮಾಝ್' ಅವನಿಗಾಗಿ ಹೀಗೆ ಪ್ರಾರ್ಥಿಸುತ್ತದೆ: ನೀನು ನನ್ನನ್ನು ರಕ್ಷಿಸಿದಂತೆ ದೇವನು ನಿನ್ನನ್ನೂ ರಕ್ಷಿಸಲಿ".

ಪ್ರವಾದಿ(ಸ) ಹೀಗೂ ಹೇಳಿರುವರು: "ಅತ್ಯಂತ ಕೆಟ್ಟ ಕಳ್ಳತನ ನಮಾಝ್‌ನ ಕಳ್ಳತನವಾ ಗಿದೆ" ಜನರು ಕೇಳಿದರು, "ಓ ಪ್ರವಾದಿವರ್ಯರೇ! ನಮಾಝ್‌ನಲ್ಲಿ ಕಳ್ಳತನ ಮಾಡುವುದು ಹೇಗೆ?" ಆಗ ಪ್ರವಾದಿ(ಸ) "ರುಕೂಅ್ ಮತ್ತು ಸುಜೂದ್‌ಗಳನ್ನು ಅರ್ಧಂಬರ್ಧ ಮಾಡುವ ಮೂಲಕ" ಎಂದು ಉತ್ತರಿಸಿದರು.

6. ನಮಾಝ್‌ನ ಕರೆ ಕೇಳುತ್ತಲೇ ನಮಾಝ್‌ನ ಸಿದ್ಧತೆ ಆರಂಭಿಸಿರಿ. ವುಝೂ ಮಾಡಿದ ಕೂಡಲೇ ಮಸೀದಿಗೆ ಧಾವಿಸಿರಿ. ಮೌನವಾಗಿ ಪ್ರಥಮ ಪಂಕ್ತಿಯಲ್ಲಿ ಕುಳಿತು ಸಂಘಟಿತ ನಮಾಝ್‌ಗಾಗಿ ಕಾಯುತ್ತಿರಿ. ನಮಾಝ್‌ನ ಕರೆ ಕೇಳಿದ ಬಳಿಕ ಆಲಸ್ಯ ಮತ್ತು

ಅಸಡ್ಡೆಯೊಂದಿಗೆ ತಡ ಮಾಡುವುದು ಮತ್ತು ಒಲ್ಲದ ಮನಸ್ಸಿನಿಂದ ಮಸೀದಿಗೆ ಹೋಗುವುದು ಕಪಟ ವಿಶ್ವಾಸಿಗಳ ಲಕ್ಷಣವಾಗಿದೆ.

7. ಅದಾನ್ (ನಮಾಝ್‌ನ ಕರೆ) ಕೂಡ ಉತ್ಸಾಹದಿಂದ ಕೊಡಿರಿ. ಒಬ್ಬರು ಪ್ರವಾದಿಯವರಲ್ಲಿ(ಸ) ಈ ರೀತಿ ಅರಿಕೆ ಮಾಡಿದರು, ಓ ಪ್ರವಾದಿವರ್ಯರೇ! ನನ್ನನ್ನು ಸ್ವರ್ಗಕ್ಕೆ ಒಯ್ಯಬಲ್ಲ ಯಾವುದಾದರೂ ಕಾರ್ಯವನ್ನು ಹೇಳಿಕೊಡಿರಿ. ಆಗ ಪ್ರವಾದಿ(ಸ), "ನಮಾಝ್‌ಗಾಗಿ ಅದಾನ್ ಹೇಳಿರಿ" ಎಂದರು. ಪ್ರವಾದಿ(ಸ) ಹೇಳಿದರು: "ಅದಾನ್" ಕೊಡುವವನ ಧ್ವನಿ ಯಾರಿಗೆಲ್ಲಾ ಮುಟ್ಟುವುದೋ ಅವರು ನಿರ್ಣಾಯಕ ದಿನದಂದು ಅವನ ಪರವಾಗಿ ಸಾಕ್ಷ್ಯ ನುಡಿಯುವರು. ಕಾಡಿನಲ್ಲಿ ಆಡುಗಳನ್ನು ಮೇಯಿಸುತ್ತಿರುವವನು ಕೂಡ ನಮಾಝ್‌ನ ಸಮಯ ಬಂದಾಗ ಉಚ್ಚ ಸ್ವರದಲ್ಲಿ 'ಅದಾನ್' ಹೇಳಿದರೆ ಅವರ ಧ್ವನಿ ತಲಪುವ ತನಕದ ಎಲ್ಲಾ ವಸ್ತುಗಳೂ ನಿರ್ಣಾಯಕ ದಿನದಂದು ಅವನ ಪರವಾಗಿ ಸಾಕ್ಷ್ಯ ಹೇಳುವುವು". (ಬುಖಾರಿ)

8. ನೀವು ನಮಾಝ್‌ನ ಇಮಾಮ್ (ನೇತೃತ್ವ ವಹಿಸುವವರು) ಆಗಿದ್ದರೆ ಎಲ್ಲಾ ಶಿಷ್ಟಾಚಾರ ಮತ್ತು ನಿಬಂಧನೆಗಳನ್ನು ಪಾಲಿಸುತ್ತಾ ನಮಾಝ್ ಮಾಡಿಸಿರಿ. ಅನುಯಾಯಿಗಳ ಅನುಕೂಲವನ್ನು ಪರಿಗಣಿಸಿ ಚೆನ್ನಾಗಿ ನಮಾಝ್ ಮಾಡಿಸಿರಿ. ಪ್ರವಾದಿ(ಸ) ಹೇಳಿರುವರು: "ಯಾವ ಇಮಾಮ್ ತಾನು ಅನುಯಾಯಿಗಳ ನಮಾಝ್‌ನ ಜಾಮೀನು ಎಂಬ ಪ್ರಜ್ಞೆಯೊಂದಿಗೆ ಸರಿಯಾಗಿ ನಮಾಝ್ ಮಾಡಿಸುವರೋ ಅವರಿಗೆ ಅನುಯಾಯಿಗಳ ನಮಾಝ್‌ನ ಪ್ರತಿಫಲವೂ ಸಿಗುತ್ತದೆ. ಅವರಿಗೆ ಅನುಯಾಯಿಗಳಿಗೆ ಸಿಗುವಷ್ಟೇ ಪುಣ್ಯ ಲಭಿಸುತ್ತದೆ. ಅನುಯಾಯಿಗಳ ಪುಣ್ಯಫಲದಲ್ಲಿ ಏನೂ ಕಡಿತ ಮಾಡಲಾಗದು". (ತಬ್ರಾನಿ)

9. ಮನದಲ್ಲಿ ದೇವನ ಮಹಾತ್ಮೆ ಮತ್ತು ಪ್ರತಾಪ ನಾಟುವಂತೆ ಹಾಗೂ ದೇವ ಭಯವೂ ಆತ್ಮಶಾಂತಿಯೂ ಲಭ್ಯವಾಗುವಂತೆ ಪೂರ್ಣ ಭಯಭಕ್ತಿಯೊಂದಿಗೆ ನಮಾಝ್ ಮಾಡಿರಿ. ನಮಾಝ್‌ನ ವೇಳೆ ಅನಗತ್ಯ ಕೈ ಕಾಲು ಅಲ್ಲಾಡಿಸುವುದು, ಮೈ ತುರಿಸುವುದು, ಗಡ್ಡ ನೇವರಿಸುವುದು, ಮೂಗಿಗೆ ಬೆರಳು ಹಾಕುವುದು, ಬಟ್ಟೆಯನ್ನು ಸರಿಪಡಿಸುವುದು ಇತ್ಯಾದಿ ಶಿಷ್ಟಾಚಾರಕ್ಕೆ ವಿರುದ್ಧವಾದ ಕೃತ್ಯಗಳಾಗಿವೆ. ಅವುಗಳನ್ನು ಪೂರ್ಣವಾಗಿ ವರ್ಜಿಸಿರಿ.

10. ನಮಾಝ್‌ನ ಮೂಲಕ ದೇವ ಸಾಮೀಪ್ಯವನ್ನು ಗಳಿಸಿರಿ. ನೀವು ಅಲ್ಲಾಹನನ್ನು ನೋಡುತ್ತಿರುವಿರೋ ಎಂಬಂತೆ ನಮಾಝ್ ಮಾಡಿರಿ. ಅಥವಾ ಕನಿಷ್ಠಪಕ್ಷ ಅಲ್ಲಾಹನು ನಿಮ್ಮನ್ನು ನೋಡುತ್ತಿದ್ದಾನೆಂಬುದನ್ನು ಮರೆಯದಿರಿ. ಪ್ರವಾದಿ(ಸ) ಹೇಳುತ್ತಾರೆ:

"ದಾಸನು ಸಾಷ್ಟಾಂಗ ಮಾಡುತ್ತಿರುವಾಗ ಅಲ್ಲಾಹನಿಗೆ ಅತ್ಯಂತ ನಿಕಟನಾಗಿರುತ್ತಾನೆ. ಆದ್ದರಿಂದ ನೀವು ಸಾಷ್ಟಾಂಗ ಮಾಡಿದಾಗ ಅದರಲ್ಲಿ ಧಾರಾಳ ಪ್ರಾರ್ಥನೆ ಮಾಡಿರಿ". (ಮುಸ್ಲಿಮ್)

11. ನಮಾಝನ್ನು ಉತ್ಸಾಹ-ಲವಲವಿಕೆಯೊಂದಿಗೆ ನೆರವೇರಿಸಿರಿ. ಒಲ್ಲದ ಮನಸ್ಸಿನೊಂದಿಗೆ ಮಾಡುವ ಸಾಂಪ್ರದಾಯಿಕ ನಮಾಝ್ ವಾಸ್ತವದಲ್ಲಿ ನಮಾಝೇ ಅಲ್ಲ. ಒಂದು ಹೊತ್ತಿನ ನಮಾಝ್ ಮುಗಿಸಿದ ತರುವಾಯ ಮುಂದಿನ ನಮಾಝನ್ನು ಕಾತರ ಮತ್ತು ಉತ್ಸಾಹದಿಂದ ನಿರೀಕ್ಷಿಸುತ್ತಿರಿ. ಒಂದು ದಿನ ಮಗ್ರಿಬ್ ನಮಾಝ್ ಮುಗಿಸಿ ಕೆಲವು ಮಂದಿ

ಇಶಾ ನಮಾಝ್‌ನ ಪ್ರತೀಕ್ಷೆಯಲ್ಲಿದ್ದರು. ಆಗ ಪ್ರವಾದಿ(ಸ) ಮಸೀದಿಗೆ ಆಗಮಿಸಿದರು. ವೇಗವಾಗಿ ಬಂದ ಕಾರಣ ಅವರು ಏದುಸಿರು ಬಿಡುತ್ತಿದ್ದರು. ಪ್ರವಾದಿ(ಸ) ಹೇಳಿದರು: "ಜನರೇ! ಸಂತೋಷಪಡಿರಿ. ನಿಮ್ಮ ಪ್ರಭು ಆಕಾಶದ ಒಂದು ಬಾಗಿಲು ತೆರೆದು ನಿಮ್ಮನ್ನು ದೇವಚರರಿಗೆ ತೋರಿಸುತ್ತಾ ಅಭಿಮಾನದೊಂದಿಗೆ, "ನೋಡಿರಿ! ನನ್ನ ದಾಸರು ಒಂದು ನಮಾಝ್‌ಗಾಗಿ ಕಾಯುತ್ತಿದ್ದಾರೆ ಎಂದು ಹೇಳಿದನು". (ಇಬ್ನುಮಾಜಃ)

12. ಅಶ್ರದ್ಧರು ಮತ್ತು ಬೇಜವಾಬ್ದಾರರಂತೆ 'ಒಮ್ಮೆ ಮುಗಿಸಿ ಬಿಡೋಣ' ಎಂಬಂತೆ ನಮಾಝ್ ಆತುರಾತುರವಾಗಿ ನೆರವೇರಿಸಬೇಡಿರಿ. ಮನಸಾರೆ ದೇವನನ್ನು ಸ್ಮರಿಸಿರಿ. ಮನಸ್ಸು, ಮಸ್ತಿಷ್ಕ, ಭಾವನೆಗಳು, ವಿಕಾರಗಳು, ಚಿಂತೆ, ವಿಚಾರಗಳೊಂದಿಗೆ ಪೂರ್ಣವಾಗಿ ಅಲ್ಲಾಹನತ್ತ ಗಮನವಿರಿಸಿ ಪೂರ್ಣ ಏಕನಿಷ್ಠೆ ಮತ್ತು ಧ್ಯಾನದೊಂದಿಗೆ ನಮಾಝ್ ಮಾಡಿರಿ. ದೇವಸ್ಮರಣೆಯಿಂದ ತುಂಬಿದ ನಮಾಝ್ ಮಾತ್ರ ಯಥಾರ್ಥ ನಮಾಝ್ ಆಗಿದೆ. ಕಪಟ ವಿಶ್ವಾಸಿಗಳ ನಮಾಝ್ ನಲ್ಲಿ ದೇವಸ್ಮರಣೆ ಇರುವುದಿಲ್ಲ.

13. ನಮಾಝ್‌ನ ಹೊರಗೂ ನಮಾಝ್‌ನ ಹಕ್ಕುಗಳನ್ನು ಪೂರ್ತಿಗೊಳಿಸಿರಿ. ಪೂರ್ಣ ಜೀವನವನ್ನೇ ನಮಾಝ್‌ನ ಕನ್ನಡಿಯಾಗಿ ಪರಿವರ್ತಿಸಿರಿ. "ನಮಾಝ್ ಅಶ್ಲೀಲತೆ ಮತ್ತು ಕೆಡುಕುಗಳಿಂದ ತಡೆಯುತ್ತದೆ" ಎಂದು ಕುರ್‌ಆನ್ ಹೇಳುತ್ತದೆ. ಪ್ರವಾದಿ(ಸ) ಇದನ್ನು ಅತ್ಯಂತ ಮನಮುಟ್ಟುವ ಉದಾಹರಣೆ ನೀಡಿ ಈ ರೀತಿ ವಿವರಿಸಿರುವರು: ಅವರು ಒಂದು ಒಣ ಮರದ ರೆಂಬೆಯನ್ನು ಜೋರಾಗಿ ಅಲುಗಾಡಿಸಿದರು. ಅದರಲ್ಲಿದ್ದ ಎಲೆಗಳೆಲ್ಲಾ ಉದುರಿದುವು. ತರುವಾಯ ಪ್ರವಾದಿ(ಸ) "ನಮಾಝ್ ಮಾಡುವವರ ಪಾಪಗಳು ಈ ಗೆಲ್ಲಿನ ಎಲೆಗಳು ಉದುರಿ ದಂತೆಯೇ ಉದುರುವುವು" ಎಂದರು. ಆ ಬಳಿಕ ಈ ಕೆಳಗಿನ ಕುರ್‌ಆನ್ ವಾಕ್ಯವನ್ನು ಪಠಿಸಿದರು:

وَأَقِمِ الصَّلَوٰةَ طَرَفَيِ النَّهَارِ وَزُلَفًا مِّنَ الَّيْلِ ۚ إِنَّ الْحَسَنَٰتِ يُذْهِبْنَ
السَّيِّـَٔاتِ ۚ ذَٰلِكَ ذِكْرَىٰ لِلذَّٰكِرِينَ ﴿١١٤﴾

**"ಹಗಲಿನ ಉಭಯ ಕೊನೆಗಳಲ್ಲೂ ರಾತ್ರಿ ಸ್ವಲ್ಪ ಹೊತ್ತು ಕಳೆದ ಬಳಿಕವೂ ನಮಾಝನ್ನು ಸಂಸ್ಥಾಪಿಸಿರಿ. ವಾಸ್ತವದಲ್ಲಿ ಪುಣ್ಯ ಕಾರ್ಯಗಳು ಪಾಪಕಾರ್ಯಗಳನ್ನು ದೂರೀಕರಿಸುತ್ತವೆ. ಇದು ಅಲ್ಲಾಹನನ್ನು ಸ್ಮರಿಸುವವರಿಗೊಂದು ಸ್ಮರಣೆಯಾಗಿರುತ್ತದೆ."**

**(ಪವಿತ್ರ ಕುರ್‌ಆನ್, 11:114)**

14. ನಮಾಝ್‌ನಲ್ಲಿ ಕುರ್‌ಆನ್ ಸಾವಧಾನವಾಗಿ ಪಠಿಸಿರಿ. ಇತರ ಜಪ ಮತ್ತು ಪ್ರಾರ್ಥನೆ ಗಳನ್ನು ಸಾವಕಾಶವಾಗಿ ಮನಃಪೂರ್ವಕ, ಧ್ಯಾನದೊಂದಿಗೆ ಪಠಿಸಿರಿ. ಪಠಿಸುವವುಗಳ ಅರ್ಥ ತಿಳಿದರೆ ಇನ್ನಷ್ಟು ಉತ್ಸಾಹ ಬರುತ್ತದೆ. ಆಗ ನಮಾಝ್ ಯಥಾರ್ಥದ ನಮಾಝ್ ಎನಿಸುತ್ತದೆ.

15. ನಮಾಝನ್ನು ಎಡೆಬಿಡದೆ ನಿರ್ವಹಿಸಿರಿ. ಯಾವುದೇ ನಮಾಝನ್ನು ಕಳಕೊಳ್ಳ ಬೇಡಿರಿ. ನಿರಂತರವಾಗಿ ಕ್ರಮಪ್ರಕಾರ ನಮಾಝ್ ಮಾಡುವುದು ಸತ್ಯವಿಶ್ವಾಸಿಗಳ ಮೂಲಭೂತ ಗುಣವಾಗಿದೆ.

إِلَّا الْمُصَلِّيْنَ ﴿٢٢﴾ الَّذِيْنَ هُمْ عَلٰى صَلَاتِهِمْ دَآئِمُوْنَ ﴿٢٣﴾

"ನಮಾಝ್ ಮಾಡುವವರು ತಮ್ಮ ನಮಾಝನ್ನು ಕ್ರಮಬದ್ಧವಾಗಿ ನೆರವೇರಿಸುತ್ತಾರೆ".

(ಪವಿತ್ರ ಕುರ್‌ಆನ್, 70:22-23)

16. ಕಡ್ಡಾಯ ನಮಾಝ್‌ಗಳನ್ನು ಪಾಲಿಸುವುದರ ಜೊತೆಗೆ ಐಚ್ಛಿಕ ನಮಾಝ್‌ಗಳನ್ನು ರೂಢಿಸಿರಿ. ಹೆಚ್ಚೆಚ್ಚು ಐಚ್ಛಿಕ ನಮಾಝ್‌ಗಳನ್ನು ಮಾಡಲು ಪ್ರಯತ್ನಿಸಿರಿ. ಪ್ರವಾದಿ(ಸ) ಹೇಳುತ್ತಾರೆ: "ಯಾವನು ಕಡ್ಡಾಯ ನಮಾಝ್‌ಗಳ ಹೊರತು ಹಗಲು ರಾತ್ರಿ* 12 ರಕಅತ್ (ನಮಾಝ್‌ನ ಒಂದು ಪ್ರಮಾಣ)ಗಳನ್ನು ನೆರವೇರಿಸುತ್ತಾನೋ ಅವನಿಗಾಗಿ ಸ್ವರ್ಗದಲ್ಲಿ ಒಂದು ಭವನ ನಿರ್ಮಿಸಲಾಗುತ್ತದೆ". (ಮುಸ್ಲಿಮ್)

17. ಐಚ್ಛಿಕ ನಮಾಝ್‌ಗಳನ್ನು ಕೆಲವೊಮ್ಮೆ ಮನೆಯಲ್ಲೂ ನೆರವೇರಿಸಿರಿ. "ಮಸೀದಿಯಲ್ಲಿ ನಮಾಝ್ ಮಾಡಿದ ಬಳಿಕ ಕೆಲವು ನಮಾಝ್‌ಗಳನ್ನು ಮನೆಯಲ್ಲೂ ನೆರವೇರಿಸಿರಿ. ಈ ನಮಾಝ್‌ನ ಹೇತುವಾಗಿ ಅಲ್ಲಾಹನು ನಿಮ್ಮ ಮನೆಯನ್ನು ಮಂಗಳಮಯ ಮಾಡುವನು" ಎಂದು ಪ್ರವಾದಿ(ಸ) ಹೇಳಿರುವರು. (ಮುಸ್ಲಿಮ್)

ಪ್ರವಾದಿವರ್ಯರು(ಸ) ಐಚ್ಛಿಕ ನಮಾಝ್‌ಗಳನ್ನು ಹೆಚ್ಚಾಗಿ ಮನೆಯಲ್ಲೇ ನಿರ್ವಹಿಸುತ್ತಿದ್ದರು.

18. ಫಜ್ರ್(ಪ್ರಭಾತ) ನಮಾಝ್‌ಗಾಗಿ ಮನೆಯಿಂದ ಹೊರಟಾಗ ಈ ರೀತಿ ಪ್ರಾರ್ಥಿಸಿರಿ.

اَللّٰهُمَّ اجْعَلْ فِيْ قَلْبِيْ نُوْرًا وَّفِيْ بَصَرِيْ نُوْرًا وَّفِيْ سَمْعِيْ نُوْرًا وَّعَنْ يَمِيْنِيْ نُوْرًا وَّعَنْ شِمَالِيْ نُوْرًا وَّمِنْ خَلْفِيْ نُوْرًا وَّمِنْ اَمَامِيْ نُوْرًا وَّاجْعَلْ لِّيْ نُوْرًا وَّفِيْ عَصَبِيْ نُوْرًا وَّفِيْ لَحْمِيْ نُوْرًا وَّفِيْ دَمِيْ نُوْرًا وَّفِيْ شَعْرِيْ نُوْرًا وَّفِيْ جِلْدِيْ نُوْرًا وَّفِيْ لِسَانِيْ نُوْرًا وَّاجْعَلْ فِيْ نَفْسِيْ نُوْرًا وَّاَعْظِمْ لِيْ نُوْرًا وَّاجْعَلْنِيْ نُوْرًا وَّاجْعَلْ مِنْ فَوْقِيْ نُوْرًا وَّمِنْ تَحْتِيْ نُوْرًا اَللّٰهُمَّ اَعْطِنِيْ نُوْرًا

(حصن حصين)

"ಅಲ್ಲಾಹುಮ್ಮಜ್‌ಅಲ್ ಫೀ ಕಲ್ಬೀ ನೂರನ್ ವಫೀ ಬಸರೀ ನೂರನ್ ವಫೀ ಸಮ್‌ಈ ನೂರನ್ ವಅನ್ ಯಮೀನೀ ನೂರನ್ ವಅನ್ ಶಿಮಾಲೀ ನೂರನ್ ವಮಿನ್ ಖಲ್‌ಫೀ

* ಅರ್ಥಾತ್– ಕಡ್ಡಾಯ ನಮಾಝ್‌ನೊಂದಿಗೆ ನೆರವೇರಿಸುವ ಈ ಕೆಳಗಿನ ಐಚ್ಛಿಕ ನಮಾಝ್‌ಗಳು: ಫಜ್ರ್‌ಗೆ ಮೊದಲು 2 ರಕಅತ್, ಝುಹರ್‌ನೊಂದಿಗೆ 6 ರಕಅತ್, ಮಗ್ರಿಬ್‌ಗೆ 2 ರಕಅತ್ ಮತ್ತು ಇಶಾಗೆ 2 ರಕಅತ್.

ನೂರನ್ ವಮಿನ್ ಅಮಾಮಿೂ ನೂರನ್ ವಜ್‌ಅಲ್ಲೀ ನೂರನ್ ವಫೀ ಅಸಬೀ ನೂರನ್ ವಫೀ ಲಹ್ಮೀ ನೂರನ್ ವಫೀ ದಮಿೂ ನೂರನ್ ವಫೀ ಶಅ್‌ರೀ ನೂರನ್ ವಫೀ ಜಿಲ್ದೀ ನೂರನ್ ವಫೀ ಲಿಸಾನೀ ನೂರನ್ ವಜ್‌ಅಲ್ ಫೀ ನಫ್ಸೀ ನೂರನ್ ವ ಅಅ್‌ಝಿಮ್‌ಲೀ ನೂರನ್ ವಜ್‌ಅಲ್‌ನೀ ನೂರನ್ ವಜ್‌ಅಲ್ ಮಿನ್ ಫೌಕೀ ನೂರನ್ ವಮಿನ್ ತಹ್‌ತೀ ನೂರನ್ ಅಲ್ಲಾಹುಮ್ಮ ಅಅ್‌ತಿನೀ ನೂರನ್."

(ಓ ಅಲ್ಲಾಹ್! ನೀನು ನನ್ನ ಮನದಲ್ಲಿ ಪ್ರಕಾಶ ಉಂಟು ಮಾಡು, ನನ್ನ ದೃಷ್ಟಿಯಲ್ಲಿ ಪ್ರಕಾಶ ಉಂಟು ಮಾಡು, ನನ್ನ ಶ್ರವಣದಲ್ಲಿ ಪ್ರಕಾಶ ಉಂಟು ಮಾಡು, ನನ್ನ ಎಡಬಲ ಗಳಲ್ಲಿ ಪ್ರಕಾಶ ಉಂಟು ಮಾಡು, ನನ್ನ ಹಿಂದೆಯೂ ಮುಂದೆಯೂ ಪ್ರಕಾಶ ಉಂಟು ಮಾಡು, ನನಗಾಗಿ ಪ್ರಕಾಶವೇ ಪ್ರಕಾಶ ಮಾಡು, ನನ್ನ ಸ್ನಾಯುಗಳಲ್ಲಿಯೂ ಮಾಂಸ ದಲ್ಲಿಯೂ ರಕ್ತದಲ್ಲಿಯೂ ಕೂದಲಲ್ಲಿಯೂ ಚರ್ಮದಲ್ಲಿಯೂ ನಾಲಿಗೆಯಲ್ಲಿಯೂ ಆತ್ಮದಲ್ಲಿಯೂ ಪ್ರಕಾಶ ಉಂಟು ಮಾಡು, ನನಗೆ ಮಹಾ ಪ್ರಕಾಶವನ್ನು ದಯಪಾಲಿಸು. ನನ್ನನ್ನು ಅಡಿಯಿಂದ ಮುಡಿ ತನಕ ಪ್ರಕಾಶವಾಗಿ ಮಾಡು. ನನ್ನ ಮೇಲೂ ಕೆಳಗೂ ಪ್ರಕಾಶ ಉಂಟು ಮಾಡು. ಓ ಅಲ್ಲಾಹ್! ನನಗೆ ಪ್ರಕಾಶವನ್ನು ದಯಪಾಲಿಸು.) (ಹಿಸ್ನ್ ಹಸೀನ್)

19. ಫಜ್ರ್ ಮತ್ತು ಮಗ್ರಿಬ್ ನಮಾಝ್ ಮುಗಿಸಿದ ಬಳಿಕ ಮಾತನಾಡುವ ಮೊದಲು ಈ ಪ್ರಾರ್ಥನೆಯನ್ನು ಏಳು ಸಲ ಪಠಿಸಿರಿ:

اَللّٰهُمَّ اَجِرْنِیْ مِنَ النَّارِ "ಅಲ್ಲಾಹುಮ್ಮ ಅಜಿರ್‌ನೀ ಮಿನನ್ನಾರ್".

(ಓ ಅಲ್ಲಾಹ್! ನನ್ನನ್ನು ನರಕಾಗ್ನಿಯಿಂದ ರಕ್ಷಿಸು.)

ಪ್ರವಾದಿ(ಸ) ಈ ರೀತಿ ಹೇಳಿರುವರು: "ಫಜ್ರ್ ಮತ್ತು ಮಗ್ರಿಬ್ ನಮಾಝ್‌ನ ಬಳಿಕ ಮಾತನಾಡುವ ಮೊದಲು ಏಳು ಸಲ ಈ ರೀತಿ ಪ್ರಾರ್ಥಿಸಿರಿ. ಆ ದಿವಸ ಅಥವಾ ಆ ರಾತ್ರೆ ನೀವು ಮರಣ ಹೊಂದಿದರೆ ಖಂಡಿತ ನರಕಾಗ್ನಿಯಿಂದ ಮುಕ್ತಿ ಪಡೆಯುವಿರಿ". (ಮಿಷ್ಕಾತ್)

20. ಪ್ರತಿ ನಮಾಝ್‌ನ ಬಳಿಕ ಮೂರು ಸಲ 'ಅಸ್ತಗ್‌ಫಿರುಲ್ಲಾಹ್' ಎನ್ನಿರಿ (ಅರ್ಥಾತ್ ನಾನು ಅಲ್ಲಾಹನಲ್ಲಿ ಕ್ಷಮೆಯನ್ನು ಯಾಚಿಸುತ್ತೇನೆ) ಆ ಬಳಿಕ ಈ ರೀತಿ ಪ್ರಾರ್ಥಿಸಿರಿ:

اَللّٰهُمَّ اَنْتَ السَّلَامُ وَمِنْكَ السَّلَامُ تَبَارَكْتَ يَا ذَاالْجَلَالِ وَالْاِكْرَامِ (مسلم)

"ಅಲ್ಲಾಹುಮ್ಮ ಅಂತಸ್ಸಲಾಮ್ ವ ಮಿನ್‌ಕಸ್ಸಲಾಮ್ ತಬಾರಕ್ತ ಯಾದಲ್ ಜಲಾಲಿ ವಲ್ ಇಕ್ರಾಮ್". (ಓ ಅಲ್ಲಾಹ್! ನೀನು ಶಾಂತಿಸ್ವರೂಪಿ. ಶಾಂತಿಯು ನಿನ್ನಿಂದಲೇ ಇದೆ. ನೀನು ಸಮೃದ್ಧಿ ದಾತನಾಗಿರುವಿ, ಓ ಪ್ರತಾಪಶಾಲಿ ಮತ್ತು ಮಹಾ ದಾನಿ!) (ಮುಸ್ಲಿಮ್)

ಹ. ಸೌಬಾನ್(ರ) ಹೇಳುತ್ತಾರೆ: ಪ್ರವಾದಿ(ಸ) ನಮಾಝ್ ಮುಗಿಸಿದ ಕೂಡಲೇ ಮೂರು ಸಲ 'ಅಸ್ತಗ್‌ಫಿರುಲ್ಲಾಹ್' ಎಂದು ಹೇಳಿದ ಬಳಿಕ ಈ ದುಆ (ಪ್ರಾರ್ಥನೆ) ಪಠಿಸುತ್ತಿದ್ದರು. (ಮುಸ್ಲಿಮ್)

21. ಸಂಘಟಿತ ನಮಾಝ್‌ನಲ್ಲಿ ಪಂಕ್ತಿಗಳನ್ನು ಪೂರ್ಣ ಸರಿಯಾಗಿರಿಸಿರಿ. ಪಂಕ್ತಿಗಳನ್ನು ನೇರವಾಗಿರಿಸಿರಿ. ಮಧ್ಯೆ ಸ್ವಲ್ಪವೂ ಸ್ಥಳ ಬಿಡದಂತೆ ಭುಜಕ್ಕೆ ಭುಜ ತಾಗಿಸಿ ನಿಲ್ಲಿರಿ. ಮುಂದಿನ ಪಂಕ್ತಿ ಪೂರ್ಣಗೊಳ್ಳುವ ಮೊದಲು ದ್ವಿತೀಯ ಪಂಕ್ತಿ ಮಾಡಬೇಡಿರಿ. ಒಮ್ಮೆ ಸಂಘಟಿತ ನಮಾಝ್‌ನಲ್ಲಿ ಒಬ್ಬರು ಎದೆ ಮುಂದೆ ಮಾಡಿ ನಿಂತಿದ್ದರು. ಪ್ರವಾದಿ(ಸ) ಅವರನ್ನು ಕಂಡಾಗ ಈ ರೀತಿ ಎಚ್ಚರಿಸಿದರು:

"ಅಲ್ಲಾಹನ ದಾಸರೇ! ನಿಮ್ಮ ಪಂಕ್ತಿಗಳನ್ನು ನೇರವಾಗಿ ಅಣಿಗೊಳಿಸಿರಿ. ಅನ್ಯಥಾ ದೇವನು ನಿಮ್ಮನ್ನು ಪರಸ್ಪರ ವಿಮುಖಗೊಳಿಸುವನು". (ಮುಸ್ಲಿಮ್)

ಒಮ್ಮೆ ಪ್ರವಾದಿ(ಸ) ಈ ರೀತಿ ಹೇಳಿದರು: "ಒಬ್ಬನು ನಮಾಝ್‌ನ ಪಂಕ್ತಿಯನ್ನು ಜೋಡಿಸಿದರೆ ಅಲ್ಲಾಹನು ಅವನನ್ನು ಜೋಡಿಸುವನು. ಒಬ್ಬನು ಪಂಕ್ತಿಯನ್ನು ಭಂಗಗೊಳಿಸಿದರೆ ಅಲ್ಲಾಹನು ಅವನನ್ನು ಭಂಗಗೊಳಿಸುವನು". (ಅಬೂದಾವೂದ್)

22. ಮಕ್ಕಳ ಪಂಕ್ತಿಯನ್ನು ಗಂಡಸರ ಪಂಕ್ತಿಯ ಹಿಂದೆಯೇ ಇರಿಸಿರಿ. ಅವರನ್ನು ದೊಡ್ಡವರೊಂದಿಗೆ ನಿಲ್ಲಿಸಬೇಡಿರಿ. ಈದ್ಗಾ ಮುಂತಾದೆಡೆಗಳಲ್ಲಿ ಮಕ್ಕಳನ್ನು ಹಿಂದೆ ಕಳುಹಿಸುವುದು ಸಾಧ್ಯವಾಗದಿದ್ದರೆ ಅಥವಾ ಮಕ್ಕಳು ಕಾಣೆಯಾಗುವ ಭಯವಿದ್ದರೆ ಅವರನ್ನು ಹಿಂದಿನ ಪಂಕ್ತಿಗೆ ಕಳುಹಿಸಬೇಕಾಗಿಲ್ಲ. ಮಹಿಳೆಯರ ಪಂಕ್ತಿ ಎಲ್ಲಕ್ಕಿಂತ ಹಿಂದಿರ ಬೇಕು. ಮಸೀದಿ ಯಲ್ಲಿ ಅವರಿಗಾಗಿ ಪ್ರತ್ಯೇಕ ಸ್ಥಳವನ್ನು ಕಾದಿರಿಸಲಾಗಿದ್ದರೆ ಅವರು ಅಲ್ಲೇ ನಮಾಝ್ ಮಾಡಬೇಕು. ಈದ್ಗಾದಲ್ಲೂ ಮಹಿಳೆಯರಿಗೆ ಪ್ರತ್ಯೇಕ ಸ್ಥಳದ ಏರ್ಪಾಡು ಮಾಡಬೇಕು.

# ಕುರ್‌ಆನ್ ಪಾರಾಯಣ

1. ಪವಿತ್ರ ಕುರ್‌ಆನನ್ನು ಉತ್ಸಾಹ ಮತ್ತು ಹುಮ್ಮಸ್ಸಿನೊಂದಿಗೆ ಮನಃಪೂರ್ವಕ ಪಾರಾಯಣ ಮಾಡಿರಿ. ಕುರ್‌ಆನ್‌ನೊಂದಿಗಿರುವ ಪ್ರೀತಿ ಅಲ್ಲಾಹನೊಂದಿಗಿರುವ ಪ್ರೀತಿಯೆಂಬು ದನ್ನು ಮರೆಯದಿರಿ. "ನನ್ನ ಸಮುದಾಯಕ್ಕೆ ಅತ್ಯುತ್ತಮ ಆರಾಧನೆ ಕುರ್‌ಆನ್ ಪಾರಾಯಣ ವಾಗಿದೆ" ಎಂದು ಪ್ರವಾದಿ(ಸ) ಹೇಳಿರುವರು.

2. ಹೆಚ್ಚಿನ ವೇಳೆಯನ್ನು ಕುರ್‌ಆನ್ ಪಾರಾಯಣದಲ್ಲಿ ವ್ಯಯಿಸಿರಿ. ಕುರ್‌ಆನ್ ಪಾರಾಯಣದಲ್ಲಿ ಬೇಸರ ತೋರಬೇಡಿರಿ, "ನನ್ನ ಯಾವ ದಾಸನಿಗೆ ಕುರ್‌ಆನ್ ಪಾರಾಯಣ ದಿಂದಾಗಿ ನನ್ನಲ್ಲಿ ಪ್ರಾರ್ಥಿಸಲು ಸಮಯ ಸಿಗುವುದಿಲ್ಲವೋ ಅಂಥವನಿಗೆ ನಾನು ಯಾಚಿಸ ದೆಯೇ ಯಾಚಿಸುವವರಿಗೆ ಕೊಡುವುದಕ್ಕಿಂತ ಹೆಚ್ಚು ಕೊಡುವೆನು" ಎಂದು ಅಲ್ಲಾಹನು ಹೇಳಿರುವುದಾಗಿ ಪ್ರವಾದಿ(ಸ) ಹೇಳಿರುತ್ತಾರೆ. (ತಿರ್ಮಿದಿ)

"ದಾಸನು ಕುರ್‌ಆನ್ ಪಾರಾಯಣದ ಮೂಲಕವೇ ಅಲ್ಲಾಹನ ಅತ್ಯಧಿಕ ಸಾಮೀಪ್ಯ ಗಳಿಸುತ್ತಾನೆ" ಎಂದು ಪ್ರವಾದಿ(ಸ) ಹೇಳಿರುವರು. (ತಿರ್ಮಿದಿ)

ಕುರ್‌ಆನ್ ಪಾರಾಯಣವನ್ನು ಪ್ರೇರೇಪಿಸುತ್ತಾ ಪ್ರವಾದಿ(ಸ) ಹೀಗೂ ಹೇಳಿರುವರು: "ಯಾವನು ಕುರ್‌ಆನನ್ನು ಓದಿರುವನೋ ಹಾಗೂ ದೈನಂದಿನ ಅದರ ಪಾರಾಯಣ ಮಾಡುತ್ತಿರುವನೋ ಅವನ ಉಪಮೆ ಪರಿಮಳ ದ್ರವ್ಯದಿಂದ ತುಂಬಿದ ಚೀಲದಂತಿದೆ. ಅದರ ಸುಗಂಧ ನಾಲ್ಕು ದಿಕ್ಕುಗಳಿಗೂ ಪಸರಿಸುತ್ತಿರುತ್ತದೆ. ಕುರ್‌ಆನನ್ನು ಓದಿಯೂ ಅದರ ಪಾರಾಯಣ ಮಾಡದಿರುವವನ ಉಪಮೆ ಸುಗಂಧ ದ್ರವ್ಯ ತುಂಬಿಸಿ ಮುಚ್ಚಳ ಹಾಕಿ ಬಿಗಿಗೊಳಿ ಸಿದ ಬಾಟ್ಲಿಯಂತೆ". (ತಿರ್ಮಿದಿ)

3. ಪವಿತ್ರ ಕುರ್‌ಆನನ್ನು ಕೇವಲ ಸನ್ಮಾರ್ಗದರ್ಶನಕ್ಕಾಗಿ ಪಾರಾಯಣ ಮಾಡಿರಿ. ಜನರನ್ನು ತನ್ನತ್ತ ಒಲಿಸಲಿಕ್ಕಾಗಿ, ತನ್ನ ಮಧುರ ವಾಚನದ ಜಂಭ ಕೊಚ್ಚಲಿಕ್ಕಾಗಿ ಹಾಗೂ ತನ್ನ ಧರ್ಮನಿಷ್ಠೆಯ ಡಂಗುರ ಸಾರಲಿಕ್ಕಾಗಿ ಎಂದೆಂದೂ ಕುರ್‌ಆನ್ ಪಾರಾಯಣವನ್ನು ಬಳಸಬೇಡಿರಿ. ಇವು ಅತ್ಯಂತ ನಿಕೃಷ್ಟ ಉದ್ದೇಶಗಳಾಗಿವೆ. ಈ ಉದ್ದೇಶಗಳಿಗಾಗಿ ಕುರ್‌ಆನ್ ಪಾರಾಯಣ ಮಾಡುವವನು ಕುರ್‌ಆನಿನ ಮಾರ್ಗದರ್ಶನದಿಂದ ವಂಚಿತನಾಗುವನು.

4. ಕುರ್‌ಆನ್ ಪಾರಾಯಣಕ್ಕಿಂತ ಮುಂಚೆ ಶುದ್ಧತೆ ಮತ್ತು ನೈರ್ಮಲ್ಯದ ಬಗ್ಗೆ ಅಗತ್ಯ ಗಮನಹರಿಸಿರಿ. ವುಝೂ ಮಾಡದೆ ಕುರ್‌ಆನ್ ಸ್ಪರ್ಶಿಸಬೇಡಿರಿ. ಸ್ವಚ್ಛವಾದ ಸ್ಥಳದಲ್ಲಿ ಕುಳಿತೇ ಪಾರಾಯಣ ಮಾಡಿರಿ.

5. ಪಾರಾಯಣ ಮಾಡುವಾಗ ಕಿಬ್ಲಾಭಿಮುಖಿವಾಗಿ ಪದ್ಮಾಸನದಲ್ಲಿ ಕುಳಿತು ಕುತ್ತಿಗೆ ಬಗ್ಗಿಸಿ ತಲ್ಲೀನತೆ ಮತ್ತು ತದೇಕಚಿತ್ತದಿಂದ ಮನಸ್ಸಿಟ್ಟು ಕ್ರಮಬದ್ಧವಾಗಿ ಪಾರಾಯಣ ಮಾಡಿರಿ. ಅಲ್ಲಾಹನು ಹೇಳುತ್ತಾನೆ:

كِتَٰبٌ أَنزَلْنَٰهُ إِلَيْكَ مُبَٰرَكٌ لِّيَدَّبَّرُوٓا۟ ءَايَٰتِهِۦ وَلِيَتَذَكَّرَ أُو۟لُوا۟ ٱلْأَلْبَٰبِ ﴿٢٩﴾

**"(ಪೈಗಂಬರರೇ,) ಇದೊಂದು ಅತಿ ಸಮೃದ್ಧವಾದ ಗ್ರಂಥವಾಗಿದ್ದು ಇವರು ಇದರ ಸೂಕ್ತಗಳ ಕುರಿತು ಚಿಂತನೆ ನಡೆಸಲೆಂದು ಮತ್ತು ಬುದ್ಧಿಜೀವಿಗಳು ಇದರಿಂದ ಉಪದೇಶ ಪಡೆಯುವಂತಾಗಲೆಂದು ನಾವು ಇದನ್ನು ನಿಮಗೆ ಅವತೀರ್ಣಗೊಳಿಸಿದ್ದೇವೆ".**

**(ಪವಿತ್ರ ಕುರ್‌ಆನ್, 38:29)**

6. ಕುರ್‌ಆನ್ ಪಠನದ ನಿಯಮಗಳನ್ನು ಸಾಧ್ಯವಿದ್ದಷ್ಟು ಪಾಲಿಸಿರಿ. ಪ್ರತಿಯೊಂದು ಶಬ್ದವನ್ನು ಸರಿಯಾಗಿ ಉಚ್ಚರಿಸಿರಿ. ಸಾವಧಾನದಿಂದ ಓದಿರಿ.

"ನಿಮ್ಮ ಕಂಠ ಮತ್ತು ವಾಚನ ಶೈಲಿಯ ಮೂಲಕ ಕುರ್‌ಆನನ್ನು ಸುಶ್ರಾವ್ಯಗೊಳಿಸಿರಿ" ಎಂದು ಪ್ರವಾದಿ(ಸ) ಹೇಳಿರುವರು. (ಅಬೂದಾವೂದ್)

ಪ್ರವಾದಿ(ಸ) ಒಂದೊಂದು ಶಬ್ದವನ್ನು ಸ್ಪಷ್ಟವಾಗಿ ಉಚ್ಚರಿಸುತ್ತಿದ್ದರು. ಒಂದೊಂದು ಸೂಕ್ತವನ್ನು ಪ್ರತ್ಯಪ್ರತ್ಯೇಕವಾಗಿ ಪಠಿಸುತ್ತಿದ್ದರು. ಪ್ರವಾದಿ(ಸ) ಈ ರೀತಿ ಹೇಳಿರುವರು: "ಕುರ್‌ಆನ್ ಪಾರಾಯಣ ಮಾಡುವವನೊಂದಿಗೆ ನಿರ್ಣಾಯಕ ದಿನದಂದು ಹೇಳಲಾಗುವುದು, ನೀವು ಯಾವ ರೀತಿ ಸಾವಧಾನವಾಗಿ ಹಾಗೂ ಸುಶ್ರಾವ್ಯವಾಗಿ ಉತ್ತಮ ಶೈಲಿಯೊಂದಿಗೆ ಕುರ್‌ಆನ್ ಪಾರಾಯಣ ಮಾಡುತ್ತಿದ್ದಿರೋ ಹಾಗೆಯೇ ಕುರ್‌ಆನ್ ಪಠಿಸಿರಿ ಮತ್ತು ಪ್ರತಿ ಆಯತ್‌ಗೆ (ಸೂಕ್ತ) ಪ್ರತಿಫಲವಾಗಿ ಒಂದು ಅಂತಸ್ತು ಉನ್ನತರಾಗುತ್ತಾ ಸಾಗಿರಿ. ನಿಮ್ಮ ನೆಲೆ ನೀವು ಪಾರಾಯಣ ಮಾಡುವ ಕೊನೆಯ ಆಯತ್‌ನ ಸಮೀಪವಿದೆ". (ತಿರ್ಮಿದಿ)

7. ಹೆಚ್ಚು ಉಚ್ಚ ಸ್ವರದಲ್ಲಿ ಓದಬೇಡಿರಿ. ಅತ್ಯಂತ ಮೆಲುದನಿಯಲ್ಲೂ ಓದಬೇಡಿರಿ. ಮಧ್ಯಮ ಸ್ವರದಲ್ಲೇ ಪಠಿಸಿರಿ. ಅಲ್ಲಾಹನು ಈ ರೀತಿ ಆದೇಶಿಸಿರುವನು:

وَلَا تَجْهَرْ بِصَلَاتِكَ وَلَا تُخَافِتْ بِهَا وَٱبْتَغِ بَيْنَ ذَٰلِكَ سَبِيلًا ﴿١١٠﴾

**"ನಿಮ್ಮ ನಮಾಝ್‌ಗಳಲ್ಲಿ ಅತಿ ಉಚ್ಚ ಸ್ವರದಲ್ಲಿಯೂ ಪಠಿಸದಿರಿ; ಅತ್ಯಂತ ಮೆಲುದನಿಯಲ್ಲೂ ಪಠಿಸದಿರಿ. ಈ ಎರಡರ ಮಧ್ಯದ ಮಾರ್ಗವನ್ನೇ ಅವಲಂಬಿಸಿರಿ".**

**(ಪವಿತ್ರ ಕುರ್‌ಆನ್, 17:110)**

8. ಸಾಮಾನ್ಯವಾಗಿ ಸಂದರ್ಭ ಸಿಕ್ಕಾಗಲೆಲ್ಲಾ ಕುರ್‌ಆನ್ ಪಾರಾಯಣ ಮಾಡಿರಿ. ಆದರೆ ರಾತ್ರೆಯ ಅಂತಿಮ ಜಾವದಲ್ಲಿ ಎದ್ದು 'ತಹಜ್ಜುದ್' ನಮಾಝ್‌ನಲ್ಲಿ ಕುರ್‌ಆನ್ ಪಠಿಸಲು ಪ್ರಯತ್ನಿಸಿರಿ. ಇದು ಕುರ್‌ಆನ್ ಪಾರಾಯಣದ ಮಹಾತ್ಮೆಯ ಅತ್ಯುನ್ನತ ಮಟ್ಟ. ಸತ್ಯವಿಶ್ವಾಸಿ ಸದಾ ಕುರ್‌ಆನ್ ಪಾರಾಯಣದ ಅತ್ಯುತ್ತಮ ಮಟ್ಟವನ್ನು ಗಳಿಸಲು ತವಕಿಸಬೇಕು.

9. ಮೂರು ದಿನಗಳಿಗಿಂತ ಕಡಿಮೆ ಸಮಯದಲ್ಲಿ ಪೂರ್ಣ ಕುರ್‌ಆನ್ ಪಾರಾಯಣ ಮಾಡಲು ಪ್ರಯತ್ನಿಸಬೇಡಿರಿ. "ಯಾರು ಮೂರು ದಿನಗಳಿಗಿಂತ ಕಡಿಮೆ ಅವಧಿಯಲ್ಲಿ ಕುರ್‌ಆನ್ ಪಾರಾಯಣ ಮಾಡಿ ಮುಗಿಸುವನೋ ಅವನು ಕುರ್‌ಆನನ್ನು ಗ್ರಹಿಸಲೇ ಇಲ್ಲ" ಎಂದು ಪ್ರವಾದಿ(ಸ) ಹೇಳಿರುವರು.

10. ಕುರ್‌ಆನಿನ ಮಹಾನತೆ ಮತ್ತು ಗಾಂಭೀರ್ಯವನ್ನು ಮನಗಾಣಿರಿ. ಶಾರೀರಿಕ ನೈರ್ಮಲ್ಯದೊಂದಿಗೆ ಹೃದಯವನ್ನು ದುರ್ವಿಚಾರ, ದುರ್ವಿಕಾರ ಹಾಗೂ ದುರುದ್ದೇಶಗಳಿಂದ ಮುಕ್ತಗೊಳಿಸಿರಿ. ನೀಚ ವಿಚಾರ-ವಿಕಾರಗಳಿಂದ ಕಲುಷಿತವಾದ ಹೃದಯದಲ್ಲಿ ಕುರ್‌ಆನಿನ ಪಾವಿತ್ರ್ಯತೆ ಮತ್ತು ಮಹಾನತೆ ಇಳಿಯದು. ಅದು ಕುರ್‌ಆನಿನ ನೈಜ ಸಂದೇಶ ಮತ್ತು ವಾಸ್ತವಿಕತೆಗಳನ್ನೂ ಗ್ರಹಿಸಲಾರದು. ಹ. ಇಕ್ರಿಮರವರು(ರ) ಪವಿತ್ರ ಕುರ್‌ಆನ್ ತೆರೆದಾಗಲೆಲ್ಲಾ ಮೂರ್ಛೆ ಹೋಗುತ್ತಿದ್ದರು. "ಇದು ಪ್ರತಾಪ ಮತ್ತು ಮಹಾನತೆಯುಳ್ಳ ನನ್ನ ಪ್ರಭುವಿನ ವಾಣಿಯಾಗಿದೆ" ಎಂದು ಹೇಳುತ್ತಿದ್ದರು.

11. ಭೂಮುಖದ ಮೇಲೆ ಮಾನವನಿಗೆ ಸನ್ಮಾರ್ಗದರ್ಶನ ಲಭಿಸುವ ಏಕೈಕ ಉಪಾಧಿಯೆಂಬ ವಿಶ್ವಾಸದೊಂದಿಗೆ ಕುರ್‌ಆನ್ ಪಠಿಸಿರಿ. ಈ ವಿಶ್ವಾಸದೊಂದಿಗೆ ಅದರಲ್ಲಿ ಚಿಂತನೆ, ಅನ್ವೇಷಣೆ ನಡೆಸಿರಿ. ಅದರ ಯಥಾರ್ಥಗಳನ್ನೂ ಯುಕ್ತಿಗಳನ್ನೂ ಗ್ರಹಿಸುವ ಪ್ರಯತ್ನ ಮಾಡಿರಿ. ಕೇವಲ ಎಡೆಬಿಡದೆ ಓದುತ್ತಲೇ ಸಾಗಬೇಡಿರಿ. ಗ್ರಹಿಸಿ ಓದುವ ಪರಿಪಾಠ ಇಟ್ಟುಕೊಳ್ಳಿರಿ. ಅದರ ಬಗ್ಗೆ ಚಿಂತನೆ ನಡೆಸಿರಿ. "'ಅಲ್ ಕಾರಿಯಃ' ಮತ್ತು 'ಅಲ್ ಕದ್ರ್'ಗಳಂತಹ ಸಣ್ಣ ಸಣ್ಣ ಅಧ್ಯಾಯಗಳನ್ನು ಗ್ರಹಿಸಿ ಓದುವುದು 'ಅಲ್‌ಬಕರಃ' ಮತ್ತು 'ಆಲಿಇಮ್ರಾನ್'ಗಳಂತಹ ದೊಡ್ಡ ದೊಡ್ಡ ಅಧ್ಯಾಯಗಳನ್ನು ಏನನ್ನೂ ಗ್ರಹಿಸದೆ ಸರಾಗ ವಾಗಿ ಓದುವುದಕ್ಕಿಂತ ಉತ್ತಮವೆಂದು ನಾನು ಭಾವಿಸುತ್ತೇನೆ" ಎಂದು ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಹೇಳಿರುವರು.

ಪ್ರವಾದಿ(ಸ) ಒಮ್ಮೆ ರಾತ್ರಿ ಇಡೀ ಈ ಕೆಳಗಿನ ಒಂದೇ ಸೂಕ್ತ ಆವರ್ತಿಸಿ ಆವರ್ತಿಸಿ ಓದುತ್ತಿದ್ದರು.

إِنْ تُعَذِّبْهُمْ فَإِنَّهُمْ عِبَادُكَ وَإِنْ تَغْفِرْ لَهُمْ فَإِنَّكَ أَنْتَ الْعَزِيزُ الْحَكِيمُ ﴿١١٨﴾

"ನೀನು ಇವರನ್ನು ಶಿಕ್ಷಿಸಿದರೆ ಇವರು ನಿನ್ನ ದಾಸರೇ ಆಗಿರುತ್ತಾರೆ! ಮತ್ತು ನೀನು ಇವರನ್ನು ಕ್ಷಮಿಸಿದರೆ ಖಂಡಿತವಾಗಿಯೂ ನೀನು ಅಜೇಯನೂ ಯುಕ್ತಿಪೂರ್ಣನೂ ಆಗಿರುತ್ತಿ". (ಪವಿತ್ರ ಕುರ್‌ಆನ್, 5:118)

12. ಕುರ್‌ಆನಿನ ಆಜ್ಞೆಗಳಂತೆ ಜೀವನದಲ್ಲಿ ಬದಲಾವಣೆ ತರುವ, ಅದರ ಮಾರ್ಗದರ್ಶನ ಕ್ಕನುಗುಣವಾಗಿ ಜೀವನವನ್ನು ರೂಪಿಸುವ ಅದರ ಆದೇಶಗಳಂತೆ ಜೀವನವನ್ನು ಎರಕ ಹೊಯ್ಯುವ ಮತ್ತು ಕುಂದು ಕೊರತೆಗಳಿಂದ ಜೀವನವನ್ನು ವಿಮೋಚಿಸುವ ನಿರಂತರ ಪ್ರಯತ್ನದ ದೃಢ ನಿರ್ಧಾರದೊಂದಿಗೆ ಕುರ್‌ಆನಿನ ಪಾರಾಯಣ ಮಾಡಿರಿ. ಕುರ್‌ಆನ್

ಕನ್ನಡಿಯಂತೆ ನಿಮ್ಮ ಪ್ರತಿಯೊಂದು ಕುಂದು ಕೊರತೆಯನ್ನೂ ಕಲೆಯನ್ನೂ ನಿಮ್ಮ ಮುಂದೆ ಸ್ಪಷ್ಟಪಡಿಸುವುದು. ಆ ಕುಂದು ಕೊರತೆಗಳಿಂದ ಮತ್ತು ಕಲೆಗಳಿಂದ ನಿಮ್ಮ ಜೀವನವನ್ನು ಪಾವನಗೊಳಿಸಬೇಕಾದ ಕಾರ್ಯ ನಿಮಗೆ ಬಿಟ್ಟದ್ದು.

13. ಪಾರಾಯಣದ ವೇಳೆ ಕುರ್‌ಆನಿನ ಸೂಕ್ತಗಳಿಂದ ಪ್ರಭಾವಿತರಾಗಲು ಪ್ರಯತ್ನಿಸಿರಿ. ಕಾರುಣ್ಯ, ಕ್ಷಮೆ ಮತ್ತು ಸ್ವರ್ಗದ ಅನಶ್ವರ ಸೌಭಾಗ್ಯಗಳ ಉಲ್ಲೇಖಗಳನ್ನು ಓದಿದಾಗ ಸಂತೋಷದಿಂದ ಪುಳಕಿತಗೊಳ್ಳಿರಿ. ದೇವನ ಕ್ರೋಧ, ಶಾಪ ಮತ್ತು ನರಕಯಾತನೆಯ ಭಯಾನಕತೆಗಳ ಉಲ್ಲೇಖಗಳನ್ನು ಪಠಿಸಿದಾಗ ನಿಮ್ಮ ಮೈ ಜುಮ್ಮೆನ್ನಬೇಕು. ಕಣ್ಣುಗಳು ಅಶ್ರುಧಾರೆ ಹರಿಸಬೇಕು. ಮನಸ್ಸು ಪಶ್ಚಾತ್ತಾಪ ಮತ್ತು ಖೇದದಿಂದ ರೋದಿಸಬೇಕು. ಸತ್ಯವಿಶ್ವಾಸಿಗಳಾದ ಸಜ್ಜನರ ವಿಜಯಗಳ ಪ್ರಸ್ತಾಪ ಬಂದಾಗ ಮುಖ ಅರಳಬೇಕು. ಗತ ಜನಾಂಗಗಳ ವಿನಾಶದ ವೃತ್ತಾಂತ ಓದಿದಾಗ ದುಃಖಿತಪ್ತರಾಗಬೇಕು. ಎಚ್ಚರಿಕೆ ಮತ್ತು ಬೆದರಿಕೆಗಳ ಬಗ್ಗೆ ಓದಿದಾಗ ನಡುಕ ಹುಟ್ಟಬೇಕು ಮತ್ತು ಸುವಾರ್ತೆಯ ಸೂಕ್ತಗಳನ್ನು ಪಠಿಸಿದಾಗ ಆತ್ಮವು ಕೃತಜ್ಞತಾ ಭಾವಗಳಿಂದ ತುಂಬಿ ತುಳುಕಬೇಕು.

14. ಕುರ್‌ಆನ್ ಪಾರಾಯಣದ ಬಳಿಕ ಪ್ರಾರ್ಥನೆ ಮಾಡಿರಿ. ಹ. ಉಮರ್‌ರ(ರ) ಒಂದು ಪ್ರಾರ್ಥನೆ ಹೀಗಿದೆ:

اَللّٰهُمَّ ارْزُقْنِىْ التَّفَكُّرَ وَالتَّدَبُّرَ بِمَا يَتْلُوْهُ لِسَانِىْ مِنْ كِتَابِكَ وَالْفَهْمَ لَهُ،
وَالْمَعْرِفَةَ بِمَعَانِيْهِ وَالنَّظَرَ فِىْ عَجَائِبِهِ وَالْعَمَلَ بِذَالِكَ مَا بَقِيْتُ، اِنَّكَ
عَلٰى كُلِّ شَىْءٍ قَدِيْرٌ

"ಅಲ್ಲಾಹುಮ್ಮರ್‌ಝುಕ್‌ನಿತ್ತಫಕ್ಕುರ ವತ್ತದಬ್ಬುರ ಬಿಮಾ ಯತ್‌ಲೂಹು ಲಿಸಾನೀ ಮಿನ್ ಕಿತಾಬಿಕ ವಲ್‌ಫಹ್‌ಮ ಲಹೂ ವಲ್ ಮಅ್‌ರಿಫತ ಬಿಮಆನೀಹಿ ವನ್ನಝುರಫೀ ಅಜಾಇಬಿಹಿ ವಲ್‌ಅಮಲ ಬಿದಾಲಿಕ ಮಾಬಕೀತು, ಇನ್ನಕ ಅಲಾಕುಲ್ಲಿ ಶೈಇನ್ ಕದೀರ್".

(ಓ ಅಲ್ಲಾಹ್! ನಿನ್ನ ಗ್ರಂಥದಿಂದ ನಾನು ಪಠಿಸುವುದರ ಬಗ್ಗೆ ಚಿಂತನೆ ಯೋಚನೆ ನಡೆಸುವಂತೆ ನನ್ನನ್ನು ಅನುಗ್ರಹಿಸು. ಓ ಅಲ್ಲಾಹ್! ನನಗೆ ಅದನ್ನು ಸಹಿಸುವ ಶಕ್ತಿ ದಯಪಾಲಿಸು. ಅದರ ಅರ್ಥ ತಾತ್ಪರ್ಯದ ಬಗ್ಗೆ ಅರಿವು ನೀಡು, ಅದರ ಅದ್ಭುತಗಳನ್ನು ಕಾಣುವ ದೃಷ್ಟಿ ದಯಪಾಲಿಸು ಮತ್ತು ಜೀವಿಸಿರುವ ತನಕ ಅದರಂತೆ ವರ್ತಿಸುವ ಸೌಭಾಗ್ಯ ಕರುಣಿಸು. ನೀನು ನಿಶ್ಚಯವಾಗಿಯೂ ಸರ್ವಶಕ್ತನಾಗಿರುವಿ.)

# ಶುಕ್ರವಾರದ ಶಿಷ್ಟಾಚಾರಗಳು

1. ಶುಕ್ರವಾರ ಸ್ನಾನ ಮಾಡಿ ಶುಭ್ರ ಬಟ್ಟೆಗಳನ್ನು ಧರಿಸಿರಿ.

"ಜುಮಾ ನಮಾಝ್‌ಗೆ ಬರುವವನು ಸ್ನಾನ ಮಾಡಿಕೊಂಡು ಬರಲಿ" ಎಂದು ಪ್ರವಾದಿ(ಸ) ಹೇಳಿರುವುದಾಗಿ ಹ.ಅಬ್ದುಲ್ಲಾ ಬಿನ್ ಉಮರ್(ರ) ವರದಿ ಮಾಡಿದ್ದಾರೆ. (ಬುಖಾರಿ-ಮುಸ್ಲಿಮ್)

"ಪ್ರತಿವಾರ ತಲೆ ಮತ್ತು ಶರೀರವನ್ನು ಚೆನ್ನಾಗಿ ತೊಳೆದು ಸ್ನಾನ ಮಾಡುವುದು ಪ್ರತಿ ಮುಸ್ಲಿಮನ ಮೇಲೆ ಅಲ್ಲಾಹನ ಹಕ್ಕಾಗಿದೆ" ಎಂದು ಹ. ಅಬೂ ಹುರೈರಾ(ರ) ಪ್ರವಾದಿ(ಸ) ಅವರಿಂದ ವರದಿ ಮಾಡಿರುವರು.

ಹ. ಅಬೂ ಸಈದ್(ರ) ಹೇಳುತ್ತಾರೆ: ಪ್ರವಾದಿ(ಸ) ಹೇಳಿದರು: "ಎಲ್ಲ ವಯಸ್ಕರೂ ಶುಕ್ರವಾರದಂದು ಸ್ನಾನ ಮಾಡುವುದು, ಹಲ್ಲುಜ್ಜುವುದು ಮತ್ತು ಸಾಧ್ಯವಿದ್ದರೆ ಸುಗಂಧ ಲೇಪಿಸುವುದು ಕಡ್ಡಾಯವಾಗಿದೆ". (ಬುಖಾರಿ, ಮುಸ್ಲಿಮ್)

ಪ್ರವಾದಿ(ಸ) ಹೇಳಿರುವುದಾಗಿ ಹ. ಸಲ್ಮಾನ್(ರ) ವರದಿ ಮಾಡಿರುತ್ತಾರೆ: "ಯಾವನು ಶುಕ್ರವಾರದಂದು ಸ್ನಾನ ಮಾಡಿ, ಸಾಧ್ಯವಿದ್ದಷ್ಟು ನಿರ್ಮಲನಾದನೋ ಆ ಬಳಿಕ ತಲೆಗೆ ಎಣ್ಣೆ ಹಚ್ಚಿ ಸುಗಂಧ ಪೂಸಿಕೊಂಡು ಮಧ್ಯಾಹ್ನ ಮಸೀದಿಗೆ ತಲುಪಿ (ಮಸೀದಿಯಲ್ಲಿ ಕುಳಿತಿರು ವವರನ್ನು) ಪರಸ್ಪರ ದೂರ ಸರಿಸದೆ ತನ್ನಿಂದಾದಷ್ಟು ಐಚ್ಛಿಕ ನಮಾಝ್ ಮಾಡಿದನೋ ತರುವಾಯ ಇಮಾಮ್ (ನಮಾಝ್‌ನ ನೇತೃತ್ವ ವಹಿಸುವವರು ವೇದಿಕೆಯತ್ತ) ಹೊರಟಾಗ ಮೌನವಾಗಿ (ಕುಳಿತು ಖುತ್ಬಾ ಪ್ರವಚನ) ಕೇಳಿದನೋ ಅವನ ಒಂದು ಶುಕ್ರವಾರದಿಂದ ಇನ್ನೊಂದು ಶುಕ್ರವಾರದ ವರೆಗಿನ ಎಲ್ಲ ಪಾಪಗಳೂ ಕ್ಷಮಿಸಲ್ಪಟ್ಟುವು". (ಬುಖಾರಿ)

2. ಶುಕ್ರವಾರದಂದು ದೇವಸ್ಮರಣೆ ತಸ್ಬೀಹ್ (ಅಲ್ಲಾಹನ ಗುಣನಾಮಗಳನ್ನು ಜಪಿಸುವುದು) ಮತ್ತು ಕುರ್‌ಆನ್ ಪಾರಾಯಣ, ಪ್ರಾರ್ಥನೆ, ದಾನಧರ್ಮ, ಗೋರಿ ಸಂದರ್ಶನ ಮತ್ತಿತರ ಪುಣ್ಯ ಕಾರ್ಯಗಳನ್ನು ಹೆಚ್ಚೆಚ್ಚು ಮಾಡಿರಿ.

ಪ್ರವಾದಿ(ಸ) ಹೇಳಿರುವುದಾಗಿ ಹ. ಅಬೂಹುರೈರಾ(ರ) ಹೇಳುತ್ತಾರೆ: "ಸೂರ್ಯನು ಉದಯಿಸುವ ದಿನಗಳ ಪೈಕಿ ಶುಕ್ರವಾರವು ಅತ್ಯಂತ ಪುನೀತ ದಿನ. ಆದಮ್‌ರು(ಅ) ಅಂದೇ ಜನ್ಮತಾಳಿದರು. ಅಂದೇ ಅವರು ಸ್ವರ್ಗ ಪ್ರವೇಶ ಪಡೆದರು. ಆ ದಿನವೇ ಅವರು ಅಲ್ಲಿಂದ (ಭೂಮಿಗೆ ದೇವನ ಪ್ರತಿನಿಧಿಯಾಗಿ) ಬಂದರು. ಆ ದಿನವೇ ಕಿಯಾಮತ್(ಪುನರುತ್ಥಾನ) ಸಂಭವಿಸಲಿದೆ". (ಮುಸ್ಲಿಮ್)

ಹ. ಅಬೂ ಸಈದ್ ಖುದ್ರೀ(ರ) ಹೇಳುತ್ತಾರೆ. ಪ್ರವಾದಿ(ಸ) ಹೇಳಿದರು. "ಐದು

ಕರ್ಮಗಳಿವೆ. ಒಬ್ಬ ವ್ಯಕ್ತಿ ಅವುಗಳನ್ನು ಒಂದೇ ದಿನ ಮಾಡಿದರೆ ಅಲ್ಲಾಹನು ಅವನನ್ನು ಸ್ವರ್ಗವಾಸಿಗಳಲ್ಲಿ ಸೇರಿಸುವನು: i) ರೋಗಿಯ ಸಂದರ್ಶನ. ii) ಶವಸಂಸ್ಕಾರದಲ್ಲಿ ಭಾಗವಹಿಸುವುದು. iii) ಉಪವಾಸ ವ್ರತ ಆಚರಿಸುವುದು. iv) ಜುಮಾ ನಮಾಝ್ ನೆರವೇರಿಸುವುದು. v) ದಾಸ್ಯ ವಿಮೋಚನೆ (ಜೀತ ವಿಮುಕ್ತಿ). (ಇಬ್ನು ಹಿಬ್ಬಾನ್)

ಈ ಐದೂ ಕಾರ್ಯಗಳು ಶುಕ್ರವಾರ ಮಾತ್ರ ಸಾಧ್ಯವೆಂಬುದು ಸ್ಪಷ್ಟ.

ಹ. ಅಬೂ ಸಈದ್ ಖುದ್ರೀ(ರ) ಅವರಿಂದಲೇ ಇನ್ನೊಂದು ವರದಿ ಈ ರೀತಿ ಇದೆ: ಪ್ರವಾದಿ(ಸ) ಹೇಳಿದರು: "ಯಾರು ಶುಕ್ರವಾರದಂದು ಸೂರಃ ಅಲ್ ಕಹಫ್ ಓದುವನೋ ಅವನಿಗಾಗಿ ಎರಡು ಶುಕ್ರವಾರಗಳ ಮಧ್ಯಾವಧಿಯಲ್ಲಿ ಒಂದು ಜ್ಯೋತಿ ಬೆಳಗುತ್ತಿರುವುದು". (ನಸಾಈ)

ಹ. ಅಬೂಹುರೈರಾ(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು: "ಶುಕ್ರವಾರ ರಾತ್ರೆ ಸೂರಃ ದುಖಾನ್ ಪಾರಾಯಣ ಮಾಡುವವನಿಗಾಗಿ 70 ಸಹಸ್ರ ದೇವಚರರು ಕ್ಷಮಾಯಾಚನೆ ಮಾಡುತ್ತಾರೆ ಮತ್ತು ಅವನ ಎಲ್ಲ ಪಾಪಗಳೂ ಕ್ಷಮಿಸಲ್ಪಡುತ್ತವೆ". (ತಿರ್ಮಿದಿ)

"ಶುಕ್ರವಾರದಂದು ಒಂದು ಗಳಿಗೆಯಿದೆ. ಅದರಲ್ಲಿ ದಾಸನು ಮಾಡುವ ಎಲ್ಲ ಪ್ರಾರ್ಥನೆಗಳೂ ಸ್ವೀಕೃತಗೊಳ್ಳುತ್ತವೆ" ಎಂದು ಪ್ರವಾದಿ(ಸ) ಹೇಳಿರುವರು. (ಬುಖಾರಿ)

ಈ ಗಳಿಗೆ ಯಾವುದೆಂಬುದರ ಬಗ್ಗೆ ಪಂಡಿತರಲ್ಲಿ ಅಭಿಪ್ರಾಯ ಭಿನ್ನತೆಯಿದೆ. ವರದಿಗಳಲ್ಲಿ ವಿಭಿನ್ನ ಸಮಯಗಳ ಪ್ರಸ್ತಾಪವಿದೆ. ಈ ಪೈಕಿ ಎರಡು ವರದಿಗಳು ಸರಿಯೆಂಬುದಾಗಿ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಒಂದನೆಯದು ಖತೀಬ್ (ಪ್ರವಚನಕಾರ) ಉಪದೇಶಿಸಲಿಕ್ಕಾಗಿ ವೇದಿಕೆಯೇರಿದ ಸಮಯದಿಂದ ನಮಾಝ್ ಮುಗಿಯುವ ತನಕ. ಇನ್ನೊಂದು ವರದಿಯಂತೆ ಆ ಘಳಿಗೆಯು ಶುಕ್ರವಾರದ ಕೊನೆಯ ಘಳಿಗೆಯಾಗಿದೆ. ಅರ್ಥಾತ್ ಸೂರ್ಯಾಸ್ತಮಾನದ ಸಮಯ. ಈ ಎರಡು ಸಮಯಗಳಲ್ಲಿ ಅತ್ಯಂತ ದೈನ್ಯತೆಯಿಂದ ಪ್ರಾರ್ಥಿಸುವುದು ಉತ್ತಮ. ನಿಮ್ಮ ಪ್ರಾರ್ಥನೆಗಳೊಂದಿಗೆ ಈ ಕೆಳಗಿನ ಪ್ರಾರ್ಥನೆಯನ್ನು ಸೇರಿಸಿರಿ:

اَللّٰهُمَّ اَنْتَ رَبِّىْ لَآ اِلٰهَ اِلَّا اَنْتَ خَلَقْتَنِىْ وَاَنَا عَبْدُكَ وَاَنَا عَلٰى عَهْدِكَ
وَوَعْدِكَ مَا اسْتَطَعْتُ اَبُوْءُ لَكَ بِنِعْمَتِكَ عَلَيَّ وَاَبُوْءُ بِذَنْبِىْ فَاغْفِرْلِىْ
فَاِنَّهُ لَا يَغْفِرُ الذُّنُوْبَ اِلَّا اَنْتَ اَعُوْذُبِكَ مِنْ شَرِّ مَا صَنَعْتُ

"ಅಲ್ಲಾಹುಮ್ಮ ಅಂತ ರಬ್ಬೀ ಲಾ ಇಲಾಹ ಇಲ್ಲಾ ಅಂತ ಖಲಕ್ತನೀ ವಅನ ಅಬ್ದುಕ ವಅನ ಅಲಾ ಅಹ್ದಿಕ ವವಅ್ದಿಕ ಮಸ್ತತಅ್ತು ಅಬೂಉಲಕ ಬಿ ನಿಅ್ಮತಿಕ ಅಲಯ್ಯ ವ ಅಬೂಉ ಬಿದನ್ಬೀ ಫಗ್‌ಫಿರ್‌ಲೀ ಫಇನ್ನಹು ಲಾ ಯಗ್‌ಫಿರುದ್ದುನೂಬ ಇಲ್ಲಾ ಅಂತ ಅಊದುಬಿಕ ಮಿನ್ ಶರ್ರಿಮಾ ಸನಅ್ತು".

(ಓ ಅಲ್ಲಾಹ್! ನೀನೇ ನನ್ನ ಪ್ರಭು, ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ. ನೀನು ನನ್ನನ್ನು ಸೃಷ್ಟಿಸಿದೆ. ನಾನು ನಿನ್ನ ಗುಲಾಮ. ನಿನ್ನಲ್ಲಿ ಮಾಡಿರುವ ವಾಗ್ದಾನವನ್ನು ನನಗೆ ಸಾಧ್ಯವಿದ್ದಷ್ಟು ಪಾಲಿಸುತ್ತಿದ್ದೇನೆ. ನನಗೆ ನೀನು ಮಾಡಿರುವ ನಿನ್ನ ಅನುಗ್ರಹ ಮತ್ತು ನಿನ್ನ ಸಹಾಯಗಳನ್ನು ನಾನು ಒಪ್ಪುತ್ತೇನೆ. ನನ್ನ ಪಾಪಗಳನ್ನು ನಾನು ಅಂಗೀಕರಿಸುತ್ತೇನೆ. ನೀನು ನನ್ನನ್ನು ಕ್ಷಮಿಸು. ನಿನ್ನ ಹೊರತು ಪಾಪಗಳನ್ನು ಕ್ಷಮಿಸುವವರು ಯಾರೂ ಇಲ್ಲ. ನನ್ನ ಕರ್ಮಗಳ ದುರಂತದಿಂದ ನಿನ್ನ ಅಭಯ ಯಾಚಿಸುತ್ತೇನೆ.) (ಬುಖಾರಿ, ನಸಾಈ)

3. ಜುಮಾ ನಮಾಝನ್ನು ನಿಷ್ಠೆಯಿಂದ ಪಾಲಿಸಿರಿ. ಪ್ರತಿಯೊಬ್ಬ ವಯಸ್ಕ, ಪ್ರಬುದ್ಧ, ಆರೋಗ್ಯವಂತ ಹಾಗೂ ಪ್ರಯಾಣಿಕನಲ್ಲದ ಮುಸ್ಲಿಮನ ಮೇಲೆ ಜುಮಾ ನಮಾಝ್ ಕಡ್ಡಾಯವಾಗಿದೆ. ಒಂದು ಪ್ರದೇಶದಲ್ಲಿ ಮೂವರು ವಾಸಿಸುತ್ತಿದ್ದರೂ ಅವರು ಜುಮಾ ನಮಾಝ್ ತಪ್ಪದೆ ನೆರವೇರಿಸಬೇಕು. ಪ್ರವಾದಿ(ಸ) ಈ ರೀತಿ ಹೇಳಿರುವರು:

"ಜನರು ಜುಮಾ ನಮಾಝನ್ನು ಎಂದೂ ವರ್ಜಿಸದಿರಲಿ, ಅನ್ಯಥಾ ಅಲ್ಲಾಹನು ಅವರ ಹೃದಯವನ್ನು ಮುಚ್ಚಿ ಬಿಡುವನು. ತರುವಾಯ (ಸನ್ಮಾರ್ಗ ದರ್ಶನದಿಂದ ವಂಚಿತರಾಗಿ) ಅವರು ಅಜ್ಞಾನಿಗಳಂತೆ ಆಗಿ ಹೋಗುವರು". (ಮುಸ್ಲಿಮ್)

ಹ. ಅಬೂ ಹುರೈರಾ(ರ) ಹೇಳುತ್ತಾರೆ: ಪ್ರವಾದಿ(ಸ) ಹೇಳಿದರು: "ಒಬ್ಬನು ಸ್ನಾನ ಮಾಡಿ ಶುಭ್ರ ಬಟ್ಟೆಬರೆಗಳನ್ನು ಧರಿಸಿ ನಮಾಝ್‌ಗಾಗಿ ಮಸೀದಿಗೆ ತೆರಳಿ ಸಾಧ್ಯವಿದ್ದಷ್ಟು ಐಚ್ಛಿಕ ನಮಾಝ್ ನೆರವೇರಿಸಿದರೆ, ತರುವಾಯ ಮೌನವಾಗಿ ಕುಳಿತು(ಖುತ್ಬಾ) ಆಲಿಸಿದರೆ; ಖುತ್ಬಾ ಮುಗಿದ ಬಳಿಕ ಇಮಾಮ್‌ರ ಅನುಸರಣೆಯಲ್ಲಿ ನಮಾಝ್ ಮಾಡಿದರೆ ಅವನ ಒಂದು ಶುಕ್ರವಾರದಿಂದ ಇನ್ನೊಂದು ಶುಕ್ರವಾರದ ತನಕದ ಪಾಪಗಳು ಕ್ಷಮಿಸಲ್ಪಡುತ್ತವೆ. ಮತ್ತೂ ಮೂರು ದಿನಗಳ ಪಾಪಗಳು ಕ್ಷಮಿಸಲ್ಪಡುವುವು".

ಹ. ಯಝೀದ್ ಬಿನ್ ಮರ್ಯಮ್(ರ) ಹೇಳುತ್ತಾರೆ: ನಾನು ಜುಮಾ ನಮಾಝ್‌ಗೆ ಹೊರಟಾಗ ದಾರಿಯಲ್ಲಿ ಹ. ಅಬಾಯ ಬಿನ್ ರಫಾಅ ಅವರ ಭೇಟಿಯಾಯಿತು. "ಎಲ್ಲಿಗೆ ಹೋಗುತ್ತಿರುವಿರಿ" ಎಂದು ಅವರು ನನ್ನನ್ನು ಕೇಳಿದರು. "ಜುಮಾ ನಿರ್ವಹಿಸಲು ಹೊರಟಿರುವೆನೆಂದು" ನಾನು ಉತ್ತರಿಸಿದೆ. ಆಗ ಅವರು ನನ್ನನ್ನು ಅಭಿನಂದಿಸುತ್ತಾ "ನಿಮ್ಮ ಸಂಚಾರವು ಶುಭವಾಗಲಿ. ಇದು ದೇವ ಮಾರ್ಗದಲ್ಲಿನ ನಡಿಗೆಯಾಗಿದೆ" ಎನ್ನುತ್ತಾ, "ಯಾವನ ಕಾಲು ದೇವ ಮಾರ್ಗದಲ್ಲಿ ಧೂಳು ಮುಕ್ಕಿತೋ ಅವನಿಗೆ ನರಕದ ಅಗ್ನಿ ನಿಷಿದ್ಧವಾಗಿದೆ" ಎಂದು ಪ್ರವಾದಿ(ಸ) ಹೇಳಿರುವರೆಂದು ಹೇಳಿದರು.

4. ಜುಮಾದ ಅದಾನ್ (ನಮಾಝ್‌ನ ಕರೆ) ಕೇಳುತ್ತಲೇ ಮಸೀದಿಯತ್ತ ಧಾವಿಸಿರಿ. ವ್ಯಾಪಾರಾದಿ ಕಾರ್ಯಗಳನ್ನು ಕೂಡಲೇ ನಿಲ್ಲಿಸಿರಿ. ಪೂರ್ಣ ಏಕಾಗ್ರತೆಯೊಂದಿಗೆ ಖುತ್ಬಾ ಕೇಳುವ ಮತ್ತು ನಮಾಝ್ ಮಾಡುವ ಕಾರ್ಯದಲ್ಲಿ ತಲ್ಲೀನರಾಗಿರಿ. ಜುಮಾ ನಮಾಝ್ ಮುಗಿಸಿದ ಬಳಿಕ ಮತ್ತೆ ವ್ಯಾಪಾರಾದಿ ಕಾರ್ಯಗಳಲ್ಲಿ ತೊಡಗಿರಿ. ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಇದೆ:

يَٰٓأَيُّهَا ٱلَّذِينَ ءَامَنُوٓا۟ إِذَا نُودِىَ لِلصَّلَوٰةِ مِن يَوْمِ ٱلْجُمُعَةِ فَٱسْعَوْا۟
إِلَىٰ ذِكْرِ ٱللَّهِ وَذَرُوا۟ ٱلْبَيْعَ ۚ ذَٰلِكُمْ خَيْرٌ لَّكُمْ إِن كُنتُمْ تَعْلَمُونَ ﴿٩﴾
فَإِذَا قُضِيَتِ ٱلصَّلَوٰةُ فَٱنتَشِرُوا۟ فِى ٱلْأَرْضِ وَٱبْتَغُوا۟ مِن فَضْلِ ٱللَّهِ
وَٱذْكُرُوا۟ ٱللَّهَ كَثِيرًا لَّعَلَّكُمْ تُفْلِحُونَ ﴿١٠﴾

"ಸತ್ಯವಿಶ್ವಾಸಿಗಳೇ! ಶುಕ್ರವಾರ ದಿನ ನಮಾಝ್‌ಗಾಗಿ ಕರೆ ನೀಡಲ್ಪಟ್ಟಾಗ ತಕ್ಷಣ ಅಲ್ಲಾಹನ ಸ್ಮರಣೆಯತ್ತ ಧಾವಿಸಿರಿ ಮತ್ತು ವ್ಯಾಪಾರ ವಹಿವಾಟುಗಳನ್ನು ವರ್ಜಿಸಿರಿ. ನಿಮಗೆ ತಿಳುವಳಿಕೆ ಇದ್ದರೆ ನಿಮಗಿದುವೇ ಉತ್ತಮ. ತರುವಾಯ ನಮಾಝ್ ಮುಗಿದಾಗ ಭೂಮಿಯ ಮೇಲೆ (ನಿಮ್ಮ ನಿಮ್ಮ ಕೆಲಸ ಕಾರ್ಯಗಳಿಗಾಗಿ) ಹರಡಿರಿ ಮತ್ತು ದೇವಾನುಗ್ರಹದಲ್ಲಿ ನಿಮ್ಮ ಪಾಲನ್ನು ಅರಸಿರಿ. ನೀವು ವಿಜಯಿಗಳಾಗಲು ಅಲ್ಲಾಹನನ್ನು ಅತ್ಯಧಿಕ ಸ್ಮರಿಸಿರಿ".

**(ಪವಿತ್ರ ಕುರ್‌ಆನ್, 62:9-10)**

ಈ ಸೂಕ್ತಗಳಿಂದ ಸತ್ಯವಿಶ್ವಾಸಿಗೆ ಈ ಕೆಳಗಿನ ಮಾರ್ಗದರ್ಶನ ಲಭಿಸುತ್ತದೆ:

i) ಅವನು ಪೂರ್ಣ ಕಾಳಜಿಯೊಂದಿಗೆ ಜುಮಾ ನಮಾಝನ್ನು ಪಾಲಿಸಬೇಕು. ನಮಾಝ್‌ನ ಕರೆ ಕೇಳುತ್ತಲೇ ಎಲ್ಲ ಕೆಲಸ ಕಾರ್ಯಗಳನ್ನು ಬದಿಗೊತ್ತಿ ಮಸೀದಿಯ ಕಡೆಗೆ ಧಾವಿಸಬೇಕು.

ii) 'ಅದಾನ್' ಕೇಳಿದ ಬಳಿಕ ವ್ಯಾಪಾರ ಮಾಡುವುದು ಅಥವಾ ಇನ್ನಿತರ ಲೌಕಿಕ ಕೆಲಸ ಕಾರ್ಯಗಳಲ್ಲಿ ನಿರತವಾಗಿರುವುದು ಹಾಗೂ ಅಲ್ಲಾಹನಿಂದ ಅಲಕ್ಷ್ಯನಾಗಿರುವ ಭೌತಿಕವಾದಿಯಂತಾಗುವುದು ನಿಷಿದ್ಧ.

iii) ಲೋಕದಲ್ಲಿ ಅಲ್ಲಾಹನ ದಾಸನಾಗಿ ಜೀವಿಸುವುದೇ ಸತ್ಯವಿಶ್ವಾಸಿಗೆ ಶ್ರೇಯಸ್ಕರ. ಅಲ್ಲಾಹನತ್ತ ಕರೆಯಲ್ಪಟ್ಟಾಗ ಒಬ್ಬ ನಿಷ್ಠಾವಂತ ಮತ್ತು ವಿಧೇಯ ದಾಸನಂತೆ ತನ್ನ ಎಲ್ಲ ಅಭಿರುಚಿಗಳನ್ನೂ ಬದಿಗೊತ್ತಿ, ಎಲ್ಲ ಲೌಕಿಕ ಲಾಭಗಳನ್ನು ತಿರಸ್ಕರಿಸಿ ಅಲ್ಲಾಹನ ಕರೆಗೆ ಓಗೊಟ್ಟು ಧಾವಿಸಬೇಕು, ಧರ್ಮದ ಬೇಡಿಕೆಗಳಿಗಾಗಿ ಲೌಕಿಕ ಲಾಭಗಳನ್ನು ತ್ಯಜಿಸುವುದು ನಾಶ ಮತ್ತು ಪರಾಭವದ ಸಂಕೇತವಲ್ಲ. ಲೋಕದ ಒಳಿತಿಗಾಗಿ ಧರ್ಮವನ್ನು ತ್ಯಜಿಸುವುದೇ ಯಥಾರ್ಥ ನಾಶ ಮತ್ತು ಪರಾಭವವೆಂಬುದನ್ನು ತನ್ನ ಕರ್ಮಗಳ ಮೂಲಕ ಜಾಹೀರು ಪಡಿಸಬೇಕು.

iv) ಲೋಕದ ಬಗ್ಗೆ ವೈರಾಗ್ಯ, ಲೋಕದ ಮಟ್ಟಿಗೆ ನಿರುಪಯುಕ್ತನಾಗಿ ಬಿಡುವಂತಹ ಧಾರ್ಮಿಕತೆಯು ಸರಿಯಾದ ದೃಷ್ಟಿಕೋನವಲ್ಲ. ನಮಾಝ್ ಮುಗಿಸಿದ ಕೂಡಲೇ ಭೂಮುಖದಲ್ಲಿ ಹರಡಿ ಅಲ್ಲಾಹನು ಅದರಲ್ಲಿರಿಸಿರುವ ಜೀವನೋಪಾಯದ ಎಲ್ಲ ಮೂಲಗಳನ್ನೂ ಸವಲತ್ತುಗಳನ್ನೂ ಪೂರ್ಣವಾಗಿ ಬಳಸಬೇಕೆಂದೂ ತನ್ನ ಪೂರ್ಣ ಶಕ್ತಿ ಸಾಮರ್ಥ್ಯಗಳನ್ನು ಉಪಯೋಗಿಸಿ ತನ್ನ ಪಾಲಿನ ಆಹಾರವನ್ನು ಗಳಿಸಬೇಕೆಂದೂ ಪವಿತ್ರ ಕುರ್‌ಆನ್ ಆದೇಶಿಸಿದೆ.

ಏಕೆಂದರೆ ತನ್ನ ಅಗತ್ಯಗಳಿಗಾಗಿ ಇತರರನ್ನು ಆಶ್ರಯಿಸುವುದು ಸತ್ಯವಿಶ್ವಾಸಿಗೆ ತರವಲ್ಲ. ಅಂತೆಯೇ ತನ್ನ ಆಶ್ರಿತರ ಆವಶ್ಯಕತೆಗಳನ್ನು ಈಡೇರಿಸದೆ ಅವರನ್ನು ಕಳವಳ ಮತ್ತು ನಿರಾಶೆಗೆ ಗುರಿಪಡಿಸುವುದೂ ಸಮಂಜಸವಲ್ಲ.

v) ಈ ಸೂಕ್ತಗಳಿಂದ ದೊರಕುವ ಕೊನೆಯ ಆದೇಶವೇನೆಂದರೆ ಸತ್ಯವಿಶ್ವಾಸಿಯು ಅಲ್ಲಾಹನಿಂದ ನಿರ್ಲಕ್ಷ್ಯವಾಗುವಂತೆ ಲೌಕಿಕ ಕೆಲಸ ಕಾರ್ಯಗಳಲ್ಲಿ ತಲ್ಲೀನನಾಗಬಾರದು. ತನ್ನ ಜೀವನದ ನೈಜ ಭಂಡವಾಳ ಮತ್ತು ಯಥಾರ್ಥ ಸಂಪತ್ತು ಅಲ್ಲಾಹನ ಸ್ಮರಣೆ ಎಂಬುದನ್ನು ಎಲ್ಲ ಪರಿಸ್ಥಿತಿಗಳಲ್ಲೂ ನೆನಪಿಡಬೇಕು. ಹ. ಸಈದ್ ಬಿನ್ ಜುಬೈರ್(ರ) ಹೇಳುತ್ತಾರೆ: "ನಾಲಗೆಯಿಂದ ಅಲ್ಲಾಹನ ಸ್ತುತಿಸ್ತೋತ್ರ, ಕೀರ್ತನೆ, ಗುಣಗಾನಗಳನ್ನು ಮಾಡುವುದು ಮಾತ್ರ ದೇವ ಸ್ಮರಣೆಯಲ್ಲ. ದೇವನ ಆದೇಶಕ್ಕನುಗುಣವಾಗಿ ತನ್ನ ಜೀವನ ವ್ಯವಸ್ಥೆಯನ್ನು ನಿರ್ಮಿಸುವುದರಲ್ಲಿ ನಿರತನಾದ ಪ್ರತಿಯೊಬ್ಬ ವ್ಯಕ್ತಿಯೂ ದೇವಸ್ಮರಣೆ ಮಾಡುತ್ತಿರುವನು."

5. ಜುಮಾ ನಮಾಝ್‌ಗಾಗಿ ಆದಷ್ಟು ಬೇಗ ಮಸೀದಿಗೆ ತೆರಳಿ ಮೊದಲ ಪಂಕ್ತಿಯಲ್ಲಿ ಸ್ಥಳ ಪಡೆಯಲು ಪ್ರಯತ್ನಿಸಿರಿ.

ಹ. ಅಬೂ ಹುರೈರಾ(ರ) ಹೇಳುತ್ತಾರೆ: ಪ್ರವಾದಿ(ಸ) ಈ ರೀತಿ ಹೇಳಿರುವರು.

"ಶುದ್ಧವಾಗಲಿಕ್ಕಾಗಿ ಸ್ನಾನ ಮಾಡುವವನಂತೆ ಓರ್ವ ವ್ಯಕ್ತಿಯು ಶುಕ್ರವಾರದಂದು ಚೆನ್ನಾಗಿ ಸ್ನಾನ ಮಾಡಿದರೆ (ಅರ್ಥಾತ್ ಪೂರ್ತಿ ದೇಹಕ್ಕೆ ನೀರು ಹೊಯ್ದು ತಿಕ್ಕಿ ತೊಳೆದರೆ) ತರುವಾಯ ಪ್ರಥಮ ವೇಳೆಯಲ್ಲೇ ಮಸೀದಿಗೆ ತಲಪಿದರೆ ಅವನು ಒಂದು ಒಂಟೆಯನ್ನು ಬಲಿದಾನ ನೀಡಿದಂತೆ. ಆ ಬಳಿಕ ತಲಪಿದವನು ಒಂದು ದನ ಅಥವಾ ಎಮ್ಮೆಯನ್ನು ಬಲಿ ನೀಡಿದಂತೆ. ಆ ಬಳಿಕ ತಲಪಿದವನು ಟಗರನ್ನು ಬಲಿ ನೀಡಿದಂತೆ. ತರುವಾಯ ತಲಪಿ ದವನು ಒಂದು ಕೋಳಿಯನ್ನು ಬಲಿ ನೀಡಿದಂತೆ. ತರುವಾಯ ತಲಪಿದವನು ಒಂದು ಮೊಟ್ಟೆಯನ್ನು ದಾನ ಮಾಡಿದಂತೆ. ಆ ಬಳಿಕ ಖತೀಬ್ (ಪ್ರವಚನಕಾರರು) ಬೋಧನೆ ನೀಡಲು ಹೊರಟಾಗ ದೇವಚರರು ಮಸೀದಿಯ ಬಾಗಿಲನ್ನು ತೊರೆದು ಖುತ್ಬಾ ಆಲಿಸಲು ಮತ್ತು ನಮಾಝ್ ಮಾಡಲು ಮಸೀದಿಗೆ ಬಂದು ಕುಳಿತುಕೊಳ್ಳುತ್ತಾರೆ". (ಬುಖಾರಿ, ಮುಸ್ಲಿಮ್)

ಹ. ಅರ್ಬಾದ್ ಬಿನ್ ಸಾರಿಯ(ರ) ಹೇಳುತ್ತಾರೆ, ಪ್ರವಾದಿ(ಸ) ಮೊದಲ ಪಂಕ್ತಿಯವರಿಗಾಗಿ ಮೂರು ಸಲ ಮತ್ತು ದ್ವಿತೀಯ ಪಂಕ್ತಿಯವರಿಗೆ ಒಂದೇ ಸಲ ಕ್ಷಮಾಯಾಚನೆ ಮಾಡುತ್ತಿದ್ದರು. (ಇಬ್ನು ಮಾಜಃ, ನಸಾಈ)

ಹ. ಅಬೂ ಹುರೈರಾ(ರ) ಹೇಳುತ್ತಾರೆ: "ಜನರಿಗೆ ಪ್ರಥಮ ಪಂಕ್ತಿಯ ಪುಣ್ಯದ ಅರಿವಿಲ್ಲ. ಪ್ರಥಮ ಪಂಕ್ತಿಯ ಪುಣ್ಯದ ಬಗ್ಗೆ ಅವರಿಗೆ ತಿಳಿದಿದ್ದರೆ ಅವರು ಅದಕ್ಕಾಗಿ ಚೀಟಿ ಎತ್ತುತ್ತಿದ್ದರು". (ಬುಖಾರಿ, ಮುಸ್ಲಿಮ್)

6. ಜುಮಾ ನಮಾಝನ್ನು ಜಾಮಿಅ ಮಸೀದಿಯಲ್ಲೇ ನೆರವೇರಿಸಿರಿ. ಎಲ್ಲಿ ಸ್ಥಳಾವಕಾಶವಿದೆಯೋ ಅಲ್ಲಿ ಕುಳಿತುಕೊಳ್ಳಿರಿ. ಜನರ ಹೆಗಲ ಮೇಲಿಂದ ಮತ್ತು ತಲೆಯ ಮೇಲಿಂದ ನೆಗೆದು ಮುಂದೆ ಸಾಗಬೇಡಿರಿ. ಇದರಿಂದ ಜನರಿಗೆ ದೈಹಿಕ ಮತ್ತು ಮಾನಸಿಕ ತೊಂದರೆಯಾಗುತ್ತದೆ. ಅವರ ಶಾಂತಿ, ಏಕಾಗ್ರತೆ ಮತ್ತು ತಲ್ಲೀನತೆಗೂ ಭಂಗ ಬರುತ್ತದೆ.

ಪ್ರವಾದಿ(ಸ) ಹೇಳಿರುವುದಾಗಿ ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಹೇಳುತ್ತಾರೆ:

"ಒಬ್ಬ ಮುಸ್ಲಿಮ್ ಸಹೋದರನಿಗೆ ತೊಂದರೆಯಾಗದಿರಲೆಂದು ಒಬ್ಬನು ಪ್ರಥಮ ಪಂಕ್ತಿಯನ್ನು ಬಿಟ್ಟು ದ್ವಿತೀಯ ಪಂಕ್ತಿಯಲ್ಲಿ ಕುಳಿತರೆ ಅವನಿಗೆ ಅಲ್ಲಾಹನು ಪ್ರಥಮ ಪಂಕ್ತಿಯವರ ಇಮ್ಮಡಿ ಪುಣ್ಯವನ್ನು ದಯಪಾಲಿಸುವನು". (ತಬ್ರಾನಿ)

ಪ್ರವಾದಿ(ಸ) ಹೇಳಿರುವುದಾಗಿ ಹ. ಸಲ್ಮಾನ್ ಫಾರ್ಸೀ(ರ) ಹೇಳುತ್ತಾರೆ: ಒಬ್ಬ ವ್ಯಕ್ತಿ ಶುಕ್ರವಾರದಂದು ಮಿಂದು ಶುಭ್ರ ಬಟ್ಟೆ ಬರೆಗಳನ್ನು ಧರಿಸಿ ಸಾಧ್ಯವಿದ್ದಷ್ಟು ನಿರ್ಮಲವಾಗಿ ತಲೆಗೆ ಎಣ್ಣೆ ಹಚ್ಚಿ, ಸುಗಂಧ ಸವರಿ ಮಧ್ಯಾಹ್ನ ಮಸೀದಿಗೆ ಹೋಗಿ ಇಬ್ಬರನ್ನು ಪರಸ್ಪರ ಬೇರ್ಪಡಿಸದೆ ಅರ್ಥಾತ್ ಅವರ ತಲೆ ಮತ್ತು ಹೆಗಲ ಮೇಲಿಂದ ನೆಗೆಯದೆ, ಪಂಕ್ತಿಗಳನ್ನು ಸೀಳದೆ, ಇಬ್ಬರು ನಮಾಝಿಗಳ ಮಧ್ಯೆ ಕುಳಿತುಕೊಳ್ಳುವ ಕೆಟ್ಟ ಪ್ರಯತ್ನ ಮಾಡದೆ ಸ್ಥಳಾವಕಾಶವಿದ್ದಲ್ಲಿ ಮೌನವಾಗಿ ಐಚ್ಛಿಕ ನಮಾಝ್ ಇತ್ಯಾದಿಗಳನ್ನು ಸಾಧ್ಯವಿದ್ದಷ್ಟು ನೆರವೇರಿಸಿದರೆ, ತರುವಾಯ ಖತೀಬ್ (ಪ್ರವಚನಕಾರ) ವೇದಿಕೆಯೇರಿದಾಗ ಮೌನವಾಗಿ (ಕುಳಿತು ಖುತ್ಬಾ ಆಲಿಸುತ್ತಾ) ಇದ್ದರೆ ಅಂಥವನ ಒಂದು ಶುಕ್ರವಾರದಿಂದ ಮತ್ತೊಂದು ಶುಕ್ರವಾರದ ವರೆಗಿನ ಎಲ್ಲ ಪಾಪಗಳೂ ಕ್ಷಮಿಸಲ್ಪಡುತ್ತವೆ. (ಬುಖಾರಿ)

7. ಯಾವಾಗಲೂ ಖುತ್ಬಾವನ್ನು ನಮಾಝ್‌ಗಿಂತ ಸಂಕ್ಷಿಪ್ತಗೊಳಿಸಿರಿ. ಏಕೆಂದರೆ ಖುತ್ಬಾ ಯಥಾರ್ಥದಲ್ಲಿ ಒಂದು ಉದ್ಬೋಧೆ. ಅದರಲ್ಲಿ ನೀವು ಜನರನ್ನು ಅಲ್ಲಾಹನ ದಾಸ್ಯ ಮತ್ತು ಆರಾಧನೆಗೆ ಪ್ರೇರೇಪಿಸುತ್ತೀರಿ. ನಮಾಝ್ ಒಂದು ಆರಾಧನೆ ಮಾತ್ರವಲ್ಲ ಅತ್ಯಂತ ಶ್ರೇಷ್ಠ ಆರಾಧನೆ. ಆದ್ದರಿಂದ ದೀರ್ಘವಾದ ಖುತ್ಬಾ ನೀಡುವುದು ಮತ್ತು ನಮಾಝನ್ನು ಅವಸರವಸರದಲ್ಲಿ ಸಂಕ್ಷಿಪ್ತವಾಗಿ ಮುಗಿಸುವುದು ಸರ್ವಥಾ ಸಮಂಜಸವಲ್ಲ. ಪ್ರವಾದಿ(ಸ) ಹೇಳಿರುವರು:

"ನಮಾಝನ್ನು ದೀರ್ಘಗೊಳಿಸುವುದು ಮತ್ತು ಖುತ್ಬಾವನ್ನು ಸಂಕ್ಷಿಪ್ತಗೊಳಿಸುವುದು ಖತೀಬರ ಧೀಮಂತಿಕೆಯ ನಿದರ್ಶನ. ಆದ್ದರಿಂದ ನೀವು ನಮಾಝನ್ನು ದೀರ್ಘಗೊಳಿಸಿರಿ ಮತ್ತು ಖುತ್ಬಾವನ್ನು ಸಂಕ್ಷಿಪ್ತಗೊಳಿಸಿರಿ". (ಮುಸ್ಲಿಮ್)

8. ಖುತ್ಬಾವನ್ನು ಅತ್ಯಂತ ಮೌನವಾಗಿ ಧ್ಯಾನ, ಏಕಾಗ್ರತೆ, ತಲ್ಲೀನತೆ ಮತ್ತು ಅಂಗೀಕರಿಸುವ ಮನೋಭಾವದೊಂದಿಗೆ ಆಲಿಸಿರಿ. ಅಲ್ಲಾಹನ ಮತ್ತು ಪ್ರವಾದಿವರ್ಯರ(ಸ) ಆಜ್ಞೆಗಳನ್ನು ಆಲಿಸಿದಾಗ ಅವುಗಳನ್ನು ನಿಷ್ಠೆಯಿಂದ ಪಾಲಿಸುವ ನಿರ್ಧಾರ ಕೈಗೊಳ್ಳಿರಿ. ಪ್ರವಾದಿ(ಸ) ಹೇಳುತ್ತಾರೆ: "ಒಬ್ಬನು ಸ್ನಾನ ಮಾಡಿ ಜುಮಾ ನಮಾಝ್ ನೆರವೇರಿಸಲು ಬಂದರೆ ತರುವಾಯ ಸಾಧ್ಯವಿದ್ದಷ್ಟು ನಮಾಝ್ ಮಾಡಿ ಮೌನವಾಗಿ (ಕುಳಿತು ಏಕಾಗ್ರತೆ ಮತ್ತು ತಲ್ಲೀನತೆಯಿಂದ ಖುತ್ಬಾ ಆಲಿಸುತ್ತಾ) ಇದ್ದರೆ ಹಾಗೂ ಖತೀಬ್ ಖುತ್ಬಾ ಮುಗಿಸಿದಾಗ ಅವನು ಇಮಾಮರ ಜೊತೆ ಕಡ್ಡಾಯ ನಮಾಝ್ ಮಾಡಿದರೆ ಅವನು ಒಂದು ಶುಕ್ರವಾರದಿಂದ ಇನ್ನೊಂದು ಶುಕ್ರವಾರದ ವರೆಗೆ ಮಾಡಿರುವ ಎಲ್ಲ ಪಾಪಗಳೂ ಕ್ಷಮಿಸಲ್ಪಟ್ಟುವು ಮಾತ್ರವಲ್ಲ ಇನ್ನೂ ಮೂರು ದಿನಗಳ ಪಾಪಗಳು ಕ್ಷಮಿಸಲ್ಪಟ್ಟುವು". (ಮುಸ್ಲಿಮ್)

ಇನ್ನೊಂದು ವರದಿಯಂತೆ ಖತೀಬರು ಖುತ್ಬಾ ಮಾಡಲಿಕ್ಕೆ ಎದ್ದು ಬಂದ ಬಳಿಕ ಯಾವುದೇ ನಮಾಝ್ ಮಾಡುವುದು ಅಥವಾ ಮಾತನಾಡುವುದು ಸರಿಯಲ್ಲ.

9. ದ್ವಿತೀಯ ಖುತ್ಬಾವನ್ನು ಅರಬೀ ಭಾಷೆಯಲ್ಲಿ ಮಾಡಿರಿ. ಪ್ರಥಮ ಖುತ್ಬಾದಲ್ಲಿ ಅನುಯಾಯಿಗಳಿಗೆ ಅಲ್ಲಾಹ್ ಮತ್ತು ಪ್ರವಾದಿವರ್ಯರ(ಸ) ಕೆಲವು ಆಜ್ಞೆಗಳ ಬಗ್ಗೆ ಸಂದರ್ಭಾನುಸಾರ ಉಪದೇಶ, ಆದೇಶ ಮತ್ತು ಉದ್ಬೋಧೆಗಳನ್ನು ನಿಮ್ಮ ಮಾತೃ ಭಾಷೆ ಯಲ್ಲೇ ನೀಡಿರಿ. ಪ್ರವಾದಿ(ಸ) ನೀಡಿದ ಜುಮಾ ಖುತ್ಬಾಗಳಿಂದ ತಿಳಿದು ಬರುವುದೇ ನೆಂದರೆ ಖತೀಬರು ಸಂದರ್ಭಕ್ಕನುಸಾರವಾಗಿ ಮುಸ್ಲಿಮರಿಗೆ ಕೆಲವು ಆದೇಶ ಉಪದೇಶ ಗಳನ್ನು ನೀಡಬೇಕು. ಈ ಉದ್ದೇಶ ಪೂರ್ತಿಗೊಳ್ಳಬೇಕಾದರೆ ಖತೀಬರು ಶ್ರೋತೃಗಳ ಭಾಷೆಯಲ್ಲೇ ಅವರನ್ನು ಅಭಿಸಂಬೋಧಿಸಬೇಕು.

10. ಜುಮಾದ ಕಡ್ಡಾಯ ನಮಾಝ್‌ನಲ್ಲಿ ಸೂರಃ ಅಲ್‌ಲಾ ಮತ್ತು ಸೂರಃ ಗಾಶಿಯಾ ಅಥವಾ ಸೂರಃ ಜುಮಾ ಮತ್ತು ಸೂರಃ ಮುನಾಫಿಕೂನ್ ಪಠಿಸುವುದು ಉತ್ತಮ. ಇದುವೇ ಪ್ರವಾದಿಚರ್ಯೆ. ಪ್ರವಾದಿ(ಸ) ಸಾಮಾನ್ಯವಾಗಿ ಜುಮಾ ನಮಾಝ್‌ನಲ್ಲಿ ಈ ಸೂರಃಗಳನ್ನೇ ಪಠಿಸುತ್ತಿದ್ದರು.

11. ಶುಕ್ರವಾರದಂದು ಪ್ರವಾದಿವರ್ಯರ(ಸ) ಮೇಲೆ ಅಧಿಕಾಧಿಕ ಸಲಾಮ್ ಮತ್ತು ಸಲಾತ್ (ಸ್ವಸ್ತಿ ವಚನ) ಹೇಳಿರಿ. ಪ್ರವಾದಿ(ಸ) ಹೇಳುತ್ತಾರೆ:

"ಶುಕ್ರವಾರ ನನ್ನ ಮೇಲೆ ಹೆಚ್ಚೆಚ್ಚು ಸಲಾತ್ ಹೇಳಿರಿ. ಅಂದು ಸಲಾತ್‌ನಲ್ಲಿ ದೇವಚರರೂ ಹಾಜರಾಗುತ್ತಾರೆ. ಅವರು ಈ ಸಲಾತನ್ನು ನನಗೆ ತಲಪಿಸುತ್ತಾರೆ".

(ಇಬ್ನುಮಾಜಃ)

# ಜನಾಝಾ ನಮಾಝ್

1. ಜನಾಝಾ ನಮಾಝ್‌ಗಳಲ್ಲಿ ತಪ್ಪದೆ ಭಾಗವಹಿಸಿರಿ. ಜನಾಝಾ ನಮಾಝ್ ಮೃತರಿಗಾಗಿ ಮಾಡುವ ಕ್ಷಮಾಪಣೆಯ ಪ್ರಾರ್ಥನೆಯಾಗಿದೆ. ಇದು ಮೃತರ ಒಂದು ಪ್ರಮುಖ ಹಕ್ಕಾಗಿದೆ. ವುಝೂ ಮಾಡಿ ಮುಗಿಸುವುದರೊಳಗೆ ಜನಾಝಾ ನಮಾಝ್ ಮುಗಿದೀತೆಂಬ ಭಯವಿದ್ದರೆ 'ತಯಮ್ಮುಮ್' ಮಾಡಿಯೇ ನೆರವೇರಿಸಿರಿ. ಪ್ರವಾದಿ(ಸ) ಹೇಳುತ್ತಾರೆ: "ಜನಾಝಾ ನಮಾಝ್ ನಿರ್ವಹಿಸಿರಿ. ಆ ನಮಾಝ್‌ನಿಂದಾಗಿ ನಿಮ್ಮ ಮೇಲೆ ದುಃಖ ಆವರಿಸಲೂಬಹುದು. ದುಃಖಿತ ಮನುಷ್ಯ ಅಲ್ಲಾಹನ ನೆರಳಲ್ಲಿರುತ್ತಾನೆ. ದುಃಖಿತ ಮನುಷ್ಯ ಎಲ್ಲ ಸತ್ಕಾರ್ಯಗಳನ್ನು ಸ್ವಾಗತಿಸುತ್ತಾನೆ". (ಹಾಕಿಮ್)

ಪ್ರವಾದಿ(ಸ) ಹೀಗೂ ಹೇಳಿರುವರು, "ಯಾವ ಮೃತದೇಹಕ್ಕಾಗಿ ಮುಸ್ಲಿಮರ ಮೂರು ಪಂಕ್ತಿಗಳು ಜನಾಝಾ ನಮಾಝ್ ಮಾಡುತ್ತದೋ ಅದಕ್ಕೆ ಸ್ವರ್ಗವು ಕಡ್ಡಾಯವಾಗುತ್ತದೆ". (ಅಬೂದಾವೂದ್)

2. ಜನಾಝಾ ನಮಾಝ್‌ನ ವೇಳೆ 'ಮಯ್ಯಿತ್'(ಮೃತದೇಹ)ನ ಮಂಚವನ್ನು ತಲೆ ಉತ್ತರ ದಿಕ್ಕಿಗೂ, ಕಾಲು ದಕ್ಷಿಣ ದಿಕ್ಕಿಗೂ, ಮುಖ ಕಿಬ್ಲಾದ ದಿಕ್ಕಿಗೂ ಆಗುವಂತೆ ಇರಿಸಿರಿ.

3. ನೀವು ಜನಾಝಾ ನಮಾಝ್‌ನ ನೇತೃತ್ವ ವಹಿಸುವವರಾಗಿದ್ದರೆ ಮಯ್ಯಿತ್‌ನ ಎದೆಯ ಹತ್ತಿರ ನಿಲ್ಲಿರಿ.

4. ಜನಾಝಾ ನಮಾಝ್‌ನಲ್ಲಿ ಪಂಕ್ತಿಗಳನ್ನು ಬೆಸ ಸಂಖ್ಯೆಯಲ್ಲಿರಿಸಿರಿ. ಕೆಲವೇ ಮಂದಿ ಇದ್ದರೆ ಒಂದೇ ಪಂಕ್ತಿ ಮಾಡಿರಿ. ಅನ್ಯಥಾ ಮೂರು,* ಐದು, ಏಳು ಈ ರೀತಿ ಜನರು ಹೆಚ್ಚಿದಷ್ಟು ಹೆಚ್ಚೆಚ್ಚು ಪಂಕ್ತಿಗಳನ್ನು ಮಾಡಿರಿ. ಆದರೆ ಬೆಸಸಂಖ್ಯೆಯ ಪಂಕ್ತಿಗಳನ್ನೇ ಮಾಡಿರಿ.

5. ಜನಾಝಾ ನಮಾಝ್ ಪ್ರಾರಂಭಿಸುವಾಗ ಈ ಮಯ್ಯಿತ್‌ಗಾಗಿ ಪರಮ ದಯಾಮಯನಲ್ಲಿ ಕ್ಷಮಾಪಣೆ ಮಾಡಲಿಕ್ಕಾಗಿ ಈ ಜನಾಝಾ ನಮಾಝನ್ನು ಮಾಡುತ್ತಿರುವೆನೆಂಬ ಸಂಕಲ್ಪ ಮಾಡಿರಿ. ಇಮಾಮ್ ಮತ್ತು ಅನುಯಾಯಿಗಳಿಬ್ಬರೂ ಇದೇ ಸಂಕಲ್ಪ ಮಾಡಬೇಕು.

6. ಜನಾಝಾ ನಮಾಝ್‌ನಲ್ಲಿ ಇಮಾಮರು ಪಠಿಸುವುದನ್ನೇ ಅನುಯಾಯಿಗಳೂ ಪಠಿಸಬೇಕು. ಅನುಯಾಯಿಗಳು ಏನನ್ನೂ ಪಠಿಸದೆ ಮೌನವಾಗಿರಬಾರದು. ಆದರೆ ಇಮಾಮ್ ತಕ್ಬೀರ್(ಅಲ್ಲಾಹು ಅಕ್ಬರ್) ಉಚ್ಚ ಸ್ವರದಲ್ಲಿ ಹೇಳುವಾಗ ಅನುಯಾಯಿಗಳು ಮೆಲು ಧನಿಯಲ್ಲಿ ಹೇಳಬೇಕು.

---

* ಇಮಾಮರ ಹೊರತು ಆರು ಮಂದಿ ಇದ್ದಾಗಲೂ ಮೂರು ಪಂಕ್ತಿಗಳನ್ನು ಮಾಡುವುದೊಳ್ಳೆಯದು. ಮೊದಲ ಪಂಕ್ತಿಯಲ್ಲಿ ಮೂವರು, ದ್ವಿತೀಯ ಪಂಕ್ತಿಯಲ್ಲಿ ಇಬ್ಬರು ಮತ್ತು ತೃತೀಯ ಪಂಕ್ತಿಯಲ್ಲಿ ಒಬ್ಬರು ನಿಲ್ಲಲಿ.

7. ಜನಾಝಾ ನಮಾಝ್‌ನಲ್ಲಿ ನಾಲ್ಕು ತಕ್ಬೀರ್‌ಗಳನ್ನು ಹೇಳಬೇಕು. ಪ್ರಥಮ ತಕ್ಬೀರ್ ಹೇಳುತ್ತಾ ಕಿವಿಗಳ ತನಕ ಕೈಗಳನ್ನೆತ್ತಿರಿ. ತರುವಾಯ ಕೈಕಟ್ಟಿ ನಿಂತು ಈ ರೀತಿ ಪ್ರಾರ್ಥಿಸಿರಿ.[1]

سُبْحٰنَكَ اَللّٰهُمَّ وَبِحَمْدِكَ وَتَبَارَكَ اسْمُكَ وَتَعَالٰى جَدُّكَ وَجَلَّ ثَنَاءُكَ وَلَآ اِلٰهَ غَيْرُكَ

"ಸುಬ್ಹಾನಕಲ್ಲಾಹುಮ್ಮ ವಬಿಹಮ್ದಿಕ ವತಬಾರಕಸ್‌ಮುಕ ವತಆಲಾ ಜದ್ದುಕ ವಜಲ್ಲ ಸನಾಉಕ ವಲಾ ಇಲಾಹ ಗೈರುಕ".

(ಓ ಅಲ್ಲಾಹ್! ನೀನು ಪರಮ ಪಾವನನು, ಅತ್ಯುನ್ನತನು, ಸ್ತುತ್ಯರ್ಹನು. ನಿನ್ನ ನಾಮವು ಮಂಗಳಮಯವು. ನಿನ್ನ ಮಹಿಮೆ ಮತ್ತು ಹಿರಿಮೆ ಉನ್ನತವಾದುದು. ನಿನ್ನ ಗುಣಗಾನವು ಮಹತ್ತರವಾದುದು. ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ.)

ಈಗ ದ್ವಿತೀಯ ತಕ್ಬೀರ್ ಹೇಳಿರಿ. ಆದರೆ ಕೈ ಎತ್ತಬೇಡಿರಿ[2] ತಲೆಯಿಂದ ಯಾವ ಸನ್ನೆಯನ್ನೂ ಮಾಡದಿರಿ. ದ್ವಿತೀಯ ತಕ್ಬೀರ್ ಹೇಳಿದ ಬಳಿಕ ಈ ಸಲಾತ್ ಪಠಿಸಿರಿ:

اَللّٰهُمَّ صَلِّ عَلٰى مُحَمَّدٍ وَّعَلٰى اٰلِ مُحَمَّدٍ كَمَا صَلَّيْتَ عَلٰى اِبْرَاهِيْمَ وَعَلٰى اٰلِ اِبْرَاهِيْمَ اِنَّكَ حَمِيْدٌ مَّجِيْدٌ ـ اَللّٰهُمَّ بَارِكْ عَلٰى مُحَمَّدٍ وَّعَلٰى اٰلِ مُحَمَّدٍ كَمَا بَارَكْتَ عَلٰى اِبْرَاهِيْمَ وَعَلٰى اٰلِ اِبْرَاهِيْمَ اِنَّكَ حَمِيْدٌ مَّجِيْدٌ

"ಅಲ್ಲಾಹುಮ್ಮ ಸಲ್ಲಿ ಅಲಾ ಮುಹಮ್ಮದಿನ್ ವಅಲಾ ಆಲಿ ಮುಹಮ್ಮದಿನ್ ಕಮಾ ಸಲ್ಲೈತ ಅಲಾ ಇಬ್ರಾಹೀಮ ವಅಲಾ ಆಲಿ ಇಬ್ರಾಹೀಮ ಇನ್ನಕ ಹಮೀದುಮ್ಮಜೀದ್. ಅಲ್ಲಾಹುಮ್ಮ ಬಾರಿಕ್ ಅಲಾ ಮುಹಮ್ಮದಿನ್ ವಅಲಾ ಆಲಿ ಮುಹಮ್ಮದಿನ್ ಕಮಾ ಬಾರಕ್ತ ಅಲಾ ಇಬ್ರಾಹೀಮ ವಅಲಾ ಆಲಿ ಇಬ್ರಾಹೀಮ ಇನ್ನಕ ಹಮೀದುಮ್ಮಜೀದ್".

(ಓ ಅಲ್ಲಾಹ್! ಮುಹಮ್ಮದ್‌ರ(ಸ) ಮೇಲೆ ಕರುಣೆ ತೋರು ಮತ್ತು ಅವರ ಸಂತತಿಗಳ ಮೇಲೆ ಕರುಣೆ ತೋರು. ನೀನು ಇಬ್ರಾಹೀಮರ(ಅ) ಮೇಲೆ ಮತ್ತು ಇಬ್ರಾಹೀಮರ ಸಂತತಿಗಳ ಮೇಲೆ ಕರುಣೆ ತೋರಿದಂತೆ. ಖಂಡಿತ ನೀನು ಸ್ತುತ್ಯರ್ಹನೂ, ಮಹಿಮಾವಂತನೂ ಆಗಿರುವಿ.

ಓ ಅಲ್ಲಾಹ್! ಮುಹಮ್ಮದ್‌ರ(ಸ) ಮೇಲೆ ಸಮೃದ್ಧಿ ಸುರಿಸು ಮತ್ತು ಮುಹಮ್ಮದ್‌ರ(ಸ)

1. ಇದು ಹನಫೀ ಕರ್ಮಶಾಸ್ತ್ರ ವಿಧಿಯಂತೆ ಮಯ್ಯಿತ್ ನಮಾಝ್‌ನ ಕ್ರಮ. ಶಾಫಿಈ ಕರ್ಮಶಾಸ್ತ್ರದಂತೆ ಜನಾಝಾ ನಮಾಝ್‌ನಲ್ಲಿಯೂ ಸೂರಃ ಫಾತಿಹಾ ಪಠಿಸಬೇಕು. (ಅನುವಾದಕ)

2. ಶಾಫಿಈ ಕರ್ಮಶಾಸ್ತ್ರದಂತೆ ಕೈ ಎತ್ತಬೇಕು. (ಅನುವಾದಕ)

ಸಂತತಿಗಳ ಮೇಲೆ ಸಮೃದ್ಧಿ ಸುರಿಸು. ನೀನು ಇಬ್ರಾಹೀಮರ(ಅ) ಮೇಲೆ ಮತ್ತು ಇಬ್ರಾಹೀಮ್‌ರ(ಅ) ಸಂತತಿಗಳ ಮೇಲೆ ಸಮೃದ್ಧಿ ಸುರಿಸಿದಂತೆ. ಖಂಡಿತ ನೀನು ಸ್ತುತ್ಯರ್ಹನೂ, ಮಹಿಮಾವಂತನೂ ಆಗಿರುತ್ತಿ.)

ಈಗ ಮೂರನೆಯ ಸಲ ಕೈ ಎತ್ತದೆ ತಕ್ಬೀರ್ ಹೇಳಿರಿ* ಮತ್ತು ಮೃತರಿಗಾಗಿ ಪ್ರಾರ್ಥಿಸಿರಿ. ತರುವಾಯ ನಾಲ್ಕನೆಯ ಸಲ ತಕ್ಬೀರ್ ಹೇಳಿ ಎರಡೂ ಕಡೆ ಮುಖ ತಿರುಗಿಸಿ ಸಲಾಮ್ ಹೇಳಿರಿ.

8. ಮೃತರು ವಯಸ್ಕ ಪುರುಷನೋ, ಸ್ತ್ರೀಯೋ ಆಗಿದ್ದರೆ ಮೂರನೆಯ ತಕ್ಬೀರ್‌ನ ನಂತರ ಈ ರೀತಿ ಪ್ರಾರ್ಥಿಸಿರಿ:

اَللّٰهُمَّ اغْفِرْ لِحَيِّنَا وَمَيِّتِنَا وَشَاهِدِنَا وَغَائِبِنَا وَصَغِيْرِنَا وَكَبِيْرِنَا وَذَكَرِنَا وَاُنْثَانَا، اَللّٰهُمَّ مَنْ اَحْيَيْتَهُ مِنَّا فَاَحْيِهِ عَلَى الْاِسْلَامِ وَمَنْ تَوَفَّيْتَهُ مِنَّا فَتَوَفَّهُ عَلَى الْاِيْمَانِ

"ಅಲ್ಲಾಹುಮ್ಮಗ್‌ಫಿರ್ ಲಿಹಯ್ಯಿನಾ ವಮಯ್ಯಿತಿನಾ ವಶಾಹಿದಿನಾ ವ ಗಾಇಬಿನಾ ವ ಸಗೀರಿನಾ ವ ಕಬೀರಿನಾ ವ ದಕರಿನಾ ವ ಉನ್‌ಸಾನಾ ಅಲ್ಲಾಹುಮ್ಮ ಮನ್ ಅಹ್‌ಯೈತಹೂ ಮಿನ್ನಾ ಫ ಅಹ್ಯಿಹೀ ಅಲಲ್ ಇಸ್ಲಾಮಿ ವಮನ್ ತವಫ್ಫೈತಹೂ ಮಿನ್ನಾ ಫತವಫ್ಫಹೂ ಅಲಲ್ ಈಮಾನ್".

(ಓ ಅಲ್ಲಾಹ್! ನಮ್ಮ ಜೀವಂತರನ್ನು, ನಮ್ಮ ಮೃತರನ್ನು, ನಮ್ಮ ಉಪಸ್ಥಿತರನ್ನು, ನಮ್ಮ ಅನುಪಸ್ಥಿತರನ್ನು, ನಮ್ಮ ಕಿರಿಯರನ್ನು, ನಮ್ಮ ಹಿರಿಯರನ್ನು, ನಮ್ಮ ಪುರುಷರನ್ನು, ನಮ್ಮ ಸ್ತ್ರೀಯರನ್ನು ಕ್ಷಮಿಸು. ಓ ಅಲ್ಲಾಹ್! ನಮ್ಮ ಪೈಕಿ ಯಾರನ್ನು ನೀನು ಬದುಕಿಸಿದರೂ ಇಸ್ಲಾಮಿನಂತೆ ಬದುಕಿಸು. ನಮ್ಮ ಪೈಕಿ ಯಾರನ್ನು ನೀನು ಸಾಯಿಸಿದರೂ ಈಮಾನ್ (ಸತ್ಯವಿಶ್ವಾಸ) ಸಹಿತ ಸಾಯಿಸು).

ಮೃತದೇಹವು ಅಪ್ರಾಪ್ತ ಬಾಲಕನದ್ದಾಗಿದ್ದರೆ ಈ ರೀತಿ ಪ್ರಾರ್ಥಿಸಿರಿ:

اَللّٰهُمَّ اجْعَلْهُ لَنَا فَرَطًا وَّاجْعَلْهُ لَنَا اَجْرًا وَّذُخْرًا وَّاجْعَلْهُ لَنَا شَافِعًا وَّمُشَفَّعًا

"ಅಲ್ಲಾಹುಮ್ಮಜ್‌ಅಲ್‌ಹು ಲನಾ ಫರತನ್ ವಜ್‌ಅಲ್‌ಹು ಲನಾ ಅಜ್‌ರನ್ ವ ದುಖ್ರನ್ ವಜ್‌ಅಲ್‌ಹು ಲನಾ ಶಾಫಿಅನ್ ವ ಮುಶಫ್ಫಅ".

(ಓ ಅಲ್ಲಾಹ್! ಈ ಬಾಲಕನನ್ನು ನೀನು ನಮಗೆ ಕ್ಷಮಾದಾನದ ಹೇತುವಾಗಿಸು,

* ಶಾಫಿಈ ಕರ್ಮಶಾಸ್ತ್ರದಂತೆ ನಾಲ್ಕು ಸಲವೂ ಕೈ ಎತ್ತಬೇಕು. (ಅನು)

ಇವನನ್ನು ನಮಗೆ ಪುಣ್ಯಫಲ ಮತ್ತು ಪರಲೋಕದ ನಿಧಿಯಾಗಿಸು ಮತ್ತು ಇವನನ್ನು ಶಿಫಾರಸಿಗನಾಗಿ ಮಾಡು.)

ಮೃತದೇಹ ಹುಡುಗಿಯದ್ದಾಗಿದ್ದರೆ ಈ ರೀತಿ ಪ್ರಾರ್ಥಿಸಿರಿ- ಇದರ ಅರ್ಥವೂ ಮೇಲಿನ ಪ್ರಾರ್ಥನೆಯಂತೆಯೇ ಇದೆ.

اَللّٰهُمَّ اجْعَلْهَا لَنَا فَرَطًا وَّاجْعَلْهَا لَنَا اَجْرًا وَّذُخْرًا وَّاجْعَلْهَا لَنَا شَافِعَةً وَّمُشَفَّعَةً

"ಅಲ್ಲಾಹುಮ್ಮ ಜ್‌ಅಲ್‌ಹಾ ಲನಾ ಫರತನ್ ವಜ್‌ಅಲ್‌ಹಾ ಲನಾ ಅಜ್‌ರನ್ ವ ದುಖ್ರನ್ ವಜ್‌ಅಲ್‌ಹಾ ಲನಾ ಶಾಫಿಅತನ್ ವಮುಶಫ್ಫಅತನ್".

9. ಶವ ಸಂಸ್ಕಾರಕ್ಕಾಗಿ ಹೋಗುವಾಗ ನಿಮ್ಮ ಪರಿಣಾಮದ ಬಗ್ಗೆಯೂ ಯೋಚಿಸುತ್ತಿರಿ. ಇಂದು ನಾವು ಇತರರನ್ನು ಮಣ್ಣಿನ ವಶಕ್ಕೆ ಒಪ್ಪಿಸುತ್ತಿರುವಂತೆ ಒಂದು ದಿನ ಇತರರು ನಮ್ಮನ್ನೂ ಕೊಂಡೊಯ್ಯುವರು. ಇದರಿಂದಾಗಿ ಸ್ವಲ್ಪ ಸಮಯಕ್ಕಾದರೂ ನೀವು ಲೋಕದ ಚಿಂತೆಯನ್ನು ಮರೆತು ಪರಲೋಕ ಚಿಂತೆಯಲ್ಲಿ ಮುಳುಗುವ ಭಾಗ್ಯ ಪಡೆಯುವಿರಿ.

# ಮಯ್ಯತ್ ಸಂಸ್ಕಾರ

1. ಮರಣ ಶಯ್ಯೆಯಲ್ಲಿರುವವರ ಸಂದರ್ಶನಕ್ಕೆ ಹೋದಾಗ ಸ್ವಲ್ಪ ಉಚ್ಚ ಸ್ವರದಲ್ಲಿ ಪವಿತ್ರ ವಚನ لَآ إِلٰهَ إِلَّا اللهُ مُحَمَّدٌ رَّسُوْلُ اللهِ "ಲಾ ಇಲಾಹ ಇಲ್ಲಲ್ಲಾಹು ಮುಹಮ್ಮದರ್ರಸೂಲುಲ್ಲಾ" ಪಠಿಸುತ್ತಲಿರಿ. ರೋಗಿಗೆ ಅದನ್ನು ಜಪಿಸುವಂತೆ ಆದೇಶಿಸಬೇಡಿರಿ. "ಮರಣಾಸನ್ನ ರೋಗಿಯ ಬಳಿ ಕುಳಿತಾಗ ಪವಿತ್ರ ವಚನದ ಜಪ ಮಾಡುತ್ತಿರಿ" ಎಂದು ಪ್ರವಾದಿ(ಸ) ಆದೇಶಿಸಿರುವರು. (ಮುಸ್ಲಿಮ್)

2. ಮರಣೋನ್ಮುಖರಾಗಿರುವವರ ಬಳಿ ಸೂರಃ ಯಾಸೀನ್ ಪಠಿಸಿರಿ. ನಿಮ್ಮ ಪೈಕಿ ಮರಣ ಹೊಂದುವವರ ಬಳಿ ಸೂರಃ ಯಾಸೀನ್ ಪಠಿಸಿರಿ ಎಂದು ಪ್ರವಾದಿ(ಸ) ಆದೇಶಿಸಿರುವರು. (ಆಲಂಗೀರಿ, ಸಂಪುಟ:1, ಪುಟ: 100) ತೀರಿ ಹೋದ ಬಳಿಕ ಮೃತ ದೇಹವನ್ನು ಸ್ನಾನ ಮಾಡಿಸುವ ತನಕ ಅದರ ಮುಂದೆ ಕುಳಿತು ಪವಿತ್ರ ಕುರ್‌ಆನ್ ಪಾರಾಯಣ ಮಾಡಬೇಡಿರಿ. ಸ್ನಾನ ಮಾಡಬೇಕಾದವನು, ಮುಟ್ಟಾದವಳು ಮತ್ತು ಬಾಣಂತಿಯರು ಮೃತ ದೇಹದ ಬಳಿ ಹೋಗಬಾರದು.

3. ಮರಣದ ವಾರ್ತೆ ಕೇಳಿದ ಕೂಡಲೇ إِنَّا لِلّٰهِ وَإِنَّآ إِلَيْهِ رَاجِعُوْنَ "ಇನ್ನಾಲಿಲ್ಲಾಹಿ ವ ಇನ್ನಾ ಇಲೈಹಿ ರಾಜಿಊನ್" (ನಾವು ಅಲ್ಲಾಹನವರೇ, ಅವನ ಬಳಿಗೇ ಮರಳಿ ಹೋಗಬೇಕಾದವರು) ಎಂದು ಹೇಳಿರಿ. ದುಃಖ ವಾರ್ತೆಯನ್ನು ಕೇಳಿ ಇದನ್ನು ಪಠಿಸುವವನಿಗೆ ಮೂರು ಪುಣ್ಯಗಳು ಪ್ರಾಪ್ತವಾಗುತ್ತವೆ: i) ಅವನ ಮೇಲೆ ದೇವನ ಅನುಗ್ರಹ ಮತ್ತು ರಕ್ಷಣೆ ಇಳಿಯುತ್ತದೆ. ii) ಸತ್ಯದ ಬಗೆಗಿನ ಆಸಕ್ತಿ ಮತ್ತು ಅನ್ವೇಷಣೆಯ ಪುಣ್ಯ ದೊರಕುತ್ತದೆ. iii) ಅವನ ನಷ್ಟವನ್ನು ಪರಿಹರಿಸಲಾಗುತ್ತದೆ. ಅವನು ಕಳಕೊಂಡ ವಸ್ತುವಿಗಿಂತ ಉತ್ತಮ ಪ್ರತಿಫಲವನ್ನು ನೀಡಲಾಗುತ್ತದೆ. (ತಬ್ರಾನಿ)

4. ಮೃತರ ದುಃಖದಿಂದ ಚೀರಾಟ, ಗೋಳಾಟಗಳಲ್ಲಿ ನಿರತರಾಗದಿರಿ. ದುಃಖದಿಂದ ಕಣ್ಣೀರು ಹರಿಯುವುದು ಸ್ವಾಭಾವಿಕ ವಿಷಯ. ಪ್ರವಾದಿವರ್ಯರ(ಸ) ಪುತ್ರ ಇಬ್ರಾಹೀಮ್(ರ) ನಿಧನರಾದಾಗ ಪ್ರವಾದಿವರ್ಯರ(ಸ) ಕಣ್ಣುಗಳಿಂದಲೂ ಅಶ್ರುಧಾರೆ ಹರಿ ದಿತ್ತು. ಅಂತೆಯೇ ಮೊಮ್ಮಗ ಇಬ್ನು ಝೈನಬ್ ನಿಧನ ಹೊಂದಿದಾಗಲೂ ಪ್ರವಾದಿವರ್ಯರ(ಸ) ಕಣ್ಣುಗಳಿಂದ ಕಣ್ಣೀರು ಹರಿದಿತ್ತು. ಇದೇನೆಂದು ಪ್ರವಾದಿವರ್ಯರಲ್ಲಿ(ಸ) ಕೇಳಿದಾಗ, "ಇದು ಅಲ್ಲಾಹನು ತನ್ನ ದಾಸರ ಮನಸ್ಸಿನಲ್ಲಿರಿಸಿದ ಕರುಣೆಯಾಗಿದೆ. ತನ್ನ ದಾಸರ ಪೈಕಿ (ಇತರರ ಮೇಲೆ) ಕರುಣೆ ತೋರುವವರ ಮೇಲೆಯೇ ಅಲ್ಲಾಹನು ಕರುಣೆ ತೋರುತ್ತಾನೆ" ಎಂದು ಉತ್ತರಿಸಿದರು.

"ಮುಖಕ್ಕೆ ಬಡಿದುಕೊಳ್ಳುವ, ಬಟ್ಟೆಗಳನ್ನು ಹರಚುವ, ಅಜ್ಞಾನ ಕಾಲದ ರೂಢಿಯಂತೆ ಚೀರಾಡುವವರು ನಮ್ಮವರಲ್ಲ" ಎಂದು ಪ್ರವಾದಿ(ಸ) ಹೇಳಿರುವರು.

5. ಉಸಿರು ಬಿಟ್ಟ ಕೂಡಲೇ ಮೃತದೇಹದ ಕಾಲುಗಳನ್ನು ನೆಟ್ಟಗೆ ಮಾಡಿರಿ. ಕಣ್ಣುಗಳನ್ನು ಮುಚ್ಚಿರಿ. ಒಂದು ತುಂಡು ಬಟ್ಟೆಯನ್ನು ಗಡ್ಡದಿಂದ ತಲೆಗೆ ಸುತ್ತುವರಿದು ಕಟ್ಟಿರಿ. ಎರಡೂ ಕಾಲುಗಳ ಹೆಬ್ಬೆರಳನ್ನು ಜೋಡಿಸಿ ಚೂರು ಬಟ್ಟೆಯಿಂದ ಕಟ್ಟಿರಿ. ಮೃತ ಶರೀರವನ್ನು ಚದ್ದರದಿಂದ ಮುಚ್ಚಿರಿ. ಈ ರೀತಿ ಪಠಿಸುತ್ತಿರಿ, بِسْمِ اللهِ وَعَلَى مِلَّةِ رَسُوْلِ اللهِ "ಬಿಸ್ಮಿಲ್ಲಾಹಿ ವಅಲಾ ಮಿಲ್ಲತಿ ರಸೂಲಿಲ್ಲಾಹಿ" (ಅಲ್ಲಾಹನ ನಾಮದಿಂದ ಮತ್ತು ಪ್ರವಾದಿವರ್ಯರ(ಸ) ಸಮುದಾಯದಲ್ಲಿ). ಜನರಿಗೆ ನಿಧನದ ಸುದ್ದಿ ತಿಳಿಸಿರಿ. ಗೋರಿಗೆ ಮೃತ ದೇಹವನ್ನು ಇಳಿಸುವಾಗಲೂ ಇದೇ ಪ್ರಾರ್ಥನೆಯನ್ನು ಪಠಿಸಿರಿ.

6. ಮೃತರ ಸದ್ಗುಣಗಳನ್ನೇ ಪ್ರಸ್ತಾಪಿಸಿರಿ. ಅವರ ಕೆಡುಕುಗಳನ್ನು ಪ್ರಸ್ತಾಪಿಸಬೇಡಿರಿ. "ನಿಮ್ಮ ಮೃತರ ಒಳಿತುಗಳನ್ನು ವಿವರಿಸಿರಿ. ಅವರ ಕೆಡುಕಿನ ಪ್ರಸ್ತಾಪದಿಂದ ಬಾಯ್ಮುಚ್ಚಿರಿ" ಎಂದು ಪ್ರವಾದಿ(ಸ) ಆದೇಶಿಸಿರುವರು. (ಅಬೂದಾವೂದ್)

"ಒಬ್ಬ ವ್ಯಕ್ತಿ ನಿಧನ ಹೊಂದಿದಾಗ ಅವನ ನಾಲ್ಕು ಮಂದಿ ನೆರೆಕರೆಯವರು ಅವನು ಒಳ್ಳೆಯ ವ್ಯಕ್ತಿಯೆಂದು ಸಾಕ್ಷ್ಯವಹಿಸಿದರೆ ಅಲ್ಲಾಹನು ಹೇಳುತ್ತಾನೆ: "ನಾನು ನಿಮ್ಮ ಸಾಕ್ಷ್ಯ ವನ್ನು ಅಂಗೀಕರಿಸಿದೆ. ನಿಮಗೆ ಗೊತ್ತಿಲ್ಲದ ವಿಷಯಗಳನ್ನು ಕ್ಷಮಿಸಿದೆ". (ಇಬ್ನು ಹಿಬ್ಬಾನ್)

ಒಮ್ಮೆ ಪ್ರವಾದಿವರ್ಯರ(ಸ) ಸನ್ನಿಧಿಯಲ್ಲಿ ಸಹಾಬಿವರ್ಯರು(ರ) ಓರ್ವ ಮೃತನ ಗುಣಗಾನ ಮಾಡಿದರು. ಆಗ ಪ್ರವಾದಿ(ಸ) ಹೇಳಿದರು: "ಅವನಿಗೆ ಸ್ವರ್ಗವು ಕಡ್ಡಾಯವಾಯಿತು. ಜನರೇ! ನೀವು ಭೂಮಿಯ ಮೇಲೆ ಅಲ್ಲಾಹನ ಸಾಕ್ಷಿಗಳಾಗುತ್ತೀರಿ. ನೀವು ಯಾರನ್ನು ಒಳ್ಳೆಯ ವನೆನ್ನುತ್ತೀರೋ ಅವನನ್ನು ಅಲ್ಲಾಹನು ಸ್ವರ್ಗದಲ್ಲಿ ಪ್ರವೇಶಿಸುವನು. ನೀವು ಯಾರನ್ನು ಕೆಟ್ಟವನೆನ್ನುತ್ತೀರೋ ಅಲ್ಲಾಹನು ಅವನನ್ನು ನರಕಕ್ಕೆ ಹಾಕುವನು". (ಬುಖಾರಿ, ಮುಸ್ಲಿಮ್)

ಪ್ರವಾದಿ(ಸ) ಹೀಗೂ ಹೇಳಿರುವರು: "ನೀವು ರೋಗಿಯನ್ನು ಸಂದರ್ಶಿಸಿದಾಗ ಅಥವಾ ಶವಸಂಸ್ಕಾರದಲ್ಲಿ ಭಾಗವಹಿಸಿದಾಗ ನಾಲಗೆಯಿಂದ ಒಳಿತಿನ ಮಾತುಗಳನ್ನೇ ಹೇಳಿರಿ. ಏಕೆಂದರೆ ನಿಮ್ಮ ಮಾತುಗಳಿಗೆ ದೇವಚರರು ಆಮೀನ್ ಎನ್ನುತ್ತಿರುತ್ತಾರೆ". (ಮುಸ್ಲಿಮ್)

7. ಮರಣದ ಬಗ್ಗೆ ಯಾವಾಗಲೂ ಸಹನೆ ಸಂಯಮಗಳನ್ನು ಪ್ರದರ್ಶಿಸಿರಿ. ಎಂದೂ ಬಾಯಿಯಿಂದ ಕೃತಘ್ನತೆಯ ಮಾತುಗಳನ್ನು ಹೊರಡಿಸದಿರಿ. ಪ್ರವಾದಿ(ಸ) ಈ ರೀತಿ ಹೇಳಿರುವರು: "ಒಬ್ಬ ವ್ಯಕ್ತಿ ತನ್ನ ಮಗುವಿನ ಮರಣಕ್ಕೆ ಸಹನೆ ಕೈಗೊಂಡರೆ ಅಲ್ಲಾಹನು ತನ್ನ ದೇವಚರರಲ್ಲಿ ಕೇಳುವನು, 'ನೀವು ನನ್ನ ದಾಸನ ಮಗುವಿನ ಆತ್ಮವನ್ನು ವಶಪಡಿಸಿದ್ದೀರಾ?' ಆಗ ದೇವಚರರು, 'ಪ್ರಭೂ! ನಾವು ನಿನ್ನ ಆಜ್ಞೆಯನ್ನು ಪಾಲಿಸಿದೆವು' ಎನ್ನುತ್ತಾರೆ. ಅಲ್ಲಾಹನು ಮತ್ತೆ ಕೇಳುತ್ತಾನೆ, 'ನೀವು ನನ್ನ ದಾಸನ ಕರುಳ ಕುಡಿಯ ಪ್ರಾಣ ತೆಗೆದಿರಾ?' ಅವರು ಹೇಳುತ್ತಾರೆ, 'ಹೌದು.' ಆಗ ಅಲ್ಲಾಹನು 'ನನ್ನ ದಾಸ ಆಗ ಏನು ಹೇಳುತ್ತಿದ್ದ?' ಎಂದು ಕೇಳುತ್ತಾನೆ. ಆಗ ದೇವಚರರು, 'ಅವನು ನಿನ್ನ ಸ್ತುತಿಸ್ತೋತ್ರ ಮಾಡುತ್ತಿದ್ದ ಮತ್ತು

ಇನ್ನಾಲಿಲ್ಲಾಹಿ ವ ಇನ್ನಾ ಇಲೈಹಿ ರಾಜಿಊನ್ ಎಂದು ಹೇಳಿದ' ಎಂದು ಉತ್ತರಿಸುತ್ತಾರೆ. ಆಗ ಅಲ್ಲಾಹನು ದೇವಚರರನ್ನುದ್ದೇಶಿಸಿ ಈ ರೀತಿ ಹೇಳುತ್ತಾನೆ, 'ನನ್ನ ಈ ದಾಸನಿಗಾಗಿ ಸ್ವರ್ಗದಲ್ಲಿ ಒಂದು ಭವನ ನಿರ್ಮಿಸಿರಿ ಮತ್ತು ಅದಕ್ಕೆ ಬೈತುಲ್ ಹಮ್ದ್ (ಸ್ತುತಿ ಭವನ) ಎಂದು ಹೆಸರಿಡಿರಿ". (ತಿರ್ಮಿದಿ)

8. ಮೃತದೇಹವನ್ನು ಸ್ನಾನ ಮಾಡಿಸುವಲ್ಲಿ ತಡ ಮಾಡಬೇಡಿರಿ. ಸ್ನಾನ ಮಾಡಿಸುವ ನೀರಿನಲ್ಲಿ ಸ್ವಲ್ಪ ಬೋರೆ ಎಲೆ ಹಾಕಿ ತುಸು ಕಾಯಿಸಿರಿ. ಪಾರ್ಥಿವ ಶರೀರವನ್ನು ಶುದ್ಧ ಹಲಗೆಯೊಂದರ ಮೇಲೆ ಇರಿಸಿರಿ. ಉಟ್ಟ ಬಟ್ಟೆಯನ್ನು ಕಳಚಿ ಒಂದು ಲುಂಗಿ ಸುತ್ತಿರಿ. ಕೈಗೆ ಬಟ್ಟೆ ಸುತ್ತಿ ಮಲಮೂತ್ರ ವಿಸರ್ಜನೆ ಮಾಡಿಸಿರಿ. ಲುಂಗಿ ಸುತ್ತಿಯೇ ಇರುವಂತೆ ಎಚ್ಚರ ವಹಿಸಿರಿ. ತರುವಾಯ ವುಝೂ ಮಾಡಿಸಿರಿ. ವುಝೂವಿನಲ್ಲಿ ಬಾಯಿ ಮುಕ್ಕಳಿಸುವ ಮತ್ತು ಮೂಗಿನ ಒಳಭಾಗಕ್ಕೆ ನೀರೆರಚುವ ಅಗತ್ಯವಿಲ್ಲ. ಸ್ನಾನ ಮಾಡಿಸುವಾಗ ನೀರು ಒಳ ಹೋಗದಂತೆ ಕಿವಿ ಮತ್ತು ಮೂಗಿನ ರಂಧ್ರಗಳಿಗೆ ಹತ್ತಿ ಇಡಿರಿ. ತಲೆಯನ್ನು ಸಾಬೂನು ಹಚ್ಚಿ ಚೆನ್ನಾಗಿ ತೊಳೆಯಿರಿ. ತರುವಾಯ ಎಡಪಾರ್ಶ್ವಕ್ಕೆ ಮಲಗಿಸಿ ಬಲಪಾರ್ಶ್ವದ ಮೇಲೆ ತಲೆಯಿಂದ ಕಾಲಿನ ತನಕ ನೀರು ಹೊಯ್ಯಿರಿ. ಬಳಿಕ ಅದೇ ರೀತಿ ಎಡಪಾರ್ಶ್ವಕ್ಕೂ ನೀರೆರಚಿರಿ. ಈಗ ಒದ್ದೆಯಾದ ಲುಂಗಿಯನ್ನು ಕಳಚಿ ಒಣ ಲುಂಗಿಯನ್ನು ತೊಡಿಸಿರಿ. ಅನಂತರ ಶವವನ್ನು ಎತ್ತಿ ಮಂಚದ ಮೇಲೆ ಕಫನ್ (ಶವ ಸುತ್ತುವ ಬಟ್ಟೆ)ನ ಮೇಲೆ ಮಲಗಿಸಿರಿ. ಪ್ರವಾದಿ(ಸ) ಹೇಳಿರುವರು: "ಒಂದು ಮೃತದೇಹಕ್ಕೆ ಸ್ನಾನ ಮಾಡಿಸಿ ಅದರ ಕುಂದು ಕೊರತೆಗಳನ್ನು ಅಡಗಿಸಿದವನ 40 ಮಹಾ ಪಾಪಗಳನ್ನು ಅಲ್ಲಾಹನು ಕ್ಷಮಿಸುತ್ತಾನೆ. ಮೃತದೇಹವನ್ನು ಗೋರಿಯೊಳಗೆ ಇಳಿಸಿದವನು ಅದಕ್ಕೆ ನಿರ್ಣಾಯಕ ದಿನದವರೆಗೆ ವಾಸಿಸುವ ಮನೆ ಒದಗಿಸಿದಂತೆ". (ತಬ್ರಾನಿ)

9. ಕಫನ್‌ಗೆ ಹೆಚ್ಚು ಬೆಲೆಬಾಳುವ ಅಥವಾ ಅತ್ಯಂತ ಕೀಳು ದರ್ಜೆಯ ಬಟ್ಟೆಯನ್ನು ಉಪಯೋಗಿಸದಿರಿ. ಮಧ್ಯಮ ದರ್ಜೆಯ ಬಿಳಿ ಬಟ್ಟೆಯನ್ನೇ ಬಳಸಿರಿ. ಕಫನ್‌ಗೆ ಮೂರು ಬಟ್ಟೆಗಳನ್ನು ಇರಿಸಿರಿ. ಒಂದು ಚದ್ದರ, ಒಂದು ಲುಂಗಿ ಮತ್ತೊಂದು ಕಫ್ನಿ ಅರ್ಥಾತ್ ನಿಲುವಂಗಿ. ಚದ್ದರವು ಮಯ್ಯಿತ್‌ಗಿಂತ ನೀಳವಾಗಿರಲಿ. ಹಾಗಾದರೆ ಮಾತ್ರ ತಲೆ ಮತ್ತು ಕಾಲುಗಳ ಭಾಗದಲ್ಲಿ ಕಟ್ಟಬಹುದು. ಬಟ್ಟೆಯು ಮೃತದೇಹವನ್ನು ಚೆನ್ನಾಗಿ ಸುತ್ತುವಷ್ಟು ಅಗಲವಾಗಿರಲಿ. ಮಹಿಳೆಯರಿಗಾದರೆ ಈ ಬಟ್ಟೆಗಳಲ್ಲದೆ ಒಂದು ಅವಗುಂಟನವನ್ನೂ ಇರಿಸಿರಿ. ಅದು ಒಂದು ಗಜಕ್ಕಿಂತ ಹೆಚ್ಚು ಉದ್ದ ಮತ್ತು ಒಂದು ಗಜದಷ್ಟು ಅಗಲ ವಾಗಿರಬೇಕು. ಎದೆಯಿಂದ ಮೊಣಕಾಲಿನ ತನಕದ ಒಂದು ಹೊದಿಕೆಯನ್ನು ಇರಿಸಬೇಕು. ಪ್ರವಾದಿ(ಸ) ಹೇಳಿರುವರು: "ಒಂದು ಮೃತದೇಹಕ್ಕೆ ಕಫನ್ ತೊಡಿಸಿದವನಿಗೆ ಅಲ್ಲಾಹನು ಸ್ವರ್ಗದಲ್ಲಿ ಸುಂದುಸ್ ಮತ್ತು ಇಸ್‌ತಬ್ರಕ್‌ನ ಚಿನ್ನ, ಬೆಳ್ಳಿಗಳ ದಾರಗಳಿರುವ ಅತ್ಯುತ್ತಮ ರೇಶ್ಮೆ ಬಟ್ಟೆ ವಸ್ತ್ರಗಳನ್ನು ನೀಡುವನು". (ಹಾಕಿಮ್)

10. ಮೃತದೇಹವನ್ನು ಸ್ವಲ್ಪ ವೇಗವಾಗಿಯೇ ಕಬರಸ್ತಾನಕ್ಕೆ ಸಾಗಿಸಿರಿ. "ಮೃತ

ದೇಹವನ್ನು ಶೀಘ್ರ ಸಂಸ್ಕರಿಸಿರಿ" ಎಂದು ಪ್ರವಾದಿ(ಸ) ಹೇಳಿರುವರು. "ಮೃತದೇಹವನ್ನು ಎಷ್ಟು ವೇಗವಾಗಿ ಒಯ್ಯಬೇಕು?" ಎಂದು ಹ. ಇಬ್ನು ಮಸ್‌ಊದ್(ರ) ಕೇಳಿದಾಗ, ಪ್ರವಾದಿ(ಸ) ಹೇಳಿದರು, "ಓಡುವ ವೇಗಕ್ಕಿಂತ ಸ್ವಲ್ಪ ಕಡಿಮೆ ವೇಗದಿಂದ ಸಾಗಿಸಿರಿ. ಮೃತರು ಸಜ್ಜನರಾಗಿದ್ದರೆ ಅವರನ್ನು ಉತ್ತಮ ಪರಿಣಾಮಕ್ಕೆ ಬೇಗ ತಲಪಿಸಿರಿ. ಅವರು ದುಷ್ಟರಾಗಿದ್ದರೆ ಆ ಕೇಡನ್ನು ಆದಷ್ಟು ಬೇಗ ತೊಲಗಿಸಿರಿ". (ಅಬೂದಾವೂದ್)

11. ಶವಯಾತ್ರೆಯಲ್ಲಿ ಕಾಲ್ನಡಿಗೆಯಿಂದಲೇ ಹೋಗಿರಿ. ಪ್ರವಾದಿ(ಸ) ಒಂದು ಶವ ಯಾತ್ರೆಯಲ್ಲಿ ಹೋಗುತ್ತಿದ್ದಾಗ ಕೆಲವರು ಸವಾರರಾಗಿ ಹೋಗುತ್ತಿರುವುದನ್ನು ಕಂಡರು. "ದೇವಚರರು ಕಾಲ್ನಡಿಗೆಯಲ್ಲಿ ಹೋಗುತ್ತಿರುವಾಗ ಮೃಗಗಳ ಮೇಲೆ ಸವಾರಿ ಮಾಡಿಕೊಂಡು ಹೋಗಲು ನಿಮಗೆ ನಾಚಿಕೆಯಾಗುತ್ತಿಲ್ಲವೇ?" ಎಂದು ಕೇಳಿದರು. ಶವಸಂಸ್ಕಾರ ಮಾಡಿ ಹಿಂತೆರಳುವಾಗ ವಾಹನಗಳಲ್ಲಿ ಹೋಗಬಹುದು. ಅಬೂವಾಹಿದಿಯವರ ಮೃತದೇಹದ ಜೊತೆ ಪ್ರವಾದಿ(ಸ) ಕಾಲ್ನಡಿಗೆಯಿಂದ ಹೋಗಿ ಕುದುರೆ ಸವಾರರಾಗಿ ಹಿಂತೆರಳಿದರು.

12. ಮೃತದೇಹವನ್ನು ಸಾಗಿಸುತ್ತಿರುವಾಗ ಎದ್ದು ನಿಲ್ಲಿರಿ. ಅದನ್ನು ಹಿಂಬಾಲಿಸಿ ಹೋಗುವ ಬಯಕೆ ಇಲ್ಲದಿದ್ದರೆ ಅದು ದಾಟುವ ತನಕ ನಿಂತುಕೊಂಡಿರಿ. ಪ್ರವಾದಿ(ಸ) ಈ ರೀತಿ ಹೇಳಿರುವರು: "ಮೃತದೇಹ ಒಯ್ಯುವುದನ್ನು ಕಂಡಾಗ ಎದ್ದು ನಿಲ್ಲಿರಿ. ಅದರ ಜೊತೆ ಹೋಗುವವರು ಅದನ್ನು ಕೆಳಗಿಡುವ ತನಕ ಕುಳಿತುಕೊಳ್ಳಬಾರದು".

13. ಜನಾಝಾ ನಮಾಝ್ ನೆರವೇರಿಸಿರಿ. ಮೃತದೇಹದ ಜೊತೆ ಹೋಗಿರಿ ಮತ್ತು ಅದಕ್ಕೆ ಹೆಗಲು ಕೊಡಿರಿ. ಪ್ರವಾದಿ(ಸ) ಈ ರೀತಿ ಹೇಳಿರುವರು:

"ಮೃತದೇಹದ ಜೊತೆ ಹೋಗುವುದು ಒಬ್ಬ ಮುಸ್ಲಿಮನ ಮೇಲೆ ಇನ್ನೊಂದು ಮುಸ್ಲಿಮನ ಹಕ್ಕಾಗಿದೆ." ಪ್ರವಾದಿ(ಸ) ಹೀಗೂ ಹೇಳಿರುವರು: "ಶವಯಾತ್ರೆಯಲ್ಲಿ ಪಾಲ್ಗೊಂಡವನಿಗೆ ಮತ್ತು ಜನಾಝಾ ನಮಾಝ್ ನಿರ್ವಹಿಸಿದವನಿಗೆ ಒಂದು ಕೀರಾತ್‌ನಷ್ಟು ಪುಣ್ಯ ಲಭಿಸುವುದು. ನಮಾಝ್‌ನ ಬಳಿಕ ದಫನ ಕಾರ್ಯದಲ್ಲೂ ಪಾಲ್ಗೊಂಡವನಿಗೆ ಎರಡು ಕೀರಾತ್‌ನಷ್ಟು ಪುಣ್ಯ ಲಭಿಸುವುದು. ಎರಡು ಕೀರಾತ್ ಎಷ್ಟಾಗುವುದೆಂದು ಒಬ್ಬರು ಕೇಳಿದಾಗ ಪ್ರವಾದಿ(ಸ) 'ಎರಡು ಪರ್ವತಗಳಷ್ಟು!' ಎಂದರು". (ಬುಖಾರಿ, ಮುಸ್ಲಿಮ್)

14. ಕಬರ್ (ಗೋರಿ) ಉತ್ತರ-ದಕ್ಷಿಣಕ್ಕೆ ಉದ್ದವಾಗಿ ತೋಡಿಸಿರಿ. ಮೃತದೇಹವನ್ನು ಗೋರಿಯೊಳಗೆ ಇಳಿಸುವಾಗ ಕಿಬ್ಲಾಭಿಮುಖವಾಗಿ ಇರಿಸಿ ಇಳಿಸಿರಿ. ಮೃತದೇಹವು ಹಗುರವಾಗಿದ್ದರೆ ಗೋರಿಯೊಳಗೆ ಇಳಿಸಲು ಇಬ್ಬರು ಸಾಕು. ಅನ್ಯಥಾ ಅಗತ್ಯದಂತೆ ಮೂರ್‍ನಾಲ್ಕು ಮಂದಿ ಇಳಿಸಲಿ. ಇಳಿಸುವಾಗ ಮಯ್ಯತನ್ನು ಕಿಬ್ಲಾಭಿಮುಖ ಮಾಡಿ ಕಫನ್‌ನ ಗಂಟುಗಳನ್ನು ಬಿಚ್ಚಿರಿ.

15. ಮಹಿಳೆಯ ಮೃತದೇಹವನ್ನು ಗೋರಿಗೆ ಇಳಿಸುವಾಗಲೂ ಪರ್ದಾದ ವ್ಯವಸ್ಥೆ ಮಾಡಿರಿ.

16. ಗೋರಿಗೆ ಮಣ್ಣು ಹಾಕಲು ತಲೆಯ ಭಾಗದಿಂದ ಆರಂಭಿಸಿರಿ. ಎರಡೂ ಕೈಗಳಿಂದ ಮೂರು ಸಲ ಮಣ್ಣು ಹಾಕಿರಿ. ಪ್ರಥಮ ಬಾರಿ ಮಣ್ಣು ಹಾಕುವಾಗ مِنْهَا خَلَقْنٰكُمْ "ಮಿನ್‌ಹಾ ಖಲಕ್ನಾಕುಮ್" (ಈ ಮಣ್ಣಿನಿಂದಲೇ ನಿಮ್ಮನ್ನು ನಾವು ಸೃಷ್ಟಿಸಿದೆವು) ದ್ವಿತೀಯ

ಬಾರಿಗೆ ಹಾಕುವಾಗ وَفِيهَا نُعِيدُكُمْ 'ವಫೀಹಾ ನುಈದುಕುಮ್' (ಇದಕ್ಕೇ ನಿಮ್ಮನ್ನು ನಾವು ಮರಳಿಸುತ್ತಿದ್ದೇವೆ) ಮತ್ತು ತೃತೀಯ ಬಾರಿ ಹಾಕುವಾಗ وَمِنْهَا نُخْرِجُكُمْ تَارَةً أُخْرَى "ವ ಮಿನ್‌ಹಾ ನುಖ್ರಿಜುಕುಮ್ ತಾರತನ್ ಉಖ್ರಾ" (ಮತ್ತು ಇದರಿಂದಲೇ ನಿಮ್ಮನ್ನು ನಾವು ಪುನಃ ಎಬ್ಬಿಸುವೆವು) ಎಂಬ ಕುರ್‌ಆನ್ ವಾಕ್ಯ ಪಠಿಸಿರಿ.

17. ಗೋರಿಯನ್ನು ಎತ್ತರಿಸಿ ಕಟ್ಟಬೇಡಿರಿ. ಗೋರಿಯಿಂದ ಅಗೆದು ತೆಗೆದಷ್ಟೇ ಮಣ್ಣನ್ನು ಅದಕ್ಕೆ ತುಂಬಿರಿ. ಮಣ್ಣು ಹಾಕಿ ಆದ ಬಳಿಕ ಸ್ವಲ್ಪ ನೀರು ಚಿಮುಕಿಸಿರಿ.

18. ದಫನ ಮಾಡಿದ ಬಳಿಕ ತುಸು ಹೊತ್ತು ಗೋರಿಯ ಬಳಿ ನಿಲ್ಲಿರಿ. ಮೃತರ ಕ್ಷಮಾಪಣೆಗಾಗಿ ಪ್ರಾರ್ಥಿಸಿರಿ. ಕುರ್‌ಆನ್‌ನಿಂದ ಸ್ವಲ್ಪ ಓದಿ ಅದರ ಪುಣ್ಯವನ್ನು ಮೃತರಿಗೆ ತಲುಪಿಸುವಂತೆ ಪ್ರಾರ್ಥಿಸಿರಿ. ಅವರ ಕ್ಷಮಾಪಣೆಗಾಗಿ ಇತರರೂ ಪ್ರಾರ್ಥಿಸುವಂತೆ ಹೇಳಿರಿ. ಪ್ರವಾದಿ(ಸ) ದಫನ ಕಾರ್ಯದ ಬಳಿಕ ಮೃತರ ಕ್ಷಮಾಪಣೆಗಾಗಿ ಸ್ವತಃ ಪ್ರಾರ್ಥಿಸುತ್ತಿದ್ದರು. ಇತರರಿಗೂ ಈ ರೀತಿ ಆದೇಶಿಸುತ್ತಿದ್ದರು. ಇದು ಲೆಕ್ಕಾಚಾರದ ಸಮಯ. ನಿಮ್ಮ ಸಹೋದರನ ಸ್ಥೈರ್ಯಕ್ಕಾಗಿ ಪ್ರಾರ್ಥಿಸಿರಿ. ಅವರಿಗಾಗಿ ಕ್ಷಮಾಪಣೆ ಯಾಚಿಸಿರಿ. (ಅಬೂದಾವೂದ್)

19. ನಿಮ್ಮ ಬಂಧು ಮಿತ್ರರ ಅಥವಾ ನೆರೆ ಹೊರೆಯವರ ಪೈಕಿ ಯಾರಾದರೂ ಮೃತರಾದರೆ ಅಲ್ಲಿಗೆ ಒಂದೆರಡು ಹೊತ್ತಿನ ಊಟ ಕಳುಹಿಸಿ ಕೊಡಿರಿ. ಅವರು ದುಃಖಿತರಾಗಿರುವ ಸ್ಥಿತಿಯಲ್ಲಿ ಊಟ ತಯಾರಿಸಲಾರರು. ಹ. ಜಾಫರ್(ರ) ಹುತಾತ್ಮರಾದ ವಾರ್ತೆ ಲಭಿಸಿದಾಗ "ಜಾಫರ್‌ರ(ರ) ಮನೆಯವರಿಗಾಗಿ ಊಟ ತಯಾರಿಸಿರಿ. ಅವರಿಂದು ಕಾರ್ಯ ನಿರತರಾಗಿದ್ದಾರೆ" ಎಂದು ಪ್ರವಾದಿ(ಸ) ಹೇಳಿದ್ದರು. (ತಿರ್ಮಿದಿ)

20. ಮೂರು ದಿನಗಳಿಗಿಂತ ಹೆಚ್ಚು ಕಾಲ ಮೃತರಿಗಾಗಿ ಶೋಕಾಚರಣೆ ಮಾಡದಿರಿ. ಪತಿ ತೀರಿ ಹೋದ ಮಹಿಳೆಗೆ ಮಾತ್ರ ಶೋಕಾಚರಣೆಯ ಅವಧಿ ನಾಲ್ಕು ತಿಂಗಳು ಮತ್ತು ಹತ್ತು ದಿವಸಗಳಾಗಿವೆ. ಸತ್ಯವಿಶ್ವಾಸಿಗಳ ಮಾತೆಯಾದ ಹ. ಉಮ್ಮು ಹಬೀಬಾರ(ರ) ತಂದೆ ಅಬೂ ಸುಫ್ಯಾನ್(ರ) ಮೃತರಾದಾಗ ಹ. ಝೈನಬ್(ರ)ರವರ ಬಳಿ ಸಾಂತ್ವನಕ್ಕಾಗಿ ಹೋಗಿದ್ದರು. ಉಮ್ಮು ಹಬೀಬಾರವರು(ರ) ಸ್ವಲ್ಪ ಸುಗಂಧ ದ್ರವ್ಯ ತರಿಸಿ ತಮ್ಮ ದಾಸಿಗೂ ಹಚ್ಚಿದರು. ತಮ್ಮ ಮುಖಕ್ಕೂ ಸ್ವಲ್ಪ ಸವರಿದರು. ಆ ಬಳಿಕ ಈ ರೀತಿ ಹೇಳಿದರು: "ಅಲ್ಲಾಹನು ಸಾಕ್ಷಿ. ನನಗೀಗ ಸುಗಂಧ ದ್ರವ್ಯದ ಅಗತ್ಯವಿರಲಿಲ್ಲ. ಆದರೆ ಪ್ರವಾದಿ(ಸ) ಹೀಗೆ ಹೇಳಿರುವುದನ್ನು ನಾನು ಕೇಳಿದ್ದೇನೆ- ಪರಲೋಕದ ಮೇಲೆ ವಿಶ್ವಾಸವಿರುವ ಯಾವ ಮಹಿಳೆಯೂ ಯಾವ ಮೃತರಿಗಾಗಿಯೂ ಮೂರು ದಿನಗಳಿಗಿಂತ ಅಧಿಕ ಶೋಕಾಚರಣೆ ಮಾಡಬಾರದು. ಆದರೆ ಪತಿ ಮೃತರಾದಾಗ ನಾಲ್ಕು ತಿಂಗಳು ಮತ್ತು ಹತ್ತು ದಿವಸ ಶೋಕಾಚರಿಸಬೇಕು." (ಅಬೂದಾವೂದ್)

21. ಮೃತರ ಪರವಾಗಿ ಸಾಧ್ಯವಿದ್ದಷ್ಟು ದಾನಧರ್ಮಗಳನ್ನು ಮಾಡಿರಿ. ಆದರೆ ಈ ಬಗ್ಗೆ ಪ್ರವಾದಿವರ್ಯರ(ಸ) ಸುನ್ನತ್(ಚರ್ಯೆ)ಗೆ ವಿರುದ್ಧವಾದ ಆಚಾರಗಳಿಂದ ಪೂರ್ಣ ವಾಗಿ ದೂರವಿರಿ.

❖ ❖ ❖ ❖

# ಗೋರಿ ಸಂದರ್ಶನ

1. ಮರಣ ಯಾತ್ರೆಯ ಜೊತೆ ಸಮಾಧಿಗೂ ಹೋಗಿರಿ. ಶವಸಂಸ್ಕಾರ ಕಾರ್ಯಗಳಲ್ಲಿ ಭಾಗವಹಿಸಿರಿ. ಇತರ ಸಮಯಗಳಲ್ಲೂ ಕೆಲವೊಮ್ಮೆ ಸಮಾಧಿ ಸ್ಥಳಗಳಿಗೆ ಸಂದರ್ಶನ ನೀಡಿರಿ. ಇದರಿಂದ ಪರಲೋಕದ ನೆನಪು ಹುಟ್ಟುತ್ತದೆ. ಮರಣಾನಂತರ ಜೀವನದ ಸಿದ್ಧತೆಗೆ ಅದು ಪ್ರೇರಕವಾಗುತ್ತದೆ. ಒಮ್ಮೆ ಪ್ರವಾದಿ(ಸ) ಒಂದು ಮೃತದೇಹದ ಜೊತೆ ಗೋರಿಗೆ ಹೋದರು. ಅಲ್ಲಿ ಒಂದು ಸಮಾಧಿಯ ಬಳಿ ಕುಳಿತು ನೆಲ ಒದ್ದೆಯಾಗುವ ತನಕ ಕಣ್ಣೀರಿಳಿಸಿದರು. ತರುವಾಯ ಸಹಾಬಿವರ್ಯರನ್ನುದ್ದೇಶಿಸಿ "ಸಹೋದರರೇ! ಈ ದಿನಕ್ಕಾಗಿ ಸಿದ್ಧತೆ ಮಾಡಿರಿ" ಎಂದು ಆದೇಶಿಸಿದರು. (ಇಬ್ನುಮಾಜಃ)

ಒಮ್ಮೆ ಸಮಾಧಿಯ ಬಳಿ ಕುಳಿತು ಪ್ರವಾದಿ(ಸ) ಹೇಳಿದರು: "ಸಮಾಧಿಯು ದಿನನಿತ್ಯ ಭಯಂಕರ ಸ್ವರದಲ್ಲಿ ಈ ರೀತಿ ಹೇಳುತ್ತದೆ: ಓ ಆದಮ್ ಸಂತತಿಗಳೇ! ನೀವು ನನ್ನನ್ನು ಮರೆತಿರಾ? ನಾನು ಏಕಾಂತದ ಮನೆ. ನಾನು ಅಪರಿಚಿತತೆ ಮತ್ತು ಭೀಕರತೆಯ ಸ್ಥಾನ. ನಾನು ಕ್ರಿಮಿಕೀಟಗಳ ಮನೆ, ನಾನು ಇಕ್ಕಟ್ಟು ಮತ್ತು ಬಿಕ್ಕಟ್ಟಿನ ಮನೆ, ಅಲ್ಲಾಹನು ನನ್ನನ್ನು ವಿಶಾಲ ಗೊಳಿಸುವ ಸೌಭಾಗ್ಯವಂತರ ಹೊರತು ಉಳಿದ ಎಲ್ಲ ಮಾನವರಿಗೂ ನಾನು ಇಂತಹುದೇ ಸಂಕಷ್ಟಗಳ ಆಗರವಾಗಿರುವೆನು." ಬಳಿಕ ಪ್ರವಾದಿ(ಸ) ಹೇಳಿದರು: "ಗೋರಿಯು ನರಕದ ಹೊಂಡಗಳ ಪೈಕಿ ಒಂದು ಹೊಂಡ ಅಥವಾ ಸ್ವರ್ಗದ ತೋಟಗಳ ಪೈಕಿ ಒಂದು ತೋಟವಾಗಿರುವುದು." (ತಬ್ರಾನಿ)

2. ಗೋರಿ ಸಂದರ್ಶಿಸಿ ಪಾಠ ಕಲಿಯಿರಿ. ಯೋಚನಾ ಶಕ್ತಿಗಳನ್ನು ಕ್ರೋಡೀಕರಿಸಿ ಮರಣಾನಂತರ ಜೀವನದ ಬಗ್ಗೆ ಯೋಚಿಸುವ ಪರಿಪಾಠವಿಟ್ಟುಕೊಳ್ಳಿರಿ. ಒಮ್ಮೆ ಹ. ಅಲೀ(ರ) ಗೋರಿಯ ಬಳಿ ಹೋದರು. ಅವರ ಜೊತೆ ಹ. ಕಮೀಲ್(ರ) ಕೂಡ ಇದ್ದರು. ಸಮಾಧಿ ಸ್ಥಳ ತಲಪುತ್ತಲೇ ಅಲ್ಲಿರುವ ಸಮಾಧಿಗಳ ಮೇಲೆ ಅವರೊಮ್ಮೆ ಕಣ್ಣೋಡಿಸಿದರು. ಬಳಿಕ ಸಮಾಧಿಸ್ಥರನ್ನುದ್ದೇಶಿಸಿ ಈ ರೀತಿ ಹೇಳಿದರು: "ಓ ಸಮಾಧಿಸ್ಥರೇ! ಓ ಪಳೆಯುಳಿಕೆಯ ನಿವಾಸಿ ಗಳೇ! ಓ ಭೀಕರತೆ ಮತ್ತು ಏಕಾಂತತೆಯ ನಿವಾಸಿಗಳೇ! ನೀವು ಹೇಗಿದ್ದೀರಿ? ನಮ್ಮ ಸ್ಥಿತಿ ಯನ್ನು ಹೇಳಬೇಕಾದರೆ ನಾವು ಧನವನ್ನು ಹಂಚಿಕೊಂಡಿದ್ದೇವೆ. ಮಕ್ಕಳು ಅನಾಥ ರಾಗಿದ್ದಾರೆ. ಮಡದಿಯರು ಬೇರೆ ಮದುವೆ ಮಾಡಿಕೊಂಡಿರುವರು. ಇದಂತೂ ನಮ್ಮ ಸ್ಥಿತಿ. ಈಗ ನೀವು ನಿಮ್ಮ ಕುಶಲ ಸಮಾಚಾರ ತಿಳಿಸಬಾರದೇ?" ತರುವಾಯ ಹ. ಅಲೀ(ರ) ಸ್ವಲ್ಪ ಸಮಯ ಮೌನವಾಗಿದ್ದರು. ಬಳಿಕ ಹ. ಕಮೀಲ್‌ರನ್ನುದ್ದೇಶಿಸಿ- "ಕಮೀಲ್! ಈ ಸಮಾಧಿ ಸ್ಥರಿಗೆ

ಹೇಳುವ ಅನುಮತಿ ಇದ್ದರೆ ಅವರು ಈ ರೀತಿ ಹೇಳುತ್ತಿದ್ದರು, "ದೇವನ ಭಯಭಕ್ತಿಯೇ ಅತ್ಯುತ್ತಮ ಉಳಿತಾಯವಾಗಿದೆ". ಇದನ್ನು ಹೇಳಿ ಅವರು ಅಳಲಾರಂಭಿ ಸಿದರು. ಬಹಳ ಹೊತ್ತು ಅತ್ತ ಬಳಿಕ "ಕಮೀಲ್! ಗೋರಿಯು ಕರ್ಮಗಳ ಪೆಟ್ಟಿಗೆ. ಆದರೆ ಈ ವಿಷಯ ಮರಣದ ವೇಳೆಯೇ ತಿಳಿಯುವುದು" ಎಂದರು.

3. ದಫನ ಭೂಮಿಗೆ ಪ್ರವೇಶಿಸುವಾಗ ಈ ರೀತಿ ಪ್ರಾರ್ಥಿಸಿರಿ:

اَلسَّلَامُ عَلَيْكُمْ اَهْلَ الدِّيَارِ مِنَ الْمُؤْمِنِيْنَ وَالْمُسْلِمِيْنَ وَاِنَّا اِنْ شَآءَ اللّٰهُ
بِكُمْ لَاحِقُوْنَ - اَسْأَلُ اللّٰهَ لَنَا وَلَكُمُ الْعَافِيَةَ

**"ಅಸ್ಸಲಾಮು ಅಲೈಕುಮ್ ಅಹ್ಲದ್ದಿಯಾರಿ ಮಿನಲ್ ಮುಅ್‌ಮಿನೀನ ವಲ್ ಮುಸ್ಲಿಮೀನ ವ ಇನ್ನಾ ಇನ್‌ಶಾ ಅಲ್ಲಾಹು ಬಿಕುಮ್ ಲಾಹಿಕೂನ ಅಸ್‌ಅಲುಲ್ಲಾಹ ಲನಾ ವಲಕುಮುಲ್ ಆಫಿಯಃ".**

(ಈ ನಗರದ ವಾಸಿಗಳಾದ ಅನುಸರಣಶೀಲ ಸತ್ಯವಿಶ್ವಾಸಿಗಳೇ! ನಿಮ್ಮ ಮೇಲೆ ಶಾಂತಿ ಇರಲಿ. ನಾವೂ ಶೀಘ್ರವೇ ಬಂದು ನಿಮ್ಮನ್ನು ಸೇರಲಿದ್ದೇವೆ. ನಾವು ನಮಗಾಗಿ ಮತ್ತು ನಿಮಗಾಗಿ ಅಲ್ಲಾಹನಲ್ಲಿ ಪ್ರಾರ್ಥಿಸುತ್ತೇವೆ. ಅವನು ತನ್ನ ಕೋಪ ಶಾಪಗಳಿಂದ ನಮ್ಮನ್ನು ರಕ್ಷಿಸಲಿ.)

4. ಗೋರಿಯಲ್ಲಿ ಅಶ್ರದ್ಧರಾದ ಜನರಂತೆ ಆಟ, ವಿನೋದ ಮತ್ತು ಲೌಕಿಕ ಮಾತುಕತೆಗಳಲ್ಲಿ ನಿರತರಾಗದಿರಿ. ಗೋರಿಯು ಪರಲೋಕದ ದ್ವಾರ. ಈ ದ್ವಾರವನ್ನು ದರ್ಶಿಸಿದಾಗ ಪರಲೋಕದ ಚಿಂತೆಯಲ್ಲಿ ಮುಳುಗಿ ಅಳಲು ಪ್ರಯತ್ನಿಸಿರಿ. "ನಾನು ನಿಮ್ಮನ್ನು (ನಿಮ್ಮ ಮನಸ್ಸಿನಲ್ಲಿ ಏಕದೇವತ್ವದ ವಿಶ್ವಾಸವು ರೂಢಮೂಲವಾಗುವ ಸಲುವಾಗಿ) ಗೋರಿ ಸಂದರ್ಶಿಸುವುದರಿಂದ ತಡೆದಿದ್ದೆ. ಈಗ ನೀವು ಬಯಸುವುದಾದರೆ ಹೋಗಬಹುದು, ಏಕೆಂದರೆ ಗೋರಿಗಳು ಪರಲೋಕವನ್ನು ಜ್ಞಾಪಕಕ್ಕೆ ತರುತ್ತವೆ" ಎಂದು ಪ್ರವಾದಿ(ಸ) ಹೇಳಿರುವರು. (ಮುಸ್ಲಿಮ್)

5. ಗೋರಿಗಳನ್ನು ಗಟ್ಟಿ ಮಾಡಿ ಕಟ್ಟದಿರಿ. ಅದನ್ನು ಅಲಂಕರಿಸದಿರಿ. ಪ್ರವಾದಿ(ಸ) ಮರಣೋನ್ಮುಖರಾದಾಗ ನೋವಿನ ಸಂಕಷ್ಟದಲ್ಲಿ ನರಳುತ್ತಿದ್ದರು. ಒಮ್ಮೆ ಚದ್ದರವನ್ನು ಮುಖಕ್ಕೆ ಹಾಕಿಕೊಳ್ಳುತ್ತಿದ್ದರು. ಮತ್ತೊಮ್ಮೆ ತೆಗೆದು ಬಿಡುತ್ತಿದ್ದರು. ಈ ಅಸಾಮಾನ್ಯ ವ್ಯಾಕುಲತೆಯ ಮಧ್ಯೆ ಪ್ರವಾದಿ(ಸ) ಈ ರೀತಿ ಹೇಳಿರುವುದಾಗಿ ಹ. ಆಯಿಶಾ(ರ) ವರದಿ ಮಾಡಿರುವರು: "ಯಹೂದಿಗಳ ಮತ್ತು ಕ್ರೈಸ್ತರ ಮೇಲೆ ದೇವ ಶಾಪವಿದೆ. ಅವರು ತಮ್ಮ ಪ್ರವಾದಿಗಳ ಸಮಾಧಿಗಳನ್ನು ಆರಾಧನಾಲಯಗಳಾಗಿ ಮಾರ್ಪಡಿಸಿದರು".

6. ಗೋರಿ ಸಂದರ್ಶಿಸಿದಾಗ ಮೃತರಿಗಾಗಿ ಪುಣ್ಯ ತಲುಪಿಸಿರಿ. ಅವರ ಕ್ಷಮಾಪಣೆಗಾಗಿ

ಪ್ರಾರ್ಥಿಸಿರಿ. ಹ. ಸುಫ್ಯಾನ್(ರ) ಹೇಳುತ್ತಾರೆ: "ಜೀವಂತ ವ್ಯಕ್ತಿಗಳು ಅನ್ನ ಪಾನೀಯ ಗಳನ್ನು ಬಯಸುವಂತೆ ಮೃತ ವ್ಯಕ್ತಿಗಳು ಅತ್ಯಧಿಕ ದುಆ (ಪ್ರಾರ್ಥನೆ)ಗಳನ್ನು ಬಯಸುತ್ತಾರೆ".

ತಬ್ರಾನಿಯ ಒಂದು ವರದಿಯಂತೆ ಸ್ವರ್ಗದಲ್ಲಿ ಒಬ್ಬ ವ್ಯಕ್ತಿಯ ಸ್ಥಾನಮಾನವನ್ನು ಅಲ್ಲಾಹನು ಉನ್ನತಗೊಳಿಸಿದಾಗ ಆ ವ್ಯಕ್ತಿ ಕೇಳುತ್ತಾನೆ, ದೇವಾ! ನನಗೆ ಈ ಸ್ಥಾನಮಾನ ಹೇಗೆ ದೊರೆಯಿತು? ಆಗ ಅಲ್ಲಾಹನು ಹೇಳುತ್ತಾನೆ: "ಪಾಪ ವಿಮೋಚನೆಗಾಗಿ ಪ್ರಾರ್ಥಿಸುವ ನಿನ್ನ ಮಗನ ಕಡೆಯಿಂದ".

# ಗ್ರಹಣಗಳು

1. ಸೂರ್ಯಗ್ರಹಣ ಅಥವಾ ಚಂದ್ರಗ್ರಹಣವಾದರೆ ದೇವಧ್ಯಾನದಲ್ಲಿ ತಲ್ಲೀನರಾಗಿರಿ. ಅವನಲ್ಲಿ ಪ್ರಾರ್ಥಿಸಿರಿ. ದೇವಕೀರ್ತನೆ ಮತ್ತು ಸ್ತುತಿಸ್ತೋತ್ರಗಳನ್ನು ಮಾಡಿರಿ, ದಾನ ಧರ್ಮಗಳನ್ನು ಮಾಡಿರಿ. ಈ ಕರ್ಮಗಳ ಫಲವಾಗಿ ಅಲ್ಲಾಹನು ಸಂಕಷ್ಟ ಮತ್ತು ಅಪಾಯಗಳನ್ನು ನಿವಾರಿಸುವನು. ಪ್ರವಾದಿ(ಸ) ಈ ರೀತಿ ಹೇಳಿರುವುದಾಗಿ ಹ. ಮುಗೀರ ಬಿನ್ ಶುಅಬ್(ರ) ಹೇಳುತ್ತಾರೆ:

"ಸೂರ್ಯ ಮತ್ತು ಚಂದ್ರ ಅಲ್ಲಾಹನ ಎರಡು ದೃಷ್ಟಾಂತಗಳು. ಯಾರದೇ ಹುಟ್ಟು ಸಾವುಗಳಿಂದ ಅವುಗಳಿಗೆ ಗ್ರಹಣ ಬಾಧಿಸುವುದಿಲ್ಲ. ಅವುಗಳಿಗೆ ಗ್ರಹಣ ಹಿಡಿದಾಗ ದೇವನನ್ನು ಪ್ರಾರ್ಥಿಸಿರಿ, ಅವನಲ್ಲಿ ಬೇಡಿರಿ. ನಮಾಝ್ ಮಾಡಿರಿ. ಸೂರ್ಯಗ್ರಹಣ ಅಥವಾ ಚಂದ್ರ ಗ್ರಹಣ ಬಿಡುವ ತನಕ ಈ ರೀತಿ ಮಾಡುತ್ತಲೇ ಇರಿ". (ಬುಖಾರಿ, ಮುಸ್ಲಿಮ್)

2. ಸೂರ್ಯಗ್ರಹಣವಾದಾಗ ಮಸೀದಿಯಲ್ಲಿ ಸಾಮೂಹಿಕವಾಗಿ ನಮಾಝ್ ಮಾಡಿರಿ. ಆದರೆ ಈ ನಮಾಝ್‌ಗೆ ಅದಾನ್ ಮತ್ತು ಇಕಾಮತ್ ಹೇಳಬೇಡಿರಿ. ಬೇರೆ ರೀತಿಯಲ್ಲಿ ಜನರನ್ನು ಸೇರಿಸಿ ನಮಾಝ್ ಮಾಡಿರಿ. ಚಂದ್ರ ಗ್ರಹಣವಾದರೆ ಒಬ್ಬಂಟಿಗರಾಗಿಯೂ ನಮಾಝ್ ಮಾಡಬಹುದು.

3. ಸೂರ್ಯಗ್ರಹಣದ ಎರಡು ರಕಅತ್ ಐಚ್ಛಿಕ ನಮಾಝ್‌ನಲ್ಲಿ ದೀರ್ಘವಾಗಿ ಕುರ್‌ಆನ್ ಪಠನ ಮಾಡಿರಿ. ಸೂರ್ಯಗ್ರಹಣ ಬಿಡುವ ತನಕ ನಮಾಝ್‌ನಲ್ಲಿ ನಿರತವಾಗಿರಿ. ಕುರ್‌ಆನ್ ಪಠನ ಉಚ್ಛಸ್ವರದಲ್ಲಿ ಮಾಡಿರಿ. ಪ್ರವಾದಿವರ್ಯರ(ಸ) ಕಾಲದಲ್ಲಿ ಒಮ್ಮೆ ಸೂರ್ಯಗ್ರಹಣವಾಗಿತ್ತು. ಕಾಕತಾಳೀಯವೆಂಬಂತೆ ಅಂದೇ ಪ್ರವಾದಿವರ್ಯರ(ಸ) ಪುತ್ರ ಹ. ಇಬ್ರಾಹೀಮ್(ರ) ನಿಧನರಾದರು. ಪ್ರವಾದಿ ಮುಹಮ್ಮದ್‌ರ(ಸ) ಪುತ್ರ ಹ. ಇಬ್ರಾಹೀಮ್‌ರ(ಅ) ನಿಧನದ ಕಾರಣದಿಂದ ಸೂರ್ಯಗ್ರಹಣವಾಯಿತೆಂದು ಜನರಾಡಿಕೊಳ್ಳ ತೊಡಗಿದರು. ಆಗ ಪ್ರವಾದಿ(ಸ) ಜನರನ್ನು ಒಟ್ಟುಗೂಡಿಸಿದರು. ಎರಡು ರಕಅತ್ ಸಾಮೂಹಿಕ ನಮಾಝ್ ನೆರವೇರಿಸಿದರು. ನಮಾಝ್‌ನಲ್ಲಿ ಅತ್ಯಂತ ದೀರ್ಘವಾಗಿ ಕುರ್‌ಆನ್ ಪಠಣಗೈದರು. ಸುಮಾರು ಸೂರಃ ಬಕರದಷ್ಟು ಕುರ್‌ಆನ್ ಪಠಿಸಿದರು. ರುಕೂಅ್ ಮತ್ತು ಸುಜೂದ್‌ಗಳನ್ನು ದೀರ್ಘಗೊಳಿಸಿದರು. ನಮಾಝ್ ಮುಗಿಸಿದಾಗ ಗ್ರಹಣ ಬಿಟ್ಟಿತ್ತು. ತರುವಾಯ ಪ್ರವಾದಿ(ಸ) ಜನರನ್ನುದ್ದೇಶಿಸಿ ಈ ರೀತಿ ಹೇಳಿದರು, "ಸೂರ್ಯ ಮತ್ತು ಚಂದ್ರರು ಅಲ್ಲಾಹನ ಎರಡು ನಿದರ್ಶನಗಳು. ಯಾರದೇ ಹುಟ್ಟು, ಸಾವುಗಳಿಂದ ಅವುಗಳಿಗೆ ಗ್ರಹಣ ಹಿಡಿಯುವುದಿಲ್ಲ.

ಜನರೇ! ಅಂತಹ ಸಂದರ್ಭ ಬಂದಾಗ ಅಲ್ಲಾಹನ ಧ್ಯಾನದಲ್ಲಿ ಮಗ್ನರಾಗಿರಿ. ಅವನಲ್ಲಿ ಪ್ರಾರ್ಥಿಸಿರಿ. ಅವನ ಪ್ರಕೀರ್ತನೆ, ಸ್ತುತಿಸ್ತೋತ್ರ ಮತ್ತು ದಾನಧರ್ಮ ಮಾಡಿರಿ".

**(ಬುಖಾರಿ, ಮುಸ್ಲಿಮ್)**

ಹ. ಅಬ್ದುರ್ರಹ್ಮಾನ್ ಬಿನ್ ಸಮ್ರಃ(ರ) ಹೇಳುತ್ತಾರೆ: "ಪ್ರವಾದಿವರ್ಯರ(ಸ) ಕಾಲದಲ್ಲಿ ಒಮ್ಮೆ ಸೂರ್ಯಗ್ರಹಣವಾಯಿತು. ನಾನು ಮದೀನಾದ ಹೊರಗೆ ಬಿಲ್ಲುವಿದ್ಯೆಯ ಅಭ್ಯಾಸ ಮಾಡುತ್ತಿದ್ದೆ. ನಾನು ಕೂಡಲೇ ಬಾಣಗಳನ್ನು ಎಸೆದು, ಪ್ರವಾದಿ(ಸ) ಈ ಸಂದರ್ಭದಲ್ಲಿ ಏನು ಮಾಡುತ್ತಾರೆಂಬುದನ್ನು ನೋಡುವ ಕುತೂಹಲದಲ್ಲಿ ನಗರಕ್ಕೆ ಮರಳಿ ಪ್ರವಾದಿ ವರ್ಯರ(ಸ) ಬಳಿ ಹೋದೆ. ಪ್ರವಾದಿ(ಸ) ತಮ್ಮ ಕೈಗಳನ್ನೆತ್ತಿ ಪ್ರಾರ್ಥಿಸುವುದರಲ್ಲಿ, ಅಲ್ಲಾಹನ ಸ್ತುತಿ-ಸ್ತೋತ್ರ ಮತ್ತು ಪ್ರಕೀರ್ತನೆಯಲ್ಲಿ ನಿರತರಾಗಿದ್ದರು. ತರುವಾಯ ಪ್ರವಾದಿ(ಸ) ಎರಡು ರಕಅತ್ ನಮಾಝ್ ಮಾಡಿದರು. ಅದರಲ್ಲಿ ಎರಡು ದೀರ್ಘ ಅಧ್ಯಾಯಗಳನ್ನು ಓದಿದರು. ಸೂರ್ಯನು ಶುಭ್ರವಾಗುವ ತನಕ ನಮಾಝ್‌ನಲ್ಲಿ ತಲ್ಲೀನರಾಗಿದ್ದರು".

ಸಹಾಬಿಗಳು(ರ) ಕೂಡ ಸೂರ್ಯಗ್ರಹಣ, ಚಂದ್ರಗ್ರಹಣಗಳ ವೇಳೆ ನಮಾಝ್ ಮಾಡುತ್ತಿದ್ದರು. ಒಮ್ಮೆ ಮದೀನಾದಲ್ಲಿ ಗ್ರಹಣ ಹಿಡಿದಾಗ ಹ. ಅಬ್ದುಲ್ಲಾ ಬಿನ್ ಝುಬೈರ್‌ರು(ರ) ನಮಾಝ್ ನಿರ್ವಹಿಸಿದರು. ಮತ್ತೊಮ್ಮೆ ಗ್ರಹಣ ಹಿಡಿದಾಗ ಹ. ಅಬ್ದುಲ್ಲಾ ಬಿನ್ ಅಬ್ಬಾಸ್‌ರವರು(ರ) ಜನರನ್ನು ಒಟ್ಟುಗೂಡಿಸಿ ಸಾಮೂಹಿಕ ನಮಾಝ್ ಮಾಡಿಸಿದರು.

4. ಸೂರ್ಯಗ್ರಹಣದ ವೇಳೆ ಮಾಡುವ ನಮಾಝ್‌ನ ಪ್ರಥಮ ರಕಅತ್‌ನಲ್ಲಿ ಸೂರಃ ಫಾತಿಹಾದ ಬಳಿಕ ಸೂರಃ ಅನ್‌ಕಬೂತ್ ಮತ್ತು ದ್ವಿತೀಯ ರಕಅತ್‌ನಲ್ಲಿ ಸೂರಃ ಅರ್ರೂಮ್ ಪಠಿಸಿರಿ. ಇದುವೇ ಪ್ರವಾದಿಚರ್ಯೆ. ಆದರೆ ಅದನ್ನೇ ಓದುವುದು ಕಡ್ಡಾಯವಲ್ಲ. ಇತರ ಸೂರಃಗಳನ್ನೂ ಪಠಿಸಬಹುದು.

5. ಸೂರ್ಯಗ್ರಹಣದ ಸಾಮೂಹಿಕ ನಮಾಝ್‌ನಲ್ಲಿ ಮಹಿಳೆಯರು ಪಾಲ್ಗೊಳ್ಳ ಬಯಸಿದರೆ ಮತ್ತು ಅದಕ್ಕೆ ಸೌಕರ್ಯವಿದ್ದರೆ ಅವರನ್ನು ಪಾಲ್ಗೊಳಿಸಿರಿ. ಮಕ್ಕಳನ್ನು ನಮಾಝ್ ಮಾಡುವಂತೆ ಪ್ರೇರೇಪಿಸಿರಿ. ಇದರಿಂದ ಆರಂಭದಲ್ಲೇ ಅವರ ಹೃದಯದಲ್ಲಿ ಏಕದೇವ ವಿಶ್ವಾಸದ ಅಚ್ಚೊತ್ತಿದಂತಾಗುವುದು. ಏಕದೇವ ವಿಶ್ವಾಸಕ್ಕೆ ವಿರುದ್ಧವಾದ ಯಾವ ವಿಚಾರಧಾರೆಗೂ ಅವರು ಬಲಿ ಬೀಳಲಾರರು.

6. ನಮಾಝ್ ಮಾಡುವುದು ನಿಷಿದ್ಧವಾಗಿರುವ ಸಮಯದಲ್ಲಿ, ಉದಾ: ಸೂರ್ಯೋದಯ, ಸೂರ್ಯಾಸ್ತಮಾನ ಮತ್ತು ಸೂರ್ಯ ನಡುನೆತ್ತಿಗೇರಿದಾಗ, ಸೂರ್ಯಗ್ರಹಣವಾದರೆ ನಮಾಝ್ ಮಾಡಬೇಡಿರಿ. ಆದರೆ ಅಲ್ಲಾಹನ ಸ್ತುತಿ-ಸ್ತೋತ್ರಗಳನ್ನು ಮಾಡಿರಿ. ಅವನನ್ನು ಧ್ಯಾನಿಸಿರಿ. ಬಡವರಿಗೆ, ದರಿದ್ರರಿಗೆ ದಾನ-ಧರ್ಮಗಳನ್ನು ನೀಡಿರಿ. ಸೂರ್ಯೋದಯವಾದ ನಂತರ ಅಥವಾ ನಡುನೆತ್ತಿಯಿಂದ ಆಚೆ ಸರಿದ ಬಳಿಕವೂ ಸೂರ್ಯಗ್ರಹಣ ಉಳಿದಿದ್ದರೆ ನಮಾಝ್ ಮಾಡಬಹುದು.

# ಪವಿತ್ರ ರಮಝಾನ್

1. ರಮಝಾನ್ ತಿಂಗಳನ್ನು ಯಥೋಚಿತವಾಗಿ ಸ್ವಾಗತಿಸಲು ಶಅಬಾನ್ ತಿಂಗಳಲ್ಲೇ ಸಿದ್ಧತೆಗಳನ್ನು ನಡೆಸಿರಿ. ಶಅಬಾನ್ 15ಕ್ಕೆ ಮುಂಚಿತವಾಗಿ ಸಾಧ್ಯವಿದ್ದಷ್ಟು ಐಚ್ಛಿಕ ಉಪವಾಸ ಆಚರಿಸಿರಿ. ಪ್ರವಾದಿ(ಸ) ಎಲ್ಲ ತಿಂಗಳುಗಳಿಗಿಂತಲೂ ಅಧಿಕವಾಗಿ ಶಅಬಾನ್ ತಿಂಗಳಲ್ಲಿ ಉಪವಾಸ ಆಚರಿಸುತ್ತಿದ್ದರೆಂದು ಹ. ಆಯಿಶಾ(ರ) ವರದಿ ಮಾಡಿದ್ದಾರೆ.

2. ಪೂರ್ಣ ಸಿದ್ಧತೆ ಮತ್ತು ಉತ್ಸಾಹದಿಂದ ರಮಝಾನ್ ತಿಂಗಳ ಚಂದ್ರೋದಯ ವನ್ನು ನೋಡಲು ಪ್ರಯತ್ನಿಸಿರಿ. ಬಾಲಚಂದಿರನನ್ನು ಕಂಡಾಗ ಈ ರೀತಿ ಪ್ರಾರ್ಥಿಸಿರಿ:

اَللّٰهُ اَكْبَرُ اَللّٰهُمَّ اَهِلَّهُ عَلَيْنَا بِالْاَمْنِ وَالْاِيْمَانِ وَالسَّلَامَةِ وَالْاِسْلَامِ، وَالتَّوْفِيْقِ لِمَا تُحِبُّ وَتَرْضٰى - رَبُّنَا وَرَبُّكَ اللّٰهُ

"ಅಲ್ಲಾಹು ಅಕ್ಬರ್ ಅಲ್ಲಾಹುಮ್ಮ ಅಹಿಲ್ಲಹೂ ಅಲೈನಾ ಬಿಲ್ ಅಮ್ನಿ ವಲ್ ಈಮಾನಿ ವಸ್ಸಲಾಮತಿ ವಲ್ ಇಸ್ಲಾಮಿ ವತ್ತೌಫೀಕಿ ಲಿಮಾ ತುಹಿಬ್ಬು ವತರ್‌ದಾ ರಬ್ಬುನಾ ವರಬ್ಬುಕಲ್ಲಾಹು".

(ಅಲ್ಲಾಹನು ಅತ್ಯಂತ ಮಹಾನನು. ಓ ಅಲ್ಲಾಹ್! ಈ ಚಂದ್ರನನ್ನು ನಮ್ಮ ಪಾಲಿಗೆ ಶಾಂತಿ, ವಿಶ್ವಾಸ, ಸಂರಕ್ಷಣೆ ಮತ್ತು ಇಸ್ಲಾಮ್‌ನ ಚಂದ್ರನನ್ನಾಗಿ ಉದಯಿಸು. ಜೊತೆಗೆ ನಿನಗೆ ಪ್ರಿಯಕರವಾದ ಕಾರ್ಯಗಳನ್ನು ಮಾಡುವ ಸೌಭಾಗ್ಯವನ್ನು ದಯಪಾಲಿಸು. ಓ ಚಂದ್ರಾ! ನನ್ನ ಮತ್ತು ನಿನ್ನ ಪ್ರಭು ಅಲ್ಲಾಹನೇ ಆಗಿರುವನು.) (ತಿರ್ಮಿದಿ, ಇಬ್ನು ಹಿಬ್ಬಾನ್)

ಪ್ರತಿ ತಿಂಗಳು ಬಾಲಚಂದ್ರನನ್ನು ಕಂಡಾಗ ಇದೇ ಪ್ರಾರ್ಥನೆಯನ್ನು ಮಾಡಿರಿ.

3. ರಮಝಾನ್ ತಿಂಗಳಲ್ಲಿ ಆರಾಧನೆಗಳ ಬಗ್ಗೆ ವಿಶೇಷ ಕಾಳಜಿ ವಹಿಸಿರಿ. ಕಡ್ಡಾಯ ನಮಾಝ್‌ನ ಹೊರತಾಗಿ ಐಚ್ಛಿಕ ನಮಾಝ್‌ಗಳನ್ನೂ ಹೆಚ್ಚೆಚ್ಚು ನಿರ್ವಹಿಸಿರಿ. ಅತ್ಯಧಿಕ ಪುಣ್ಯ ಸಂಪಾದನೆಗಾಗಿ ಟೊಂಕ ಕಟ್ಟಿರಿ. ಇದು ಮಹಾನತೆ ಮತ್ತು ಸಮೃದ್ಧಿಯ ತಿಂಗಳು. ದೇವನ ವಿಶೇಷ ಕೊಡುಗೆ ಮತ್ತು ಕರುಣೆಯ ತಿಂಗಳು. ಶಅಬಾನ್ ತಿಂಗಳ ಕೊನೆಯ ದಿನ ರಮಝಾನ್‌ನ ಸಮೃದ್ಧಿಗಳ ಕುರಿತು ಪ್ರಸ್ತಾಪಿಸುತ್ತಾ ಪ್ರವಾದಿ(ಸ) ಈ ರೀತಿ ಹೇಳಿರುವರು:

"ಜನರೇ! ಒಂದು ಮಹಾನ್ ಮತ್ತು ಸುಮಂಗಳ ತಿಂಗಳು ನಿಮ್ಮನ್ನು ಆವರಿಸಲಿದೆ. ಈ ತಿಂಗಳಲ್ಲಿ ಸಹಸ್ರ ಮಾಸಗಳಿಗಿಂತಲೂ ಉತ್ತಮವಾದ ಒಂದು ರಾತ್ರಿ ಇದೆ. ದೇವನು

ಈ ತಿಂಗಳ ಉಪವಾಸವ್ರತವನ್ನು ಕಡ್ಡಾಯಗೊಳಿಸಿರುವನು. ರಾತ್ರೆಯ ನಮಾಝನ್ನು (ತರಾವೀಹ್) ಐಚ್ಛಿಕ ಗೊಳಿಸಿರುವನು. ಈ ತಿಂಗಳಲ್ಲಿ ಸ್ವಇಚ್ಛೆಯಿಂದ ಒಂದು ಪುಣ್ಯಕಾರ್ಯ ಮಾಡಿದರೆ ಅದಕ್ಕೆ ಇತರ ತಿಂಗಳಲ್ಲಿ ಒಂದು ಕಡ್ಡಾಯ ಪುಣ್ಯಕಾರ್ಯ ಮಾಡಿದಷ್ಟು ಪುಣ್ಯ ಫಲ ಲಭಿಸು ವುದು. ಈ ತಿಂಗಳಲ್ಲಿ ಒಂದು ಕಡ್ಡಾಯ ಪುಣ್ಯಕಾರ್ಯ ಮಾಡಿದವನಿಗೆ ಇತರ ತಿಂಗಳುಗಳಲ್ಲಿ ಮಾಡಿದ ಎಪ್ಪತ್ತು ಕಡ್ಡಾಯ ಪುಣ್ಯಕಾರ್ಯಗಳನ್ನು ಮಾಡಿದಷ್ಟು ಪ್ರತಿಫಲವನ್ನು ದಯಪಾಲಿಸುವನು".

4. ಪೂರ್ತಿ ತಿಂಗಳ ಉಪವಾಸ ವ್ರತವನ್ನು ಅತ್ಯಂತ ಉತ್ಸಾಹದಿಂದ ಆಚರಿಸಿರಿ. ತೀವ್ರ ಅನಾರೋಗ್ಯ ಅಥವಾ ಇನ್ನಾವುದಾದರೂ ಧರ್ಮಸಮ್ಮತ ಕಾರಣದ ನಿಮಿತ್ತ ಉಪವಾಸ ಆಚರಿಸಲು ಸಾಧ್ಯವಾಗದೇ ಹೋದರೂ ರಮಝಾನಿನ ಗೌರವಾರ್ಥ ಬಹಿರಂಗವಾಗಿ ತಿನ್ನಬೇಡಿರಿ. ಉಪವಾಸ ಆಚರಿಸುವವರಂತೆಯೇ ಇರಲು ಪ್ರಯತ್ನಿಸಿರಿ.

5. ರಮಝಾನ್ ತಿಂಗಳಲ್ಲಿ ಕುರ್‌ಆನ್ ಪಾರಾಯಣವನ್ನು ವಿಶೇಷವಾಗಿ ಮಾಡಿರಿ. ಈ ತಿಂಗಳಿಗೆ ಪವಿತ್ರ ಕುರ್‌ಆನಿನೊಂದಿಗೆ ವಿಶೇಷ ಸಂಬಂಧವಿದೆ. ಅದು ಈ ತಿಂಗಳಲ್ಲೇ ಅವತೀರ್ಣಗೊಂಡಿತು. ಇತರ ದೈವಿಕ ಗ್ರಂಥಗಳೂ ಈ ತಿಂಗಳಲ್ಲೇ ಅವತೀರ್ಣಗೊಂಡವು. ಈ ತಿಂಗಳ ಎರಡನೆಯ ಅಥವಾ ಮೂರನೆಯ ದಿನಾಂಕದಂದು ಹ. ಇಬ್ರಾಹೀಮ್‌ರಿಗೆ(ಅ) ಗ್ರಂಥ ನೀಡಲ್ಪಟ್ಟಿತು. ಹ. ದಾವೂದ್‌ರಿಗೆ(ಅ) ಇದೇ ತಿಂಗಳ 12 ಅಥವಾ 18ನೆಯ ದಿನಾಂಕ ದಂದು ಝಬೂರ್ ನೀಡಲ್ಪಟ್ಟಿತು. ಹ. ಮೂಸಾರಿಗೆ(ಅ) ಇದೇ ತಿಂಗಳ 6ನೆಯ ತಾರೀಕಿಗೆ ತೌರಾತ್ ಅವತೀರ್ಣವಾಯಿತು. ಹ. ಈಸಾರಿಗೂ(ಅ) ಈ ತಿಂಗಳ 12 ಅಥವಾ 13ನೆಯ ದಿನ ಇಂಜೀಲ್ ನೀಡಲ್ಪಟ್ಟಿತು. ಆದ್ದರಿಂದ ಈ ತಿಂಗಳಲ್ಲಿ ಅತ್ಯಧಿಕ ಕುರ್‌ಆನ್ ಪಾರಾಯಣ ಮಾಡಲು ಪ್ರಯತ್ನಿಸಿರಿ. ಹ. ಜಿಬ್ರೀಲ್(ಅ) ಪ್ರತಿವರ್ಷ ರಮಝಾನ್ ತಿಂಗಳಲ್ಲಿ ಪ್ರವಾದಿ ವರ್ಯರಿಗೆ(ಸ) ಪೂರ್ತಿ ಕುರ್‌ಆನ್ ಓದಿ ಹೇಳುತ್ತಿದ್ದರು ಮತ್ತು ಪ್ರವಾದಿವರ್ಯರಿಂದ(ಸ) ಓದಿಸಿ ಕೇಳುತ್ತಿದ್ದರು. ಪ್ರವಾದಿವರ್ಯರ(ಸ) ಜೀವನದ ಕೊನೆಯ ವರ್ಷ ಪವಿತ್ರ ಕುರ್‌ಆನನ್ನು ಎರಡು ಸಲ ಆವರ್ತನ ಮಾಡಿ ಪಠಿಸಲಾಗಿತ್ತು.

6. ಪವಿತ್ರ ಕುರ್‌ಆನನ್ನು ನಿಲ್ಲಿಸಿ ನಿಲ್ಲಿಸಿ ಮತ್ತು ಅರ್ಥ ಮಾಡಿಕೊಂಡು ಓದಲು ಪ್ರಯತ್ನಿಸಿರಿ. ಪಾರಾಯಣದ ಆಧಿಕ್ಯದೊಂದಿಗೆ ಅರ್ಥ ಮಾಡಿಕೊಳ್ಳುವ ಹಾಗೂ ಪ್ರಭಾವಿತ ವಾಗುವ ಕಡೆಗೂ ಗಮನವಿರಲಿ.

7. 'ತರಾವೀಹ್'ನಲ್ಲಿ ಪೂರ್ಣ ಕುರ್‌ಆನ್ ಆಲಿಸುವ ವ್ಯವಸ್ಥೆ ಮಾಡಿರಿ. ರಮಝಾನಿ ನಲ್ಲಿ ಒಮ್ಮೆ ಸಂಪೂರ್ಣ ಕುರ್‌ಆನ್ ಆಲಿಸುವುದು ಪ್ರವಾದಿಚರ್ಯೆಯಾಗಿದೆ.

8. ತರಾವೀಹ್ ನಮಾಝನ್ನು ಅತ್ಯಂತ ಭಕ್ತಿಭಾವ ಮತ್ತು ಉತ್ಸಾಹದಿಂದ ನಿರ್ವಹಿಸಿರಿ. ಹೇಗಾದರೂ ಮಾಡಿ 20 ರಕಅತ್ ಪೂರ್ತಿಗೊಳಿಸಲು ಶ್ರಮಿಸದಿರಿ. ನಮಾಝನ್ನು ಅದರ ಪೂರ್ಣ ಮರ್ಯಾದೆಗಳೊಂದಿಗೆ ನಿರ್ವಹಿಸಿರಿ. ಆಗ ಮಾತ್ರ ಅದರ ಪ್ರಭಾವ ನಿಮ್ಮ ಜೀವನದ

ಮೇಲೆ ಬೀಳುವುದು. ದೇವನೊಂದಿಗೆ ಸಂಬಂಧವು ಸುದೃಢಗೊಳ್ಳುವುದು. ಸಾಧ್ಯವಾದರೆ 'ತಹಜ್ಜುದ್' ಕೂಡಾ ನಿರ್ವಹಿಸಿರಿ.

9. ಹೆಚ್ಚೆಚ್ಚು ದಾನಧರ್ಮಗಳನ್ನು ಮಾಡಿರಿ. ಬಡವರ, ವಿಧವೆಯರ, ಅನಾಥರ ಹಾಗೂ ನಿರ್ಗತಿಕರ ಬಗ್ಗೆ ಸಹಾನುಭೂತಿ ಪ್ರಕಟಿಸಿರಿ. ಅವರ 'ಪಾರಣೆ' ಮತ್ತು 'ಸಹರಿ'ಯ ಏರ್ಪಾಡು ಮಾಡಿರಿ. ಪ್ರವಾದಿ(ಸ) ಇದನ್ನು 'ಅನುಕಂಪದ ಮಾಸ'*ವೆಂದಿರುವರು. ಪ್ರವಾದಿ(ಸ) ಅತ್ಯಂತ ಉದಾರಿ ಮತ್ತು ಕೊಡುಗೈ ದಾನಿಯಾಗಿದ್ದರು. ರಮಝಾನ್ ತಿಂಗಳಲ್ಲಂತೂ ಅವರ ಔದಾರ್ಯ ಮತ್ತು ದಾನ ಇನ್ನಷ್ಟು ಹೆಚ್ಚಾಗುತ್ತಿತ್ತು ಎಂದು ಹ. ಇಬ್ನು ಅಬ್ಬಾಸ್(ರ) ಹೇಳುತ್ತಾರೆ. ಹ. ಜಿಬ್ರೀಲ್(ಅ) ರಾತ್ರಿಯ ವೇಳೆ ಪ್ರವಾದಿವರ್ಯರ(ಸ) ಬಳಿ ಬಂದು ಪವಿತ್ರ ಕುರ್‌ಆನ್ ಪಠನ ಮತ್ತು ಶ್ರವಣ ಮಾಡುತ್ತಿದ್ದರು. ಆ ದಿವಸಗಳಲ್ಲಿ ಪ್ರವಾದಿವರ್ಯರು(ಸ) ವೇಗದ ಮಾರುತಕ್ಕಿಂತಲೂ ಹೆಚ್ಚು ಉದಾರಿಯಾಗುತ್ತಿದ್ದರು.

10. 'ಕದ್ರ್'ನ ರಾತ್ರಿ ಹೆಚ್ಚೆಚ್ಚು ಐಚ್ಛಿಕ ಆರಾಧನೆಗಳನ್ನು ನೆರವೇರಿಸಿರಿ. ಪವಿತ್ರ ಕುರ್‌ಆನ್ ಪಠನ ಮಾಡಿರಿ. ಇದು ಕುರ್‌ಆನ್ ಅವತೀರ್ಣವಾದ ರಾತ್ರಿಯಾಗಿದೆ.

ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಇದೆ: "ನಾವು ಈ ಕುರ್‌ಆನನ್ನು ವಿಧಿನಿರ್ಣಾಯಕ ರಾತ್ರಿಯಲ್ಲಿ ಅವತೀರ್ಣಗೊಳಿಸಿದ್ದೇವೆ. ವಿಧಿನಿರ್ಣಾಯಕ ರಾತ್ರಿ ಏನೆಂದು ನಿಮಗೇನು ಗೊತ್ತು? ನಿರ್ಣಾಯಕ ರಾತ್ರಿ ಸಹಸ್ರ ಮಾಸ ಗಳಿಗಿಂತಲೂ ಮಿಗಿಲಾದುದು. ಅದರಲ್ಲಿ ದೇವಚರರು ಮತ್ತು ಜಿಬ್ರೀಲ್(ಅ) ತಮ್ಮ ಪ್ರಭುವಿನ ಆಜ್ಞೆಯಿಂದ ಎಲ್ಲ ಕಾರ್ಯಗಳ ವ್ಯವಸ್ಥೆಗಾಗಿ ಇಳಿಯುತ್ತಾರೆ. ಬೆಳಗಾಗುವ ತನಕ ಶಾಂತಿಯೇ ಶಾಂತಿ". (ಅಲ್ ಕದ್ರ್)

ಈ ವಿಧಿನಿರ್ಣಾಯಕ ರಾತ್ರಿ ರಮಝಾನ್ ತಿಂಗಳ ಕೊನೆಯ ಹತ್ತು ದಿನಗಳ ಬೆಸಸಂಖ್ಯೆಯ ರಾತ್ರಿಗಳಲ್ಲೊಂದು ಎಂದು ಹದೀಸ್‌ನಲ್ಲಿದೆ. ಈ ರಾತ್ರಿ ಹೀಗೆ ಪ್ರಾರ್ಥಿಸಬೇಕು:

اَللّٰهُمَّ اِنَّكَ عَفُوٌّ تُحِبُّ الْعَفْوَ فَاعْفُ عَنِّىْ

"ಅಲ್ಲಾಹುಮ್ಮ ಇನ್ನಕ ಅಫುವ್ವುನ್‌ತುಹಿಬ್ಬುಲ್ ಅಫ್‌ವ ಫಅ್‌ಫು ಅನ್ನೀ".

(ಓ ಅಲ್ಲಾಹ್! ನೀನು ಅತ್ಯಧಿಕ ಕ್ಷಮಿಸುವವನು. ಏಕೆಂದರೆ ಕ್ಷಮೆ ನಿನಗೆ ಪ್ರಿಯವಾದುದು. ಆದ್ದರಿಂದ ನನ್ನನ್ನು ಕ್ಷಮಿಸು.) (ಹಿಸ್ನ್ ಹಸೀನ್)

ಅನಸ್(ರ)ರಿಂದ ವರದಿ. ಒಮ್ಮೆ ರಮಝಾನ್ ತಿಂಗಳು ಆಗಮಿಸಿದಾಗ ಪ್ರವಾದಿ(ಸ) ಹೇಳಿದರು, "ನಿಮ್ಮ ಮೇಲೆ ಒಂದು ತಿಂಗಳು ಬಂದಿದೆ. ಅದರಲ್ಲಿರುವ ಒಂದು ರಾತ್ರಿ ಸಹಸ್ರ ಮಾಸಗಳಿಗಿಂತಲೂ ಮಿಗಿಲಾದುದು. ಯಾವನು ಆ ರಾತ್ರಿಯ ಪುಣ್ಯದಿಂದ ವಂಚಿತನಾದನೋ ಅವನು ಎಲ್ಲ ಒಳಿತಿನಿಂದಲೂ ವಂಚಿತನಾದನು. ನಿಜವಾಗಿ ನತದೃಷ್ಟನೇ ಆ ರಾತ್ರಿಯ ಒಳಿತು ಸಮೃದ್ಧಿಗಳಿಂದ ವಂಚಿತನಾಗುತ್ತಾನೆ". (ಇಬ್ನುಮಾಜ)

* ಅರ್ಥಾತ್ ಬಡವರ ಮತ್ತು ನಿರ್ಗತಿಕರ ಬಗ್ಗೆ ಅನುಕಂಪದ ತಿಂಗಳು. ಅನುಕಂಪವೆಂದರೆ ಮೌಖಿಕ ಮತ್ತು ಆರ್ಥಿಕ ಅನುಕಂಪ. ಅವರೊಂದಿಗೆ ಮಾತುಕೃತಿಗಳಲ್ಲಿ ಮೃದುವಾಗಿ ವರ್ತಿಸಿರಿ, ನಿಮ್ಮ ನೌಕರರಿಗೆ ಹೆಚ್ಚೆಚ್ಚು ಸವಲತ್ತುಗಳನ್ನು ನೀಡಿರಿ ಮತ್ತು ಆರ್ಥಿಕವಾಗಿ ನೆರವಾಗಿರಿ.

11. ರಮಝಾನಿನ ಕೊನೆಯ ಹತ್ತು ದಿನಗಳಲ್ಲಿ ಇಅ್‌ತಿಕಾಫ್(ತಪಶ್ಚರ್ಯೆ) ಆಚರಿಸಿರಿ. ಪ್ರವಾದಿ(ಸ) ರಮಝಾನಿನ ಕೊನೆಯ ಹತ್ತು ದಿನಗಳಲ್ಲಿ ಇಅ್‌ತಿಕಾಫ್ ಮಾಡುತ್ತಿದ್ದರು.

"ರಮಝಾನಿನ ಅಂತಿಮ ದಶಕ ಬಂದಾಗ ಪ್ರವಾದಿ(ಸ) ರಾತ್ರಿ ಹೆಚ್ಚೆಚ್ಚು ಜಾಗರಣೆ ಮಾಡಿ ಆರಾಧನೆಗಳಲ್ಲಿ ತಲ್ಲೀನರಾಗುತ್ತಿದ್ದರು. ಮನೆಯವರನ್ನು ಎಬ್ಬಿಸಿ ಅತ್ಯುತ್ಸಾಹದಿಂದ ದೇವಾರಾಧನೆಯಲ್ಲಿ ನಿರತರಾಗುತ್ತಿದ್ದರು" ಎಂದು ಹ. ಆಯಿಶಾ(ರ) ಹೇಳಿರುವರು.

12. ರಮಝಾನ್ ತಿಂಗಳಲ್ಲಿ ಜನರೊಂದಿಗೆ ಅತ್ಯಂತ ವಿನಮ್ರತೆ ಮತ್ತು ಅನುಕಂಪದ ವ್ಯವಹಾರ ಮಾಡಿರಿ. ನೌಕರರಿಗೆ ಹೆಚ್ಚೆಚ್ಚು ಸವಲತ್ತುಗಳನ್ನು ನೀಡಿರಿ. ಉದಾರತೆಯೊಂದಿಗೆ ಅವರ ಅವಶ್ಯಕತೆಗಳನ್ನು ಈಡೇರಿಸಿರಿ. ಮನೆಯವರೊಂದಿಗೂ ಕರುಣೆ ಮತ್ತು ಔದಾರ್ಯ ದಿಂದ ವರ್ತಿಸಿರಿ.

13. ಅತ್ಯಂತ ಕಳಕಳಿ ಮತ್ತು ನಮ್ರತೆಯೊಂದಿಗೆ ಪ್ರಾರ್ಥನೆಗಳನ್ನು ಮಾಡಿರಿ. "ರಮಝಾನ್ ತಿಂಗಳು ಆಗಮಿಸಿದರೆ ಪ್ರವಾದಿವರ್ಯರ(ಸ) ಬಣ್ಣವೇ ಬದಲಾಗುತ್ತಿತ್ತು. ನಮಾಝ್ ಹೆಚ್ಚಾಗುತ್ತಿತ್ತು. ಪ್ರಾರ್ಥನೆಗಳಲ್ಲಿ ವಿನಮ್ರತೆ ಹೆಚ್ಚುತ್ತಿತ್ತು. ದೇವಭಯವು ಅತ್ಯಧಿಕವಾಗಿ ಅವರನ್ನು ಆವರಿಸುತ್ತಿತ್ತು" ಎಂದು ದುರ್ರೆ ಮನ್ಸೂರ್ ಎಂಬ ಗ್ರಂಥದಲ್ಲಿದೆ.

ವಿಶ್ವಸಿಂಹಾಸನದ ವಾಹಕರಾದ ದೇವಚರರಿಗೆ ತಮ್ಮ ಆರಾಧನೆಗಳನ್ನು ಬಿಟ್ಟು ಉಪವಾಸಿಗರ ಪ್ರಾರ್ಥನೆಗಳಿಗೆ ಆಮೀನ್(ತಥಾಸ್ತು) ಹೇಳುವಂತೆ ಅಲ್ಲಾಹನು ಆಜ್ಞಾಪಿ ಸುತ್ತಾನೆ ಎಂದು ಹದೀಸ್‌ನಲ್ಲಿದೆ.

ಫಿತ್ರ್ ಝಕಾತನ್ನು ಮನಸಾರೆ ಕೊಡಿರಿ. ಅದನ್ನು ಈದ್ ನಮಾಝ್‌ಗೆ ಮುಂಚಿತವಾಗಿ ಕೊಡಿರಿ. ಬಡವರು ಹಬ್ಬದ ಅಗತ್ಯ ವಸ್ತುಗಳನ್ನು ಕೊಂಡು ಈದ್ಗಾಗೆ ತೆರಳಿ ಇತರರೊಂದಿಗೆ ಹಬ್ಬದ ಸಂತೋಷದಲ್ಲಿ ಪಾಲ್ಗೊಳ್ಳಲು ಅನುಕೂಲವಾಗುವಂತೆ ಅದನ್ನು ಸ್ವಲ್ಪ ಮುಂಚಿತ ವಾಗಿಯೇ ನೀಡಿರಿ. "ಉಪವಾಸ ವ್ರತದ ಕಾಲದಲ್ಲಿ ಆಗಿರಬಹುದಾದ ಪ್ರಮಾದಗಳಿಗೆ ಮತ್ತು ಅಶ್ಲೀಲ ಮಾತುಗಳಿಗೆ ಪ್ರಾಯಶ್ಚಿತ್ತವಾಗಲೆಂದು ಮತ್ತು ಬಡವರ ಹಾಗೂ ನಿರ್ಗತಿಕರ ಊಟದ ವ್ಯವಸ್ಥೆಯಾಗಲೆಂದು ಪ್ರವಾದಿ(ಸ) ಫಿತ್ರ್ ಝಕಾತನ್ನು ತಮ್ಮ ಅನುಯಾಯಿಗಳ ಮೇಲೆ ಕಡ್ಡಾಯ ಮಾಡಿರುವರು." (ಅಬೂದಾವೂದ್)

15. ಪವಿತ್ರ ರಮಝಾನಿನಲ್ಲಿ ಸ್ವಯಂ ಹೆಚ್ಚೆಚ್ಚು ಪುಣ್ಯಕಾರ್ಯಗಳನ್ನು ಮಾಡುವುದರ ಜೊತೆಗೆ ಇತರರನ್ನೂ ಅತ್ಯಂತ ಕಳಕಳಿ, ವಿನಯ ಮತ್ತು ಯುಕ್ತಿಯೊಂದಿಗೆ ಸತ್ಕಾರ್ಯ ಗಳನ್ನು ಮಾಡುವಂತೆ ಪ್ರೇರೇಪಿಸಿರಿ. ಇದರಿಂದ ಇಡೀ ವಾತಾವರಣದಲ್ಲಿ ದೇವಭಯ, ಪುಣ್ಯ ಪ್ರಿಯತೆ ಮತ್ತು ಒಳಿತಿನ ಭಾವನೆಗಳು ಹರಡುತ್ತವೆ. ತನ್ಮೂಲಕ ಸಮಾಜವು ರಮಝಾನಿನ ಅಮೂಲ್ಯ ಸಮೃದ್ಧಿಗಳಿಂದ ಪ್ರಯೋಜನ ಪಡೆಯುತ್ತದೆ.

# ಉಪವಾಸ ವ್ರತ

1. ಉಪವಾಸ ವ್ರತದ ಮಹಾನ್ ಪುಣ್ಯ ಮತ್ತು ಪ್ರಯೋಜನಗಳನ್ನು ದೃಷ್ಟಿಯಲ್ಲಿರಿಸಿ ಪೂರ್ಣ ಉತ್ಸಾಹ ಮತ್ತು ಹುಮ್ಮಸ್ಸಿನಿಂದ ಉಪವಾಸ ಆಚರಿಸಿರಿ. ಇದೊಂದು ಅಪ್ರತಿಮ ವಾದ ಆರಾಧನೆ. ಆದ್ದರಿಂದಲೇ ಉಪವಾಸ ಎಲ್ಲಾ ಸಮುದಾಯಗಳ ಮೇಲೂ ಕಡ್ಡಾಯ ವಾಗಿತ್ತು. ಅಲ್ಲಾಹನು ಈ ರೀತಿ ಆದೇಶಿಸಿರುವನು:

يَٰٓأَيُّهَا ٱلَّذِينَ ءَامَنُوا۟ كُتِبَ عَلَيْكُمُ ٱلصِّيَامُ كَمَا كُتِبَ عَلَى ٱلَّذِينَ مِن قَبْلِكُمْ لَعَلَّكُمْ تَتَّقُونَ ﴿١٨٣﴾

**"ಓ ಸತ್ಯವಿಶ್ವಾಸಿಗಳೇ! ನಿಮಗಿಂತ ಮೊದಲು ಗತಿಸಿ ಹೋದವರ ಮೇಲೆ ಉಪವಾಸ ವ್ರತ ಕಡ್ಡಾಯಗೊಳಿಸಿದಂತೆ ನಿಮ್ಮ ಮೇಲೂ ಕಡ್ಡಾಯಗೊಳಿಸಲಾಗಿದೆ. ತನ್ಮೂಲಕ ನೀವು ಧರ್ಮನಿಷ್ಠರಾಗಲೆಂದು".** **(ಪವಿತ್ರ ಕುರ್‌ಆನ್, 2:183)**

ಪ್ರವಾದಿವರ್ಯರು(ಸ) ಈ ಘನ ಉದ್ದೇಶವನ್ನು ಹೀಗೆ ವಿವರಿಸಿರುತ್ತಾರೆ: "ಯಾವನು ಉಪವಾಸ ಆಚರಿಸಿಯೂ ಸುಳ್ಳು ಹೇಳುವುದನ್ನು ಮತ್ತು ಸುಳ್ಳು ವರ್ತಿಸುವುದನ್ನು ತೊರೆಯಲಿಲ್ಲವೋ ಆತನು ಅನ್ನಪಾನೀಯಗಳನ್ನು ತೊರೆಯಬೇಕೆಂದು ಅಲ್ಲಾಹನಿಗೆ ಯಾವ ಆಸಕ್ತಿಯೂ ಇಲ್ಲ". (ಬುಖಾರಿ)

ಪ್ರವಾದಿ(ಸ) ಹೀಗೂ ಹೇಳಿರುವರು: "ಯಾವನು ಸತ್ಯವಿಶ್ವಾಸ ಮತ್ತು ಆತ್ಮಾವಲೋಕನದೊಂದಿಗೆ* ರಮಝಾನ್ ತಿಂಗಳ ಉಪವಾಸ ಆಚರಿಸುವನೋ ದೇವನು ಅವನ ಗತ ಪಾಪಗಳನ್ನು ಕ್ಷಮಿಸುವನು". (ಬುಖಾರಿ)

2. ರಮಝಾನಿನ ಉಪವಾಸಗಳನ್ನು ಪೂರ್ಣ ನಿಷ್ಠೆಯೊಂದಿಗೆ ಆಚರಿಸಿರಿ. ತೀವ್ರ ಅನಾರೋಗ್ಯ ಅಥವಾ ಇನ್ನಿತರ ಧರ್ಮಸಮ್ಮತ ಕಾರಣಗಳಿಲ್ಲದೆ ಎಂದೂ ಉಪವಾಸ ತೊರೆಯಬೇಡಿರಿ. ಪ್ರವಾದಿ(ಸ) ಈ ರೀತಿ ಹೇಳಿರುವರು:

"ಯಾವನು ಅನಾರೋಗ್ಯ ಅಥವಾ ಇನ್ನಿತರ ಧರ್ಮಸಮ್ಮತ ಕಾರಣಗಳಿಲ್ಲದೆ ರಮಝಾನಿನ ಒಂದು ಉಪವಾಸವನ್ನು ತೊರೆಯುವನೋ ಅವನು ಜೀವನಪರ್ಯಂತ ಉಪವಾಸ ಆಚರಿಸಿದರೂ ಆ ಒಂದು ಉಪವಾಸದ ಪರಿಹಾರವಾಗದು". (ತಿರ್ಮಿದಿ)

* ಆತ್ಮಾವಲೋಕನ ಎಂದರೆ ಉಪವಾಸವನ್ನು ಕೇವಲ ದೇವ ಸಂಪ್ರೀತಿ ಮತ್ತು ಪರಲೋಕ ಮೋಕ್ಷಕ್ಕಾಗಿ ಆಚರಿಸುವುದು ಹಾಗೂ ಉಪವಾಸ ವ್ರತವನ್ನು ನಿಸ್ತೇಜಗೊಳಿಸುವಂತಹ ಎಲ್ಲ ನಿರರ್ಥಕ ಕಾರ್ಯಗಳಿಂದ ದೂರವಿರುವುದಾಗಿದೆ.

3. ಉಪವಾಸದ ವೇಳೆ ತೋರಿಕೆ ಮತ್ತು ಡಂಬಾಚಾರದಿಂದ ದೂರವಿರುವ ಸಲುವಾಗಿ ಎಂದಿನಂತೆ ಹುಮ್ಮಸ್ಸು ಹಾಗೂ ಲವಲವಿಕೆಯಿಂದ ನಿಮ್ಮ ಕೆಲಸ ಕಾರ್ಯಗಳಲ್ಲಿ ನಿರತರಾ ಗಿರಿ. ನಿಮ್ಮ ಚಲನವಲನಗಳಿಂದ ಉಪವಾಸ ವ್ರತದ ಬಳಲಿಕೆ ಅಥವಾ ಆಲಸ್ಯದ ಪ್ರಕಟಣೆ ಯಾಗದಿರಲಿ. ಅಬೂಹುರೈರಾ(ರ) ಹೇಳುತ್ತಾರೆ: "ಒಬ್ಬನು ಉಪವಾಸ ಆಚರಿಸಿದಾಗ ಎಂದಿನಂತೆ ತಲೆಗೆ ಎಣ್ಣೆ ಹಚ್ಚಬೇಕು ಮತ್ತು ಉಪವಾಸ ವ್ರತದ ಪ್ರಭಾವ ಗೋಚರಿಸದಂತೆ ನೋಡಿಕೊಳ್ಳಬೇಕು".

4. ಉಪವಾಸ ವ್ರತದ ಉದ್ದೇಶವೇ ಜೀವನವನ್ನು ಸಂಸ್ಕರಿಸುವುದಾಗಿದೆ. ಆದ್ದರಿಂದ ಉಪವಾಸದ ವೇಳೆ ಎಲ್ಲ ಕೆಡುಕುಗಳಿಂದಲೂ ಪೂರ್ಣವಾಗಿ ದೂರವಿರುವ ಪ್ರಯತ್ನ ಮಾಡಿರಿ. ಪ್ರವಾದಿ(ಸ) ಹೀಗೆ ಹೇಳಿರುವರು: "ಉಪವಾಸ ವ್ರತವು ಗುರಾಣಿಯಾಗಿದೆ. ನಿಮ್ಮ ಪೈಕಿ ಯಾರಾದರೂ ಉಪವಾಸ ಆಚರಿ ಸುತ್ತಿದ್ದರೆ ಅವನು ತನ್ನ ಬಾಯಿಯಿಂದ ಯಾವುದೇ ಅಶ್ಲೀಲ ಮಾತು ಹೊರಡಿಸದಿರಲಿ, ಗುಲ್ಲು ಗಲಭೆ ಎಬ್ಬಿಸದಿರಲಿ. ಯಾರಾದರೂ ಅವನನ್ನು ಬೈದರೆ ಅಥವಾ ಅವನೊಡನೆ ಜಗಳಕ್ಕೆ ಇಳಿದರೆ ತಾನು ಉಪವಾಸ ಆಚರಿಸುತ್ತಿದ್ದೇನೆಂಬುದನ್ನು ಸ್ಮರಿಸಿ ಸುಮ್ಮನಿರಲಿ". (ಬುಖಾರಿ, ಮುಸ್ಲಿಮ್)

5. ಪ್ರವಾದಿ ವಚನಗಳಲ್ಲಿ ಉಪವಾಸ ವ್ರತಕ್ಕೆ ಪ್ರಸ್ತಾಪಿಸಲಾಗಿರುವ ಮಹಾನ್ ಪುಣ್ಯ ಫಲಗಳನ್ನು ಬಯಸಿರಿ. ಪ್ರತ್ಯೇಕವಾಗಿ ಪಾರಣೆಯ ಸಮಯದಲ್ಲಿ 'ದೇವಾ! ನನ್ನ ಉಪವಾಸ ವ್ರತವನ್ನು ಸ್ವೀಕರಿಸು ಮತ್ತು ನನಗೆ ನೀನು ವಾಗ್ದಾನ ಮಾಡಿರುವಂತಹ ಪ್ರತಿಫಲವನ್ನು ದಯಪಾಲಿಸು' ಎಂದು ಅಲ್ಲಾಹನಲ್ಲಿ ಪ್ರಾರ್ಥಿಸಿರಿ. ಪ್ರವಾದಿ(ಸ) ಈ ರೀತಿ ಹೇಳಿರುವರು: "ಉಪವಾಸ ಆಚರಿಸಿದವರು ಸ್ವರ್ಗಕ್ಕೆ ಒಂದು ಪ್ರತ್ಯೇಕ ಬಾಗಿಲ ಮೂಲಕ ಪ್ರವೇಶಿಸುವರು. ಆ ಬಾಗಿಲಿನ ಹೆಸರು ರಯ್ಯಾನ್.* ಉಪವಾಸಿಗರೆಲ್ಲಾ ಪ್ರವೇಶಿಸಿಯಾದ ಬಳಿಕ ಆ ಬಾಗಿಲನ್ನು ಮುಚ್ಚಲಾಗುವುದು. ತರುವಾಯ ಯಾರೂ ಆ ಬಾಗಿಲಿನಿಂದ ಪ್ರವೇಶಿಸಲಾರರು". (ಬುಖಾರಿ)

ಪ್ರವಾದಿ(ಸ) ಹೀಗೂ ಹೇಳಿರುವರು, ನಿರ್ಣಾಯಕ ದಿನದಂದು ಉಪವಾಸ ವ್ರತವು ಹೀಗೆ ಶಿಫಾರಸು ಮಾಡುವುದು, "ಓ ಪ್ರಭೂ! ನಾನು ಈ ವ್ಯಕ್ತಿಯನ್ನು ಹಗಲೆಲ್ಲಾ ಅನ್ನ ಪಾನೀಯ ಮತ್ತಿತರ ಬಯಕೆಗಳಿಂದ ತಡೆದೆ. ದೇವಾ! ಈ ವ್ಯಕ್ತಿಯ ಬಗ್ಗೆ ನನ್ನ ಶಿಫಾರಸನ್ನು ಸ್ವೀಕರಿಸು. ಅಲ್ಲಾಹನು ಅದರ ಶಿಫಾರಸನ್ನು ಸ್ವೀಕರಿಸುವನು". (ಮಿಷ್ಕಾತ್)

"ಪಾರಣೆಯ ಸಮಯ ಉಪವಾಸಿಗನು ಮಾಡುವ ಪ್ರಾರ್ಥನೆ ಸ್ವೀಕರಿಸಲ್ಪಡುತ್ತದೆ. ಅದನ್ನು ತಿರಸ್ಕರಿಸಲಾಗದು" ಎಂದು ಪ್ರವಾದಿ(ಸ) ಹೇಳಿರುವರು. (ತಿರ್ಮಿದಿ)

6. ಉಪವಾಸದ ಸಂಕಷ್ಟಗಳನ್ನು ನಗುನಗುತ್ತಾ ಸಹಿಸಿಕೊಳ್ಳಿರಿ. ಹಸಿವು, ಬಾಯಾರಿಕೆಯ ತೀವ್ರತೆ ಅಥವಾ ಬಳಲಿಕೆಯ ಬಗ್ಗೆ ದೂರಿ ನಿಮ್ಮ ಉಪವಾಸ ವ್ರತಕ್ಕೆ ಅಗೌರವ ತೋರದಿರಿ.

7. ಪ್ರಯಾಣದ ವೇಳೆ ಅಥವಾ ತೀವ್ರ ಅನಾರೋಗ್ಯದ ನಿಮಿತ್ತ ಉಪವಾಸ ಆಚರಿಸುವುದು ಅಸಾಧ್ಯವೆಂದಾದರೆ ಉಪವಾಸ ತೊರೆಯಿರಿ. ಇತರ ದಿನಗಳಲ್ಲಿ ಅದನ್ನು ಪೂರ್ತಿಗೊಳಿಸಿರಿ.

* ರಯ್ಯಾನ್ ಎಂದರೆ ತಣಿಸುವ ಎಂದರ್ಥ. ರಯ್ಯಾನ್ನ ಎಂಬ ಬಾಗಿಲಲ್ಲಿ ಪ್ರವೇಶಿಸುವವರಿಗೆ ಎಂದೂ ಬಾಯಾರಿಕೆ ಆಗಲಾರದು ಎಂದು ಪ್ರವಾದಿವರ್ಯರು(ಸ) ಹೇಳಿರುವರು. (ತಿರ್ಮಿದಿ)

وَمَن كَانَ مَرِيضًا أَوْ عَلَىٰ سَفَرٍ فَعِدَّةٌ مِّنْ أَيَّامٍ أُخَرَ

"ಯಾವನಾದರೂ ರೋಗಿಯಾಗಿದ್ದರೆ ಅಥವಾ ಪ್ರಯಾಣದಲ್ಲಿದ್ದರೆ ಇತರ ದಿನಗಳಲ್ಲಿ ಉಪವಾಸ ವ್ರತದ ಎಣಿಕೆಯನ್ನು ಪೂರ್ತಿಗೊಳಿಸಲಿ". (ಪವಿತ್ರ ಕುರ್‌ಆನ್, 2:185)

"ನಾವು ಪ್ರವಾದಿವರ್ಯರ(ಸ) ಜೊತೆಯಲ್ಲಿ ರಮಝಾನ್ ತಿಂಗಳಲ್ಲಿ ಪ್ರಯಾಣದಲ್ಲಿರುತ್ತಿದ್ದೆವು. ಆಗ ಕೆಲವರು ಉಪವಾಸ ಆಚರಿಸುತ್ತಿದ್ದರು. ಇನ್ನು ಕೆಲವರು ಆಚರಿಸುತ್ತಿರಲಿಲ್ಲ. ಆದರೆ ಉಪವಾಸ ಆಚರಿಸುವವರು ಅದನ್ನು ತೊರೆಯುವವರನ್ನಾಗಲೀ ಉಪವಾಸ ವ್ರತ ತೊರೆಯುವವರು ಅದನ್ನು ಆಚರಿಸುವವರನ್ನಾಗಲೀ ಆಕ್ಷೇಪಿಸುತ್ತಿರಲಿಲ್ಲ" ಎಂದು ಹ. ಅನಸ್(ರ) ಹೇಳಿರುವರು. (ಬುಖಾರಿ)

8. ಉಪವಾಸ ಆಚರಿಸುತ್ತಿರುವಾಗ ಪರನಿಂದೆ ಮತ್ತು ಕೆಟ್ಟ ದೃಷ್ಟಿ ಬೀರುವುದರಿಂದ ವಿಶೇಷವಾಗಿ ದೂರ ಉಳಿಯಿರಿ. ಪ್ರವಾದಿ(ಸ) ಈ ರೀತಿ ಹೇಳಿರುವರು: "ಉಪವಾಸಿಗನು ಪರನಿಂದೆ ಮಾಡದಿರುವ ವರೆಗೆ ಬೆಳಗ್ಗಿನಿಂದ ಸಂಜೆಯ ತನಕ ದೇವಾರಾಧನೆಯಲ್ಲಿ ತಲ್ಲೀನನಾಗಿರುತ್ತಾನೆ. ಅವನು ಪರನಿಂದೆ ಮಾಡುತ್ತಲೇ ಅವನ ಉಪವಾಸ ವ್ರತದಲ್ಲಿ ಬಿರುಕುಂಟಾಗುತ್ತದೆ". (ದಾರಿಮಿ)

9. ಧರ್ಮಸಮ್ಮತವಾಗಿಯೇ ಸಂಪಾದಿಸಿರಿ. ನಿಷಿದ್ಧ ಸಂಪಾದನೆಯಿಂದ ಬೆಳೆದ ಶರೀರದ ಯಾವ ಆರಾಧನೆಯೂ ಸ್ವೀಕೃತವಾಗುವುದಿಲ್ಲ. ಪ್ರವಾದಿ(ಸ) ಈ ರೀತಿ ಹೇಳಿರುವರು: "ಯಾವ ದೇಹ ನಿಷಿದ್ಧ ಸಂಪಾದನೆಯಿಂದ ಬೆಳೆದಿದೆಯೋ ಅದು ನರಕಕ್ಕೆ ಯೋಗ್ಯ". (ಬುಖಾರಿ)

10. ಸಹರಿ ತಪ್ಪದೆ ತಿನ್ನಿರಿ. ಇದರಿಂದ ಉಪವಾಸವಿರಲು ಸುಲಭವಾಗುತ್ತದೆ. ಅಲ್ಲದೆ ಬಳಲಿಕೆ ಮತ್ತು ಆಲಸ್ಯ ಉಂಟಾಗದು. ಪ್ರವಾದಿ(ಸ) ಹೇಳಿರುವರು: "ಸಹರಿ ಉಣ್ಣಿರಿ. ಏಕೆಂದರೆ ಸಹರಿ ಉಣ್ಣುವುದರಲ್ಲಿ ಸಮೃದ್ಧಿ ಇದೆ". (ಬುಖಾರಿ)

"ಸಹರಿ ಉಣ್ಣುವುದರಲ್ಲಿ ಸಮೃದ್ಧಿ ಇದೆ. ಏನೂ ಇಲ್ಲದಿದ್ದರೆ ನೀರಿನ ಕೆಲವು ಗುಟುಕುಗಳನ್ನಾದರೂ ಕುಡಿಯಿರಿ. ದೇವಚರರು ಸಹರಿ ಉಣ್ಣುವವರ ರಕ್ಷಣೆಗಾಗಿ ಪ್ರಾರ್ಥಿಸುತ್ತಿರುತ್ತಾರೆ" ಎಂದು ಪ್ರವಾದಿ(ಸ) ಹೇಳಿರುವರು. (ಅಹ್ಮದ್)

ಪ್ರವಾದಿ(ಸ) ಹೀಗೂ ಹೇಳಿರುವರು: "ಮಧ್ಯಾಹ್ನ ಸ್ವಲ್ಪ ಹೊತ್ತು ಮಲಗುವ ಮೂಲಕ ರಾತ್ರಿ ನಿಂತು ಪ್ರಾರ್ಥಿಸುವುದನ್ನು ಸುಲಭಗೊಳಿಸಿರಿ. ಸಹರಿ ಉಣ್ಣುವ ಮೂಲಕ ಹಗಲಿನ ಉಪವಾಸಕ್ಕೆ ಶಕ್ತಿ ಗಳಿಸಿರಿ". (ಇಬ್ನುಮಾಜಃ)

ಪ್ರವಾದಿ(ಸ) ಹೇಳಿರುವರು, "ನಮ್ಮ ಮತ್ತು ಗ್ರಂಥದವರ ಉಪವಾಸ ವ್ರತಗಳಲ್ಲಿರುವ ವ್ಯತ್ಯಾಸ ಸಹರಿ ಉಣ್ಣುವುದಾಗಿದೆ". (ಮುಸ್ಲಿಮ್)

11. ಸೂರ್ಯ ಅಸ್ತಮಿಸಿದ ಬಳಿಕ ಪಾರಣೆಗೆ ತಡ ಮಾಡಬೇಡಿ. ಏಕೆಂದರೆ ಉಪವಾಸದ ನೈಜ ಉದ್ದೇಶ ಅನುಸರಣಾ ಭಾವವನ್ನು ಸೃಷ್ಟಿಸುವುದಾಗಿದೆ. ಹಸಿವು ಬಾಯಾರಿಕೆಯಿಂದ ಇರುವುದಲ್ಲ. ಪ್ರವಾದಿ(ಸ) ಹೇಳುತ್ತಾರೆ: "ಮುಸ್ಲಿಮರು ಪಾರಣೆ ಮಾಡಲಿಕ್ಕೆ ತ್ವರೆ ಮಾಡುವ ತನಕ ಉತ್ತಮ ಸ್ಥಿತಿಯಲ್ಲಿರುವರು". (ಬುಖಾರಿ)

12. ಪಾರಣೆ ಮಾಡುವಾಗ ಈ ದುಆ ಪಠಿಸಿರಿ:

اَللّٰهُمَّ لَكَ صُمْتُ وَعَلٰى رِزْقِكَ اَفْطَرْتُ (مسلم)

"ಅಲ್ಲಾಹುಮ್ಮ ಲಕ ಸುಮ್ತು ವಅಲಾ ರಿಝ್‌ಕಿಕ ಅಫ್ತರ್ತು".

(ಓ ಅಲ್ಲಾಹ್! ನಾನು ನಿನಗಾಗಿಯೇ ಉಪವಾಸ ಆಚರಿಸಿದೆ ಮತ್ತು ನಿನ್ನ ಆಹಾರದಿಂದಲೇ ಪಾರಣೆ ಮಾಡಿದೆ.) (ಮುಸ್ಲಿಮ್)

ಪಾರಣೆ ಆದ ಬಳಿಕ ಹೀಗೆ ಪ್ರಾರ್ಥಿಸಿರಿ:

ذَهَبَ الظَّمَأُ وَابْتَلَّتِ الْعُرُوْقُ وَثَبَتَ الْاَجْرُ اِنْ شَآءَ اللّٰهُ (ابوداؤد)

"ದಹಬಝ್ಝುಮಉ ವಬ್‌ತಲ್ಲತಿಲ್ ಉರೂಕು ವಸಬತಲ್ ಅಜ್ರು ಇನ್‌ಶಾ ಅಲ್ಲಾಹ್".

(ದಾಹ ಶಮನವಾಯಿತು. ನರಗಳು ಚುರುಕಾದವು. ಪುಣ್ಯಫಲವೂ ಅಲ್ಲಾಹನು ಇಚ್ಛಿಸಿದರೆ ಖಂಡಿತ ಸಿಗುವುದು.) (ಅಬೂದಾವೂದ್)

13. ಬೇರೆಯವರ ಮನೆಯಲ್ಲಿ ಪಾರಣೆ ಮಾಡಿದರೆ ಈ ರೀತಿ ಪ್ರಾರ್ಥಿಸಿರಿ:

اَفْطَرَ عِنْدَكُمُ الصَّآئِمُوْنَ وَاَكَلَ طَعَامَكُمُ الْاَبْرَارُ وَصَلَّتْ عَلَيْكُمُ الْمَلَآئِكَةُ (ابوداؤد)

"ಅಫ್ತರ ಇಂದಕುಮುಸ್ಸಾಇಮೂನ ವಅಕಲ ತಆಮಕುಮುಲ್ ಅಬ್‌ರಾರು ವಸಲ್ಲತ್ ಅಲೈಕುಮುಲ್ ಮಲಾಇಕತು".

(ಉಪವಾಸಿಗರು ನಿಮ್ಮಲ್ಲಿ ಉಪವಾಸ ಪಾರಣೆ ಮಾಡುವಂತಾಗಲಿ. ದೇವಚರರು ನಿಮಗಾಗಿ ಅನುಗ್ರಹದ ಪ್ರಾರ್ಥನೆ ಮಾಡುವಂತಾಗಲಿ.) (ಅಬೂದಾವೂದ್)

14. ಉಪವಾಸ ಪಾರಣೆ ಮಾಡಿಸುವ ಪ್ರಯತ್ನ ಮಾಡಿರಿ. ಇದು ಬಹಳ ಪುಣ್ಯಕಾರ್ಯ. ಪ್ರವಾದಿ(ಸ) ಈ ರೀತಿ ಹೇಳಿರುವರು: "ರಮಝಾನಿನಲ್ಲಿ ಒಬ್ಬನ ಉಪವಾಸ ಪಾರಣೆ ಮಾಡಿಸಿದವನಿಗೆ ಅದರ ಪ್ರತಿಫಲ ವಾಗಿ ಅಲ್ಲಾಹನು ಅವನ ಪಾಪಗಳನ್ನು ಕ್ಷಮಿಸುವನು. ಅವನನ್ನು ನರಕಾಗ್ನಿಯಿಂದ ವಿಮೋಚಿಸುವನು. ಪಾರಣೆ ಮಾಡಿಸಿದವನಿಗೆ ಉಪವಾಸಿಗನಷ್ಟೇ ಪುಣ್ಯ ಲಭಿಸುವುದು. ಉಪವಾಸಿಗನ ಪುಣ್ಯದಲ್ಲಿ ಯಾವ ಕೊರತೆಯೂ ಉಂಟಾಗದು." ಜನರು ಹೇಳಿದರು, "ಪ್ರವಾದಿವರ್ಯರೇ! ನಮ್ಮ ಪೈಕಿ ಯಾರ ಬಳಿಯಲ್ಲೂ ಉಪವಾಸಿಗರಿಗೆ ಪಾರಣೆ ಮಾಡಿಸುವ ಮತ್ತು ಊಟದ ವ್ಯವಸ್ಥೆ ಮಾಡುವ ಶಕ್ತಿ ಇಲ್ಲ." ಅದಕ್ಕೆ ಪ್ರವಾದಿ(ಸ) ಈ ರೀತಿ ಉತ್ತರಿಸಿದರು: "ಕೇವಲ ಒಂದು ಖರ್ಜೂರದಿಂದ, ಒಂದಿಷ್ಟು ಹಾಲಿನಿಂದ ಅಥವಾ ನೀರಿನ ಒಂದು ಗುಟುಕಿನಿಂದ ಪಾರಣೆ ಮಾಡಿಸಿದರೂ ಸಾಕು". (ಇಬ್ನು ಖುಝೈಮ)

❖ ❖ ❖ ❖

# ಝಕಾತ್ ಮತ್ತು ದಾನಧರ್ಮ

1. ದೇವ ಮಾರ್ಗದಲ್ಲಿ ವ್ಯಯ ಮಾಡುವುದನ್ನೆಲ್ಲಾ ಕೇವಲ ದೇವ ಸಂಪ್ರೀತಿಗಾಗಿ ವ್ಯಯ ಮಾಡಿರಿ. ನಿಮ್ಮ ಈ ಪುಣ್ಯ ಕರ್ಮವನ್ನು ಇನ್ನಿತರ ಉದ್ದೇಶಗಳ ಮಾಲಿನ್ಯದಿಂದ ವ್ಯರ್ಥಗೊಳಿಸ ದಿರಿ. ನೀವು ಯಾರಿಗೆ ನೀಡಿರುವಿರೋ ಅವರು ನಿಮಗೆ ಕೃತಜ್ಞರಾಗಬೇಕೆಂದು ಬಯಸದಿರಿ. ಅವರ ಉಪಕಾರ ಸ್ಮರಣೆಯನ್ನು ನಿರೀಕ್ಷಿಸದಿರಿ. ಅವರು ನಿಮ್ಮ ದೊಡ್ಡಸ್ತಿಕೆಯನ್ನು ಮನ್ನಿಸ ಬೇಕೆಂದು ಭಾವಿಸದಿರಿ. ಸತ್ಯವಿಶ್ವಾಸಿ ತನ್ನ ಕರ್ಮದ ಪ್ರತಿಫಲವನ್ನು ಕೇವಲ ಅಲ್ಲಾಹನಿಂದ ಅಪೇಕ್ಷಿಸುತ್ತಾನೆ. ಪವಿತ್ರ ಕುರ್‌ಆನ್ ಸತ್ಯವಿಶ್ವಾಸಿಯ ಮನೋಭಾವಗಳನ್ನು ಈ ರೀತಿ ವಿವರಿಸಿದೆ:

إِنَّمَا نُطْعِمُكُمْ لِوَجْهِ اللَّهِ لَا نُرِيدُ مِنكُمْ جَزَاءً وَلَا شُكُورًا ⑨

"ನಾವು ನಿಮಗೆ ಕೇವಲ ದೇವಸಂಪ್ರೀತಿಗಾಗಿ ಉಣಿಸುತ್ತಿದ್ದೇವೆ. ನಿಮ್ಮ ಪ್ರತಿಫಲ ವನ್ನಾಗಲೀ ಕೃತಜ್ಞತೆಯನ್ನಾಗಲೀ ನಾವು ಬಯಸುವುದಿಲ್ಲ." (ಪವಿತ್ರ ಕುರ್‌ಆನ್: **76: 9**)

2. ತೋರಿಕೆ, ಆಡಂಬರ ಮತ್ತು ಡಂಬಾಚಾರದಿಂದ ದೂರವಿರಿ. ಅದು ಅತ್ಯುತ್ತಮ ಕಾರ್ಯವನ್ನು ಮಣ್ಣುಗೂಡಿಸುತ್ತದೆ.

3. ಝಕಾತ್ ಬಹಿರಂಗವಾಗಿ ನೀಡಿರಿ. ಇದರಿಂದ ಇತರರಲ್ಲಿಯೂ ಈ ಕಡ್ಡಾಯ ವಿಧಿಯನ್ನು ಪೂರೈಸುವ ಭಾವನೆ ಉದಿಸೀತು. ಇತರ ದಾನಧರ್ಮಗಳನ್ನು ಮಾತ್ರ ರಹಸ್ಯ ವಾಗಿ ನೀಡಿರಿ. ಇದರಿಂದ ಹೆಚ್ಚೆಚ್ಚು ನಿಷ್ಕಾಪಟ್ಯ ಉಂಟಾಗುವುದು. ಪ್ರಾಮಾಣಿಕವಾಗಿ ಅಲ್ಲಾಹನಿಗೆ ಮಾತ್ರ ಮಾಡಿರುವ ಕರ್ಮವೇ ಆತನ ದೃಷ್ಟಿಯಲ್ಲಿ ಬೆಲೆಯುಳ್ಳದ್ದಾಗಿದೆ. ನಿರ್ಣಾಯಕ ದಿನದ ಭಯಾನಕ ಮೈದಾನದಲ್ಲಿ ಎಲ್ಲೆಲ್ಲೂ ನೆರಳಿಲ್ಲದಾಗ ಬಲಕೈ ನೀಡಿದ್ದು ಎಡಕೈಗೆ ತಿಳಿಯದಷ್ಟು ರಹಸ್ಯವಾಗಿ ದೇವಮಾರ್ಗದಲ್ಲಿ ವ್ಯಯ ಮಾಡಿದವನನ್ನು ದೇವನು ತನ್ನ 'ಅರ್ಶ್'ನ ನೆರಳಲ್ಲಿರಿಸುವನು. (ಬುಖಾರಿ)

4. ದೇವಮಾರ್ಗದಲ್ಲಿ ಖರ್ಚು ಮಾಡಿದ ಬಳಿಕ ಉಪಕಾರ ಭಾರವನ್ನಿಡಬೇಡಿರಿ. ನೀವು ಯಾರಿಗೆ ನೀಡಿರುವಿರೋ ಅವರಿಗೆ ಕಿರುಕುಳವನ್ನು ಕೊಡಬೇಡಿರಿ. ನೀಡಿದ ಬಳಿಕ ಬಡಬಗ್ಗ ರನ್ನು ಕೀಳಾಗಿ ಕಾಣುವುದು, ಅವರ ಸ್ವಾಭಿಮಾನಕ್ಕೆ ಭಂಗ ತರುವುದು, ಅವರ ಮೇಲೆ ಉಪಕಾರ ಭಾರವನ್ನಿರಿಸಿ ಅವರ ಮನನೋಯಿಸುವುದು, ಅವರು ನಿಮಗೆ ಕೃತಜ್ಞರಾಗ ಬೇಕೆಂದೂ ನಿಮ್ಮ ಮುಂದೆ ಬಾಗಿರಬೇಕೆಂದೂ ನಿಮ್ಮ ಮೇಲ್ಮೆಯನ್ನು ಅಂಗೀಕರಿಸ ಬೇಕೆಂದೂ ಬಯಸುವುದು ಅತ್ಯಂತ ಹೇಯ ಕಾರ್ಯ. ಸತ್ಯವಿಶ್ವಾಸಿಯ ಮನವು ಇಂಥ

ಭಾವನೆಗಳಿಂದ ಮುಕ್ತವಾಗಿರಬೇಕು. ಅಲ್ಲಾಹನು ಈ ರೀತಿ ಆದೇಶಿಸಿರುವನು:

يَٰٓأَيُّهَا ٱلَّذِينَ ءَامَنُوا۟ لَا تُبْطِلُوا۟ صَدَقَٰتِكُم بِٱلْمَنِّ وَٱلْأَذَىٰ كَٱلَّذِى يُنفِقُ مَالَهُۥ رِئَآءَ ٱلنَّاسِ

**"ಸತ್ಯವಿಶ್ವಾಸಿಗಳೇ! ಕೇವಲ ತೋರಿಕೆಗೆ ಖರ್ಚು ಮಾಡುವವನಂತೆ ನಿಮ್ಮ ದಾನ ಧರ್ಮಗಳನ್ನು ಉಪಕಾರ ಭಾರವಿರಿಸಿ ಮತ್ತು ಬಡವರ ಮನನೋಯಿಸಿ ವ್ಯರ್ಥಗೊಳಿಸಬೇಡಿರಿ".**

**(ಪವಿತ್ರ ಕುರ್‌ಆನ್, 2:264)**

5. ದೇವ ಮಾರ್ಗದಲ್ಲಿ ನೀಡಿದ ಬಳಿಕ ಅಹಂಕಾರ ತೋರದಿರಿ. ಜನರ ಮೇಲೆ ನಿಮ್ಮ ದೊಡ್ಡಸ್ತಿಕೆಯನ್ನು ಮೆರೆಯಬೇಡಿರಿ. ದೇವನ ಬಳಿ ನನ್ನ ಈ ದಾನ ಸ್ವೀಕೃತವಾಗುವುದೋ ಇಲ್ಲವೋ ಎಂಬುದನ್ನು ಚಿಂತಿಸಿ ಇನ್ನಷ್ಟು ದೈನ್ಯಭಾವ ತಾಳಿರಿ. ಅಲ್ಲಾಹನ ಆದೇಶ ಈ ರೀತಿ ಇದೆ:

وَٱلَّذِينَ يُؤْتُونَ مَآ ءَاتَوا۟ وَّقُلُوبُهُمْ وَجِلَةٌ أَنَّهُمْ إِلَىٰ رَبِّهِمْ رَٰجِعُونَ

**"ಅವರು ನೀಡುವುದನ್ನೆಲ್ಲಾ ದೇವಮಾರ್ಗದಲ್ಲಿ ನೀಡುತ್ತಾರೆ. ಆದರೆ ಅವರ ಹೃದಯಗಳು ಅವರಿಗೆ ತಮ್ಮ ಪ್ರಭುವಿನ ಬಳಿ ಮರಳಲಿಕ್ಕಿದೆ ಎಂಬ ಭಯದಿಂದ ಕಂಪಿಸುತ್ತಿರುತ್ತದೆ".**

**(ಪವಿತ್ರ ಕುರ್‌ಆನ್, 23:60)**

6. ಬಡಬಗ್ಗರೊಂದಿಗೆ ನಯವಿನಯದ ವರ್ತನೆ ಮಾಡಿರಿ. ಅವರನ್ನು ಜರೆಯದಿರಿ. ಅವರ ಮೇಲೆ ದರ್ಪ ಮತ್ತು ದೊಡ್ಡಸ್ತಿಕೆ ತೋರದಿರಿ. ಬೇಡುವವನಿಗೆ ನೀಡಲು ನಿಮ್ಮ ಬಳಿ ಏನೂ ಇಲ್ಲವಾದರೆ ಅತ್ಯಂತ ವಿನಯ ಮತ್ತು ಸದ್ವರ್ತನೆಯೊಂದಿಗೆ ಅವರನ್ನು ಹಿಂದೆ ಕಳುಹಿಸಿರಿ. ಏನನ್ನೂ ಪಡೆಯದೆಯೂ ಆತನು ಮೌನವಾಗಿ ನಿಮಗಾಗಿ ಪ್ರಾರ್ಥಿಸುತ್ತಾ ಹಿಂದಿರುಗುವಂತಾಗಲಿ. ಪವಿತ್ರ ಕುರ್‌ಆನ್ ಹೀಗೆನ್ನುತ್ತದೆ:

وَإِمَّا تُعْرِضَنَّ عَنْهُمُ ٱبْتِغَآءَ رَحْمَةٍ مِّن رَّبِّكَ تَرْجُوهَا فَقُل لَّهُمْ قَوْلًا مَّيْسُورًا ﴿٢٨﴾

**"ನೀವು ನಿರೀಕ್ಷಿಸುತ್ತಿರುವ ಅಲ್ಲಾಹನ ಕೃಪೆಯನ್ನು ಇನ್ನೂ ಅರಸುತ್ತಿರುವ ಕಾರಣ ನಿಮಗೆ ಅವರಿಂದ (ನಿರ್ಗತಿಕರಾದ ಸಂಬಂಧಿಕರಿಂದ, ದರಿದ್ರರಿಂದ ಮತ್ತು ಪ್ರಯಾಣಿಕರಿಂದ) ತಪ್ಪಿಸಿಕೊಳ್ಳಬೇಕೆಂದಾದರೆ, ಅವರಿಗೆ ನಯವಾಗಿ ಉತ್ತರಕೊಡಿರಿ". (ಪವಿತ್ರ ಕುರ್‌ಆನ್, 17:28)**

ಅಲ್ಲಾಹನು ಹೀಗೂ ಆದೇಶಿಸಿರುವನು:

وَأَمَّا ٱلسَّآئِلَ فَلَا تَنْهَرْ ﴿١٠﴾ "ಬೇಡುವವನನ್ನು ಜರೆಯದಿರಿ". **(93:10)**

7. ದೇವಮಾರ್ಗದಲ್ಲಿ ಮನಬಿಚ್ಚಿ ಉತ್ಸಾಹದಿಂದ ಖರ್ಚು ಮಾಡಿರಿ. ಸಂಕುಚಿತತೆಯೊಂದಿಗೆ ಮನನೊಂದು ಒತ್ತಾಯದ ಜುಲ್ಮಾನೆಯೆಂದು ಬಗೆದು ಖರ್ಚು ಮಾಡದಿರಿ.

ಸಂಕುಚಿತತೆ ಹಾಗೂ ಜಿಪುಣತೆಯಂತಹ ಭಾವನೆಗಳಿಂದ ತಮ್ಮ ಹೃದಯವನ್ನು ಮುಕ್ತಗೊಳಿಸಿದವರೇ ಯಶಸ್ವಿಯಾಗುವರು.

8. ಧರ್ಮಬದ್ಧವಾದ ಹಣವನ್ನೇ ದೇವಮಾರ್ಗದಲ್ಲಿ ವ್ಯಯಿಸಿರಿ. ಶುದ್ಧವೂ ಧರ್ಮಬದ್ಧವೂ ಆದ ಧನವನ್ನೇ ಅಲ್ಲಾಹನು ಸ್ವೀಕರಿಸುತ್ತಾನೆ. ದೇವಮಾರ್ಗದಲ್ಲಿ ವ್ಯಯಿಸಬಯಸುವ ಸತ್ಯ ವಿಶ್ವಾಸಿ ತನ್ನ ಸೊತ್ತಿನಲ್ಲಿ ಧರ್ಮಬಾಹಿರ ಅಂಶ ಸೇರಿರುವುದನ್ನು ಸಹಿಸುವುದಾದರೂ ಹೇಗೆ? ಅಲ್ಲಾಹನು ಈ ರೀತಿ ಆದೇಶಿಸಿರುವನು:

يَٰٓأَيُّهَا ٱلَّذِينَ ءَامَنُوٓا۟ أَنفِقُوا۟ مِن طَيِّبَٰتِ مَا كَسَبْتُمْ

"ಸತ್ಯವಿಶ್ವಾಸಿಗಳೇ! ನಿಮ್ಮ ಶುದ್ಧ ಗಳಿಕೆಯನ್ನು (ದೇವ ಮಾರ್ಗದಲ್ಲಿ) ವ್ಯಯಿಸಿರಿ".
(ಪವಿತ್ರ ಕುರ್‌ಆನ್, 2:267)

9. ದೇವ ಮಾರ್ಗದಲ್ಲಿ ಅತ್ಯುತ್ತಮ ಸೊತ್ತನ್ನೇ ಖರ್ಚು ಮಾಡಿರಿ. ಪವಿತ್ರ ಕುರ್‌ಆನಿನಲ್ಲಿ ಹೀಗಿದೆ:

لَن تَنَالُوا۟ ٱلْبِرَّ حَتَّىٰ تُنفِقُوا۟ مِمَّا تُحِبُّونَ

"ನಿಮಗೆ ಅತ್ಯಧಿಕ ಪ್ರಿಯವಾಗಿರುವುದನ್ನು ದೇವ ಮಾರ್ಗದಲ್ಲಿ ವ್ಯಯಿಸುವ ತನಕ ನೀವು ಪುಣ್ಯವನ್ನು ಗಳಿಸಲಾರಿರಿ". (3:92)

ದಾನ ಮಾಡಿದ ಹಣ ಪರಲೋಕದ ಶಾಶ್ವತ ಜೀವನಕ್ಕಾಗಿ ಸಂಗ್ರಹವಾಗುತ್ತದೆ. ತನ್ನ ಶಾಶ್ವತ ಜೀವನಕ್ಕಾಗಿ ಸತ್ಯವಿಶ್ವಾಸಿಯೋರ್ವನು ಕೆಟ್ಟ ಹಾಗೂ ನಿಷ್ಪ್ರಯೋಜಕ ಸೊತ್ತನ್ನು ಕೂಡಿಸುವುದು ಸಾಧ್ಯವೇ?

10. ಝಕಾತ್ ಕಡ್ಡಾಯವಾದ ಬಳಿಕ ತಡ ಮಾಡದೆ ಕೂಡಲೇ ಪಾವತಿ ಮಾಡಲು ಪ್ರಯತ್ನಿಸಿರಿ. ನಿಮ್ಮ ಹೊಣೆಯಲ್ಲಿ ಏನೂ ಉಳಿಯದಂತೆ ಜಾಗರೂಕತೆಯಿಂದ ಲೆಕ್ಕ ಮಾಡಿ ನೀಡಿರಿ.

11. ಝಕಾತನ್ನು ಸಾಮೂಹಿಕವಾಗಿ ನೀಡಿರಿ. ಅದರ ವಿತರಣೆಯ ಸಾಮೂಹಿಕ ವ್ಯವಸ್ಥೆ ಮಾಡಿರಿ. ಇಸ್ಲಾಮೀ ರಾಷ್ಟ್ರವಲ್ಲದ ಕಡೆಗಳಲ್ಲಿ ಮುಸ್ಲಿಮರ ಸಂಘಟನೆಗಳು ಅಥವಾ ಜಮಾಅತ್‌ಗಳು ಬೈತುಲ್‌ಮಾಲ್ ಸ್ಥಾಪಿಸಿ ಅದರ ವ್ಯವಸ್ಥೆ ಮಾಡಬೇಕು.

# ಹಜ್ಜ್

1. ಹಜ್ಜ್ ಮಾಡಲು ವೃಥಾ ವಿಳಂಬ ಮಾಡದಿರಿ. ಈ ನೆಚ್ಚಿನ ಕರ್ತವ್ಯ ನೆರವೇರಿಸು ವಷ್ಟು ಸಂಪನ್ನರಾದ ಕೂಡಲೇ ಶೀಘ್ರಾತಿಶೀಘ್ರ ಹೊರಟು ಬಿಡಿ. ಈ ಕರ್ತವ್ಯವನ್ನು ಒಂದು ವರ್ಷದಿಂದ ಇನ್ನೊಂದು ವರ್ಷಕ್ಕೆ ಮುಂದೂಡುತ್ತಿರಲು ಜೀವನದ ಯಾವ ಭರವಸೆಯೂ ಇಲ್ಲ. ಪವಿತ್ರ ಕುರ್‌ಆನ್ ಈ ರೀತಿ ಹೇಳಿದೆ:

وَلِلّٰهِ عَلَى النَّاسِ حِجُّ الْبَيْتِ مَنِ اسْتَطَاعَ إِلَيْهِ سَبِيْلًا ۚ وَمَنْ كَفَرَ فَإِنَّ اللّٰهَ غَنِيٌّ عَنِ الْعٰلَمِيْنَ ﴿٩٧﴾

"ಆ ಭವನಕ್ಕೆ ತಲಪುವಷ್ಟು ಸಾಮರ್ಥ್ಯ ಇದ್ದವನು ಅದರ ಹಜ್ಜ್ ಮಾಡಬೇಕಾದುದು ಜನರ ಮೇಲೆ ಅಲ್ಲಾಹನ ಹಕ್ಕಾಗಿದೆ. ಯಾವನು ಈ ಆಜ್ಞೆಯ ಪಾಲನೆಯನ್ನು ನಿರಾಕರಿ ಸುತ್ತಾನೋ ಅವನು ಅಲ್ಲಾಹನು ಸರ್ವಲೋಕಗಳ ಜನರಿಂದ ನಿರಪೇಕ್ಷನಾಗಿರುವನೆಂಬುದನ್ನು ತಿಳಿದಿರಲಿ".

(ಪವಿತ್ರ ಕುರ್‌ಆನ್, 3:97)

ದೇವನು ತನ್ನಿಂದ ನಿರಪೇಕ್ಷನಾಗಿರುವನೆಂದು ಹೇಳಿಸಿಕೊಳ್ಳುವುದಕ್ಕಿಂತ ಮಿಗಿಲಾದ ನಾಶ ಮನುಷ್ಯನಿಗೆ ಇನ್ನೇನಿರಬಹುದು.

ಪ್ರವಾದಿ ವಚನದಲ್ಲಿ ಹೀಗೆ ಇದೆ: "ಹಜ್ಜ್‌ನ ಇರಾದೆ ಮಾಡಿದವನು ಹಜ್ಜ್ ನೆರವೇರಿಸು ವುದಕ್ಕೆ ಧಾವತಿ ಪಡಬೇಕು. ಏಕೆಂದರೆ ಅವನು ರೋಗಿಯಾಗಬಹುದು, ಅವನ ಒಂಟೆ ಕಳೆದು ಹೋಗಬಹುದು ಅಥವಾ ಇನ್ನಾವುದಾದರೂ ಅಡಚಣೆ ಬಂದು ಹಜ್ಜ್ ನೆರವೇರಿಸುವುದು ಅಸಾಧ್ಯವಾಗಬಹುದು". (ಇಬ್ನುಮಾಜಃ)

ತಾತ್ಪರ್ಯವೇನೆಂದರೆ ಸಾಮರ್ಥ್ಯ ಹೊಂದಿದ ಮೇಲೆ ವೃಥಾ ಮೀನಮೇಷ ಎಣಿಸ ಬಾರದು. ಈ ಸಂಪನ್ನತೆ ಸವಲತ್ತು ಉಳಿಯುತ್ತದೋ ಇಲ್ಲವೋ ಎಂದು ಹೇಳಲಸಾಧ್ಯ. ಇದರಿಂದ ಮನುಷ್ಯನು ಹಜ್ಜ್ ಮಾಡುವ ಸೌಭಾಗ್ಯದಿಂದ ಜೀವನ ಪರ್ಯಂತ ವಂಚಿತ ನಾಗಬಹುದು. ಅಲ್ಲಾಹನು ಈ ಹತಭಾಗ್ಯತನದಿಂದ ಎಲ್ಲ ಸತ್ಯವಿಶ್ವಾಸಿಗಳನ್ನೂ ರಕ್ಷಿಸಲಿ. ಪ್ರವಾದಿ(ಸ) ಜನರನ್ನು ಅತ್ಯಂತ ಕಠಿಣವಾಗಿ ಎಚ್ಚರಿಸಿದ್ದಾರೆ. ಹದೀಸ್‌ನಲ್ಲಿ ಈ ರೀತಿ ಇದೆ:

"ಅನಾರೋಗ್ಯದ ನಿಮಿತ್ತ ಅಥವಾ ಇತರ ನೈಜ ಅಡಚಣೆಯ ಕಾರಣದಿಂದ ಅಥವಾ ಅಕ್ರಮಿಯಾದ ಅರಸನೊಬ್ಬ ತಡೆದಿರುವುದರಿಂದ ಹೊರತು ಇನ್ನಾವ ಕಾರಣಕ್ಕೂ ಒಬ್ಬನು

ಹಜ್ಜ್ ಮಾಡದೆ ಇದ್ದರೆ ಅವನು ಯಹೂದಿ ಆಗಿ ಸತ್ತರೂ ಕ್ರೈಸ್ತನಾಗಿ ಸತ್ತರೂ ಅಲ್ಲಾಹನಿಗದರ ಪರಿವೆ ಇಲ್ಲ". (ಸುನನ್ ಕುಬ್ರಾ, ಭಾಗ-4)

"ಸಾಮರ್ಥ್ಯವಿದ್ದರೂ ಹಜ್ಜ್ ನಿರ್ವಹಿಸದವರ ಮೇಲೆ ಜಿಝಿಯಾ (ಮುಸ್ಲಿಮೇತರ ಪ್ರಜೆಗಳ ಮೇಲೆ ವಿಧಿಸುವ ರಕ್ಷಣಾಕರ) ಹೇರಬೇಕೆಂದು ನನಗನಿಸುತ್ತದೆ. ಅವರು ಮುಸ್ಲಿಮರಲ್ಲ" ಎಂದು ಹ. ಉಮರ್(ರ) ಹೇಳಿರುವರು. (ಅಲ್ ಮುನ್ತಕಾ)

2. ದೇವಗೃಹದ ಸಂದರ್ಶನ ಮತ್ತು ಹಜ್ಜ್ ಕೇವಲ ದೇವಸಂಪ್ರೀತಿಗಾಗಿ ಮಾಡಿರಿ. ಇನ್ನಾವುದಾದರೂ ಲೌಕಿಕ ಉದ್ದೇಶದಿಂದ ಆ ಪಾವನ ಉದ್ದೇಶವನ್ನು ಮಲಿನಗೊಳಿಸದಿರಿ. ಪವಿತ್ರ ಕುರ್‌ಆನ್ ಹೀಗೆ ಹೇಳುತ್ತದೆ:

وَلَآ آٰمِّيْنَ الْبَيْتَ الْحَرَامَ يَبْتَغُوْنَ فَضْلًا مِّنْ رَّبِّهِمْ وَرِضْوَانًا

"ತಮ್ಮ ಪ್ರಭುವಿನ ಅನುಗ್ರಹ ಮತ್ತು ಆತನ ಸಂಪ್ರೀತಿಯನ್ನು ಅರಸುತ್ತಾ ಗೌರವಾನ್ವಿತ ಭವನದತ್ತ ಹೋಗುವವರನ್ನು ಅಣಕಿಸದಿರಿ". (ಪವಿತ್ರ ಕುರ್‌ಆನ್, 5:2)

وَاَتِمُّوا الْحَجَّ وَالْعُمْرَةَ لِلّٰهِ

"ಹಜ್ಜ್ ಮತ್ತು ಉಮ್ರಾವನ್ನು ಕೇವಲ ದೇವ ಸಂಪ್ರೀತಿಗಾಗಿ ನೆರವೇರಿಸಿರಿ".

(ಪವಿತ್ರ ಕುರ್‌ಆನ್, 2:196)

ಪ್ರವಾದಿ(ಸ) ಈ ರೀತಿ ಹೇಳಿರುವರು: "ಹಜ್ಜ್ ಮಬ್ರೂರ್‌ನ* ಪ್ರತಿಫಲವು ಸ್ವರ್ಗಕ್ಕಿಂತ ಕಡಿಮೆ ಇಲ್ಲ" (ಮುಸ್ಲಿಮ್)

3. ಹಜ್ಜ್‌ಗೆ ಹೋಗುವ ಬಗ್ಗೆ ಯಾರಲ್ಲೂ ಪ್ರಸ್ತಾಪಿಸಬೇಡಿರಿ. ಸದ್ದುಗದ್ದಲವಿಲ್ಲದೆ ಹೋಗಿ ಬನ್ನಿ. ತೋರಿಕೆ ಮತ್ತು ಡಂಬಾಚಾರದ ಎಲ್ಲ ರೀತಿ ರಿವಾಜುಗಳಿಂದ ಪೂರ್ಣ ವಾಗಿ ದೂರವಿರಿ. ಪ್ರತಿಯೊಂದು ಸತ್ಕರ್ಮವೂ ಸ್ವೀಕೃತವಾಗಬೇಕಾದರೆ ಅದು ಕೇವಲ ದೇವ ಸಂಪ್ರೀತಿಗಾಗಿ ಮಾಡಿದ್ದಾಗಿರಬೇಕು. ಇತರ ಯಾವುದೇ ಉದ್ದೇಶದ ಲವಲೇಶವೂ ಇರಬಾರದು. ಹಜ್ಜ್‌ನ ವಿಷಯದಲ್ಲಿ ಈ ಬಗ್ಗೆ ಇನ್ನಷ್ಟು ಹೆಚ್ಚು ಗಮನವಿರಿಸಬೇಕು. ಏಕೆಂದರೆ ಅದು ಆಧ್ಯಾತ್ಮಿಕ ಕ್ರಾಂತಿ, ಆತ್ಮಸಂಸ್ಕರಣೆ ಮತ್ತು ಚಾರಿತ್ರ್ಯ ನಿರ್ಮಾಣದ ಕೊನೆಯ ಉಪಾಧಿಯಾಗಿದೆ. ಈ ಸಮಗ್ರ ಚಿಕಿತ್ಸೆಯಿಂದಲೂ ಗುಣಮುಖನಾಗದ ಆಧ್ಯಾತ್ಮಿಕ ರೋಗಿ ಬೇರೆ ಯಾವ ಚಿಕಿತ್ಸೆಯಿಂದಲೂ ಗುಣಮುಖನಾಗುವ ಭರವಸೆ ಇಲ್ಲ.

4. ಹಜ್ಜ್‌ಗೆ ಹೋಗುವ ಸಾಮರ್ಥ್ಯವಿಲ್ಲದಿದ್ದರೂ ಅಲ್ಲಾಹನ ಭವನವನ್ನು ಕಾಣುವ ಮತ್ತು ಪ್ರವಾದಿವರ್ಯರ(ಸ) ಗೋರಿಯ ಮುಂದೆ ಸಲಾಮ್ ಹೇಳುವ ಬಯಕೆಯನ್ನು ಸದಾ ಪೋಷಿಸಿರಿ. ಹಜ್ಜ್‌ನಿಂದ ಉಂಟಾಗುವ ಹ. ಇಬ್ರಾಹೀಮರ(ಅ) ತ್ಯಾಗ ಮನೋಭಾವವನ್ನು

* ಅರ್ಥಾತ್ ಕೇವಲ ದೇವ ಸಂಪ್ರೀತಿಗಾಗಿ ಎಲ್ಲ ನಿಯಮ ನಿಬಂದನೆಗಳನ್ನು ಪಾಲಿಸಿ ನೆರವೇರಿಸಿದಂತಹ ಹಜ್ಜ್.

ಬೆಳೆಸಿರಿ. ಈ ಭಾವನೆಗಳಿಂದ ಮುಕ್ತವಾದ ಹೃದಯವು ಸತ್ಯ ವಿಶ್ವಾಸಿಯ ಹೃದಯವಲ್ಲ. ಅದೊಂದು ನೀರಸ ಭಗ್ನಾವಶೇಷವಾಗಿರುವುದು.

ಪ್ರವಾದಿ(ಸ) ಹೀಗೆ ಹೇಳಿರುವರು: "ಹಜ್ಜ್ ಮತ್ತು ಉಮ್ರಕ್ಕಾಗಿ ಹೋಗುವವರು ಅಲ್ಲಾಹನ ವಿಶಿಷ್ಟಾತಿಥಿಗಳು. ಅವರು ಅಲ್ಲಾಹನಲ್ಲಿ ಪ್ರಾರ್ಥಿಸಿದರೆ ಅಲ್ಲಾಹನು ಸ್ವೀಕರಿಸುತ್ತಾನೆ. ಅವರು ಪಾಪ ವಿಮೋಚನೆಗಾಗಿ ಪ್ರಾರ್ಥಿಸಿದರೆ ಅವರನ್ನು ಕ್ಷಮಿಸುತ್ತಾನೆ". (ತಬ್ರಾನಿ)

5. ಈ ಪಾವನ ಯಾತ್ರೆಯ ವೇಳೆ ದೇವಾಜ್ಞೆಗಳ ಉಲ್ಲಂಘನೆಯಾಗದಂತೆ ಜಾಗ್ರತೆ ವಹಿಸಿರಿ. ಅಲ್ಲಾಹನ ಭವನದ ಹಜ್ಜ್‌ನ ಎಲ್ಲ ಅನುಗ್ರಹಗಳಿಂದ ಹೆಚ್ಚೆಚ್ಚು ಪ್ರಯೋಜನ ಪಡೆಯಲು ಪ್ರಯತ್ನಿಸಿರಿ. ಇದು ಸದಾ ಅಲ್ಲಾಹನನ್ನು ಭಯಪಡುವವನಿಗೆ ಹಾಗೂ ಆತನ ಸಂಪ್ರೀತಿ ಗಳಿಸುವ ಕಳಕಳಿ ಉಳ್ಳವನಿಗೆ ಮಾತ್ರ ಸಾಧ್ಯ. ಪವಿತ್ರ ಕುರ್‌ಆನ್ ಈ ರೀತಿ ಆಜ್ಞಾಪಿಸಿದೆ:

وَتَزَوَّدُوْا فَاِنَّ خَيْرَ الزَّادِ التَّقْوٰى۔

"ಹಜ್ಜ್ ಯಾತ್ರೆಗಾಗಿ ದಾರಿವೆಚ್ಚವನ್ನು ಒಯ್ಯಿರಿ. ಅತ್ಯುತ್ತಮ ದಾರಿವೆಚ್ಚ ದೇವನಿಷ್ಠೆಯಾಗಿದೆ". (ಪವಿತ್ರ ಕುರ್‌ಆನ್, 2:197)

6. ಹಜ್ಜ್‌ನ ಸಂಕಲ್ಪ ಮಾಡುತ್ತಲೇ ಅದಕ್ಕಾಗಿ ಮಾನಸಿಕ ಏಕಾಗ್ರತೆ ಮತ್ತು ಸಿದ್ಧತೆ ಆರಂಭಿಸಿರಿ. ಹಜ್ಜ್‌ನ ಇತಿಹಾಸವನ್ನು ಜ್ಞಾಪಿಸಿರಿ. ಹಜ್ಜ್‌ನ ಒಂದೊಂದು ವಿಧಿಯ ವಾಸ್ತವಿಕತೆಯ ಬಗೆಗೂ ಚಿಂತನೆ ಮಾಡಿರಿ. ಹಜ್ಜ್‌ನ ಈ ವಿಧಿಗಳ ಮೂಲಕ ದೇವ ಧರ್ಮವು ಸತ್ಯವಿಶ್ವಾಸಿಯಲ್ಲಿ ಬೆಳೆಸ ಬಯಸುವಂತಹ ಮನೋಭಾವನೆಯನ್ನು ಅರ್ಥೈಸಲು ಪ್ರಯತ್ನಿಸಿರಿ. ಓರ್ವ ಪ್ರಜ್ಞಾವಂತ ಸತ್ಯವಿಶ್ವಾಸಿಯಂತೆ ಪೂರ್ಣ ಪ್ರಜ್ಞೆಯೊಂದಿಗೆ ಹಜ್ಜ್‌ನ ವಿಧಿಗಳನ್ನು ನೆರವೇರಿಸಿರಿ ಹಾಗೂ ಅವುಗಳ ವಾಸ್ತವಿಕತೆಗಳನ್ನು ಮೈಗೂಡಿಸಲು ಹಾಗೂ ಅವುಗಳಿಗನುಸಾರವಾಗಿ ಜೀವನದಲ್ಲಿ ಸತ್ಕ್ರಾಂತಿಯನ್ನು ತರಲು ಪ್ರಯತ್ನಿಸಿರಿ. ಈ ಉದ್ದೇಶಕ್ಕಾಗಿಯೇ ಅಲ್ಲಾಹನು ಹಜ್ಜನ್ನು ಸತ್ಯವಿಶ್ವಾಸಿಗಳ ಮೇಲೆ ಕಡ್ಡಾಯಗೊಳಿಸಿರುತ್ತಾನೆ. ಅಲ್ಲಾಹನು ಈ ರೀತಿ ಆದೇಶಿಸಿರುವನು:

وَاذْكُرُوْهُ كَمَا هَدٰىكُمْ ۚ وَاِنْ كُنْتُمْ مِّنْ قَبْلِهٖ لَمِنَ الضَّآلِّيْنَ ﴿١٩٨﴾

"ಅಲ್ಲಾಹನನ್ನು ಸ್ಮರಿಸಿರಿ. ಆತನು ನಿಮಗೆ ಮಾರ್ಗದರ್ಶನ ಮಾಡಿದ ರೀತಿಯಲ್ಲೇ ಸ್ಮರಿಸಿರಿ. ಇದಕ್ಕೆ ಮುಂಚೆ ನೀವು ಪಥಭ್ರಷ್ಟರಾಗಿದ್ದಿರಿ". (ಪವಿತ್ರ ಕುರ್‌ಆನ್, 2:198)

ಈ ಉದ್ದೇಶಕ್ಕಾಗಿ ಪವಿತ್ರ ಕುರ್‌ಆನಿನಲ್ಲಿ ಹಜ್ಜ್‌ನ ಪ್ರಸ್ತಾಪವಿರುವ ಅದರ ವಾಸ್ತವಿಕತೆ ಮತ್ತು ಮಹತ್ವವನ್ನು ವಿವರಿಸುವ ಭಾಗಗಳನ್ನು ಗಹನವಾಗಿ ಅಭ್ಯಸಿಸಿರಿ. ಪ್ರವಾದಿವರ್ಯರ(ಸ) ವಚನಗಳ ಪೈಕಿ ಹಜ್ಜ್‌ನ ಇತಿಹಾಸ ಮತ್ತು ಹಜ್ಜ್ ವಿಧಿಗಳ ವಾಸ್ತವಿಕತೆಯ ಪ್ರಸ್ತಾಪವಿರುವ ವಚನಗಳನ್ನೂ ಪಠಿಸಿರಿ.

7. ಹಜ್ಜ್‌ನ ವೇಳೆ ಮಾಡಬೇಕಾದ ದುಆಗಳು ಹದೀಸ್‌ಗಳಲ್ಲಿ ವರದಿಯಾಗಿವೆ. ಅವುಗಳನ್ನು ಕಂಠಪಾಠ ಮಾಡಿರಿ. ಪ್ರವಾದಿವರ್ಯರು(ಸ) ಅಲ್ಲಾಹನಲ್ಲಿ ಮಾಡಿರುವ ಪ್ರಾರ್ಥನೆ ಗಳನ್ನು ಅದೇ ಭಾಷೆಯಲ್ಲಿ ಮಾಡಿರಿ.

8. ನಿಮ್ಮ ಹಜ್ಜನ್ನು ಸರಿಯಾಗಿ ಕಾಪಾಡಿರಿ. ನಿಮ್ಮ ಹಜ್ಜ್ ಲೋಕಾರಾಧಕರ ಹಜ್ಜ್ ನಂತೆ ಆಗದಿರಲಿ. ಅವರಿಗೆ ಪರಲೋಕದಲ್ಲಿ ಯಾವ ಪಾಲೂ ಇಲ್ಲ. ಏಕೆಂದರೆ ಅವರು ಪರಲೋಕದ ಬಗ್ಗೆ ಅಶ್ರದ್ಧರಾಗಿ ಎಲ್ಲವನ್ನೂ ಈ ಲೋಕದಲ್ಲೇ ಬಯಸುತ್ತಾರೆ. ಅವರು ಕಅಬಾ ತಲಪಿದಾಗ ಅವರ ಪ್ರಾರ್ಥನೆ ಈ ರೀತಿ ಇರುತ್ತದೆ:

رَبَّنَآ اٰتِنَا فِى الدُّنْيَا وَمَا لَهٗ فِى الْاٰخِرَةِ مِنْ خَلَاقٍ ﴿٢٠٠﴾

"ಓ ನಮ್ಮ ಪ್ರಭೂ, ನಮಗೆ ನೀಡುವುದೆಲ್ಲವನ್ನು ಇಹಲೋಕದಲ್ಲಿಯೇ ನೀಡು. ಇಂಥವ(ಲೋಕಾರಾಧಕ)ರಿಗೆ ಪರಲೋಕದಲ್ಲಿ ಯಾವ ಪಾಲೂ ಇಲ್ಲ".

(ಪವಿತ್ರ ಕುರ್‌ಆನ್, 2:200)

ನೀವು ಹಜ್ಜ್‌ನ ವೇಳೆ ಉಭಯ ಲೋಕಗಳ ವಿಜಯಕ್ಕಾಗಿ ಪ್ರಾರ್ಥಿಸಿರಿ. "ನಾನು ನಿನ್ನ ಸನ್ನಿಧಿಗೆ ಬಂದಿರುವುದು ನಿನ್ನಲ್ಲಿ ಉಭಯ ಲೋಕಗಳ ಯಶಸ್ಸನ್ನು ಕೋರಲಿಕ್ಕಾಗಿ" ಎನ್ನಿರಿ. ಪವಿತ್ರ ಕುರ್‌ಆನಿನ ಈ ಪ್ರಾರ್ಥನೆಯನ್ನು ಮಾಡುತ್ತಲಿರಿ.

رَبَّنَآ اٰتِنَا فِى الدُّنْيَا حَسَنَةً وَّفِى الْاٰخِرَةِ حَسَنَةً وَّقِنَا عَذَابَ النَّارِ ﴿٢٠١﴾

"ರಬ್ಬನಾ ಆತಿನಾ ಫಿದ್ದುನ್‌ಯಾ ಹಸನತನ್ ವಫಿಲ್ ಆಖಿರತಿ ಹಸನತನ್ ವಕಿನಾ ಅದಾಬನ್ನಾರ್".

(ಓ ನಮ್ಮ ಪ್ರಭೂ! ನಮಗೆ ಇಹಲೋಕದಲ್ಲೂ ಒಳಿತನ್ನು ದಯಪಾಲಿಸು. ಪರಲೋಕದಲ್ಲೂ ಒಳಿತನ್ನು ದಯಪಾಲಿಸು ಹಾಗೂ ನಮ್ಮನ್ನು ನರಕಾಗ್ನಿಯಿಂದ ರಕ್ಷಿಸು.)

(ಪವಿತ್ರ ಕುರ್‌ಆನ್, 2:201)

9. ಹಜ್ಜ್‌ನ ವೇಳೆ ದೇವಾಜ್ಞೋಲ್ಲಂಘನೆಯಿಂದ ದೂರವಿರುವ ಬಗ್ಗೆ ಅತ್ಯಧಿಕ ಜಾಗರೂಕತೆ ವಹಿಸಿರಿ. ಹಜ್ಜ್ ಯಾತ್ರೆಯು ದೇವಭವನದ ಯಾತ್ರೆ. ನೀವು ಹೋಗುತ್ತಿರುವುದು ಅಲ್ಲಾಹನ ಅತಿಥಿಯಾಗಿ. ಆತನೊಂದಿಗೆ ದಾಸ್ಯದ ಕರಾರನ್ನು ನವೀಕರಿಸಲು ಹೋಗುತ್ತಿದ್ದೀರಿ. 'ಹಜರುಲ್ ಅಸ್ವದ್'ನ ಮೇಲೆ ಕೈ ಇಟ್ಟು ನೀವು ಮಾಡುವ ಪ್ರಮಾಣ ವಚನವು ಯಥಾರ್ಥದಲ್ಲಿ ದೇವಹಸ್ತದಲ್ಲಿ ಮಾಡುವ ಪ್ರಮಾಣ ವಚನವಾಗಿದೆ. ಅದನ್ನು ಚುಂಬಿಸುವ ಮೂಲಕ ದೇವನ ಆಸ್ಥಾನವನ್ನು ಚುಂಬಿಸುತ್ತೀರಿ. ಆಗಾಗ ತಕ್ಬೀರ್ ಧ್ವನಿಯನ್ನು ಮೊಳಗಿಸುತ್ತಾ ನಿಮ್ಮ ನಿಷ್ಠೆಯನ್ನು ಪ್ರಕಟಪಡಿಸುತ್ತಿರಿ. ಇಂತಹ ವಾತಾವರಣದಲ್ಲಿ ಅತ್ಯಂತ ಕ್ಷುಲ್ಲಕ ಆಜ್ಞೋಲ್ಲಂಘನೆಯೂ ಎಷ್ಟು ಗುರುತರವಾಗುತ್ತದೆಂಬುದರ ಬಗ್ಗೆ ಚಿಂತಿಸಿ ನೋಡಿ! ದೇವನು ತನ್ನ ಆಸ್ಥಾನದಲ್ಲಿ ಹಾಜರಾಗುವವರನ್ನು ಈ ಬಗ್ಗೆ ಎಚ್ಚರಿಸಿರುವನು. (ಹಜ್ಜ್‌ನ

ವೇಳೆ) وَلَا فُسُوقَ "ದೇವಾಜ್ಞೋಲ್ಲಂಘನೆಯಾಗಬಾರದು". (ಪವಿತ್ರ ಕುರ್‌ಆನ್, 2:197)

10. ಹಜ್ಜ್ ಯಾತ್ರೆಯಾದ್ಯಂತ ಯಾವುದೇ ರೀತಿಯ ಜಗಳದ ಮಾತಿನಿಂದ ಸಂಪೂರ್ಣ ದೂರವಿರಿ. ಪ್ರಯಾಣದ ವೇಳೆ ಅಲ್ಲಲ್ಲಿ ಜನಸಂದಣಿ, ನೂಕು ನುಗ್ಗಲು ಇರುತ್ತದೆ. ಆಗ ತೊಂದರೆಗಳಾಗುತ್ತವೆ. ಹೆಜ್ಜೆ ಹೆಜ್ಜೆಗೂ ವಿಭಿನ್ನ ಹಿತಾಸಕ್ತಿಗಳ ಮಧ್ಯೆ ಸಂಘರ್ಷವೇರ್ಪಡುತ್ತದೆ. ಅಲ್ಲಲ್ಲಿ ನಿಮ್ಮ ಭಾವನೆಗಳಿಗೆ ಪ್ರಹಾರವಾಗಬಹುದು. ನಿಮ್ಮ ಮನ ನೋಯಬಹುದು. ಅಂತಹ ಸಂದರ್ಭಗಳಲ್ಲೆಲ್ಲಾ ಅಲ್ಲಾಹನ ಅತಿಥಿಯಾದ ನೀವು ವಿಶಾಲ ಮನೋಭಾವ ಮತ್ತು ತ್ಯಾಗ ಮನೋಭಾವವನ್ನು ಪ್ರದರ್ಶಿಸಬೇಕು. ಪ್ರತಿಯೊಬ್ಬರೊಂದಿಗೂ ಕ್ಷಮೆ ಮತ್ತು ಔದಾರ್ಯ ದಿಂದ ವರ್ತಿಸಬೇಕು. ನಿಮ್ಮ ನೌಕರನನ್ನೂ ಜರೆಯಬಾರದು. ಅಲ್ಲಾಹನು ಈ ರೀತಿ ಆದೇಶಿಸಿ ರುವನು: (ಹಜ್ಜ್‌ನ ವೇಳೆ)-وَلَا جِدَالَ فِي الْحَجِّ "ಜಗಳದ ಮಾತೂ ಆಗಬಾರದು".

(ಪವಿತ್ರ ಕುರ್‌ಆನ್, 2: 197)

11. ಹಜ್ಜ್ ಯಾತ್ರೆಯ ವೇಳೆ ವಿಷಯಾಸಕ್ತಿಗೆ ಸಂಬಂಧಿಸಿದ ಮಾತುಗಳಿಂದ ಪೂರ್ಣ ವಾಗಿ ದೂರವಿರಿ. ಪ್ರಯಾಣದ ವೇಳೆ ಕಾಮವಿಕಾರ ಕೆರಳುವ ಮತ್ತು ದೃಷ್ಟಿ ಅನಿಯಂತ್ರಿತವಾಗುವ ಸಾಧ್ಯತೆಗಳು ಹೆಚ್ಚಾಗುತ್ತವೆ. ಆದ್ದರಿಂದ ನೀವೂ ಹೆಚ್ಚು ಜಾಗರೂಕರಾಗಿರಿ. ಸ್ವೇಚ್ಛೆ ಮತ್ತು ಶೈತಾನನ ತಂತ್ರಗಳಿಗೆ ಬಲಿ ಬೀಳದಿರಲು ಹೆಚ್ಚೆಚ್ಚು ಪ್ರಯತ್ನಿಸಿರಿ. ನಿಮ್ಮ ಬಾಳ ಸಂಗಾತಿ ಜೊತೆಗಿದ್ದರೆ ಅವರೊಂದಿಗೂ ಲೈಂಗಿಕ ಸಂಬಂಧವನ್ನು ಪೂರ್ಣ ವಾಗಿ ತೊರೆಯಿರಿ. ಮಾತ್ರವಲ್ಲ ವಿಷಯಾಸಕ್ತಿ ಕೆರಳಿಸುವ ಮಾತುಕತೆಯನ್ನೂ ವರ್ಜಿಸಿರಿ. ಅಲ್ಲಾಹನು ಈ ಬಗ್ಗೆ ಹೀಗೆ ಎಚ್ಚರಿಸಿ ರುವನು:

اَلْحَجُّ اَشْهُرٌ مَّعْلُوْمٰتٌ ۚ فَمَنْ فَرَضَ فِيْهِنَّ الْحَجَّ فَلَا رَفَثَ وَلَا فُسُوْقَ

**"ಹಜ್ಜ್‌ನ ತಿಂಗಳುಗಳು ಜನಜನಿತವಿದೆ. ಈ ನಿರ್ದಿಷ್ಟ ತಿಂಗಳುಗಳಲ್ಲಿ ಯಾವನಾದರೂ ಹಜ್ಜ್‌ನ ಸಂಕಲ್ಪ ಮಾಡಿದರೆ ಹಜ್ಜ್‌ನ ವೇಳೆ ವಿಷಯಾಸಕ್ತಿ ಮತ್ತು ದುರಾಚಾರದ ಮಾತುಕತೆ ಆಗಬಾರದೆಂದು ಆತನು ತಿಳಿದಿರಲಿ".** (ಪವಿತ್ರ ಕುರ್‌ಆನ್, 2:197)

ಪ್ರವಾದಿ(ಸ) ಈ ರೀತಿ ಹೇಳಿರುವರು: "ಈ ದೇವಗೃಹದ ದರ್ಶನಕ್ಕಾಗಿ ಇಲ್ಲಿ ಬರುವವನು ಅಶ್ಲೀಲ ಹಾಗೂ ವಿಷಯಾಸಕ್ತಿಯ ಮಾತುಗಳಿಂದ ದೂರವಿದ್ದರೆ ಹಾಗೂ ದೇವಾಜ್ಞೋಲ್ಲಂಘನೆ ಮಾಡದಿದ್ದರೆ ತಾಯಿಯ ಉದರದಿಂದ ಬರುವಾಗ ಪರಿಶುದ್ಧನಾಗಿದ್ದಂತೆ ಪರಿಶುದ್ಧನಾಗಿ ಮರಳುತ್ತಾನೆ". (ಬುಖಾರಿ, ಮುಸ್ಲಿಮ್)

12. 'ಶಆಇರುಲ್ಲಾಹ್' (ಅಲ್ಲಾಹನ ಚಿಹ್ನೆಗಳು)ಗಳನ್ನು ಸರಿಯಾಗಿ ಗೌರವಿಸಿರಿ. ಆಧ್ಯಾತ್ಮಿಕ ಮತ್ತು ದಾರ್ಶನಿಕ ಸತ್ಯಗಳನ್ನು ಮನದಟ್ಟು ಮಾಡಿಕೊಡಲಿಕ್ಕಾಗಿ ಅಲ್ಲಾಹನು ಕೆಲವು ವಸ್ತುಗಳನ್ನು ಚಿಹ್ನೆಗಳನ್ನಾಗಿ ಮಾಡಿರುವನು. ಅದನ್ನು ಶಈರ (ಚಿಹ್ನೆ) ಎನ್ನುತ್ತಾನೆ. 'ಶಆಇರ್' ಎಂಬುದು ಅದರ ಬಹುವಚನ. ಹಜ್ಜ್‌ಗೆ ಸಂಬಂಧಪಟ್ಟ ಎಲ್ಲ ವಸ್ತುಗಳೂ ಒಂದಲ್ಲೊಂದು ವಾಸ್ತವಿಕತೆಯನ್ನು ಮನದಟ್ಟು ಮಾಡಿಕೊಡಲು ಚಿಹ್ನೆಯ ರೂಪದಲ್ಲಿ

ಇರಿಸಲ್ಪಟ್ಟಿವೆ. ಅವುಗಳನ್ನು ಗೌರವಿಸಿರಿ. ಪವಿತ್ರ ಕುರ್‌ಆನಿನಲ್ಲಿ ಅಲ್ಲಾಹನು ಈ ರೀತಿ ಆದೇಶಿಸಿರುವನು:

يَآيُّهَا الَّذِيْنَ اٰمَنُوْا لَا تُحِلُّوْا شَعَآئِرَ اللّٰهِ وَلَا الشَّهْرَ الْحَرَامَ وَلَا الْهَدْيَ وَلَا

الْقَلَآئِدَ وَلَآ اٰمِّيْنَ الْبَيْتَ الْحَرَامَ يَبْتَغُوْنَ فَضْلًا مِّنْ رَّبِّهِمْ وَرِضْوَانًا

"ಸತ್ಯವಿಶ್ವಾಸಿಗಳೇ! ಅಲ್ಲಾಹನ ಈ ಸಂಕೇತಗಳಿಗೆ ಅಗೌರವ ತೋರದಿರಿ. ಈ ಪಾವನ ತಿಂಗಳುಗಳಿಗೂ ಅನಾದರ ತೋರದಿರಿ. ಬಲಿಯ ಮೃಗಗಳ ಮೇಲೂ ಕೈ ಮಾಡದಿರಿ. ದೇವನಿಗೆ ಹರಕೆಯಾದ ಸಂಕೇತ ರೂಪದಲ್ಲಿ ಕೊರಳಲ್ಲಿ ಪಟ್ಟಿ ಇರುವ ಪ್ರಾಣಿಗಳನ್ನೂ ಆಕ್ರಮಿಸದಿರಿ. ತಮ್ಮ ಪ್ರಭುವಿನ ಅನುಗ್ರಹ ಮತ್ತು ಸಂಪ್ರೀತಿಯನ್ನು ಅರಸುತ್ತಾ ಆದರಣೀಯ ಭವನ(ಕಅಬಾ)ದತ್ತ ಹೋಗುವವರ ಮಾರ್ಗದಲ್ಲೂ ಅಡಚಣೆಯುಂಟು ಮಾಡದಿರಿ".

(ಪವಿತ್ರ ಕುರ್‌ಆನ್, 5:2)

ذٰلِكَ وَمَنْ يُّعَظِّمْ شَعَآئِرَ اللّٰهِ فَاِنَّهَا مِنْ تَقْوَى الْقُلُوْبِ ﴿٣٢﴾

"ಇನ್ನು ಯಾರಾದರೂ ಅಲ್ಲಾಹನ ಈ ಸಂಕೇತಗಳನ್ನು ಗೌರವಿಸಿದರೆ ಅದು ಹೃದಯಗಳ ಭಯಭಕ್ತಿಯ ವಿಷಯವಾಗಿದೆ". (ಪವಿತ್ರ ಕುರ್‌ಆನ್, 22: 32)

13. ಹಜ್ಜ್ ವಿಧಿಗಳನ್ನು ನೆರವೇರಿಸುವಾಗ ಅತ್ಯಂತ ದೈನ್ಯ ಭಾವ ಪ್ರಕಟಿಸಿರಿ. ದಾಸನ ದೈನ್ಯ ಭಾವವೇ ದೇವನಿಗೆ ಅತ್ಯಂತ ಪ್ರಿಯವಾದುದು. ಓರ್ವರು ಪ್ರವಾದಿವರ್ಯರಲ್ಲಿ(ಸ) 'ಹಾಜಿ ಯಾರು?' ಎಂದು ಪ್ರಶ್ನಿಸಿದರು. 'ಕೂದಲು ಅಸ್ತವ್ಯಸ್ತವಾಗಿದ್ದು ಧೂಳಿನಿಂದ ಆವೃತ್ತವಾದವನು' ಎಂದು ಪ್ರವಾದಿ(ಸ) ಉತ್ತರಿಸಿದರು.

14. 'ಇಹ್ರಾಮ್'ನ ಬಟ್ಟೆ ಧರಿಸಿದ ಬಳಿಕ ಎಲ್ಲ ನಮಾಝ್‌ನ ಬಳಿಕ, ಎತ್ತರಕ್ಕೆ ಏರುವಾಗ, ಇಳಿಜಾರು ಇಳಿಯುವಾಗ, ಯಾತ್ರಾ ತಂಡಗಳನ್ನು ಭೇಟಿಯಾದಾಗ, ಬೆಳಿಗ್ಗೆ ನಿದ್ರೆಯಿಂದ ಎಚ್ಚೆತ್ತಾಗ ಉಚ್ಚ ಸ್ವರದಲ್ಲಿ 'ತಲ್ಬಿಯ' ಹೇಳಿರಿ. 'ತಲ್ಬಿಯ' ಈ ರೀತಿ ಇದೆ.

لَبَّيْكَ اَللّٰهُمَّ لَبَّيْكَ لَبَّيْكَ لَا شَرِيْكَ لَكَ لَبَّيْكَ اِنَّ الْحَمْدَ وَالنِّعْمَةَ

لَكَ وَالْمُلْكَ لَا شَرِيْكَ لَكَ (مشكوة)

"ಲಬ್ಬೈಕಲ್ಲಾಹುಮ್ಮ ಲಬ್ಬೈಕ್. ಲಬ್ಬೈಕ ಲಾ ಶರೀಕಲಕ ಲಬ್ಬೈಕ್ ಇನ್ನಲ್ ಹಮ್ದ ವನ್ನಿಲ್‌ಮತ ಲಕ ವಲ್ ಮುಲ್ಕ ಲಾ ಶರೀಕಲಕ್".

(ನಾನು ಹಾಜರಿದ್ದೇನೆ. ಓ ಅಲ್ಲಾಹ್! ನಾನು ಹಾಜರಿದ್ದೇನೆ. ನಿನಗಾರೂ ಸಹಭಾಗಿಗಳಿಲ್ಲ. ನಾನು ಹಾಜರಿದ್ದೇನೆ. ಸ್ತುತಿ ಸ್ತೋತ್ರವೂ ನಿಸ್ಸಂದೇಹವಾಗಿಯೂ ನಿನಗೇ ಆಗಿವೆ.

ಅನುಗ್ರಹವೆಲ್ಲವೂ ನಿನ್ನದೇ ಆಗಿದೆ. ಆಧಿಪತ್ಯವು ಸರ್ವ ಸಂಪೂರ್ಣವಾಗಿ ನಿನ್ನದೇ ಆಗಿದೆ. ನಿನಗಾರೂ ಸಹಭಾಗಿಗಳಿಲ್ಲ.) (ಮಿಷ್ಕಾತ್)

15. ಅರಫಾ ಮೈದಾನದಲ್ಲಿ ಹಾಜರಾಗಿ ಹೆಚ್ಚೆಚ್ಚು ಪಶ್ಚಾತ್ತಾಪ ಪಟ್ಟು ದೇವನಲ್ಲಿ ಕ್ಷಮೆಯಾಚನೆ ಮಾಡಿರಿ. ಪವಿತ್ರ ಕುರ್‌ಆನ್ ಹೀಗೆ ಆದೇಶಿಸುತ್ತದೆ:

ثُمَّ أَفِيضُوا مِنْ حَيْثُ أَفَاضَ النَّاسُ وَاسْتَغْفِرُوا اللَّهَ ۚ إِنَّ اللَّهَ غَفُورٌ رَّحِيمٌ ﴿١٩٩﴾

"ನೀವು (ಮಕ್ಕಾ ವಾಸಿಗಳು) ಇತರರು ಮರಳುವಲ್ಲಿಂದಲೇ ಮರಳಿರಿ. ಅಲ್ಲಾಹನಲ್ಲಿ ಕ್ಷಮೆಯಾಚಿಸಿರಿ. ನಿಸ್ಸಂದೇಹವಾಗಿ ಅಲ್ಲಾಹನು ಅತ್ಯಧಿಕ ಕ್ಷಮಿಸುವವನು ಮತ್ತು ಅತ್ಯಧಿಕ ಕರುಣಾಳುವಾಗಿರುತ್ತಾನೆ". (ಪವಿತ್ರ ಕುರ್‌ಆನ್, 2:199)

ಅಲ್ಲಾಹನ ಬಳಿ ಎಲ್ಲ ದಿನಗಳ ಪೈಕಿ ಅರಫಾ ದಿನವು ಅತ್ಯುತ್ತಮವಾಗಿದೆ. ಅಂದು ಅಲ್ಲಾಹನು ಭೂವಾಸಿಗಳ ಮೇಲೆ ವಿಶೇಷ ಗಮನ ಹರಿಸಿ ದೇವಚರರ ಸಮ್ಮುಖದಲ್ಲಿ ಹಾಜಿಗಳ ದೀನಭಾವದ ಬಗ್ಗೆ ಹೆಮ್ಮೆ ಪಡುತ್ತಾನೆ. ದೇವಚರರಲ್ಲಿ ಈ ರೀತಿ ಹೇಳುತ್ತಾನೆ: 'ಮಲಕ್ ಗಳೇ! ನೋಡಿ ನನ್ನ ದಾಸರು ವ್ಯಾಕುಲರಾಗಿ ಬಿಸಿಲಲ್ಲಿ ನನ್ನ ಮುಂದೆ ನಿಂತಿರುವರು. ಇವರು ದೂರ ದೂರದಿಂದ ಬಂದವರು. ನನ್ನ ಅನುಗ್ರಹ ನಿರೀಕ್ಷೆಯು ಅವರನ್ನು ಇಲ್ಲಿಗೆ ತಂದಿದೆ. ಅವರಂತೂ ನನ್ನ ಯಾತನೆಯನ್ನು ಕಂಡವರಲ್ಲ.' ಹೀಗೆ ಅಭಿಮಾನ ಪ್ರಕಟಣೆಯ ಬಳಿಕ ಜನರನ್ನು ನರಕ ಯಾತನೆಯಿಂದ ಮುಕ್ತಗೊಳಿಸುವ ಆಜ್ಞೆ ನೀಡುತ್ತಾನೆ. ಬೇರಾವ ದಿವಸವೂ ಕ್ಷಮಿಸಲ್ಪಡಲಾರದಷ್ಟು ಜನರು ಅರಫಾ ದಿವಸ ಕ್ಷಮಿಸಲ್ಪಡುತ್ತಾರೆ'. (ಇಬ್ನು ಹಿಬ್ಬಾನ್)

16. ಹ. ಇಬ್ರಾಹೀಮ್(ಅ) ತಮ್ಮ ಪ್ರಿಯ ಪುತ್ರ ಇಸ್ಮಾಈಲ್‌ರನ್ನು(ಅ) ಬಲಿ ಕೊಡುವಾಗ ಅವರಲ್ಲಿದ್ದ ಮನೋಭಾವದೊಂದಿಗೆ ನೀವೂ ಮಿನಾ ತಲುಪಿ ಪ್ರಾಣಿ ಬಲಿ ನೀಡಿರಿ. ಈ ತ್ಯಾಗ ಮನೋಭಾವವನ್ನು ಜೀವನದ ಎಲ್ಲ ರಂಗಗಳಲ್ಲಿಯೂ ಜಾರಿಯಾಗುವಷ್ಟು ಸುದೃಢಗೊಳಿಸಿರಿ. ನಿಮ್ಮ ಜೀವನ ವಾಸ್ತವದಲ್ಲಿ ಈ ಪ್ರತಿಜ್ಞೆಯ ಪ್ರತಿರೂಪವಾಗಿರಬೇಕು.

إِنَّ صَلَاتِي وَنُسُكِي وَمَحْيَايَ وَمَمَاتِي لِلَّهِ رَبِّ الْعَالَمِينَ ﴿١٦٢﴾

لَا شَرِيكَ لَهُ

"ಇನ್ನ ಸಲಾತೀ ವನುಸುಕೀ ವಮಹ್‌ಯಾಯ ವಮಮಾತೀ ಲಿಲ್ಲಾಹಿ ರಬ್ಬಿಲ್ ಆಲಮೀನ್. ಲಾ ಶರೀಕಲಹೂ".

(ಖಂಡಿತವಾಗಿಯೂ ನನ್ನ ನಮಾಝ್, ನನ್ನ ಬಲಿದಾನ, ನನ್ನ ಜೀವನ ಮತ್ತು ನನ್ನ ಮರಣ ಎಲ್ಲವೂ ಸರ್ವಲೋಕ ಪರಿಪಾಲಕನಾದ ಅಲ್ಲಾಹನಿಗೆ ಮಾತ್ರವಾಗಿದೆ. ಅವನಿಗಾರೂ ಸಹಭಾಗಿಗಳಿಲ್ಲ.) (ಪವಿತ್ರ ಕುರ್‌ಆನ್, 6:162)

17. ಹಜ್ಜ್ ದಿನಗಳಲ್ಲಿ ಸರಿಯಾಗಿ ದೇವಧ್ಯಾನದಲ್ಲಿ ಮಗ್ನವಾಗಿರಿ. ಎಂದೂ ಆ

ಧ್ಯಾನದಿಂದ ಮನಸ್ಸು ಮುಕ್ತವಾಗದಂತೆ ನೋಡಿಕೊಳ್ಳಿ. ದೇವಸ್ಮರಣೆಯೇ ಎಲ್ಲಾ ಆರಾಧನೆಗಳ ನೈಜ ತಿರುಳಾಗಿದೆ. ಅಲ್ಲಾಹನು ಈ ರೀತಿ ಆದೇಶಿಸಿರುವನು:

وَاذْكُرُوا اللَّهَ فِي أَيَّامٍ مَّعْدُودَاتٍ

"ಎಣಿಕೆಯ ಈ ದಿನಗಳಲ್ಲಿ ದೇವಧ್ಯಾನದಲ್ಲಿ ಮಗ್ನರಾಗಿರಿ".
(ಪವಿತ್ರ ಕುರ್‌ಆನ್, 2:203)

فَإِذَا قَضَيْتُم مَّنَاسِكَكُمْ فَاذْكُرُوا اللَّهَ كَذِكْرِكُمْ آبَاءَكُمْ أَوْ أَشَدَّ ذِكْرًا

"ನೀವು ಹಜ್ಜ್ ವಿಧಿಗಳನ್ನು ಪೂರ್ತಿಗೊಳಿಸಿದ ಬಳಿಕ ಯಾವ ರೀತಿ ಮೊದಲು ನಿಮ್ಮ ಪೂರ್ವಜರ ಗುಣಗಾನ ಮಾಡುತ್ತಿದ್ದಿರೋ ಅದೇ ರೀತಿ ಈಗ ದೇವನ ಗುಣಗಾನ ಮಾಡಿರಿ. ಅಷ್ಟೇ ಅಲ್ಲ ಅದಕ್ಕಿಂತಲೂ ಮಿಗಿಲಾಗಿ". (ಪವಿತ್ರ ಕುರ್‌ಆನ್, 2:200)

ಹಜ್ಜ್‌ನ ವಿಧಿಗಳ ಉದ್ದೇಶವೇ ನಿಮ್ಮನ್ನು ಈ ದಿನಗಳಲ್ಲಿ ದೇವಧ್ಯಾನದಲ್ಲಿ ಮಗ್ನಗೊಳಿಸುವುದಾಗಿದೆ. ಜೀವನದ ಜಂಜಡದಲ್ಲಿ ಬಿದ್ದು ಯಾವ ವಸ್ತುವೂ ನಿಮ್ಮನ್ನು ಆತನ ಧ್ಯಾನದಿಂದ ದೂರ ಸರಿಸದಷ್ಟು ಆ ಧ್ಯಾನವು ನಿಮ್ಮ ಮನದಾಳದಲ್ಲಿ ಮುದ್ರೆ ಯೊತ್ತಲ್ಪಡಬೇಕು. ಅಜ್ಞಾನ ಕಾಲದಲ್ಲಿ ಜನರು ಹಜ್ಜ್ ವಿಧಿಗಳನ್ನು ನೆರವೇರಿಸಿದ ಬಳಿಕ ತಮ್ಮ ಪೂರ್ವಜರ ಗುಣಗಾನ ಮಾಡುತ್ತಿದ್ದರು. ಆ ಬಗ್ಗೆ ಜಂಭ ಕೊಚ್ಚಿಕೊಳ್ಳುತ್ತಿದ್ದರು. ಈ ದಿನಗಳನ್ನು ದೇವಧ್ಯಾನದಲ್ಲೇ ಕಳೆಯಬೇಕು. ಅವನ ಮೇಲ್ಮೆಯನ್ನೇ ಕೊಂಡಾಡಬೇಕು. ವಾಸ್ತವದಲ್ಲಿ ಮೇಲ್ಮೆ ಇರುವುದು ಆತನಿಗೆ ಮಾತ್ರ.

18. ಕಅಬಾದ ತವಾಫ್ (ಪ್ರದಕ್ಷಿಣೆ) ಅತ್ಯಂತ ಭಾವಪರವಶತೆಯೊಂದಿಗೆ ಮಾಡಿರಿ. ಅಲ್ಲಾಹನು ಹೀಗೆ ಆದೇಶಿಸಿದ್ದಾನೆ:

ಮತ್ತು ನೀವು ಅಲ್ಲಾಹನ ಭವನ (ಕಅಬಾ)ದ ತವಾಫ್ ಮಾಡಬೇಕು. ಪ್ರವಾದಿ(ಸ) ಈ ರೀತಿ ಹೇಳಿರುವರು:

"ದೇವನು ಪ್ರತಿದಿನ ತನ್ನ ದಾಸರಾದ ಹಾಜಿಗಳ (ಹಜ್ಜ್ ವಿಧಿಗಳನ್ನು ನೆರವೇರಿಸುತ್ತಿರುವವರ) ಮೇಲೆ ನೂರ ಇಪ್ಪತ್ತು ಅನುಗ್ರಹಗಳನ್ನು ಇಳಿಸುತ್ತಾನೆ. ಅವುಗಳ ಪೈಕಿ 60 ಅನುಗ್ರಹಗಳು ಕಅಬಾದ ತವಾಫ್ ಮಾಡುತ್ತಿರುವವರ ಮೇಲೆ, ಅಲ್ಲಿ ನಮಾಝ್ ಮಾಡುತ್ತಿರುವವರ ಮೇಲೆ 40 ಅನುಗ್ರಹಗಳು ಹಾಗೂ ಕಅಬಾವನ್ನು ವೀಕ್ಷಿಸುತ್ತಿರುವವರ ಮೇಲೆ 20 ಅನುಗ್ರಹಗಳು". (ಬೈಹಕಿ)

ಪ್ರವಾದಿ(ಸ) ಹೀಗೂ ಹೇಳಿರುವರು: "ಯಾರು 50 ಸಲ ಕಅಬಾದ ತವಾಫ್ ಮಾಡಿದನೋ ಅವನು ತಾಯಿಯ ಉದರದಿಂದ ಬಂದಂತೆ ಪಾಪಗಳಿಂದ ಮುಕ್ತನಾಗುವನು". (ತಿರ್ಮಿದಿ)

❖ ❖ ❖ ❖

ಅಧ್ಯಾಯ - ಮೂರು

# ಸಮಾಜದ ಸಂಸ್ಕರಣೆ

## ತಂದೆ ತಾಯಿಗಳ ಹಕ್ಕುಬಾಧ್ಯತೆಗಳು

1. ತಂದೆ ತಾಯಿಗಳೊಂದಿಗೆ ಸದ್‌ವ್ಯವಹಾರ ಕೈಗೊಳ್ಳಿರಿ. ಅವರೊಂದಿಗೆ ಮಾಡುವ ಸದ್ವರ್ತನೆ ಉಭಯ ಲೋಕಗಳ ಸೌಭಾಗ್ಯವೆಂದು ತಿಳಿಯಿರಿ. ದೇವನ ಬಳಿಕ ಮನುಷ್ಯರ ಮೇಲೆ ಅತ್ಯಧಿಕ ಕರ್ತವ್ಯ ತಂದೆ ತಾಯಿಗಳದ್ದೇ ಇದೆ. ಪವಿತ್ರ ಕುರ್‌ಆನಿನಲ್ಲಿ ಅನೇಕ ಕಡೆ ತಂದೆ ತಾಯಿಗಳ ಹಕ್ಕನ್ನು ದೇವನ ಹಕ್ಕುಗಳ ಜೊತೆಗೇ ವಿವರಿಸಲಾಗಿದೆ. ದೇವನಿಗೆ ಕೃತಜ್ಞ ರಾಗಬೇಕೆಂದಿರುವ ಅನೇಕ ಕಡೆಗಳಲ್ಲಿ ಜೊತೆಗೇ ತಂದೆ ತಾಯಿಗಳಿಗೆ ಕೃತಜ್ಞರಾಗ ಬೇಕೆಂದೂ ಆದೇಶಿಸಲಾಗಿದೆ. ಇದರಿಂದ ತಂದೆ ತಾಯಿಗಳ ಹಕ್ಕಿನ ಪ್ರಾಮುಖ್ಯತೆ ಮತ್ತು ಮಹತ್ವವನ್ನು ಮನಗಾಣಬಹುದಾಗಿದೆ. ಪವಿತ್ರ ಕುರ್‌ಆನ್ ಈ ರೀತಿ ಆದೇಶಿಸಿದೆ:

وَقَضٰى رَبُّكَ اَلَّا تَعْبُدُوْٓا اِلَّآ اِيَّاهُ وَبِالْوَالِدَيْنِ اِحْسَانًا

**"ನೀವು ಅಲ್ಲಾಹನ ಹೊರತು ಅನ್ಯರ ದಾಸ್ಯಾರಾಧನೆ ಮಾಡಬಾರದೆಂದೂ ತಂದೆ ತಾಯಿಗಳೊಂದಿಗೆ ಸೌಜನ್ಯದ ವ್ಯವಹಾರ ಮಾಡಬೇಕೆಂದೂ ನಿಮ್ಮ ಪ್ರಭು ವಿಧಿಸಿದ್ದಾನೆ".**

**(ಬನೀ ಇಸ್ರಾಈಲ್: 23)**

ಹ. ಅಬ್ದುಲ್ಲಾ ಬಿನ್ ಮಸ್‌ಊದ್(ರ) ಹೇಳುತ್ತಾರೆ, ನಾನು ಪ್ರವಾದಿವರ್ಯರಲ್ಲಿ(ಸ) ವಿಚಾರಿಸಿದೆ, 'ಯಾವ ಕಾರ್ಯವು ಅಲ್ಲಾಹನಿಗೆ ಅತ್ಯಧಿಕ ಪ್ರಿಯವಾಗಿದೆ?' ಪ್ರವಾದಿ(ಸ) ಹೇಳಿದರು: 'ಸಮಯಕ್ಕೆ ಸರಿಯಾಗಿ ನಿರ್ವಹಿಸುವ ನಮಾಝ್'. ಆ ಬಳಿಕ ಯಾವ ಕಾರ್ಯ ಅಲ್ಲಾಹನಿಗೆ ಅತ್ಯಧಿಕ ಪ್ರಿಯವಾಗಿದೆ ಎಂದು ಕೇಳಿದಾಗ, 'ತಂದೆ ತಾಯಿಗಳೊಂದಿಗೆ ಸೌಜನ್ಯದ ವ್ಯವಹಾರ' ಎಂದು ಪ್ರವಾದಿ(ಸ) ಉತ್ತರಿಸಿದರು. 'ಆ ಬಳಿಕ?' ಎಂದು ನಾನು ವಿಚಾರಿಸಿದಾಗ, 'ದೇವ ಮಾರ್ಗದಲ್ಲಿ ಹೋರಾಟ ನಡೆಸುವುದು' ಎಂದು ಪ್ರವಾದಿ(ಸ) ಉತ್ತರಿಸಿದರು. **(ಬುಖಾರಿ, ಮುಸ್ಲಿಮ್)**

ಹ. ಅಬ್ದುಲ್ಲಾ(ರ) ಹೇಳುತ್ತಾರೆ: "ಒಮ್ಮೆ ಓರ್ವ ವ್ಯಕ್ತಿ ಪ್ರವಾದಿವರ್ಯರ(ಸ) ಸನ್ನಿಧಿಯಲ್ಲಿ ಹಾಜರಾಗಿ ನಾನು ತಮ್ಮ ಹಸ್ತದಲ್ಲಿ ಹಿಜ್ರತ್(ದೇವ ಮಾರ್ಗದ ವಲಸೆ) ಮತ್ತು

ಜಿಹಾದ್ (ದೇವ ಮಾರ್ಗದ ಹೋರಾಟ)ನ ಪ್ರಮಾಣವಚನ ಮಾಡುತ್ತೇನೆ ಮತ್ತು ದೇವನಿಂದ ಅದರ ಪ್ರತಿಫಲವನ್ನು ಅಪೇಕ್ಷಿಸುತ್ತೇನೆ ಎಂದರು. ಆಗ ಪ್ರವಾದಿ(ಸ), 'ನಿಮ್ಮ ತಂದೆ ತಾಯಿಗಳ ಪೈಕಿ ಯಾರಾದರೂ ಜೀವಿಸಿದ್ದಾರೆಯೇ?' ಎಂದು ಪ್ರಶ್ನಿಸಿದರು. 'ಹೌದು, ದೇವಾನುಗ್ರಹದಿಂದ ಅವರಿಬ್ಬರೂ ಜೀವಿಸಿದ್ದಾರೆ' ಎಂದು ಆಗಂತುಕರು ಉತ್ತರಿಸಿದರು. ಅದಕ್ಕೆ ಪ್ರವಾದಿ(ಸ) 'ನೀವು ನಿಜವಾಗಿ ನಿಮ್ಮ ಹಿಜ್ರತ್ ಮತ್ತು ಜಿಹಾದ್‌ಗೆ ಅಲ್ಲಾಹನ ಪ್ರತಿಫಲವನ್ನು ಬಯಸುತ್ತೀರಾ?' ಎಂದು ಕೇಳಿದರು. 'ಹೌದು ನಾನು ಅಲ್ಲಾಹನಿಂದ ಪ್ರತಿಫಲವನ್ನು ಅಪೇಕ್ಷಿಸುತ್ತೇನೆ' ಎಂದು ಅವರು ಹೇಳಿದರು 'ಹಾಗಾದರೆ ಹೋಗಿ ತಂದೆ ತಾಯಿಗಳ ಸೇವೆ ಮಾಡುತ್ತಿರಿ. ಅವರೊಂದಿಗೆ ಸೌಜನ್ಯದಿಂದ ವರ್ತಿಸಿರಿ' ಎಂದು ಪ್ರವಾದಿ(ಸ) ಆದೇಶಿಸಿದರು. (ಮುಸ್ಲಿಮ್)

ಹ. ಅಬೂ ಉಮಾಮಃ(ರ) ಹೇಳುತ್ತಾರೆ, ಒಬ್ಬರು ಪ್ರವಾದಿವರ್ಯರಲ್ಲಿ(ಸ) ಪ್ರಶ್ನಿಸಿದರು: "ತಂದೆ ತಾಯಿಗಳ ಹಕ್ಕು ಮಕ್ಕಳ ಮೇಲೆ ಏನಿದೆ?" "ತಂದೆ ತಾಯಿಗಳೇ ನಿಮ್ಮ ಸ್ವರ್ಗ; ತಂದೆ ತಾಯಿಗಳೇ ನಿಮ್ಮ ನರಕ" ಎಂದು ಪ್ರವಾದಿ(ಸ) ಉತ್ತರಿಸಿದರು. (ಇಬ್ನುಮಾಜಃ)

ಅರ್ಥಾತ್ ಅವರೊಂದಿಗೆ ಸೌಜನ್ಯದಿಂದ ವರ್ತಿಸಿದರೆ ನೀವು ಸ್ವರ್ಗಕ್ಕೆ ಅರ್ಹರಾಗುವಿರಿ ಮತ್ತು ಅವರ ಹಕ್ಕುಗಳನ್ನು ಉಲ್ಲಂಘಿಸಿ ನೀವು ನರಕದ ಇಂಧನವಾಗುವಿರಿ.

2. ತಂದೆ ತಾಯಿಗಳಿಗೆ ಕೃತಜ್ಞರಾಗಿರಿ. ಉಪಕಾರಿಯ ಉಪಕಾರ ಸ್ಮರಣೆ ಮತ್ತು ಕೃತಜ್ಞತೆಯು ಸೌಜನ್ಯದ ಪ್ರಪ್ರಥಮ ಬೇಡಿಕೆಯಾಗಿದೆ. ನಮ್ಮ ಅಸ್ತಿತ್ವದ ಬಾಹ್ಯ ಕಾರಣಕರ್ತರು ನಮ್ಮ ತಂದೆ ತಾಯಿಗಳಾಗಿರುವರೆಂಬುದು ಒಂದು ವಾಸ್ತವಿಕತೆ. ತಂದೆ ತಾಯಿಗಳ ಪಾಲನೆ ಪೋಷಣೆ ಮತ್ತು ಮೇಲ್ನೋಟದಲ್ಲಿ ನಾವು ಬೆಳೆದು ಯೌವನವನ್ನು ತಲಪುತ್ತೇವೆ. ಅವರು ಅಸಾಮಾನ್ಯ ತ್ಯಾಗ, ಅಪ್ರತಿಮ ಪರಿಶ್ರಮ ಮತ್ತು ಅತ್ಯಧಿಕ ವಾತ್ಸಲ್ಯದೊಂದಿಗೆ ನಮ್ಮನ್ನು ನೋಡಿಕೊಳ್ಳುತ್ತಾರೆ. ಅದಕ್ಕೆ ಪ್ರತಿಯಾಗಿ ನಮ್ಮ ಹೃದಯದಲ್ಲಿ ಅವರ ಬಗ್ಗೆ ನಿಷ್ಠೆ, ಗೌರವ, ಕೃತಜ್ಞತೆ ಮತ್ತು ಪ್ರೀತಿಯು ತುಂಬಿ ತುಳುಕಬೇಕು. ನಮ್ಮ ರಕ್ತದ ಕಣಕಣದಲ್ಲಿ ಅವರ ಕೃತಜ್ಞತೆ ತುಂಬಿರಬೇಕು. ಈ ಕಾರಣದಿಂದಲೇ ಅಲ್ಲಾಹನು ತನಗೆ ಕೃತಜ್ಞರಾಗಬೇಕೆಂದು ಆದೇಶಿಸುವುದರ ಜೊತೆಗೆ ತಂದೆ ತಾಯಿಗಳಿಗೂ ಕೃತಜ್ಞರಾಗಿರಬೇಕೆಂದು ಒತ್ತಿ ಹೇಳಿರುವನು.

أَنِ اشْكُرْ لِي وَلِوَالِدَيْكَ ۖ إِلَيَّ الْمَصِيرُ ﴿١٤﴾

"ನನಗೆ ಕೃತಜ್ಞತೆ ಸಲ್ಲಿಸಿರಿ ಮತ್ತು ನಿಮ್ಮ ತಂದೆ ತಾಯಿಗಳಿಗೂ ಕೃತಜ್ಞತೆ ಸಲ್ಲಿಸಿರಿ ಎಂದು ನಾವು ಉಪದೇಶಿಸಿದೆವು". (ಪವಿತ್ರ ಕುರ್‌ಆನ್, 31:14)

3. ತಂದೆ ತಾಯಿಗಳನ್ನು ಸದಾ ಸಂತುಷ್ಟರಾಗಿರಿಸಲು ಪ್ರಯತ್ನಿಸಿರಿ. ಅವರ ಇಚ್ಛೆ ಮತ್ತು ಅಭಿರುಚಿಗೆ ವಿರುದ್ಧವಾದ ಹಾಗೂ ಅವರಿಗೆ ಅಸಹ್ಯವಾಗುವ ಯಾವ ಮಾತನ್ನೂ ಆಡದಿರಿ. ಪ್ರಾಯಾಧಿಕ್ಯದ ಕಾರಣ ಸ್ವಲ್ಪ ಸಿಡುಕು ಸ್ವಭಾವ ಬಂದಾಗ ಈ ಬಗ್ಗೆ ಹೆಚ್ಚು ಗಮನ ವಹಿಸಿರಿ. ಆಗ ಅವರು ನೀವು ನಿರೀಕ್ಷಿಸದ ಕೆಲವು ಬೇಡಿಕೆಗಳನ್ನು ಮುಂದಿಡಬಹುದು. ಆಗಲೂ ಅವರ ಯಾವ ಮಾತಿನಿಂದಲೂ ಬೇಸರ ಬಂದು ಅವರಿಗೆ ನೋವಾಗುವಂತೆ ಉತ್ತರಿಸಬೇಡಿರಿ.

إِمَّا يَبْلُغَنَّ عِندَكَ الْكِبَرَ أَحَدُهُمَا أَوْ كِلَاهُمَا فَلَا تَقُل لَّهُمَا أُفٍّ وَلَا تَنْهَرْهُمَا وَقُل
لَّهُمَا قَوْلًا كَرِيمًا ﴿٢٣﴾

"ಅವರ ಪೈಕಿ ಒಬ್ಬರು ಅಥವಾ ಇಬ್ಬರೂ ನಿಮ್ಮ ಮುಂದೆ ವೃದ್ಧಾಪ್ಯಕ್ಕೆ ತಲಪಿದರೆ ಅವರಿಗೆ ನೀವು ಅಯ್ಯೋ! ಎಂದೂ ಹೇಳದಿರಿ. ಅವರಿಗೆ ಛೀಮಾರಿ ಹಾಕದಿರಿ".

(ಬನೀ ಇಸ್ರಾಈಲ್: 23)

ವಾಸ್ತವದಲ್ಲಿ ಮುದಿತನ ಬಂದರೆ ಸಹನೆ ಕಡಿಮೆಯಾಗುತ್ತದೆ. ಬಲಹೀನತೆಯಿಂದಾಗಿ ತಮ್ಮ ಅಸ್ತಿತ್ವದ ಮಹತ್ವದ ಪ್ರಜ್ಞೆ ಅವರನ್ನು ಹೆಚ್ಚು ಕಾಡುತ್ತದೆ. ಆದ್ದರಿಂದ ಸಣ್ಣಸಣ್ಣ ವಿಷಯಕ್ಕೂ ಅವರು ಪರಿತಪಿಸತೊಡಗುತ್ತಾರೆ. ಆದ್ದರಿಂದ ಈ ಸಂಕೀರ್ಣತೆಯನ್ನು ಮನಗಂಡು ನಿಮ್ಮ ಯಾವುದೇ ಮಾತು ಕೃತಿಯಿಂದ ಅವರು ಕುಪಿತರಾಗದಂತೆ ಜಾಗರೂಕತೆ ವಹಿಸಿರಿ.

ಹ. ಅಬ್ದುಲ್ಲಾ ಬಿನ್ ಅಮ್ರ್(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು: "ದೇವನ ಸಂಪ್ರೀತಿ ತಂದೆ ತಾಯಿಗಳ ಸಂಪ್ರೀತಿಯಲ್ಲಿದೆ. ದೇವನ ಕ್ರೋಧ ತಂದೆ ತಾಯಿಗಳ ಕ್ರೋಧ ದಲ್ಲಿದೆ." (ತಿರ್ಮಿದಿ, ಇಬ್ನುಹಿಬ್ಬಾನ್, ಹಾಕಿಮ್)

ಅರ್ಥಾತ್ ದೇವನನ್ನು ಸಂತುಷ್ಟಗೊಳಿಸ ಬಯಸುವವನು ತನ್ನ ತಂದೆ ತಾಯಿಗಳನ್ನು ಸಂತುಷ್ಟಗೊಳಿಸಬೇಕು. ತಂದೆ ತಾಯಿಗಳನ್ನು ಕ್ರುದ್ಧಗೊಳಿಸಿದರೆ ಅದರಿಂದ ಅವನು ದೇವಪ್ರಕೋಪಕ್ಕೆ ಪಾತ್ರನಾಗುವನು.

ಹ. ಅಬ್ದುಲ್ಲಾ(ರ) ಅವರಿಂದಲೇ ಇನ್ನೊಂದು ವರದಿ ಈ ರೀತಿ ಇದೆ. "ಒಬ್ಬ ವ್ಯಕ್ತಿ ತನ್ನ ತಂದೆ ತಾಯಿಗಳನ್ನು ಅಳುತ್ತಿರಲು ಬಿಟ್ಟು ಪ್ರವಾದಿವರ್ಯರ(ಸ) ಬಳಿ ಹಿಜ್ರತ್ ಮತ್ತು ಜಿಹಾದ್‌ನ 'ಬೈಅತ್' (ಪ್ರತಿಜ್ಞೆ) ಮಾಡಲು ಹಾಜರಾದರು. ಆಗ ಪ್ರವಾದಿ(ಸ) ಅವರನ್ನು ಈ ರೀತಿ ಆದೇಶಿಸಿ ಹಿಂದೆ ಕಳುಹಿಸಿದರು. ನೀವು ನಿಮ್ಮ ತಂದೆ ತಾಯಿಗಳ ಬಳಿಗೆ ಮರಳಿ ಅವರನ್ನು ಅಳುವಂತೆ ಮಾಡಿದಂತೆಯೇ ಈಗ ಅವರನ್ನು ಸಂತುಷ್ಟಗೊಳಿಸಿರಿ. (ಅಬೂದಾವೂದ್)

4. ತನು-ಮನದಿಂದ ತಂದೆತಾಯಿಗಳ ಸೇವೆ ಮಾಡಿರಿ. ನಿಮಗೆ ಆ ಭಾಗ್ಯ ದೊರೆತರೆ ಸ್ವರ್ಗ ಸಂಪಾದಿಸುವ ಮತ್ತು ದೇವ ಸಂಪ್ರೀತಿ ಗಳಿಸುವ ಒಂದು ಅವಕಾಶ ದೊರೆತಂತೆಯೇ ಸರಿ. ತಂದೆತಾಯಿಗಳ ಸೇವೆಯಿಂದಲೇ ಉಭಯ ಲೋಕಗಳ ಒಳಿತು, ಮಹಾನತೆ ಮತ್ತು ಸೌಭಾಗ್ಯ ಪ್ರಾಪ್ತವಾಗುತ್ತದೆ. ಇದರಿಂದಲೇ ಮನುಷ್ಯನು ಉಭಯ ಲೋಕಗಳ ಗಂಡಾಂತರಗಳಿಂದ ಸುರಕ್ಷಿತನಾಗುತ್ತಾನೆ. ಪ್ರವಾದಿ(ಸ) ಈ ರೀತಿ ಹೇಳಿರುವುದಾಗಿ ಹ. ಅನಸ್(ರ) ಹೇಳುತ್ತಾರೆ:

"ದೀರ್ಘಾಯುಷ್ಯ ಬಯಸುವವನು ಹಾಗೂ ಉಪ ಜೀವನದಲ್ಲಿ ಸಮೃದ್ಧಿಯನ್ನು ಅರಸುವವನು ತಂದೆ ತಾಯಿಗಳೊಂದಿಗೆ ಉತ್ತಮವಾಗಿ ವರ್ತಿಸಲಿ ಮತ್ತು ಅವರೊಂದಿಗೆ ಸಂಬಂಧವನ್ನು ಸುದೃಢಗೊಳಿಸಲಿ". (ಅತ್ತರ್‌ಗೀಬು ವತ್ತರ್‌ಹೀಬ್)

ಪ್ರವಾದಿ(ಸ) ಹೇಳಿರುವರು: "ಅವನು ನಿಂದ್ಯನಾಗಲಿ! ಅವನು ನಿಂದ್ಯನಾಗಲಿ! ಅವನು ನಿಂದ್ಯನಾಗಲಿ!" ಜನರು ಕೇಳಿದರು. ಓ ಪ್ರವಾದಿವರ್ಯರೇ! ಯಾರು? ಆಗ ಪ್ರವಾದಿ(ಸ),

'ತಂದೆತಾಯಿಗಳಿಬ್ಬರೂ ಅಥವಾ ಆ ಪೈಕಿ ಒಬ್ಬರು ಮುದಿತನದಲ್ಲಿರುವಾಗ (ಅವರ ಸೇವೆ ಮಾಡಿ) ಸ್ವರ್ಗದಲ್ಲಿ ಪ್ರವೇಶಿಸದವನು" ಎಂದು ಉತ್ತರಿಸಿದರು. (ಮುಸ್ಲಿಮ್)

ಒಮ್ಮೆ ಪ್ರವಾದಿ(ಸ) ಹೆತ್ತವರ ಸೇವೆಯನ್ನು ಜಿಹಾದ್‌ನಂತಹ ಉತ್ಕೃಷ್ಟ ಆರಾಧನೆಗಿಂತಲೂ ಉತ್ತಮವೆಂದು ಸಾರಿದ್ದರು. ಓರ್ವ ಸಹಾಬಿಯನ್ನು ಜಿಹಾದ್‌ಗೆ ಹೋಗದಂತೆ ತಡೆದು ಹೆತ್ತವರ ಸೇವೆ ಮಾಡುವಂತೆ ಆದೇಶಿಸಿದ್ದರು.

ಹ. ಅಬ್ದುಲ್ಲಾ ಬಿನ್ ಅಮ್ರ್(ರ) ಹೇಳುತ್ತಾರೆ. ಪ್ರವಾದಿವರ್ಯರ(ಸ) ಬಳಿ ಒಬ್ಬರು ಜಿಹಾದ್‌ನಲ್ಲಿ ಭಾಗವಹಿಸಲಿಕ್ಕಾಗಿ ಬಂದರು. 'ನಿಮ್ಮ ತಂದೆ ತಾಯಿಗಳು ಜೀವಿಸಿರುವರೇ?' ಎಂದು ಪ್ರವಾದಿ(ಸ) ಕೇಳಿದರು. ಆಗ ಅವರು ಹೌದೆಂದರು. 'ಹೋಗಿ ಅವರ ಸೇವೆಗೈಯಿರಿ. ಇದುವೇ ಜಿಹಾದ್" ಎಂದು ಪ್ರವಾದಿ(ಸ) ಆದೇಶಿಸಿದರು. (ಬುಖಾರಿ, ಮುಸ್ಲಿಮ್)

5. ತಂದೆ ತಾಯಿಗಳನ್ನು ಗೌರವಾದರಗಳಿಂದ ಕಾಣಿರಿ. ಅವರ ಗೌರವಕ್ಕೆ ಕುಂದಾಗುವ ಯಾವ ಮಾತನ್ನೂ ಆಡದಿರಿ. ಕುರ್‌ಆನ್ ಈ ರೀತಿ ಹೇಳುತ್ತದೆ:

وَقُل لَّهُمَا قَوْلًا كَرِيمًا ۝

**"ಅವರೊಂದಿಗೆ ಗೌರವಪೂರ್ಣವಾಗಿ ಮಾತನಾಡಿರಿ". (ಬನೀ ಇಸ್ರಾಈಲ್: 23)**

ಒಮ್ಮೆ ಹ. ಅಬ್ದುಲ್ಲಾ ಬಿನ್ ಉಮರ್(ರ) ಹ. ಇಬ್ನು ಅಬ್ಬಾಸ್‌ರಲ್ಲಿ(ರ) ಕೇಳಿದರು. "ನೀವು ನರಕದಿಂದ ಮುಕ್ತಿ ಹೊಂದಿ ಸ್ವರ್ಗ ಪ್ರವೇಶಿಸ ಬಯಸುವಿರಾ?" ಹ. ಇಬ್ನು ಅಬ್ಬಾಸ್(ರ), "ಯಾಕಿಲ್ಲ. ಅಲ್ಲಾಹನಾಣೆ, ನಾನು ಅದನ್ನೇ ಬಯಸುತ್ತೇನೆ" ಎಂದರು. ಹ. ಇಬ್ನು ಉಮರ್(ರ) ಕೇಳಿದರು, "ನಿಮ್ಮ ತಂದೆ ತಾಯಿಗಳು ಜೀವಿಸಿದ್ದಾರೆಯೇ?" ಹ. ಇಬ್ನು ಅಬ್ಬಾಸ್(ರ) "ಹೌದು. ನನ್ನ ತಾಯಿ ಜೀವಿಸಿದ್ದಾರೆ" ಎಂದರು. ಆಗ ಇಬ್ನು ಉಮರ್(ರ) ನೀವು ಅವರ ಜೊತೆ ನಮ್ರತೆಯೊಂದಿಗೆ ಮಾತನಾಡಿದರೆ ಹಾಗೂ ಅವರ ಅನ್ನ ಪಾನೀಯಗಳ ಬಗ್ಗೆ ಗಮನವಿರಿಸಿದರೆ ನೀವು ಖಂಡಿತ ಸ್ವರ್ಗ ಪ್ರವೇಶಿಸುವಿರಿ. ಆದರೆ ನೀವು ಮಹಾ ಪಾಪಗಳಿಂದ ದೂರವಿರಬೇಕು" ಎಂದು ಹೇಳಿದರು. (ಅಲ್ ಅದಬುಲ್ ಮುಫ್ರದ್)

ಹ. ಅಬೂ ಹುರೈರಾ(ರ) ಒಮ್ಮೆ ಇಬ್ಬರನ್ನು ಕಂಡರು. ಆ ಪೈಕಿ ಒಬ್ಬರಲ್ಲಿ ಇನ್ನೊಬ್ಬರ ಬಗ್ಗೆ ವಿಚಾರಿಸಿದರು. ಅವರು ನನ್ನ ತಂದೆ ಎಂದು ಅವರು ತಿಳಿಸಿದರು. ಆಗ ಹ. ಅಬೂಹುರೈರಾ(ರ) ಹೇಳಿದರು. ಅವರನ್ನು ಹೆಸರೆತ್ತಿ ಕರೆಯದಿರಿ. ಅವರಿಗಿಂತ ಮುಂದೆ ನಡೆಯದಿರಿ ಮತ್ತು ಅವರು ಕುಳಿತುಕೊಳ್ಳುವುದಕ್ಕೆ ಮುಂಚೆ ಕುಳಿತುಕೊಳ್ಳದಿರಿ.

6. ತಂದೆ ತಾಯಿಗಳೊಂದಿಗೆ ನಯವಿನಯದಿಂದ ವರ್ತಿಸಿರಿ.

وَاخْفِضْ لَهُمَا جَنَاحَ الذُّلِّ مِنَ الرَّحْمَةِ

**"ನಯವಿನಯದೊಂದಿಗೆ ಅವರ ಮುಂದೆ ಬಾಗಿರಿ". (17:24)** ಎಂದು ಪವಿತ್ರ ಕುರ್‌ಆನ್ ಆದೇಶಿಸಿದೆ. ನಯವಿನಯದೊಂದಿಗೆ ಬಾಗುವುದೆಂದರೆ ಸದಾ ಅವರ ಘನತೆ

ಗೌರವಗಳನ್ನು ಮನ್ನಿಸುವುದು. ಅವರ ಮುಂದೆ ದೊಡ್ಡಸ್ತಿಕೆಯನ್ನು ಮೆರೆಯದಿರುವುದು ಹಾಗೂ ಅವರ ಗೌರವಕ್ಕೆ ಕುಂದಾಗುವಂತೆ ವರ್ತಿಸದಿರುವುದೇ ಆಗಿದೆ.

7. ತಂದೆ ತಾಯಿಗಳನ್ನು ಪ್ರೀತಿಸಿರಿ. ಅದನ್ನು ಲೌಕಿಕ ಸೌಭಾಗ್ಯ ಮತ್ತು ಪಾರತ್ರಿಕ ಪುಣ್ಯದ ಹೇತುವೆಂದು ತಿಳಿಯಿರಿ. ಪ್ರವಾದಿ(ಸ) ಹೇಳಿರುವುದಾಗಿ ಹ. ಇಬ್ನು ಅಬ್ಬಾಸ್(ರ) ಹೇಳುತ್ತಾರೆ: "ತಂದೆ ತಾಯಿಗಳತ್ತ ಪ್ರೇಮಭರಿತ ದೃಷ್ಟಿ ಬೀರುವ ಉತ್ತಮ ಸಂತಾನಕ್ಕೆ ಅಲ್ಲಾಹನು ಒಂದು ಸ್ವೀಕೃತ ಹಜ್ಜ್‌ನ ಪುಣ್ಯ ದಯಪಾಲಿಸುತ್ತಾನೆ." ಜನರು ಕೇಳಿದರು: "ಓ ಪ್ರವಾದಿವರ್ಯರೇ! ಯಾರಾದರೂ ದಿನಕ್ಕೆ ನೂರು ಬಾರಿ ಇಂತಹ ಪ್ರೇಮ ಮತ್ತು ಕರುಣೆಯ ದೃಷ್ಟಿ ಬೀರುವುದಾದರೆ?" ಪ್ರವಾದಿ(ಸ) ಹೇಳಿದರು: ಹೌದು, ನೂರು ಸಲ ಹಾಗೆ ಮಾಡಿದರೂ ಸರಿಯೇ. ಅಲ್ಲಾಹನು (ನಿಮ್ಮ ಕಲ್ಪನೆಗಳಿಗಿಂತ) ಎಷ್ಟೋ ಉನ್ನತನು ಮತ್ತು (ಸಂಕುಚಿತತೆಯಂತಹ ನ್ಯೂನತೆಗಳಿಂದ) ಪರಮ ಪಾವನನು". (ಮುಸ್ಲಿಮ್)

8. ತಂದೆ ತಾಯಿಗಳನ್ನು ಹೃತ್ಪೂರ್ವಕವಾಗಿ ಅನುಸರಿಸಬೇಕು. ಅವರಿಂದ ಏನಾದರೂ ಅತಿರೇಕವಾದಾಗಲೂ ಮನಸಾರೆ ಅವರನ್ನು ಅನುಸರಿಸಿರಿ. ಅವರು ನಿಮ್ಮ ಮೇಲೆ ಮಾಡಿರುವ ಮಹಾನ್ ಉಪಕಾರಗಳನ್ನು ಸ್ಮರಿಸುತ್ತಾ ಅವರ ಎಲ್ಲ ಬೇಡಿಕೆಗಳನ್ನು ಪೂರೈಸಿರಿ. ಅದು ನಿಮ್ಮ ಅಭಿರುಚಿಗೆ ವಿರುದ್ಧವಾಗಿದ್ದರೂ ಸರಿಯೇ. ಆದರೆ ಅದು ಧರ್ಮ ವಿರುದ್ಧವಾಗಿರಬಾರದು.

ಹ. ಅಬೂ ಸಈದ್(ರ) ಹೇಳುತ್ತಾರೆ: ಪ್ರವಾದಿವರ್ಯರ(ಸ) ಬಳಿಗೆ ಯಮನ್‌ನಿಂದ ಒಬ್ಬ ವ್ಯಕ್ತಿ ಬಂದರು. 'ಯಮನ್‌ನಲ್ಲಿ ನಿಮಗೆ ಯಾರಿದ್ದಾರೆ?' ಎಂದು ಪ್ರವಾದಿ ವರ್ಯರು(ಸ) ಅವರನ್ನು ವಿಚಾರಿಸಿದರು. "ನನ್ನ ತಂದೆ-ತಾಯಿಗಳಿದ್ದಾರೆ" ಎಂದು ಅವರು ಉತ್ತರಿಸಿದರು. "ಅವರು ನಿಮಗೆ ಅನುಮತಿ ನೀಡಿದ್ದಾರೆಯೇ?" ಎಂದು ಕೇಳಿದಾಗ, "ಇಲ್ಲ (ನಾನು ಅವರಿಂದ ಅನುಮತಿ ಪಡೆದಿಲ್ಲ) ಎಂದು ಉತ್ತರಿಸಿದರು. ಪ್ರವಾದಿ(ಸ) ಹೇಳಿದರು, "ಹೋಗಿ ಅವರ ಅನುಮತಿ ಪಡೆದು ಬನ್ನಿ. ಅನುಮತಿ ಸಿಕ್ಕಿದರೆ ಜಿಹಾದ್‌ನಲ್ಲಿ ಭಾಗವಹಿಸಿರಿ. ಇಲ್ಲದಿದ್ದರೆ (ಅವರ ಸೇವೆ ಮಾಡುತ್ತಿದ್ದು) ಅವರೊಂದಿಗೆ ಉತ್ತಮವಾಗಿ ವರ್ತಿಸಿರಿ". (ಅಬೂದಾವೂದ್)

ತಂದೆ ತಾಯಿಗಳ ಅನುಸರಣೆಯ ಮಹತ್ವವನ್ನು ಈ ಘಟನೆಯಿಂದ ಗ್ರಹಿಸಬಹುದಾಗಿದೆ. ಒಬ್ಬ ವ್ಯಕ್ತಿ ಮೈಲಿಗಳ ದೂರದಿಂದ ಬಂದು ಪ್ರವಾದಿವರ್ಯರ(ಸ) ಜೊತೆ ಜಿಹಾದ್‌ನಲ್ಲಿ ಭಾಗವಹಿಸ ಬಯಸುತ್ತಾರೆ. ಆದರೆ ಪ್ರವಾದಿ(ಸ) ಅವರನ್ನು ಮರಳಿಸುತ್ತಾರೆ. ತಂದೆ-ತಾಯಿಗಳು ಅನುಮತಿ ನೀಡಿದರೆ ಮಾತ್ರ ಜಿಹಾದ್‌ನಲ್ಲಿ ಭಾಗವಹಿಸಬಹುದೆಂದು ಹೇಳುತ್ತಾರೆ.

ಪ್ರವಾದಿ(ಸ) ಹೇಳಿರುವುದಾಗಿ ಹ. ಇಬ್ನು ಅಬ್ಬಾಸ್(ರ) ಹೇಳುತ್ತಾರೆ, ಯಾವ ವ್ಯಕ್ತಿಯು ತಂದೆ ತಾಯಿಗಳ ಬಗ್ಗೆ ಅಲ್ಲಾಹನ ಆಜ್ಞೆಗಳನ್ನು ಅನುಸರಿಸುತ್ತಾ ದಿನ ಕಳೆಯುತ್ತಾನೋ ಅವನಿಗೆ ಸ್ವರ್ಗದ ಎರಡು ಬಾಗಿಲುಗಳು ತೆರೆಯಲ್ಪಡುತ್ತವೆ. ತಂದೆ ತಾಯಿಗಳ ಪೈಕಿ ಯಾರಾದರೂ ಒಬ್ಬರಿದ್ದರೆ ಸ್ವರ್ಗದ ಒಂದು ಬಾಗಿಲು ತೆರೆಯಲ್ಪಡುತ್ತದೆ ಮತ್ತು ಯಾವನು ತಂದೆ ತಾಯಿಗಳ ಬಗ್ಗೆ ಅಲ್ಲಾಹನ ಆಜ್ಞೆಗಳನ್ನು ಉಲ್ಲಂಘಿಸುತ್ತಾ ದಿನ ಕಳೆಯುತ್ತಾನೋ

ಅವನಿಗೆ ನರಕದ ಎರಡು ಬಾಗಿಲುಗಳು ತೆರೆಯಲ್ಪಡುತ್ತವೆ. ತಂದೆ ತಾಯಿಗಳ ಪೈಕಿ ಯಾರಾದರೂ ಒಬ್ಬರಿದ್ದರೆ ನರಕದ ಒಂದು ಬಾಗಿಲು ತೆರೆಯಲ್ಪಡುತ್ತದೆ. ಓರ್ವ ವ್ಯಕ್ತಿ ಕೇಳಿದರು. ಓ ಅಲ್ಲಾಹನ ಸಂದೇಶವಾಹಕರೇ! ತಂದೆತಾಯಿಗಳು ಅವನ ಮೇಲೆ ಅತಿರೇಕವೆಸಗುತ್ತಿದ್ದರೂ ಹಾಗೆಯೇ ಅನುಸರಿಸಬೇಕೇ? ಪ್ರವಾದಿ(ಸ) ಹೇಳಿದರು: ಹೌದು ತಂದೆ ತಾಯಿಗಳು ಅವನ ಮೇಲೆ ಅತಿರೇಕವೆಸಗುತ್ತಿದ್ದರೂ ಸರಿಯೇ. ತಂದೆ ತಾಯಿಗಳು ಅವನ ಮೇಲೆ ಅತಿರೇಕವೆಸಗುತ್ತಿದ್ದರೂ ಸರಿಯೇ! ತಂದೆ ತಾಯಿಗಳು ಅವನ ಮೇಲೆ ಅತಿರೇಕವೆಸಗುತ್ತಿದ್ದರೂ ಸರಿಯೇ!" (ಮಿಷ್ಕಾತ್)

9. ತಂದೆ ತಾಯಿಗಳನ್ನು ನಿಮ್ಮ ಸೊತ್ತಿನ ಒಡೆಯರೆಂದು ಪರಿಗಣಿಸಿರಿ. ಅವರಿಗಾಗಿ ಮನಬಿಚ್ಚಿ ಖರ್ಚು ಮಾಡಿರಿ.

يَسْـَٔلُوْنَكَ مَاذَا يُنْفِقُوْنَ ۗ قُلْ مَآ اَنْفَقْتُمْ مِّنْ خَيْرٍ فَلِلْوَالِدَيْنِ

"ನಾವೇನು ಖರ್ಚು ಮಾಡಬೇಕೆಂದು ಜನರು ನಿಮ್ಮನ್ನು ಕೇಳುತ್ತಾರೆ. ಹೇಳಿರಿ: ನೀವು ಏನನ್ನು ಖರ್ಚು ಮಾಡುವುದಿದ್ದರೂ ಅದರ ಪ್ರಥಮ ಹಕ್ಕುದಾರರು ನಿಮ್ಮ ತಂದೆ ತಾಯಿಗಳಾಗಿರುತ್ತಾರೆ". (ಪವಿತ್ರ ಕುರ್‌ಆನ್, 2:215)

ಒಮ್ಮೆ ಪ್ರವಾದಿವರ್ಯರ(ಸ) ಬಳಿ ಓರ್ವ ವ್ಯಕ್ತಿ ಬಂದು ತನ್ನ ತಂದೆಯ ಬಗ್ಗೆ ಅವರು ಬೇಕಾದಾಗಲೆಲ್ಲಾ ನನ್ನ ಸೊತ್ತನ್ನು ತೆಗೆದುಕೊಳ್ಳುತ್ತಾರೆಂದು ದೂರಿದರು. ಪ್ರವಾದಿ(ಸ) ಆ ವ್ಯಕ್ತಿಯ ತಂದೆಯನ್ನು ಕರೆಸಿದರು. ಊರುಗೋಲಿನ ಆಸರೆ ಪಡೆದು ಓರ್ವ ಮುದಿ ಪ್ರಾಯದ ವ್ಯಕ್ತಿ ಬಂದರು. ಪ್ರವಾದಿ(ಸ) ವಿಚಾರಿಸಿದಾಗ ಆ ಮುದುಕ ಹೀಗೆಂದರು:

"ಒಂದು ಕಾಲದಲ್ಲಿ ನಾನು ಬಲಾಢ್ಯನಾಗಿದ್ದೆ. ಇವನು ಬಲಹೀನನೂ ಅಶಕ್ತನೂ ಆಗಿದ್ದನು. ನಾನು ಧನಿಕನಾಗಿದ್ದೆ. ಇವನು ದರಿದ್ರನಾಗಿದ್ದ. ನಾನೆಂದೂ ಇವನನ್ನು ನನ್ನ ಸೊತ್ತು ತೆಗೆಯುವುದರಿಂದ ತಡೆಯಲಿಲ್ಲ. ಇಂದು ನಾನು ಬಲಹೀನನಾಗಿದ್ದೇನೆ. ಇವನು ಬಲಾಢ್ಯನೂ ಆರೋಗ್ಯವಂತನೂ ಆಗಿರುವನು. ನಾನು ದರಿದ್ರನಾಗಿದ್ದೇನೆ. ಇವನು ಧನಿಕನಾಗಿದ್ದಾನೆ. ಈಗ ಮಾತ್ರ ಇವನು ತನ್ನ ಸೊತ್ತನ್ನು ನನ್ನಿಂದ ದೂರವಿಡುತ್ತಾನೆ".

ಮುದುಕನ ಈ ಮಾತು ಕೇಳಿ ಲೋಕಾನುಗ್ರಹಿಯಾದ ಪ್ರವಾದಿ(ಸ) ಅತ್ತುಬಿಟ್ಟರು. (ಆ ವ್ಯಕ್ತಿಯನ್ನು ಉದ್ದೇಶಿಸಿ 'ನೀನೂ ನಿನ್ನ ಸಂಪತ್ತೂ ನಿನ್ನ ತಂದೆಗೆ ಸೇರಿದ ಸೊತ್ತು' ಎಂದರು.

10. ತಂದೆ ತಾಯಿಗಳು ಮುಸ್ಲಿಮೇತರರಾಗಿದ್ದರೂ ಅವರೊಂದಿಗೆ ಸದ್ವರ್ತನೆ ಕೈಗೊಳ್ಳಿರಿ. ಅವರನ್ನು ಗೌರವಿಸಿರಿ. ಅವರ ಸೇವೆಯನ್ನು ನಿರಂತರ ಮಾಡುತ್ತಿರಿ. ಆದರೆ ಅವರು ದೇವೇತರರ ಆರಾಧನೆಯ ಅಥವಾ ದೇವಾಜ್ಞೆಗಳ ಉಲ್ಲಂಘನೆಯ ಆದೇಶ ನೀಡಿದರೆ ಅವರನ್ನು ಅನುಸರಿಸದಿರಿ.

وَإِنْ جَاهَدَاكَ عَلَىٰٓ أَن تُشْرِكَ بِى مَا لَيْسَ لَكَ بِهِۦ عِلْمٌ فَلَا تُطِعْهُمَا وَصَاحِبْهُمَا فِى ٱلدُّنْيَا مَعْرُوفًا

"ನನ್ನೊಂದಿಗೆ ನಿಮಗರಿವಿಲ್ಲದ ಯಾರನ್ನಾದರೂ ಸಹಭಾಗಿಯಾಗಿ ಮಾಡುವಂತೆ ಅವರು ಒತ್ತಾಯ ಪಡಿಸಿದರೆ ಅವರ ಮಾತನ್ನು ಸ್ವೀಕರಿಸಲೇಬೇಡಿರಿ. ಆದರೆ ಲೌಕಿಕ ವಿಷಯಗಳಲ್ಲಿ ಅವರೊಂದಿಗೆ ಸದ್ವರ್ತನೆ ಕೈಗೊಳ್ಳಿರಿ". (ಪವಿತ್ರ ಕುರ್‌ಆನ್: 31:15)

ಹ. ಅಸ್ಮಾ(ರ) ಹೇಳುತ್ತಾರೆ, ಪ್ರವಾದಿವರ್ಯರ(ಸ) ಕಾಲದಲ್ಲಿ ಒಮ್ಮೆ ನನ್ನ ತಾಯಿ ನನ್ನ ಬಳಿ ಬಂದರು. ಆಗ ಅವರಿನ್ನೂ ಬಹುದೇವ ವಿಶ್ವಾಸಿಯಾಗಿದ್ದರು. ನಾನು ಪ್ರವಾದಿವರ್ಯರಲ್ಲಿ(ಸ) ಈ ರೀತಿ ನಿವೇದಿಸಿದೆ, 'ನನ್ನ ಬಳಿ ನನ್ನ ತಾಯಿ ಬಂದಿರುವರು. ಅವರಿನ್ನೂ ಇಸ್ಲಾಮನ್ನು ದ್ವೇಷಿಸುತ್ತಿರುವರು. ಈ ಪರಿಸ್ಥಿತಿಯಲ್ಲಿ ನಾನು ಅವರೊಂದಿಗೆ ಸದ್ವರ್ತನೆ ಕೈಗೊಳ್ಳಬೇಕೆ? ಪ್ರವಾದಿ(ಸ), 'ಹೌದು! ನೀವು ಅವರೊಂದಿಗೆ ಕರುಣೆಯ ವ್ಯವಹಾರ ಮಾಡಬೇಕು.' ಎಂದು ಆದೇಶಿಸಿದರು. (ಬುಖಾರಿ)

11. ತಂದೆ ತಾಯಿಗಳಿಗಾಗಿ ಸದಾ ಪ್ರಾರ್ಥಿಸುತ್ತಿರಿ. ಅವರು ನಿಮಗೆ ಮಾಡಿರುವ ಉಪಕಾರಗಳನ್ನು ಸ್ಮರಿಸುತ್ತಾ ದೇವನ ಮುಂದೆ ದೈನ್ಯತೆಯೊಂದಿಗೆ ಅತ್ತು ಕೂಗಿ ಪ್ರಾರ್ಥಿಸಿರಿ. ಮನದಾಳದಿಂದ ಹೃತ್ಪೂರ್ವಕವಾಗಿ ಅವರಿಗಾಗಿ ಕರುಣೆಯನ್ನು ಅಂಗಲಾಚಿರಿ. ಅಲ್ಲಾಹನು ಹೇಳುತ್ತಾನೆ:

وَقُل رَّبِّ ٱرْحَمْهُمَا كَمَا رَبَّيَانِى صَغِيرًا ﴿٢٤﴾

"ವಕುರ್‌ರಬ್ಬಿರ್‌ಹಮ್‌ಹುಮಾ ಕಮಾ ರಬ್ಬಯಾನೀ ಸಗೀರಾ".

(ಈ ರೀತಿ ಪ್ರಾರ್ಥಿಸಿರಿ, ಅವರು ನನ್ನನ್ನು ಬಾಲ್ಯದಲ್ಲಿ ಪಾಲಿಸಿ ಪೋಷಿಸಿದಂತೆ ಅವರೀರ್ವರ ಮೇಲೂ ಕರುಣೆ ತೋರು.) (ಪವಿತ್ರ ಕುರ್‌ಆನ್, 17:24)

ಅರ್ಥಾತ್ ಬಾಲ್ಯದ ಅಸಹಾಯಕ ಅವಸ್ಥೆಯಲ್ಲಿ ಅವರು ನನ್ನನ್ನು ಕರುಣೆ ಮತ್ತು ಪ್ರೀತಿ ವಾತ್ಸಲ್ಯದೊಂದಿಗೆ ಸಾಕಿ ಸಲಹಿದರು. ನನಗಾಗಿ ತಮ್ಮ ಸುಖವನ್ನು ಬಲಿನೀಡಿದರು. ಈಗ ವೃದ್ಧಾಪ್ಯದ ದೌರ್ಬಲ್ಯ ಮತ್ತು ಅಸಹಾಯಕತೆಯಲ್ಲಿ ಅವರು ನನಗಿಂತ ಹೆಚ್ಚು ದಯೆ ಕಾರುಣ್ಯಗಳಿಗೆ ಅರ್ಹರಾಗಿರುವರು. ದೇವಾ! ನಾನು ಅವರಿಗೆ ಯಾವ ಪ್ರತಿಫಲವನ್ನು ನೀಡಲೂ ಅಶಕ್ತನು. ನೀನೇ ಅವರ ಮೇಲ್ನೋಟ ವಹಿಸು. ಅವರ ದಯನೀಯ ಸ್ಥಿತಿಯಲ್ಲಿ ಅವರ ಮೇಲೆ ಕರುಣೆ ತೋರು.

12. ತಾಯಿಯ ಸೇವೆಯ ಬಗ್ಗೆ ವಿಶೇಷ ಗಮನ ಹರಿಸಿರಿ. ತಾಯಿಯು ಸ್ವಾಭಾವಿಕವಾಗಿ ಹೆಚ್ಚು ಬಲಹೀನೆ ಮತ್ತು ಭಾವುಕಳಾಗಿರುತ್ತಾಳೆ. ಆಕೆಯೇ ನಿಮ್ಮ ಸೇವೆ ಮತ್ತು ಸದ್ವರ್ತನೆಗೆ ಹೆಚ್ಚು ಅರ್ಹಳಾಗಿರುತ್ತಾಳೆ. ಆಕೆಯ ಉಪಕಾರಗಳು ಮತ್ತು ತ್ಯಾಗಗಳು ಕೂಡ ತಂದೆಗಿಂತ ಎಷ್ಟೋ ಪಾಲು ಅಧಿಕವಾಗಿರುತ್ತದೆ. ಆದ್ದರಿಂದ ಇಸ್ಲಾಮ್ ಧರ್ಮವು ತಾಯಿಯ ಹಕ್ಕು

ಬಾಧ್ಯತೆಗಳು ಹೆಚ್ಚೆಂದು ಹೇಳಿದೆ. ತಾಯಿಯೊಂದಿಗೆ ಸದ್ವರ್ತನೆ ಮಾಡುವಂತೆ ಹೆಚ್ಚು ಪ್ರೇರೇಪಿಸಿದೆ. ಪವಿತ್ರ ಕುರ್‌ಆನ್ ಈ ರೀತಿ ಹೇಳುತ್ತದೆ:

وَوَصَّيْنَا الْإِنسَانَ بِوَالِدَيْهِ إِحْسَانًا ۖ حَمَلَتْهُ أُمُّهُ كُرْهًا وَوَضَعَتْهُ كُرْهًا ۖ
وَحَمْلُهُ وَفِصَالُهُ ثَلَاثُونَ شَهْرًا ۚ

"ನಾವು ತಂದೆ ತಾಯಿಗಳ ಜೊತೆ ಉತ್ತಮ ವ್ಯವಹಾರ ಕೈಗೊಳ್ಳುವಂತೆ ಆದೇಶಿಸಿದ್ದೇವೆ. ಅವನ ತಾಯಿ ಅವನನ್ನು ಕಷ್ಟ ಸಹಿಸಿ ಹೊಟ್ಟೆಯಲ್ಲಿ ಹೊತ್ತು ನಡೆದಳು. ಕಷ್ಟ ಸಹಿಸಿಯೇ ಅವನನ್ನು ಹಡೆದಳು. ಹೊಟ್ಟೆಯಲ್ಲಿ ಹೊರುವ ಮತ್ತು ಹಾಲುಣಿಸುವ(ಸಂಕಷ್ಟದ) ಅವಧಿಯು ಎರಡೂವರೆ ವರ್ಷಗಳಾಗಿವೆ". (ಪವಿತ್ರ ಕುರ್‌ಆನ್, 46:15)

ಪವಿತ್ರ ಕುರ್‌ಆನ್ ತಂದೆ ತಾಯಿಗಳೊಂದಿಗೆ ಉತ್ತಮ ವ್ಯವಹಾರವನ್ನು ಆದೇಶಿಸುತ್ತಾ ತಾಯಿಯು ನಿರಂತರ ಸಂಕಷ್ಟಗಳನ್ನು ಸಹಿಸುವುದನ್ನು ಬಹಳ ಪ್ರಭಾವಪೂರ್ಣ ಶೈಲಿಯಲ್ಲಿ ಚಿತ್ರಿಸಿದೆ. ಅತ್ಯುತ್ತಮವಾದ ಭಾವನಾತ್ಮಕ ಶೈಲಿಯಲ್ಲಿ ತ್ಯಾಗದ ಪ್ರತಿರೂಪವಾದ ತಾಯಿಯು ತಂದೆಗಿಂತ ನಿಮ್ಮ ಸದ್ವರ್ತನೆ ಮತ್ತು ಸೇವೆಗೆ ಹೆಚ್ಚು ಅರ್ಹಳು ಎಂಬುದನ್ನು ಮಾರ್ಮಿಕವಾಗಿ ವಿವರಿಸಿದೆ. ಈ ವಾಸ್ತವಿಕತೆಯನ್ನು ಪ್ರವಾದಿ(ಸ) ಕೂಡ ಸ್ಪಷ್ಟವಾಗಿ ವಿವರಿಸಿದ್ದಾರೆ. ಹ. ಅಬೂಹುರೈರಾ(ರ) ಹೇಳುತ್ತಾರೆ: ಓರ್ವ ವ್ಯಕ್ತಿ ಪ್ರವಾದಿವರ್ಯರ(ಸ) ಬಳಿ ಬಂದು ಈ ರೀತಿ ವಿಚಾರಿಸಿದರು. 'ಓ ಪ್ರವಾದಿವರ್ಯರೇ! ನನ್ನ ಸದ್ವರ್ತನೆಗೆ ಅತ್ಯಧಿಕ ಅರ್ಹರು ಯಾರು?' "ನಿಮ್ಮ ತಾಯಿ" ಎಂದು ಪ್ರವಾದಿ(ಸ) ಉತ್ತರಿಸಿದರು. 'ಆ ಬಳಿಕ ಯಾರು?' ಎಂದು ಅವರು ವಿಚಾರಿಸಿದರು. "ನಿಮ್ಮ ತಾಯಿ" ಎಂದು ಪ್ರವಾದಿ(ಸ) ಉತ್ತರಿಸಿದರು. 'ತರುವಾಯ ಯಾರು?' ಎಂದು ಅವರು ಪ್ರಶ್ನಿಸಿದರು. "ನಿಮ್ಮ ತಾಯಿ" ಎಂದು ಪ್ರವಾದಿ(ಸ) ಉತ್ತರಿಸಿದರು. 'ಮತ್ತೆ ಯಾರು?' ಎಂದು ಕೇಳಿದಾಗ ಪ್ರವಾದಿ(ಸ) "ನಿಮ್ಮ ತಂದೆ" ಎಂದು ಉತ್ತರಿಸಿದರು. (ಅಲ್ ಅದಬುಲ್ ಮುಫ್ರದ್)

ಹ. ಜಾಹಿಮ(ರ) ಪ್ರವಾದಿವರ್ಯರ(ಸ) ಬಳಿ ಬಂದು, 'ಓ ಪ್ರವಾದಿವರ್ಯರೇ! ನಾನು ತಮ್ಮೊಂದಿಗೆ ಜಿಹಾದ್‌ನಲ್ಲಿ ಭಾಗವಹಿಸ ಬಯಸುತ್ತೇನೆ. ಆದ್ದರಿಂದ ತಮ್ಮಲ್ಲಿ ಆ ಬಗ್ಗೆ ಸಮಾಲೋಚಿಸಲು ಬಂದಿರುವೆನು' (ಏನಪ್ಪಣೆ) ಎಂದು ಹೇಳಿದರು. ಪ್ರವಾದಿ(ಸ) ವಿಚಾರಿಸಿದರು, 'ನಿಮ್ಮ ತಾಯಿ ಜೀವಿಸಿದ್ದಾರೆಯೆ?' ಜಾಹಿಮ(ರ) 'ಹೌದೆ'ಂದರು. ಆಗ ಪ್ರವಾದಿ(ಸ) 'ಹೋಗಿ ಅವರ ಸೇವೆ ಮಾಡುತ್ತಿರಿ. ಏಕೆಂದರೆ ಸ್ವರ್ಗವು ಅವರ ಪಾದಗಳಡಿಯಲ್ಲಿದೆ' ಎಂದು ಆದೇಶಿಸಿದರು. (ಇಬ್ನು ಮಾಜಃ, ನಸಾಈ)

ಹ. ಉವೈಸ್(ರ) ಪ್ರವಾದಿವರ್ಯರ(ಸ) ಕಾಲದಲ್ಲಿ ಜೀವಿಸಿದ್ದರು. ಆದರೆ ಪ್ರವಾದಿವರ್ಯರನ್ನು(ಸ) ಭೇಟಿಯಾಗುವ ಸೌಭಾಗ್ಯ ಹೊಂದಲಿಲ್ಲ. ಅವರಿಗೆ ಮುದಿ ತಾಯಿ ಇದ್ದರು. ರಾತ್ರೆ ಹಗಲು ಅವರು ತಾಯಿಯ ಸೇವೆಯಲ್ಲೇ ನಿರತರಾಗಿರುತ್ತಿದ್ದರು. ಅವರಿಗೆ ಪ್ರವಾದಿ

ವರ್ಯರನ್ನು(ಸ) ಭೇಟಿಯಾಗುವ ಅತೀವ ಆಗ್ರಹವಿತ್ತು. ಪ್ರವಾದಿವರ್ಯರ(ಸ) ದರ್ಶನ ಭಾಗ್ಯ ಪಡೆಯುವ ಹಂಬಲವಿಲ್ಲದ ಸತ್ಯವಿಶ್ವಾಸಿ ಯಾರಿರಬಹುದು? ಆದ್ದರಿಂದ ಉವೈಸ್(ರ) ಪ್ರವಾದಿವರ್ಯರ(ಸ) ದರ್ಶನಕ್ಕೆ ಬರಲು ಬಯಸಿದ್ದರು. ಆದರೆ ಪ್ರವಾದಿವರ್ಯರು(ಸ) ಅವರಿಗೆ ಅನುಮತಿ ನೀಡಲಿಲ್ಲ. ಹಜ್ಜ್ ನೆರವೇರಿಸುವ ಹಂಬಲವೂ ಅವರಿಗಿತ್ತು. ಆದರೆ ತಾಯಿ ಜೀವಿಸಿರುವ ತನಕ ಅವರನ್ನು ಒಬ್ಬಂಟಿಗರಾಗಿ ಬಿಟ್ಟು ಹಜ್ಜ್ ಮಾಡಲು ಅವರು ಸಿದ್ಧರಾಗಲಿಲ್ಲ. ತಾಯಿಯ ಮರಣಾನಂತರವೇ ಅವರ ಈ ಬಯಕೆ ಈಡೇರಿತು.

13. ಮೊಲೆ ಹಾಲುಣಿಸಿದ ತಾಯಿಯೊಂದಿಗೂ ಉತ್ತಮವಾಗಿ ವ್ಯವಹರಿಸಿರಿ. ಅವರ ಸೇವೆ ಮಾಡಿರಿ. ಅವರೊಂದಿಗೆ ಗೌರವಾದರಗಳಿಂದ ವರ್ತಿಸಿರಿ. ಹ. ಅಬೂತುಫೈಲ್(ರ) ಹೇಳುತ್ತಾರೆ, ನಾನು 'ಜಿಅರಾನಾ'ದಲ್ಲಿ ಪ್ರವಾದಿವರ್ಯರು(ಸ) ಮಾಂಸ ಹಂಚುವುದನ್ನು ಕಂಡೆ. ಅಷ್ಟರಲ್ಲಿ ಓರ್ವ ಮಹಿಳೆ ಪ್ರವಾದಿವರ್ಯರ(ಸ) ಅತ್ಯಂತ ಸಮೀಪ ಬಂದರು. ಪ್ರವಾದಿ(ಸ) ಅವರಿಗಾಗಿ ತಮ್ಮ ಶಾಲನ್ನು ಹಾಸಿದರು. ಅವರು ಅದರಲ್ಲಿ ಕುಳಿತರು. ಆ ಮಹಿಳೆ ಯಾರೆಂದು ನಾನು ಜನರಲ್ಲಿ ವಿಚಾರಿಸಿದೆ. ಆಗ ಅವರು ಅದು ಪ್ರವಾದಿವರ್ಯರಿಗೆ(ಸ) ಮೊಲೆ ಹಾಲುಣಿಸಿದ ತಾಯಿ ಎಂದು ಹೇಳಿದರು. (ಅಬೂದಾವೂದ್)

14. ತಂದೆ ತಾಯಿಗಳ ಮರಣಾನಂತರವೂ ಅವರ ಬಗ್ಗೆ ಕಾಳಜಿ ಇರಲಿ. ಅವರೊಂದಿಗೆ ಉತ್ತಮವಾಗಿ ವ್ಯವಹರಿಸಲು ಈ ಕೆಳಗಿನ ವಿಷಯಗಳನ್ನು ಪಾಲಿಸಿರಿ.

i) ತಂದೆ ತಾಯಿಗಳ ಕ್ಷಮಾಪಣೆಗಾಗಿ ಸದಾ ಪ್ರಾರ್ಥಿಸುತ್ತಿರಿ. ಪವಿತ್ರ ಕುರ್‌ಆನ್ ಸತ್ಯವಿಶ್ವಾಸಿಗಳಿಗೆ ಈ ಪ್ರಾರ್ಥನೆಯನ್ನು ಬೋಧಿಸುತ್ತದೆ:

رَبَّنَا اغْفِرْ لِي وَلِوَالِدَيَّ وَلِلْمُؤْمِنِينَ يَوْمَ يَقُومُ الْحِسَابُ ﴿٤١﴾

**"ರಬ್ಬನಗ್‌ಫಿರ್‌ಲೀ ವಲಿವಾಲಿದಯ್ಯ ವಲಿಲ್ ಮುಅ್‌ಮಿನೀನ ಯೌಮ ಯಕೂಮುಲ್ ಹಿಸಾಬ್".**

**(ನಮ್ಮ ಪ್ರಭೂ! ನನಗೂ ನನ್ನ ತಂದೆ ತಾಯಿಗಳಿಗೂ ಕ್ಷಮೆಯನ್ನು ದಯಪಾಲಿಸು ಮತ್ತು ಲೆಕ್ಕಾಚಾರ ನಡೆಯುವ ದಿವಸ ಎಲ್ಲ ಸತ್ಯವಿಶ್ವಾಸಿಗಳನ್ನೂ ಕ್ಷಮಿಸು.)**

**(ಪವಿತ್ರ ಕುರ್‌ಆನ್, 14:41)**

ಹ. ಅಬೂಹುರ್ರೈರಾ(ರ) ಹೇಳುತ್ತಾರೆ, "ತೀರಿದ ಮೇಲೆ ಮೃತರ ಸ್ಥಾನಮಾನಗಳು ಏರಿಸಲ್ಪಟ್ಟಾಗ ಅವರು ಆಶ್ಚರ್ಯಚಕಿತರಾಗಿ ಇದು ಹೇಗಾಯಿತೆಂದು ಕೇಳುತ್ತಾರೆ. ನಿಮ್ಮ ಸಂತಾನಗಳು ನಿಮ್ಮ ಕ್ಷಮಾಪಣೆಗಾಗಿ ಪ್ರಾರ್ಥಿಸುತ್ತಿದ್ದರು ಹಾಗೂ ಆ ಪ್ರಾರ್ಥನೆ ಸ್ವೀಕೃತ ವಾಯಿತು ಎಂದು ಅಲ್ಲಾಹನ ವತಿಯಿಂದ ಉತ್ತರಿಸಲಾಗುವುದು.

ಹ. ಅಬೂಹುರ್ರೈರಾ(ರ) ಅವರೇ ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು: "ಒಬ್ಬ ವ್ಯಕ್ತಿ ತೀರಿಕೊಂಡಾಗ ಅವನ ಕರ್ಮದ ಅವಧಿಯು ಮುಗಿಯುತ್ತದೆ. ಮೂರು ವಸ್ತುಗಳು ಮಾತ್ರ ಅವನಿಗೆ ಮರಣಾನಂತರವೂ ನಿರಂತರ ಫಲ ಕೊಡುತ್ತಿರುತ್ತವೆ. ಶಾಶ್ವತ ಸ್ವರೂಪದ ದಾನ-

ಧರ್ಮ. ಇತರರು ಪ್ರಯೋಜನ ಪಡೆಯುವಂತೆ ಅವನು ಕಲಿಸಿ ಹೋದ ವಿದ್ಯೆ. ಅವನ ಕ್ಷಮಾಪಣೆಗಾಗಿ ಪ್ರಾರ್ಥಿಸುತ್ತಿರುವ ಅವನ ಸತ್-ಸಂತಾನಗಳು".

ii) ತಂದೆ ತಾಯಿಗಳು ಮಾಡಿರುವ ವಾಗ್ದಾನಗಳನ್ನು ಮತ್ತು ಅವರ ಉಯಿಲನ್ನು ಪಾಲಿಸಿರಿ. ಅವರು ತಮ್ಮ ಜೀವಿತ ಕಾಲದಲ್ಲಿ ಅನೇಕರೊಂದಿಗೆ ವಾಗ್ದಾನಗಳನ್ನು ಮಾಡಿರಬಹುದು. ಅವರು ಅಲ್ಲಾಹನೊಂದಿಗೆ ಏನಾದರೂ ವಾಗ್ದಾನ ಮಾಡಿರಬಹುದು. ಹರಕೆ ಹೊತ್ತಿರಬಹುದು. ಯಾರಿಗಾದರೂ ಹಣ ಕೊಡುವ ವಾಗ್ದಾನ ಮಾಡಿರಬಹುದು. ಅವರ ಮೇಲೆ ಇತರರ ಋಣಭಾರವಿರಬಹುದು. ಅದನ್ನು ತೀರಿಸಲು ಜೀವಿತ ಕಾಲದಲ್ಲಿ ಸಾಧ್ಯವಾಗದೆ ಹೋಗಿರಬಹುದು. ಮರಣ ವೇಳೆಯಲ್ಲಿ ಅವರೇನಾದರೂ ಉಯಿಲು ಮಾಡಿರಬಹುದು. ನಿಮಗೆ ಸಾಧ್ಯವಿದ್ದಷ್ಟು ಈ ಎಲ್ಲ ಕಾರ್ಯಗಳನ್ನು ಪಾಲಿಸಿರಿ.

ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಹೇಳುತ್ತಾರೆ: ಸಅದ್ ಬಿನ್ ಉಬಾದಃ(ರ), ಪ್ರವಾದಿ ವರ್ಯರಲ್ಲಿ(ಸ) ಈ ರೀತಿ ನಿವೇದಿಸಿದರು: ಓ ಪ್ರವಾದಿವರ್ಯರೇ! ನನ್ನ ತಾಯಿ ಒಂದು ಹರಕೆ ಹೊತ್ತಿದ್ದರು. ಆದರೆ ಅದನ್ನು ಪೂರೈಸುವುದಕ್ಕಿಂತ ಮುಂಚೆಯೇ ತೀರಿಕೊಂಡರು. ನಾನು ಅವರ ಹರಕೆಯನ್ನು ಪೂರೈಸಲೇ? ಪ್ರವಾದಿ(ಸ) ಹೇಳಿದರು, ಖಂಡಿತ ನೀವು ಅವರ ಹರಕೆಯನ್ನು ಪೂರೈಸಬೇಕು.

iii) ತಂದೆ ತಾಯಿಗಳ ಮಿತ್ರರೊಂದಿಗೂ ಉತ್ತಮವಾಗಿ ವರ್ತಿಸಿರಿ. ಅವರನ್ನು ಗೌರವಿಸಿರಿ. ನಿಮ್ಮ ಹಿರಿಯರಂತೆ ಅವರಲ್ಲೂ ಸಮಾಲೋಚನೆಗಳನ್ನು ನಡೆಸಿರಿ. ಅವರ ಸಲಹೆ ಸೂಚನೆ ಗಳನ್ನು ಗೌರವಿಸಿರಿ. ಒಮ್ಮೆ ಪ್ರವಾದಿ(ಸ) ಈ ರೀತಿ ಹೇಳಿದರು: 'ಅತ್ಯುತ್ತಮ ವ್ಯವಹಾರವೆಂದರೆ ಒಬ್ಬನ ಸಂತಾನವು ತನ್ನ ತಂದೆಯ ಮಿತ್ರರೊಂದಿಗೆ ಸದ್ವರ್ತನೆ ಮಾಡುವುದಾಗಿದೆ.'

ಒಮ್ಮೆ ಹ. ಅಬುದ್ದರ್ದಾ(ರ) ರೋಗಗ್ರಸ್ತರಾದರು. ರೋಗವು ಉಲ್ಬಣಿಸುತ್ತಲೇ ಹೋಯಿತು. ಅವರ ಉಳಿವಿನ ಯಾವ ಆಸೆಯೂ ಉಳಿಯಲಿಲ್ಲ. ಹ. ಯೂಸುಫ್ ಬಿನ್ ಅಬ್ದುಲ್ಲಾ(ರ) ಬಹಳ ದೀರ್ಘ ಪ್ರಯಾಣ ಮಾಡಿ ಅವರ ದರ್ಶನಕ್ಕೆ ಹೋದರು. ಹ. ಅಬುದ್ದರ್ದಾರು(ರ) ಅವರನ್ನು ಕಂಡು, "ನೀವು ಇಲ್ಲಿ ಹೇಗೆ ಬಂದಿರಿ?" ಎಂದು ವಿಚಾರಿಸಿದರು. 'ನಾನು ಕೇವಲ ನಮ್ಮ ತಂದೆಯೊಂದಿಗೆ ನಿಮ್ಮ ಮಿತ್ರತ್ವದ ಕಾರಣ ನಿಮ್ಮ ದರ್ಶನಕ್ಕಾಗಿ ಬಂದಿರುವೆನು' ಎಂದು ಹ. ಯೂಸುಫ್ ಬಿನ್ ಅಬ್ದುಲ್ಲಾ(ರ) ಹೇಳಿದರು.

ಹ. ಅಬುದ್ದರ್ದಾ(ರ) ಹೇಳುತ್ತಾರೆ: ನಾನು ಮದೀನಾಕ್ಕೆ ಬಂದಾಗ ಅಬ್ದುಲ್ಲಾ ಬಿನ್ ಉಮರ್(ರ) ನನ್ನ ಬಳಿಗೆ ಬಂದರು. 'ನಿಮ್ಮ ಬಳಿ ನಾನು ಏಕೆ ಬಂದೆನೆಂದು ನಿಮಗೆ ತಿಳಿದಿದೆಯೇ' ಎಂದು ವಿಚಾರಿಸಿದರು. 'ನಾನು ತಿಳಿದಿಲ್ಲ'ವೆಂದಾಗ, ಹ. ಅಬ್ದುಲ್ಲಾ ಬಿನ್ ಉಮರ್(ರ) ಹೇಳಿದರು "ಯಾವ ವ್ಯಕ್ತಿ ಗೋರಿಯಲ್ಲಿರುವ ತನ್ನ ತಂದೆಯೊಂದಿಗೆ ಸದ್ವರ್ತನೆ ಮಾಡಬಯಸುತ್ತಾನೋ ಅವನು ತಂದೆಯ ನಿಧನಾನಂತರ ಅವರ ಮಿತ್ರರೊಂದಿಗೆ ಸದ್ವರ್ತನೆ ಕೈಗೊಳ್ಳಬೇಕು." ತರುವಾಯ ಹೇಳಿದರು, ನನ್ನ ತಂದೆ ಹ. ಉಮರ್(ರ) ಮತ್ತು ನಿಮ್ಮ ತಂದೆಯೊಳಗೆ ಗಾಢ ಮಿತ್ರತ್ವವಿತ್ತು. ನಾನು ಆ ಮಿತ್ರತ್ವವನ್ನು ಪಾಲಿಸಿ ಅದರ ಹಕ್ಕು ಬಾಧ್ಯತೆಗಳನ್ನು ನೆರವೇರಿಸ ಬಯಸುತ್ತೇನೆ. (ಇಬ್ನು ಹಿಬ್ಬಾನ್)

iv) ತಂದೆ ತಾಯಿಗಳ ಬಂಧುಗಳೊಂದಿಗೂ ಸದ್‌ವ್ಯವಹಾರ ಕೈಗೊಳ್ಳಿರಿ. ಈ ರಕ್ತ ಸಂಬಂಧದ ಕರ್ತವ್ಯಗಳನ್ನು ಪೂರ್ಣವಾಗಿ ಪಾಲಿಸಿರಿ. ಅವರನ್ನು ಉಪೇಕ್ಷಿಸುವುದು ತಂದೆ ತಾಯಿಗಳನ್ನು ಉಪೇಕ್ಷಿಸಿದಂತೆ. "ನೀವು ನಿಮ್ಮ ತಂದೆ ತಾಯಂದಿರನ್ನು ಉಪೇಕ್ಷೆಯಿಂದ ಕಾಣದಿರಿ. ತಂದೆ ತಾಯಿಗಳ ಉಪೇಕ್ಷೆ ಅಲ್ಲಾಹನ ಕೃತಘ್ನತೆಯಾಗಿದೆ" ಎಂದು ಪ್ರವಾದಿ(ಸ) ಆದೇಶಿಸಿರುವರು.

15. ಜೀವಮಾನದಲ್ಲಿ ತಂದೆತಾಯಿಗಳೊಂದಿಗೆ ವ್ಯವಹರಿಸುವುದರಲ್ಲಿ, ಅವರ ಸೇವೆ ಗೈಯುವುದರಲ್ಲಿ, ಅವರ ಹಕ್ಕುಗಳನ್ನು ತೀರಿಸುವುದರಲ್ಲಿ ಕುಂದುಂಟಾಗಿದ್ದರೆ ದೇವಾನುಗ್ರಹ ದಿಂದ ನಿರಾಶರಾಗದೆ ಮರಣಾನಂತರ ಸದಾ ಅವರಿಗಾಗಿ ಕ್ಷಮೆಯ ಪ್ರಾರ್ಥನೆ ಮಾಡುತ್ತಲಿರಿ. ನಿಮ್ಮ ಪಾಪಗಳನ್ನು ಕ್ಷಮಿಸಿ ಅಲ್ಲಾಹನು ನಿಮ್ಮನ್ನು ತನ್ನ ಸದ್ಭಕ್ತರಲ್ಲಿ ಸೇರಿಸಲೂಬಹುದು.

ಹ. ಅನಸ್(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು:

"ಒಬ್ಬ ದೇವನ ದಾಸನು ಜೀವಮಾನದಲ್ಲಿ ತಂದೆ ತಾಯಿಗಳ ಆಜ್ಞೋಲ್ಲಂಘನೆ ಮಾಡಿದರೆ ಹಾಗೂ ಈ ಸ್ಥಿತಿಯಲ್ಲೇ ಅವರಿಬ್ಬರು ಅಥವಾ ಆ ಪೈಕಿ ಒಬ್ಬರು ನಿಧನರಾದರೆ ಅವರಿಗಾಗಿ ಸದಾ ಪ್ರಾರ್ಥಿಸುತ್ತಿರಬೇಕು. ಅಲ್ಲಾಹನಲ್ಲಿ ಅವರಿಗಾಗಿ ಕ್ಷಮಾಪಣೆಯನ್ನು ಯಾಚಿಸಬೇಕು. ಅಲ್ಲಾಹನು ತನ್ನ ಕರುಣೆಯಿಂದ ಅವನನ್ನು ತನ್ನ ಸದ್ಭಕ್ತರಲ್ಲಿ ಸೇರಿಸುವ ತನಕವೂ ಅವನು ಹೀಗೆ ಮಾಡುತ್ತಿರಬೇಕು."

# ದಾಂಪತ್ಯ ಜೀವನ

## ಪತಿಯ ಕರ್ತವ್ಯಗಳು

ಇಸ್ಲಾಮ್ ಅತ್ಯುತ್ತಮ ಸಂಸ್ಕೃತಿ ಮತ್ತು ನಾಗರಿಕತೆಯ ಕರೆ ನೀಡುತ್ತದೆ. ಅದು ಅಸ್ತಿತ್ವಕ್ಕೆ ಬರಬೇಕಾದರೆ ನಾವು ಒಂದು ಪರಿಶುದ್ಧ ಸಮಾಜದ ನಿರ್ಮಾಣದಲ್ಲಿ ಸಫಲರಾಗ ಬೇಕು. ಪರಿಶುದ್ಧ ಸಮಾಜದ ನಿರ್ಮಾಣಕ್ಕೆ ನೀವು ಕೌಟುಂಬಿಕ ವ್ಯವಸ್ಥೆಯನ್ನು ಹೆಚ್ಚೆಚ್ಚು ಸುದೃಢ ಹಾಗೂ ಸಫಲಗೊಳಿಸಬೇಕು. ಕುಟುಂಬ ಜೀವನದ ಆರಂಭವು ಪತಿ-ಪತ್ನಿಯರ ಪಾವನ ದಾಂಪತ್ಯ ಸಂಬಂಧದಿಂದಾಗುತ್ತದೆ. ಈ ಸಂಬಂಧವು ಸುಖಕರವೂ, ಸ್ಥಾಯಿಯೂ ಆಗಬೇಕಾದರೆ ಪತಿ-ಪತ್ನಿಯರಿಬ್ಬರೂ ದಾಂಪತ್ಯ ಜೀವನದ ಶಿಷ್ಟಾಚಾರ ಮತ್ತು ಕರ್ತವ್ಯ ಗಳನ್ನು ಚೆನ್ನಾಗಿ ಅರಿತಿರಬೇಕು. ಆ ಶಿಷ್ಟಾಚಾರ ಮತ್ತು ಕರ್ತವ್ಯಗಳನ್ನು ಕಳಕಳಿ, ನಿಷ್ಠೆ ಮತ್ತು ಪ್ರಾಮಾಣಿಕತೆಯಿಂದ ಪಾಲಿಸಲು ಉದ್ಯುಕ್ತರಾಗಬೇಕು. ಮೊದಲು ನಾವು ಪತಿಯು ಪಾಲಿಸಬೇಕಾದ ಶಿಷ್ಟಾಚಾರಗಳನ್ನು ವಿವರಿಸುವೆವು. ಆ ಬಳಿಕ ಪತ್ನಿಗೆ ಸಂಬಂಧಿಸಿದ ಶಿಷ್ಟಾಚಾರ ಮತ್ತು ಕರ್ತವ್ಯಗಳನ್ನು ವಿವರಿಸುವೆವು.

1. ಪತ್ನಿಯೊಂದಿಗೆ ಸದ್ವರ್ತನೆಯ ಜೀವನ ಸಾಗಿಸಿರಿ. ಆಕೆಯ ಹಕ್ಕುಬಾಧ್ಯತೆಗಳನ್ನು ವಿಶಾಲ ಹೃದಯದೊಂದಿಗೆ ಪಾಲಿಸಿರಿ. ಪ್ರತಿಯೊಂದು ವಿಷಯದಲ್ಲೂ ಸೌಜನ್ಯ ಮತ್ತು ತ್ಯಾಗದ ಮಾರ್ಗವನ್ನು ಅವಲಂಬಿಸಿರಿ. ಅಲ್ಲಾಹನು ಈ ರೀತಿ ಆಜ್ಞಾಪಿಸಿರುತ್ತಾನೆ:

وَعَاشِرُوهُنَّ بِالْمَعْرُوفِ

**"ಅವರೊಂದಿಗೆ ಉತ್ತಮ ವ್ಯವಹಾರದೊಂದಿಗೆ ಜೀವನ ಸಾಗಿಸಿರಿ".**

**(ಪವಿತ್ರ ಕುರ್‌ಆನ್, 4:19)**

ಪ್ರವಾದಿವರ್ಯರು(ಸ) ತಮ್ಮ ಕೊನೆಯ ಹಜ್ಜ್‌ನ ವೇಳೆ ಒಂದು ಬೃಹತ್ ಸಭೆಯನ್ನು ದ್ದೇಶಿಸಿ ಭಾಷಣ ಮಾಡುತ್ತಾ ಈ ರೀತಿ ಆದೇಶಿಸಿರುವರು: "ಜನರೇ ಕೇಳಿರಿ! ಮಹಿಳೆಯರೊಂದಿಗೆ ಅತ್ಯುತ್ತಮವಾಗಿ ವ್ಯವಹರಿಸಿರಿ. ಅವರು ನಿಮ್ಮ ಬಳಿ ಸೆರೆಯಾಳುಗಳಿದ್ದಂತೆ. ಅವರ ಕಡೆಯಿಂದ ಸುಸ್ಪಷ್ಟ ಆಜ್ಞೋಲ್ಲಂಘನೆ ಪ್ರಕಟವಾಗುವ ಹೊರತು ಅವರೊಂದಿಗೆ ಕಠಿಣ ವ್ಯವಹಾರ ಕೈಗೊಳ್ಳುವ ಯಾವ ಅಧಿಕಾರವೂ ನಿಮಗಿಲ್ಲ. ಅವರು ಆಜ್ಞೋಲ್ಲಂಘನೆ ಮಾಡಿದರೆ ನಿಮ್ಮ ಶಯನಗೃಹದಿಂದ ಅವರನ್ನು ದೂರವಿರಿಸಿರಿ. ಅವರನ್ನು ಹೊಡೆಯುವುದಾದರೆ ಗಾಯಗಳಾಗುವಂತೆ ಹೊಡೆಯಬೇಡಿರಿ. ಆದರೆ ಅವರು ನಿಮ್ಮ ಮಾತನ್ನು ಪಾಲಿಸಿ ನಡೆಯತೊಡಗಿದರೆ ಬೇಕು ಬೇಕೆಂದೇ ಅವರನ್ನು ಸತಾಯಿಸಲು ನೆಪಗಳನ್ನು ಹುಡುಕಬೇಡಿರಿ.

ಕೇಳಿರಿ! ನಿಮ್ಮ ಪತ್ನಿಯರ ಮೇಲೆ ನಿಮ್ಮ ಕೆಲವು ಹಕ್ಕುಗಳಿವೆ ಮತ್ತು ನಿಮ್ಮ ಮೇಲೆ ಅವರ ಕೆಲವು ಹಕ್ಕುಗಳಿವೆ. ಅವರ ಮೇಲೆ ನಿಮ್ಮ ಹಕ್ಕುಗಳೇನೆಂದರೆ ನಿಮ್ಮ ಶಯನಾಗಾರದಲ್ಲಿ ನಿಮಗಿಷ್ಟವಿಲ್ಲದವರನ್ನು ಸೇರಿಸದಿರುವುದು. ನಿಮಗೆ ಅಪ್ರಿಯರಾ ದವರನ್ನು ನಿಮ್ಮ ಮನೆಯೊಳಗೆ ಪ್ರವೇಶಗೊಳಿಸದಿರುವುದು. ಕೇಳಿರಿ! ನಿಮ್ಮ ಮೇಲಿರುವ ಅವರ ಹಕ್ಕುಗಳು ಏನೆಂದರೆ ಅವರಿಗೆ ಉತ್ತಮವಾದುದನ್ನು ಉಣಿಸುವುದು ಮತ್ತು ಉತ್ತಮವಾದುದನ್ನು ತೊಡಿಸುವುದು".

(ರಿಯಾದುಸ್ಸಾಲಿಹೀನ್)

ದಂಪತಿಗಳ ಅನನ್ಯ ಸಾಮಿಪ್ಯ, ಹೃದಯಂಗಮ ಸಂಬಂಧ ಹಾಗೂ ಸ್ನೇಹ ಭಾವನೆಗೆ ಅನುರೂಪವಾಗುವಂತೆ ಅವರ ಅನ್ನಾಹಾರ ಮತ್ತು ಉಡುಗೆ ತೊಡುಗೆಯ ವ್ಯವಸ್ಥೆ ಮಾಡಿರಿ ಎಂಬುದೇ ಇದರ ತಾತ್ಪರ್ಯ.

2. ಸಾಧ್ಯವಿದ್ದಷ್ಟು ಪತ್ನಿಯ ಬಗ್ಗೆ ಉತ್ತಮ ಗುಮಾನಿಯನ್ನೇ ಇರಿಸಿರಿ. ಅವರೊಂದಿಗೆ ವ್ಯವಹರಿಸುವಲ್ಲಿ ಸಹನೆ, ಸಂಯಮ ಮತ್ತು ಮನೋವೈಶಾಲ್ಯದ ಪಥವನ್ನೇ ಅನುಸರಿಸಿರಿ. ಆಕೆಯ ರೂಪ, ಲಾವಣ್ಯ, ಅಭ್ಯಾಸ, ಗುಣನಡತೆ ಅಥವಾ ಕೌಶಲ್ಯದಲ್ಲೇನಾದರೂ ಕೊರತೆಯಿದ್ದರೆ ಸಹನೆಯೊಂದಿಗೆ ಅದನ್ನು ನಿಭಾಯಿಸಿರಿ. ಆಕೆಯ ಉತ್ತಮ ಗುಣಗಳತ್ತ ದೃಷ್ಟಿ ಇರಿಸಿ ಉದಾರತೆ, ಕ್ಷಮೆ, ತ್ಯಾಗ ಮತ್ತು ಒಪ್ಪಂದದ ಮಾರ್ಗವನ್ನು ಕೈಗೊಳ್ಳಿರಿ. ಅಲ್ಲಾಹನು ಈ ರೀತಿ ಆಜ್ಞಾಪಿಸಿರುವನು:

وَالصُّلْحُ خَيْرٌ

"ಒಪ್ಪಂದವು ಅತ್ಯುತ್ತಮವೇ ಆಗಿದೆ". (ಪವಿತ್ರ ಕುರ್‌ಆನ್, 4:128)

ಸತ್ಯವಿಶ್ವಾಸಿಗಳಿಗೆ ಈ ರೀತಿ ನಿರ್ದೇಶಿಸಲಾಗಿದೆ:

فَإِنْ كَرِهْتُمُوهُنَّ فَعَسَىٰ أَنْ تَكْرَهُوا شَيْئًا وَيَجْعَلَ اللَّهُ فِيهِ خَيْرًا كَثِيرًا ﴿١٩﴾

"ಒಂದು ವೇಳೆ (ಕಾರಣಾಂತರದಿಂದ) ಅವರು ನಿಮಗೆ ಅಪ್ರಿಯವಾದರೆ, ನಿಮಗೆ ಒಂದು ವಿಷಯವು ಅಪ್ರಿಯವಾಗಿದ್ದರೂ ಅಲ್ಲಾಹನು ಅದರಲ್ಲಿ (ನಿಮಗೆ) ಅತ್ಯಧಿಕ ಒಳಿತು ಇಟ್ಟಿರಬಹುದು". (ಪವಿತ್ರ ಕುರ್‌ಆನ್, 4:19)

ಇದೇ ಆಶಯವನ್ನು ಪ್ರವಾದಿ(ಸ) ತಮ್ಮ ವಚನದಲ್ಲಿ ಈ ರೀತಿ ವಿವರಿಸಿದ್ದಾರೆ: "ಯಾವನೇ ಸತ್ಯವಿಶ್ವಾಸಿ ತನ್ನ ಸತ್ಯವಿಶ್ವಾಸಿನಿಯಾದ ಪತ್ನಿಯನ್ನು ದ್ವೇಷಿಸದಿರಲಿ. ಪತ್ನಿಯ ಯಾವುದಾದರೊಂದು ಅಭ್ಯಾಸ ಅವನಿಗೆ ಹಿಡಿಸದಿದ್ದರೆ ಆಕೆಯ ಇನ್ನೊಂದು ಅಭ್ಯಾಸವು ಅವನಿಗೆ ಹಿಡಿಸಲೂ ಬಹುದು".

ವಾಸ್ತವದಲ್ಲಿ ಪ್ರತಿಯೊಬ್ಬ ಮಹಿಳೆಯಲ್ಲೂ ಏನಾದರೊಂದು ಕುಂದು ಕೊರತೆ ಇದ್ದೇ ಇರುತ್ತದೆ. ಪತಿಯು ಆಕೆಯಲ್ಲಿ ಒಂದು ಕುಂದನ್ನು ಕಂಡೊಡನೆ ಮುಖ ತಿರುಗಿಸಿಕೊಂಡು ಮನಸ್ಸು ಕೆಡುಕು ಮಾಡಿಕೊಂಡರೆ ಯಾವ ಕುಟುಂಬದಲ್ಲೂ ಗೃಹ ನೆಮ್ಮದಿಯೆಂಬುದು ಸಿಗ ಲಾರದು. ಕ್ಷಮಾಶೀಲತೆಯೊಂದಿಗೆ ದೇವನ ಮೇಲೆ ಭರವಸೆ ಇಟ್ಟು ಪತ್ನಿಯೊಂದಿಗೆ ಮನಸಾರೆ

ವ್ಯವಹರಿಸಲು ಪ್ರಯತ್ನಿಸುವುದೇ ವಿವೇಕದ ನಡವಳಿಕೆ. ಪತಿಯ ಸಂಕುಚಿತ ದೃಷ್ಟಿಗೆ ಕಾಣಲಾರದ ಒಳಿತುಗಳನ್ನು- ಆ ಪತ್ನಿಯ ಮೂಲಕ ಅಲ್ಲಾಹನು ಅವನಿಗೆ ದಯಪಾಲಿಸ ಬಹುದು. ಉದಾಹರಣೆಗಾಗಿ ಪತ್ನಿಯಲ್ಲಿ ಧರ್ಮ ಮತ್ತು ವಿಶ್ವಾಸ ಹಾಗೂ ಚಾರಿತ್ರ್ಯ ಮತ್ತು ನೀತಿಯ ವಿಶೇಷ ಗುಣಗಳಿರಬಹುದು. ಅವುಗಳಿಂದಾಗಿ ಆಕೆ ಇಡೀ ಕುಟುಂಬಕ್ಕೆ ಅನುಗ್ರಹ ವಾಗಬಹುದು ಅಥವಾ ಆಕೆಯ ಮೂಲಕ ಜಗತ್ತಿಗೇ ಪ್ರಯೋಜನ ನೀಡಬಲ್ಲ ಅತ್ಯುತ್ತಮ ಸೌಭಾಗ್ಯಶಾಲಿ ಜನ್ಮ ಪಡೆಯಬಹುದು. ಅದು ಅನಂತ ಕಾಲದವರೆಗೆ ತಂದೆಗೆ ನಿತ್ಯ ಪುಣ್ಯದ ಹೇತುವಾಗಬಹುದು ಅಥವಾ ಪತ್ನಿಯು ಪತಿಯ ಸುಧಾರಣೆಗೆ ಕಾರಣಕರ್ತೆಯಾಗಬಹುದು. ಅವನನ್ನು ಸ್ವರ್ಗದ ಹಾದಿಗೆ ಹಚ್ಚುವಲ್ಲಿ ಸಹಕಾರಿಯಾಗಬಹುದು. ಆಕೆಯ ಸೌಭಾಗ್ಯದಿಂದ ಪತಿಗೆ ಸಂಪತ್ ಸೌಕರ್ಯಗಳು ಲಭಿಸಬಹುದು. ಏನಿದ್ದರೂ ಪತ್ನಿಯ ಕೆಲವು ಬಾಹ್ಯ ಕೊರತೆ ಗಳನ್ನು ಕಂಡು ಆತುರದಲ್ಲಿ ದಾಂಪತ್ಯ ಜೀವನವನ್ನು ನಾಶಗೊಳಿಸಬೇಡಿರಿ. ಮೆಲ್ಲ ಮೆಲ್ಲನೆ ಮನೆಯ ವಾತಾವರಣವನ್ನು ಹೆಚ್ಚೆಚ್ಚು ಸುಖಮಯಗೊಳಿಸಲು ವಿವೇಕಪೂರ್ಣ ವಿಧಾನದಿಂದ ಶ್ರಮಿಸಿರಿ.

3. ಕ್ಷಮಾಶೀಲತೆ ಮತ್ತು ವಿಶಾಲ ಮನೋಭಾವವನ್ನು ಕೈಗೊಳ್ಳಿರಿ. ಪತ್ನಿಯ ಕುಂದು ಕೊರತೆಗಳನ್ನೂ ಪ್ರಮಾದಗಳನ್ನೂ ಅವಿಧೇಯತೆಗಳನ್ನೂ ಕಡೆಗಣಿಸಿರಿ. ಬುದ್ಧಿ ವಿವೇಕಗಳ ದೃಷ್ಟಿಯಿಂದ ಮಹಿಳೆಯು ಅತ್ಯಂತ ಬಲಹೀನೆ. ಮಾತ್ರವಲ್ಲ ಅತ್ಯಧಿಕ ಭಾವುಕ ಜೀವಿ ಕೂಡ. ಆದ್ದರಿಂದ ಆಕೆಯನ್ನು ಸಹನೆ-ಸಂಯಮ, ಕರುಣೆ-ವಾತ್ಸಲ್ಯ ಮತ್ತು ಸಹಾನುಭೂತಿಯೊಂದಿಗೆ ಸುಧಾರಿಸಲು ಪ್ರಯತ್ನಿಸಿರಿ. ತಾಳ್ಮೆ ಹಾಗೂ ಸ್ಥೈರಣೆಯೊಂದಿಗೆ ಆಕೆಯೊಂದಿಗೆ ನಿಭಾಯಿಸಿರಿ.

ಅಲ್ಲಾಹನು ಈ ರೀತಿ ಆದೇಶಿಸಿರುವನು:

يَاأَيُّهَا الَّذِينَ آمَنُوا إِنَّ مِنْ أَزْوَاجِكُمْ وَأَوْلَادِكُمْ عَدُوًّا لَكُمْ فَاحْذَرُوهُمْ ۚ
وَإِنْ تَعْفُوا وَتَصْفَحُوا وَتَغْفِرُوا فَإِنَّ اللَّهَ غَفُورٌ رَحِيمٌ ﴿١٤﴾

**"ಸತ್ಯವಿಶ್ವಾಸಿಗಳೇ! ನಿಮ್ಮ ಕೆಲವು ಪತ್ನಿಯರು ಮತ್ತು ಕೆಲವು ಮಕ್ಕಳು ನಿಮ್ಮ ಶತ್ರುಗಳಾಗಿರುವರು. ಆದ್ದರಿಂದ ಅವರಿಂದ ಜಾಗರೂಕರಾಗಿರಿ. ನೀವು ಸೌಜನ್ಯ, ಕರುಣೆ ಮತ್ತು ಕ್ಷಮಾಶೀಲತೆಯನ್ನು ಕೈಗೊಂಡರೆ ಖಂಡಿತವಾಗಿಯೂ ಅಲ್ಲಾಹನು ಅತ್ಯಧಿಕ ಕ್ಷಮಾ ಶೀಲನೂ, ಕರುಣಾನಿಧಿಯೂ ಆಗಿರುವನೆಂದು ತಿಳಿಯಿರಿ". (ಪವಿತ್ರ ಕುರ್‌ಆನ್, 64:14)**

ಪ್ರವಾದಿ(ಸ) ಈ ರೀತಿ ಹೇಳಿರುವರು: "ಮಹಿಳೆಯರೊಂದಿಗೆ ಉತ್ತಮವಾಗಿ ವ್ಯವಹರಿಸಿರಿ. ಮಹಿಳೆಯರನ್ನು ಪಕ್ಕೆಲುಬಿನಿಂದ ಸೃಷ್ಟಿಸಲಾಗಿದೆ. ಪಕ್ಕೆಲುಬುಗಳಲ್ಲಿ ಅತ್ಯಂತ ಮೇಲಿನ ಭಾಗವು ಓರೆಯಾಗಿದೆ. ಅದನ್ನು ನೇರಗೊಳಿಸ ಹೊರಟರೆ ಅದು ಮುರಿದೀತು. ಹಾಗೆಯೇ ಬಿಟ್ಟು ಬಿಟ್ಟರೆ ಓರೆಯಾಗಿಯೇ ಉಳಿಯುವುದು. ಆದ್ದರಿಂದ ಮಹಿಳೆಯರೊಂದಿಗೆ ಸದ್ವರ್ತನೆ ಕೈಗೊಳ್ಳಿರಿ". **(ಬುಖಾರಿ, ಮುಸ್ಲಿಮ್)**

4. ಪತ್ನಿಯೊಂದಿಗೆ ಸೌಜನ್ಯ ನೀತಿ ಕೈಗೊಳ್ಳಿರಿ. ಪ್ರೀತಿ, ವಾತ್ಸಲ್ಯದೊಂದಿಗೆ ವರ್ತಿಸಿರಿ.

ಪ್ರವಾದಿ(ಸ) ಈ ರೀತಿ ಹೇಳಿರುವರು: "ಚಾರಿತ್ರ್ಯದಲ್ಲಿ ಅತ್ಯುತ್ತಮನಾದವನೇ ಪರಿಪೂರ್ಣ ಶ್ರದ್ಧೆಯ ಸತ್ಯವಿಶ್ವಾಸಿ. ತಮ್ಮ ಪತ್ನಿಯೊಂದಿಗೆ ಉತ್ತಮ ವ್ಯವಹಾರ ಕೈಗೊಳ್ಳುವವರೇ ನಿಮ್ಮ ಪೈಕಿ ಅತ್ಯುತ್ತಮರು". (ತಿರ್ಮಿದಿ)

ನಮ್ಮ ಸಚ್ಚಾರಿತ್ರ್ಯ ಮತ್ತು ಮೃದು ಸ್ವಭಾವದ ನೈಜ ಪರೀಕ್ಷಾ ಕಣ ಮನೆಯೇ ಆಗಿದೆ. ನಮ್ಮ ಹೆಚ್ಚಿನ ಒಡನಾಟವಿರುವುದು ಮನೆಯವರೊಂದಿಗೆ. ಮನೆಯ ಮುಕ್ತ ಹಾಗೂ ನಿಸ್ಸಂಕೋಚ ಜೀವನದಲ್ಲೇ ಸ್ವಭಾವ ಮತ್ತು ಚಾರಿತ್ರ್ಯದ ಎಲ್ಲ ಮುಖಗಳೂ ಹೊರ ಹೊಮ್ಮುತ್ತವೆ. ವಾಸ್ತವದಲ್ಲಿ ತನ್ನ ಮನೆಯವರೊಂದಿಗೆ ಸಚ್ಚಾರಿತ್ರ್ಯ, ಪ್ರಸನ್ನವದನ ಮತ್ತು ದಯಾಳುತ್ವದ ವರ್ತನೆ ಕೈಗೊಳ್ಳುವವನು ಹಾಗೂ ಅವರೊಂದಿಗೆ ಸಹಾನುಭೂತಿ ಮತ್ತು ಪ್ರೇಮಾನುಕಂಪದೊಂದಿಗೆ ವರ್ತಿಸುವವನೇ ಪರಿಪೂರ್ಣ ಸತ್ಯವಿಶ್ವಾಸಿ.

ಹ. ಆಯಿಶಾ(ರ) ಹೇಳುತ್ತಾರೆ: "ನಾನು ಪ್ರವಾದಿವರ್ಯರ(ಸ) ಮನೆಯಲ್ಲಿ ಗೊಂಬೆಗಳೊಂದಿಗೆ ಆಡುತ್ತಿದ್ದೆ. ನನ್ನ ಗೆಳತಿಯರೂ ನನ್ನೊಂದಿಗೆ ಆಡುತ್ತಿದ್ದರು. ಪ್ರವಾದಿ(ಸ) ಆಗಮಿಸಿದಾಗ ಎಲ್ಲರೂ ಅಲ್ಲಲ್ಲಿ ಅಡಗಿ ಕುಳಿತುಕೊಳ್ಳುತ್ತಿದ್ದರು. ಪ್ರವಾದಿ(ಸ) ಅವರಲ್ಲಿ ಪ್ರತಿಯೊಬ್ಬರನ್ನೂ ಹುಡುಕಿ ಹುಡುಕಿ ನನ್ನ ಬಳಿ ಆಡಲು ಕಳುಹಿಸುತ್ತಿದ್ದರು". (ಬುಖಾರಿ, ಮುಸ್ಲಿಮ್)

ಒಮ್ಮೆ ಹಜ್ಜ್‌ನ ಸಂದರ್ಭದಲ್ಲಿ ಹ. ಸಫಿಯಾರ(ರ) ಒಂಟೆ ಕುಳಿತು ಬಿಟ್ಟಿತು. ಅವರು ಎಲ್ಲರಿಗಿಂತ ಹಿಂದೆ ಬಿದ್ದರು. ಅವರು ಗೋಳೋ ಎಂದು ಅಳುತ್ತಿದ್ದರು. ಪ್ರವಾದಿ(ಸ) ಇದನ್ನು ಕಂಡು ಅಲ್ಲಿ ಇಳಿದು ತಮ್ಮ ಚದ್ದರದಿಂದ ಅವರ ಕಣ್ಣೀರೊರೆಸಿದರು. ಪ್ರವಾದಿ(ಸ) ಕಣ್ಣೀರು ಒರೆಸುತ್ತಿದ್ದಂತೆ ಅವರು ಅಳುತ್ತಲೇ ಹೋಗುತ್ತಿದ್ದರು.

5. ವಿಶಾಲ ಮನಸ್ಸಿನೊಂದಿಗೆ ಜೀವನ ಸಂಗಾತಿಯ ಬಯಕೆ, ಬೇಡಿಕೆಗಳನ್ನು ಈಡೇರಿಸಿರಿ. ಖರ್ಚಿನಲ್ಲಿ ಎಂದೂ ಜಿಪುಣತೆ ತೋರದಿರಿ. ನಿಮ್ಮ ಕಷ್ಟದ ದುಡಿಮೆಯನ್ನು ಮನೆಯವರ ಮೇಲೆ ಖರ್ಚು ಮಾಡಿ ನೆಮ್ಮದಿ ಪಡೆಯಿರಿ. ಅನ್ನ, ಅರಿವೆ ಪತ್ನಿಯ ಹಕ್ಕು. ಆ ಹಕ್ಕನ್ನು ಹೃತ್ಪೂರ್ವಕವಾಗಿ ಹಾಗೂ ಹೃದಯ ವೈಶಾಲ್ಯದೊಂದಿಗೆ ಪೂರೈಸಲು ಶ್ರಮಿಸಬೇಕಾದುದು ಪತಿಯ ನೆಚ್ಚಿನ ಕರ್ತವ್ಯ. ಈ ಕರ್ತವ್ಯವನ್ನು ಮನಸಾರೆ ನಿರ್ವಹಿಸುವುದರಿಂದ ಲೋಕದಲ್ಲಿ ಸುಖಮಯ ದಾಂಪತ್ಯ ಜೀವನದ ಸೌಭಾಗ್ಯ ಲಭಿಸುವುದು ಮಾತ್ರವಲ್ಲ, ಸತ್ಯವಿಶ್ವಾಸಿಯು ತನ್ಮೂಲಕ ಪರಲೋಕದಲ್ಲಿ ಪ್ರತಿಫಲಕ್ಕೂ ಅರ್ಹನಾಗುತ್ತಾನೆ. ಪ್ರವಾದಿ(ಸ) ಈ ರೀತಿ ಹೇಳಿರುವರು: "ಒಂದು ದೀನಾರ್ ನೀವು ದೇವ ಮಾರ್ಗದಲ್ಲಿ ವೆಚ್ಚ ಮಾಡುತ್ತೀರಿ. ಒಂದು ದೀನಾರ್ ನೀವು ಯಾರದಾದರೂ ಜೀತಮುಕ್ತಿಗಾಗಿ ಖರ್ಚು ಮಾಡುತ್ತೀರಿ. ಒಂದು ದೀನಾರ್ ನೀವು ಓರ್ವ ಬಡವನಿಗೆ ದಾನವಾಗಿ ನೀಡುತ್ತೀರಿ. ಒಂದು ದೀನಾರ್ ನೀವು ನಿಮ್ಮ ಮನೆ ಯವರ ಮೇಲೆ ವ್ಯಯಿಸುತ್ತೀರಿ. ಈ ಪೈಕಿ ಮನೆಯವರ ಮೇಲೆ ವ್ಯಯ ಮಾಡಿದ ದೀನಾರ್‌ಗೆ ಅತ್ಯಧಿಕ ಫಲವಿದೆ". (ಮುಸ್ಲಿಮ್)

6. ಪತ್ನಿಗೆ ಧಾರ್ಮಿಕ ವಿಧಿಗಳನ್ನು ಮತ್ತು ಸಂಸ್ಕೃತಿಯನ್ನು ಕಲಿಸಿರಿ. ಅವಳಲ್ಲಿ ಇಸ್ಲಾಮೀ ಚಾರಿತ್ರ್ಯವನ್ನು ಬೆಳೆಸಿರಿ. ಆಕೆಯ ತರಬೇತಿ ಮತ್ತು ಸುಧಾರಣೆಗಾಗಿ ಸರ್ವಸಾಧ್ಯ

ಪ್ರಯತ್ನ ಮಾಡಿರಿ. ಆಕೆಯನ್ನು ಓರ್ವ ಉತ್ತಮ ಪತ್ನಿ, ಉತ್ತಮ ತಾಯಿ ಮತ್ತು ಅಲ್ಲಾಹನ ನಿಷ್ಠಾವಂತ ದಾಸಿಯಾಗಿ ಪರಿವರ್ತಿಸಲು ಪ್ರಯತ್ನಿಸಿರಿ. ತನ್ಮೂಲಕ ತನ್ನ ಕರ್ತವ್ಯಗಳನ್ನು ಅರಿತು ಅವುಗಳನ್ನು ಆಕೆ ಉತ್ತಮ ರೀತಿಯಲ್ಲಿ ನಿರ್ವಹಿಸುವಂತಾಗಲಿ. ಅಲ್ಲಾಹನು ಈ ರೀತಿ ಹೇಳಿರುವನು:

يَاَيُّهَا الَّذِيْنَ اٰمَنُوْا قُوْٓا اَنْفُسَكُمْ وَ اَهْلِيْكُمْ نَارًا

"ಸತ್ಯವಿಶ್ವಾಸಿಗಳೇ! ನಿಮ್ಮನ್ನೂ ನಿಮ್ಮ ಮನೆಯವರನ್ನೂ ನರಕಾಗ್ನಿಯಿಂದ ರಕ್ಷಿಸಿರಿ".

(ಪವಿತ್ರ ಕುರ್‌ಆನ್, 66:6)

ಪ್ರವಾದಿ(ಸ) ಹೊರಗೆ ಶಿಕ್ಷಣ-ಬೋಧನೆಗಳಲ್ಲಿ ನಿರತರಾಗಿದ್ದಂತೆ ಮನೆಯಲ್ಲೂ ಆ ಕರ್ತವ್ಯವನ್ನು ನೆರವೇರಿಸುತ್ತಿದ್ದರು. ಇದರ ಕಡೆಗೆ ಸಂಕೇತ ಮಾಡಿಯೇ ಪವಿತ್ರ ಕುರ್‌ಆನ್ ಈ ರೀತಿ ಹೇಳಿದೆ:

وَاذْكُرْنَ مَا يُتْلٰى فِيْ بُيُوْتِكُنَّ مِنْ اٰيٰتِ اللّٰهِ وَالْحِكْمَةِ

"ನಿಮ್ಮ ಮನೆಗಳಲ್ಲಿ ಅಲ್ಲಾಹನ ಆಯತ್‌ಗಳನ್ನು ಪಠಿಸಲಾಗುತ್ತಿದೆ ಹಾಗೂ ವಿವೇಕದ ಮಾತುಗಳನ್ನು ಕೇಳಿಸಲಾಗುತ್ತಿದೆ. ಅವುಗಳನ್ನು ನೆನಪಿಡಿರಿ." (ಪವಿತ್ರ ಕುರ್‌ಆನ್, 33:34)

ಪವಿತ್ರ ಕುರ್‌ಆನಿನಲ್ಲಿ ಪ್ರವಾದಿವರ್ಯರ(ಸ) ಮೂಲಕ ಸತ್ಯವಿಶ್ವಾಸಿಗಳಿಗೆ ಈ ರೀತಿ ಆದೇಶಿಸಲಾಗಿದೆ:

وَأْمُرْ اَهْلَكَ بِالصَّلٰوةِ وَاصْطَبِرْ عَلَيْهَا

"ನಿಮ್ಮ ಮನೆಯವರಿಗೆ ನಮಾಝ್‌ನ ತಾಕೀತು ಮಾಡಿರಿ ಮತ್ತು ನೀವೂ ಅದನ್ನು ಪೂರ್ಣವಾಗಿ ಪಾಲಿಸಿರಿ". (ಪವಿತ್ರ ಕುರ್‌ಆನ್, 20:132)

ಪ್ರವಾದಿ(ಸ) ಹೇಳಿರುವರು: "ರಾತ್ರಿ ಹೊತ್ತು ಪತಿಯು ತನ್ನ ಪತ್ನಿಯನ್ನು ಎಬ್ಬಿಸಿ ಇಬ್ಬರೂ ಸೇರಿ ಎರಡು ರಕಅತ್ ನಮಾಝ್ ನಿರ್ವಹಿಸಿದರೆ ಪತಿಪತ್ನಿಯರಿಬ್ಬರನ್ನೂ ದೇವಧ್ಯಾನ ಮಾಡುವವರಲ್ಲಿ ಬರೆಯಲಾಗುತ್ತದೆ". (ಅಬೂದಾವೂದ್)

ದ್ವಿತೀಯ ಖಲೀಫರಾದ ಹ. ಉಮರ್(ರ) ರಾತ್ರಿ ಎದ್ದು ನಮಾಝ್ ಮಾಡುತ್ತಿದ್ದರು ಮತ್ತು ಪ್ರಭಾತದ ಸಮಯ ಸನ್ನಿಹಿತವಾದಾಗ ತಮ್ಮ ಪತ್ನಿಯನ್ನು ಎಬ್ಬಿಸಿ ನಮಾಝ್ ಮಾಡು ವಂತೆ ಆದೇಶಿಸುತ್ತಿದ್ದರು ಮತ್ತು "ನಿಮ್ಮ ಮನೆಯವರಿಗೆ ನಮಾಝ್‌ನ ತಾಕೀತು ಮಾಡಿರಿ ಮತ್ತು ನೀವೂ ಅದನ್ನು ಪೂರ್ಣವಾಗಿ ಪಾಲಿಸಿರಿ" ಎಂಬರ್ಥದ ಕುರ್‌ಆನ್ ವಾಕ್ಯವನ್ನು ಪಠಿಸುತ್ತಿದ್ದರು.

7. ಒಂದಕ್ಕಿಂತ ಹೆಚ್ಚು ಪತ್ನಿಯರಿದ್ದರೆ ಅವರೊಂದಿಗೆ ಸಮಾನತೆಯಿಂದ ವರ್ತಿಸಿರಿ. ಪ್ರವಾದಿ(ಸ) ಪತ್ನಿಯರೊಂದಿಗೆ ವ್ಯವಹಾರದಲ್ಲಿ ಪೂರ್ಣ ಸಮಾನತೆಯನ್ನು ಪಾಲಿಸುತ್ತಿದ್ದರು.

ಪ್ರಯಾಣಕ್ಕೆ ಹೊರಡುವಾಗ ಸೋಡ್ತಿ ಎತ್ತಿ ಯಾವ ಮಡದಿಯ ಹೆಸರು ಬರುತ್ತದೋ ಅವರನ್ನು ಪ್ರಯಾಣದಲ್ಲಿ ಜೊತೆಗೆ ಕೊಂಡೊಯ್ಯುತ್ತಿದ್ದರು.

ಪ್ರವಾದಿ(ಸ) ಈ ರೀತಿ ಹೇಳಿರುವುದಾಗಿ ಹ. ಅಬೂಹುರೈರಾ(ರ) ವರದಿ ಮಾಡುತ್ತಾರೆ:

"ಒಬ್ಬನಿಗೆ ಇಬ್ಬರು ಪತ್ನಿಯರಿದ್ದು ಅವನು ಅವರೊಂದಿಗೆ ನ್ಯಾಯ ಮತ್ತು ಸಮಾನತೆಯ ವ್ಯವಹಾರ ಮಾಡದಿದ್ದರೆ ನಿರ್ಣಾಯಕ ದಿನದಂದು ಅವನು ಪಕ್ಷವಾತಪೀಡಿತ ನಂತೆ ಎಬ್ಬಿಸಲ್ಪಡುವನು". (ತಿರ್ಮಿದಿ)

ನ್ಯಾಯ ಮತ್ತು ಸಮಾನತೆ ಎಂದರೆ ವ್ಯವಹಾರ ಮತ್ತು ವರ್ತನೆಯಲ್ಲಿ ಸಮಾನತೆ ಪಾಲಿಸುವುದಾಗಿದೆ. ಒಬ್ಬ ಹೆಂಡತಿಯ ಮೇಲೆ ಹೆಚ್ಚಿನ ಪ್ರೀತಿ ಒಲವುಗಳಿದ್ದರೆ ಅದನ್ನು ನಿಗ್ರಹಿಸುವುದು ಅಥವಾ ಸಮಾನಗೊಳಿಸುವುದು ಮನುಷ್ಯನಿಂದ ಸಾಧ್ಯವಾಗುವ ವಿಷಯವಲ್ಲ. ಆದ್ದರಿಂದ ಆ ಬಗ್ಗೆ ದೇವನ ಬಳಿಯೂ ಅವನು ವಿಚಾರಿಸಲ್ಪಡಲಾರನು.

## ಪತ್ನಿಯ ಕರ್ತವ್ಯಗಳು

8. ಅತ್ಯಂತ ಹೃತ್ಪೂರ್ವಕವಾಗಿ ಪತಿಯನ್ನು ಅನುಸರಿಸಿರಿ. ಅವರ ಅನುಸರಣೆಯಲ್ಲಿ ಸಂತೋಷ ಮತ್ತು ಸುಖ ಅನುಭವಿಸಿರಿ. ಇದು ಅಲ್ಲಾಹನ ಆಜ್ಞೆ. ಅಲ್ಲಾಹನ ಆಜ್ಞೆಯನ್ನು ಶಿರಸಾ ವಹಿಸುವವಳು ಅಲ್ಲಾಹನನ್ನು ಸಂತುಷ್ಟಗೊಳಿಸುವಳು. ಪವಿತ್ರ ಕುರ್‌ಆನ್ ಈ ರೀತಿ ಹೇಳುತ್ತದೆ:

فَالصّٰلِحٰتُ قٰنِتٰتٌ

"ಉತ್ತಮ ಪತ್ನಿಯರು ಪತಿಯನ್ನು ಅನುಸರಿಸುವವರಾಗಿರುತ್ತಾರೆ."

(ಪವಿತ್ರ ಕುರ್‌ಆನ್, 4:34)

ಪ್ರವಾದಿ(ಸ) ಹೇಳಿರುವರು: "ಯಾವ ಪತ್ನಿಯೂ ಪತಿಯ ಅನುಮತಿ ಇಲ್ಲದೆ (ಐಚ್ಛಿಕ) ಉಪವಾಸ ಆಚರಿಸಬಾರದು". (ಅಬೂದಾವೂದ್)

ಪತಿಯ ಅನುಸರಣೆ ಮತ್ತು ವಿಧೇಯತೆಯನ್ನು ಸ್ಪಷ್ಟಪಡಿಸುತ್ತಾ ಪ್ರವಾದಿ(ಸ) ಪತ್ನಿಯರನ್ನು ಈ ರೀತಿ ಎಚ್ಚರಿಸಿರುವರು:

"ಎರಡು ವರ್ಗದ ಜನರ ನಮಾಝ್‌ಗಳು ಅವರ ತಲೆಯಿಂದ ಮೇಲೆ ಏಳುವುದಿಲ್ಲ- ತನ್ನ ಸ್ವಾಮಿಯಿಂದ ಓಡಿ ಹೋದ ದಾಸನ ನಮಾಝ್, ಅವನು ಮರಳಿ ಸ್ವಾಮಿಯ ಬಳಿಗೆ ಬರುವ ತನಕ ಹಾಗೂ ಪತಿಗೆ ಅವಿಧೇಯಳಾಗಿರುವ ಪತ್ನಿಯ ನಮಾಝ್, ಆಕೆ ಆ ಅವಿಧೇಯತೆಯನ್ನು ತೊರೆಯುವ ತನಕ". (ಅತ್ತರ್‌ಗೀಬು ವತ್ತರ್‌ಹೀಬ್)

9. ನಿಮ್ಮ ಮಾನ ಮರ್ಯಾದೆಯನ್ನು ಜಾಗರೂಕತೆಯಿಂದ ಕಾಪಾಡಿಕೊಳ್ಳಿರಿ. ಮಾನಕ್ಕೆ ಕುಂದು ತರುವ ಎಲ್ಲ ಕಾರ್ಯಗಳಿಂದಲೂ ಸಂಪೂರ್ಣ ದೂರವಿರಿ. ಇದು ದೇವಾಜ್ಞೆಯ ಬೇಡಿಕೆ ಮಾತ್ರವಲ್ಲ ಸುಖಮಯ ದಾಂಪತ್ಯ ಜೀವನಕ್ಕೂ ಇದು ಅತ್ಯಾವಶ್ಯಕ. ಏಕೆಂದರೆ ಈ ಬಗ್ಗೆ ಪತಿಯ ಮನದಲ್ಲಿ ಲವಲೇಶವಾದರೂ ಸಂಶಯ ಬಂದು ಬಿಟ್ಟರೆ ನಿಮ್ಮ ಸೇವೆ, ವಿಧೇಯತೆ

ಅಥವಾ ಇನ್ನಾವ ಒಳಿತೂ ಪತಿಯನ್ನು ನಿಮ್ಮೆಡೆಗೆ ಒಲಿಸಲು ಶಕ್ತವಾಗಲಾರವು. ಈ ಬಗ್ಗೆ ಸಾಮಾನ್ಯ ಕೊರತೆಯೂ ಪತಿಯ ಮನದಲ್ಲಿ ಶೈತಾನನು ಸಂಶಯ ಹುಟ್ಟಿಸಲಿಕ್ಕೆ ಕಾರಣವಾಗಬಹುದು. ಆದ್ದರಿಂದ ಈ ಮಾನವೀಯ ದೌರ್ಬಲ್ಯವನ್ನು ದೃಷ್ಟಿಯಲ್ಲಿರಿಸಿ ಅತ್ಯಧಿಕ ಜಾಗರೂಕತೆ ಪಾಲಿಸಿರಿ.

ಪ್ರವಾದಿ(ಸ) ಹೇಳುತ್ತಾರೆ: "ಪತ್ನಿಯು ಐದು ಹೊತ್ತಿನ ನಮಾಝ್ ಮಾಡುತ್ತಿದ್ದು, ತನ್ನ ಮಾನವನ್ನು ಸಂರಕ್ಷಿಸಿ, ತನ್ನ ಪತಿಗೆ ವಿಧೇಯಳಾಗಿದ್ದರೆ ಆಕೆ ಬಯಸುವ ಬಾಗಿಲ ಮೂಲಕ ಸ್ವರ್ಗವನ್ನು ಪ್ರವೇಶಿಸಬಹುದು". (ಅತ್ತರ್‌ಗೀಬು ವತ್ತರ್‌ಹೀಬ್)

10. ಪತಿಯ ಇಚ್ಛೆಗೆ ವಿರುದ್ಧವಾಗಿ ಮತ್ತು ಆತನ ಅನುಮತಿಯಿಲ್ಲದೆ ಮನೆಬಿಟ್ಟು ಹೊರಗೆ ಹೋಗಬೇಡಿರಿ. ಪತಿಗೆ ಇಷ್ಟವಿಲ್ಲದ ಮನೆಗೆ ಹೋಗಬೇಡಿರಿ. ಪತಿಗೆ ಬೇಡವಾದ ವರನ್ನು ನಿಮ್ಮ ಮನೆಗೆ ಬರಗೊಡಬೇಡಿರಿ.

ಪ್ರವಾದಿ(ಸ) ಹೇಳಿರುವುದಾಗಿ ಹ. ಮುಆದ್ ಬಿನ್ ಜಬಲ್(ರ) ಹೇಳುತ್ತಾರೆ, "ಪತಿಗೆ ಬೇಡವಾದವರನ್ನು ಮನೆಯೊಳಗೆ ಸೇರಿಸುವುದು ಅಲ್ಲಾಹನ ಮೇಲೆ ವಿಶ್ವಾಸವಿರಿಸುವ ಮಹಿಳೆಗೆ ನಿಷಿದ್ಧವಾಗಿದೆ. ಪತಿಯ ಇಚ್ಛೆಗೆ ವಿರುದ್ಧವಾಗಿ ಮನೆಯಿಂದ ಹೊರಡುವುದೂ ನಿಷಿದ್ಧವಾಗಿದೆ. ಪತ್ನಿಯು ಪತಿಯ ವಿಷಯದಲ್ಲಿ ಇತರರ ಮಾತನ್ನು ಪಾಲಿಸಬಾರದು".

(ಅತ್ತರ್‌ಗೀಬು ವತ್ತರ್‌ಹೀಬ್)

ಅರ್ಥಾತ್ ಪತಿಯ ವಿಷಯದಲ್ಲಿ ಆತನ ಆಜ್ಞಾನಿರ್ದೇಶಗಳನ್ನೇ ಪಾಲಿಸಿರಿ. ಅದಕ್ಕೆ ವಿರುದ್ಧವಾಗಿ ಇತರರ ಸಲಹೆಗಳನ್ನು ಪಾಲಿಸಬೇಡಿರಿ.

11. ನಿಮ್ಮ ಮಾತು, ಕೃತಿ ಹಾಗೂ ಹಾವಭಾವಗಳ ಮೂಲಕ ಪತಿಯನ್ನು ಸದಾ ಸಂತುಷ್ಟವಾಗಿರಿಸಲು ಪ್ರಯತ್ನಿಸಿರಿ. ಯಶಸ್ವೀ ದಾಂಪತ್ಯ ಜೀವನದ ರಹಸ್ಯವಿದು. ದೇವ ಸಂಪ್ರೀತಿ ಮತ್ತು ಸ್ವರ್ಗ ಪ್ರಾಪ್ತಿಯ ಮಾರ್ಗವೂ ಇದುವೇ ಆಗಿದೆ.

ಪ್ರವಾದಿ(ಸ) ಹೇಳುತ್ತಾರೆ: "ಪತಿಯು ಸಂತುಷ್ಟನಾಗಿರುವ ಸ್ಥಿತಿಯಲ್ಲಿ ಮರಣ ಹೊಂದಿದ ಸ್ತ್ರೀಯು ಸ್ವರ್ಗ ಪ್ರವೇಶಿಸುವಳು". (ತಿರ್ಮಿದಿ)

ಪ್ರವಾದಿ(ಸ) ಹೀಗೂ ಹೇಳಿರುವರು: "ಲೈಂಗಿಕ ಬಯಕೆಯ ಈಡೇರಿಕೆಗಾಗಿ ಕರೆದಾಗ ಬಾರದ ಪತ್ನಿಯ ಬಗ್ಗೆ ಪತಿಯು ಕುಪಿತನಾಗಿ ಮಲಗಿದ್ದರೆ ಅಂತಹ ಪತ್ನಿಯನ್ನು ಬೆಳಗಿನ ತನಕ ದೇವಚರರು ಶಪಿಸುತ್ತಿರುವರು". (ಬುಖಾರಿ, ಮುಸ್ಲಿಮ್)

12. ನಿಮ್ಮ ಪತಿಯನ್ನು ಪ್ರೀತಿಸಿರಿ. ಆತನ ಪ್ರೀತಿಯನ್ನು ಗೌರವಿಸಿರಿ. ಇದು ಜೀವನದ ಸೊಬಗು ಮತ್ತು ಆಸರೆಯಾಗಿದೆ. ಜೀವನ ಮಾರ್ಗದ ಆಶ್ರಯ ಮತ್ತು ಬೆಂಬಲವಾಗಿದೆ. ದೇವನ ಈ ಮಹಾ ಕೊಡುಗೆಯನ್ನು ಮನಸಾರೆ ಗೌರವಿಸಿರಿ ಮತ್ತು ಅದಕ್ಕಾಗಿ ಅವನಿಗೆ ಕೃತಜ್ಞತೆಯರ್ಪಿಸಿರಿ. ಒಮ್ಮೆ ಪ್ರವಾದಿ(ಸ) ಈ ರೀತಿ ಹೇಳಿರುವರು: "ಇಬ್ಬರು ಪ್ರೇಮಿಸುವವರಿಗೆ ನಿಕಾಹ್‌ಗಿಂತ ಉತ್ತಮವಾದ ವಸ್ತು ಬೇರೊಂದಿಲ್ಲ".

ಹ. ಸಫಿಯಾರಿಗೆ(ರ) ಪ್ರವಾದಿವರ್ಯರಲ್ಲಿ(ಸ) ಅತ್ಯಧಿಕ ಪ್ರೀತಿ ಇತ್ತು. ಆದ್ದರಿಂದಲೇ

ಪ್ರವಾದಿ(ಸ) ರೋಗಗ್ರಸ್ತರಾದಾಗ ಈ ರೀತಿ ಉದ್ಗರಿಸಿದ್ದರು: "ಅಕಟಾ! ಪ್ರವಾದಿವರ್ಯರ(ಸ) ಬದಲು ನನಗೆ ಆ ರೋಗ ಬರುತ್ತಿದ್ದರೆ!" ಈ ವಾತ್ಸಲ್ಯ ಪ್ರಕಟನೆಯಿಂದ ಚಕಿತರಾಗಿ ಪ್ರವಾದಿ ವರ್ಯರ(ಸ) ಇತರ ಪತ್ನಿಯರು ಅವರತ್ತ ನೋಡಿದಾಗ ಪ್ರವಾದಿ(ಸ), 'ಇದು ತೋರಿಕೆಯಲ್ಲ; ಆಕೆ ಸತ್ಯವನ್ನೇ ಹೇಳುತ್ತಿದ್ದಾಳೆ' ಎಂದರು.

13. ಪತಿಯ ಉಪಕಾರಗಳನ್ನು ಮನ್ನಿಸಿರಿ. ಆತನಿಗೆ ಕೃತಜ್ಞರಾಗಿರಿ. ನಿಮ್ಮನ್ನು ಸದಾ ಸಂತೋಷವಾಗಿರಿಸಲು ಪ್ರಯತ್ನಿಸುವ, ನಿಮ್ಮ ಎಲ್ಲ ಬಯಕೆ, ಬೇಡಿಕೆಗಳನ್ನು ಈಡೇರಿಸುವ ಮತ್ತು ನಿಮ್ಮನ್ನು ಸುಖವಾಗಿರಿಸಿ ಸುಖಪಡುವ ನಿಮ್ಮ ಪತಿಗಿಂತ ದೊಡ್ಡ ಉಪಕಾರಿ ಇನ್ನಾರಿರ ಬಹುದು. ಹ. ಅಸ್ಮಾ(ರ) ಹೇಳುತ್ತಾರೆ: "ಒಮ್ಮೆ ಪ್ರವಾದಿ(ಸ) ನನ್ನ ಬಳಿಯಿಂದ ಹಾದು ಹೋದರು. ಆಗ ನಾನು ನನ್ನ ಗೆಳತಿಯರ ಜೊತೆಗಿದ್ದೆ. ಪ್ರವಾದಿ(ಸ) ನಮಗೆ ಸಲಾಮ್ ಹೇಳಿದ ಬಳಿಕ ಹೀಗೆಂದರು: 'ನಿಮ್ಮ ಮೇಲೆ ಉಪಕಾರ ಮಾಡಿರುವವರಿಗೆ ಕೃತಘ್ನರಾಗದಿರಿ. ನಿಮ್ಮ ಪೈಕಿ ಒಬ್ಬಳು ಹಲವು ಕಾಲ ತವರು ಮನೆಯಲ್ಲಿ ಮದುವೆಯಾಗದೆ ಉಳಿದಿರುತ್ತಾಳೆ. ಆ ಬಳಿಕ ಅಲ್ಲಾಹನು ಆಕೆಗೆ ಓರ್ವ ಪತಿಯನ್ನು ದಯಪಾಲಿಸುತ್ತಾನೆ. ಅದರಿಂದ ಆಕೆಗೆ ಸಂತಾನವನ್ನೂ ದಯಪಾಲಿಸುತ್ತಾನೆ. (ಇಷ್ಟಾಗಿಯೂ) ಏನಾದರೂ ವಿಷಯದ ಬಗ್ಗೆ ಪತಿಯೊಂದಿಗೆ ಕೋಪ ಗೊಂಡರೆ, 'ನಾನು ನಿಮ್ಮಿಂದ ಎಂದೂ ಯಾವ ಒಳಿತನ್ನೂ ಪಡೆದದ್ದಿಲ್ಲ' ಎನ್ನುತ್ತಾಳೆ".

(ಅಲ್ ಅದಬುಲ್ ಮುಫ್ರದ್)

ಉಪಕಾರ ಸ್ಮರಣೆಯಿಲ್ಲದ, ಕೃತಘ್ನ ಮಹಿಳೆಯರನ್ನು ಪ್ರವಾದಿ(ಸ) ಈ ರೀತಿ ಎಚ್ಚರಿಸಿ ರುವರು: "ಅಲ್ಲಾಹನು ನಿರ್ಣಾಯಕ ದಿನದಂದು ಪತಿಗೆ ಕೃತಘ್ನಳಾದ ಸ್ತ್ರೀಯ ಕಡೆ ಕಣ್ಣೆತ್ತಿಯೂ ನೋಡಲಾರ. ವಾಸ್ತವದಲ್ಲಿ ಮಹಿಳೆಯು ಎಂದೂ ಪತಿಯಿಂದ ನಿರಪೇಕ್ಷಳಾಗಲಾರಳು". (ನಸಾಈ)

14. ಪತಿಯ ಸೇವೆ ಮಾಡುವುದರಲ್ಲಿ ಸಂತೋಷ ಪಡಿರಿ. ಸಾಧ್ಯವಾದಷ್ಟು ಸ್ವಯಂ ಕಷ್ಟ ಸಹಿಸಿ ಪತಿಗೆ ಸುಖ ನೀಡಿರಿ. ಎಲ್ಲ ರೀತಿಯಲ್ಲೂ ಆತನ ಸೇವೆಗೈದು ಆತನ ಮನಸೂರೆ ಗೈಯಲು ಪ್ರಯತ್ನಿಸಿರಿ. ಹ. ಆಯಿಶಾ(ರ) ತನ್ನ ಕೈಗಳಿಂದ ಪ್ರವಾದಿವರ್ಯರ(ಸ) ಬಟ್ಟೆಗಳನ್ನು ಒಗೆಯುತ್ತಿದ್ದರು. ಪ್ರವಾದಿವರ್ಯರ(ಸ) ತಲೆಗೆ ಎಣ್ಣೆ ಹಚ್ಚುತ್ತಿದ್ದರು, ತಲೆ ಬಾಚುತ್ತಿದ್ದರು ಮತ್ತು ಪರಿಮಳ ದ್ರವ್ಯ ಪೂಸುತ್ತಿದ್ದರು. ಇತರ ಸಹಾಬಿ ಮಹಿಳೆಯರೂ ಹೀಗೆಯೇ ಮಾಡುತ್ತಿದ್ದರು.

ಪ್ರವಾದಿ(ಸ) ಈ ರೀತಿ ಆದೇಶಿಸಿರುವರು: "ಯಾವ ಮನುಷ್ಯನಿಗೂ ಸಾಷ್ಟಾಂಗ ವೆರಗುವುದು ಮನುಷ್ಯನಿಗೆ ಯೋಗ್ಯವಲ್ಲ. ಅದರ ಅನುಮತಿ ನೀಡಲ್ಪಡುತ್ತಿದ್ದರೆ ಪತಿಗೆ ಸಾಷ್ಟಾಂಗವೆರಗುವಂತೆ ಪತ್ನಿಗೆ ಆಜ್ಞಾಪಿಸಲಾಗುತ್ತಿತ್ತು. ಪತ್ನಿಯ ಮೇಲೆ ಪತಿಯ ಹಕ್ಕು ಅತ್ಯಂತ ಹಿರಿದಾಗಿದೆ. ಎಷ್ಟೆಂದರೆ ಪತಿಯ ಪೂರ್ಣ ಶರೀರವು ಗಾಯಗೊಂಡು ಪತ್ನಿಯು ತನ್ನ ಪತಿಯ ಗಾಯಗಳನ್ನು ತನ್ನ ನಾಲಿಗೆಯಿಂದ ನೆಕ್ಕಿದರೂ ಆ ಹಕ್ಕು ತೀರಿದಂತಾಗದು". (ಮುಸ್ನದ್ ಅಹ್ಮದ್)

15. ಪತಿಯ ಮನೆಮಾರು ಮತ್ತು ಸೊತ್ತುವಿತ್ತಗಳನ್ನು ರಕ್ಷಿಸಿರಿ. ಮದುವೆಯ ಬಳಿಕ ಪತಿಗೃಹವನ್ನೇ ನಿಮ್ಮ ಮನೆಯೆಂದು ಭಾವಿಸಿರಿ. ಪತಿಗೃಹದ ಶೋಭೆಯನ್ನು ವರ್ಧಿಸಲು, ಪತಿಯ ಮಾನ-ಮರ್ಯಾದೆಯನ್ನು ಬೆಳೆಸಲು, ಆತನ ಮಕ್ಕಳ ಭವಿಷ್ಯ ನಿರ್ಮಾಣ ಮಾಡಲು

ಯುಕ್ತಿಯುತವಾಗಿ ಮತ್ತು ಮಿತವ್ಯಯವನ್ನು ಪಾಲಿಸುತ್ತಾ ಆತನ ಸಂಪತ್ತನ್ನು ಖರ್ಚು ಮಾಡಿರಿ. ಪತಿಯ ಪ್ರಗತಿ ಮತ್ತು ಸುಭಿಕ್ಷೆಯನ್ನು ನಿಮ್ಮ ಪ್ರಗತಿ ಮತ್ತು ಸುಭಿಕ್ಷೆಯೆಂದು ತಿಳಿಯಿರಿ. ಕುರೈಶ್ ಮಹಿಳೆಯರ ಗುಣಗಾನ ಮಾಡುತ್ತಾ ಪ್ರವಾದಿ(ಸ) ಈ ರೀತಿ ಹೇಳಿರುವರು:

"ಕುರೈಶರ ಮಹಿಳೆಯರು ಎಷ್ಟು ಉತ್ತಮರು. ತಮ್ಮ ಮಕ್ಕಳ ಮೇಲೆ ಅತ್ಯಧಿಕ ಪ್ರೀತಿ, ವಾತ್ಸಲ್ಯ ತೋರುವವರು ಮತ್ತು ತಮ್ಮ ಪತಿಯರ ಮನೆಮಾರುಗಳನ್ನು ಅತ್ಯಂತ ಜಾಗರೂಕತೆ ಯಿಂದ ಕಾಪಾಡುವವರು". (ಬುಖಾರಿ)

ಸುಶೀಲೆಯಾದ ಪತ್ನಿಯ ಗುಣಗಳನ್ನು ಪ್ರವಾದಿ(ಸ) ಈ ರೀತಿ ವಿವರಿಸಿರುವರು: "ಸತ್ಯ ವಿಶ್ವಾಸಿಗೆ ದೇವನ ಭಯಭಕ್ತಿಯ ಬಳಿಕ ಅತ್ಯಧಿಕ ಪ್ರಯೋಜನಕಾರಿ ಹಾಗೂ ಫಲಪ್ರದ ಅನುಗ್ರಹ ಸುಶೀಲೆಯಾದ ಪತ್ನಿಯಾಗಿದ್ದಾಳೆ. ಆಕೆಗೆ ಅವನೊಂದು ಆಜ್ಞೆ ಕೊಟ್ಟಾಗ ಅದನ್ನು ಆಕೆ ಹೃತ್ಪೂರ್ವಕವಾಗಿ ಪಾಲಿಸುವಳು. ಆಕೆಯತ್ತ ದೃಷ್ಟಿ ಬೀರಿದಾಗ ಅವನನ್ನು ಸಂತುಷ್ಟಗೊಳಿ ಸುವಳು. ಆಕೆಯ ಭರವಸೆಯ ಮೇಲೆ ಅವನೊಂದು ಪಣತೊಟ್ಟರೆ ಆ ಪಣವನ್ನು ಆಕೆ ಪೂರೈಸು ವಳು. ಅವನ ಅನುಪಸ್ಥಿತಿಯಲ್ಲಿ ಆತನಿಗೆ ನಿಷ್ಠಳೂ ಆತನ ಹಿತೈಷಿಯೂ ಆಗಿದ್ದುಕೊಂಡು ತನ್ನ ಮಾನ ಮರ್ಯಾದೆಗಳನ್ನೂ ಪತಿಯ ಸೊತ್ತುಗಳನ್ನೂ ಸಂರಕ್ಷಿಸುವಳು". (ಇಬ್ನುಮಾಜಃ)

16. ಸ್ವಚ್ಛತೆ, ಅಚ್ಚುಕಟ್ಟು, ಅಲಂಕಾರ ಶೃಂಗಾರಗಳನ್ನು ಪೂರ್ಣವಾಗಿ ಪಾಲಿಸಿರಿ. ಮನೆಯನ್ನು ಸ್ವಚ್ಛವಾಗಿಡಿರಿ. ಎಲ್ಲ ವಸ್ತುಗಳನ್ನು ಅಚ್ಚುಕಟ್ಟಾಗಿ ಇಡಿರಿ. ಉತ್ತಮ ರೀತಿಯಿಂದ ಅವುಗಳನ್ನು ಬಳಸಿರಿ. ಶುಭ್ರವಾದ ಮನೆ, ಅಚ್ಚುಕಟ್ಟಾಗಿ ಇರಿಸಲ್ಪಟ್ಟ ಕೋಣೆಗಳು, ಮನೆ ಕೆಲಸಗಳಲ್ಲಿ ಶಿಸ್ತು ಮತ್ತು ಅಚ್ಚುಕಟ್ಟು, ಅಲಂಕಾರ ಶೃಂಗಾರ ಮಾಡಿಕೊಂಡಿರುವ ಪತ್ನಿ ಮತ್ತು ಆಕೆಯ ಪಾವನ ಮುಗುಳ್ನಗೆ ಗೃಹಜೀವನವನ್ನು ಪ್ರೀತಿ ವಾತ್ಸಲ್ಯ ಮತ್ತು ಸುಖಸಂತೋಷದ ಆಗರವಾಗಿಸುವುದು. ಮಾತ್ರವಲ್ಲ ಪತ್ನಿಯ ಪರಲೋಕ ಮೋಕ್ಷ ಮತ್ತು ದೇವಸಂಪ್ರೀತಿ ಗಳಿಕೆಗೂ ಇದು ಹೇತುವಾಗುವುದು.

ಒಮ್ಮೆ ಉಸ್ಮಾನ್ ಬಿನ್ ಮಝ್‌ಊನ್‌ರವರ(ರ) ಪತ್ನಿಯನ್ನು ಹ. ಆಯಿಶಾ(ರ) ಭೇಟಿಯಾದರು. ಅವರು ಅತ್ಯಂತ ಸರಳ ಉಡಿಗೆಯಲ್ಲಿರುವುದನ್ನು ಹಾಗೂ ಯಾವುದೇ ಅಲಂಕಾರ ಶೃಂಗಾರಗಳನ್ನು ಮಾಡದಿರುವುದನ್ನು ಕಂಡು ಆಶ್ಚರ್ಯಚಕಿತರಾಗಿ ಈ ರೀತಿ ವಿಚಾರಿಸಿದರು,"ಉಸ್ಮಾನ್(ರ) ಪ್ರಯಾಣದ ಮೇಲೆ ಹೋಗಿರುವರೇ?"

ಹ. ಆಯಿಶಾರ(ರ) ಅಚ್ಚರಿಯಿಂದಲೇ ಅಲಂಕಾರ ಶೃಂಗಾರಗಳು ಪತಿವ್ರತೆಗೆ ಎಷ್ಟು ಅವಶ್ಯಕ ಮತ್ತು ಪ್ರಿಯಕರವೆಂಬುದು ಅರ್ಥವಾಗುತ್ತದೆ.

ಒಮ್ಮೆ ಪ್ರವಾದಿವರ್ಯರ(ಸ) ಬಳಿ ಓರ್ವ ಸಹಾಬಿ ಮಹಿಳೆ ಬಂದರು. ಅವರ ಕೈಗಳಲ್ಲಿ ಚಿನ್ನದ ಬಳೆಗಳಿದ್ದವು. ಪ್ರವಾದಿ(ಸ) ಅದನ್ನು ತೊಡಬಾರದೆಂದು ಹೇಳಿದಾಗ ಅವರು ಹೀಗೆಂದರು: "ಓ ಪ್ರವಾದಿವರ್ಯರೇ! ಪತ್ನಿಯು ತನ್ನ ಪತಿಗಾಗಿ ಅಲಂಕಾರ, ಶೃಂಗಾರಗಳನ್ನು ಮಾಡದೆ ಇದ್ದರೆ ಆತನ ದೃಷ್ಟಿಯಿಂದ ತುಚ್ಛಳಾಗುವಳು". (ನಸಾಈ)

❖ ❖ ❖ ❖

# ಮಕ್ಕಳ ಪರಿಪಾಲನೆ

1. ನಿಮ್ಮ ಮಕ್ಕಳನ್ನು ದೇವನ ಅನುಗ್ರಹವೆಂದು ಪರಿಗಣಿಸಿರಿ. ಅವರ ಜನನದ ಬಗ್ಗೆ ಸಂತೋಷಪಡಿರಿ. ಪರಸ್ಪರ ಶುಭಾಶಯ ವಿನಿಮಯ ಮಾಡಿರಿ. ಒಳಿತು ಮತ್ತು ಸಮೃದ್ಧಿಯ ಪ್ರಾರ್ಥನೆಯೊಂದಿಗೆ ಮಗುವಿನ ಜನನವನ್ನು ಸ್ವಾಗತಿಸಿರಿ. ತನ್ನ ಓರ್ವ ದಾಸನ ಪರಿಪಾಲನೆಯ ಹಾಗೂ ನಿಮ್ಮ ಬಳಿಕ ಲೋಕದಲ್ಲಿ ನಿಮ್ಮ ಉತ್ತರಾಧಿಕಾರಿಯೊಬ್ಬನನ್ನು ಬಿಟ್ಟು ಹೋಗುವ ಅನುಗ್ರಹ ದಯಪಾಲಿಸಿದುದಕ್ಕೆ ದೇವನಿಗೆ ವಂದನೆಗಳನ್ನರ್ಪಿಸಿರಿ.

2. ಸಂತಾನವಿಲ್ಲದಿದ್ದರೆ ಸತ್‌ಸಂತಾನಕ್ಕಾಗಿ ದೇವನಲ್ಲಿ ಪ್ರಾರ್ಥಿಸುತ್ತಿರಿ. ಅಲ್ಲಾಹನ ಪ್ರವಾದಿಯಾದ ಹ. ಝುಕರಿಯ್ಯಾ(ಅ) ಸತ್‌ಸಂತಾನಕ್ಕಾಗಿ ಅಲ್ಲಾಹನಲ್ಲಿ ಈ ರೀತಿ ಪ್ರಾರ್ಥಿಸಿದ್ದರು:

رَبِّ هَبْ لِي مِن لَّدُنكَ ذُرِّيَّةً طَيِّبَةً ۖ إِنَّكَ سَمِيعُ الدُّعَاءِ ﴿٣٨﴾

"ರಬ್ಬಿ ಹಬ್‌ಲೀ ಮಿಲ್ಲದುನ್ಕ ದುರ್‍ರಿಯತನ್ ತಯ್ಯಿಬತನ್ ಇನ್ನಕ ಸಮೀಉದ್ದುಆ".
(ನನ್ನ ಪ್ರಭೂ! ನಿನ್ನ ವತಿಯಿಂದ ನನಗೆ ಉತ್ತಮ ಸಂತಾನವನ್ನು ದಯಪಾಲಿಸು. ನಿಸ್ಸಂಶಯವಾಗಿ ನೀನು ಪ್ರಾರ್ಥನೆಗಳನ್ನು ಆಲಿಸುವವನಾಗಿರುತ್ತಿ.)

(ಪವಿತ್ರ ಕುರ್‌ಆನ್, 3:38)

3. ಸಂತತಿಯ ಜನನದ ಬಗ್ಗೆ ಎಂದೂ ಜಿಗುಪ್ಸೆ ತಾಳಬೇಡಿರಿ. ಆರ್ಥಿಕ ಅಡಚಣೆ, ಅನಾರೋಗ್ಯ ಇತ್ಯಾದಿ ಕಾರಣಗಳಿಗಾಗಿ ಮಗುವಿನ ಜನನದ ಬಗ್ಗೆ ವ್ಯಥೆ ಪಡಬೇಡಿರಿ. ಮಗುವಿನ ಜನನವನ್ನು ಒಂದು ಆಪತ್ತು ಎರಗುವ ರೀತಿಯಲ್ಲಿ ಎಂದೆಂದಿಗೂ ಭಾವಿಸಬೇಡಿರಿ.

4. ಸಂತಾನ ಹರಣ ಮಾಡದಿರಿ. ಹುಟ್ಟುವ ಮೊದಲು ಅಥವಾ ಹುಟ್ಟಿದ ಬಳಿಕ ಸಂತಾನ ಹರಣ ಮಾಡುವುದು ಭೀಕರ ಕಠೋರತೆ, ಭಯಾನಕ ಅಕ್ರಮ, ಅತಿದೊಡ್ಡ ಹೇಡಿತನ ಮತ್ತು ಉಭಯ ಲೋಕಗಳ ನಾಶವಾಗಿದೆ.

ಅಲ್ಲಾಹನು ಈ ರೀತಿ ಆದೇಶಿಸಿರುವನು:

قَدْ خَسِرَ الَّذِينَ قَتَلُوا أَوْلَادَهُمْ سَفَهًا بِغَيْرِ عِلْمٍ

"ತಮ್ಮ ಸಂತತಿಗಳನ್ನು ಅವಿವೇಕದಿಂದ ಕೊಂದವರು ಅತ್ಯಂತ ನಷ್ಟದಲ್ಲಿರುವರು".

(ಪವಿತ್ರ ಕುರ್‌ಆನ್, 6:140)

ಮನುಷ್ಯನ ಈ ಸಂಕುಚಿತ ದೃಷ್ಟಿಕೋನಕ್ಕೆ ಸಮರ್ಥ ಉತ್ತರ ನೀಡುತ್ತಾ ಅಲ್ಲಾಹನು ಸಂತಾನ ಹರಣವನ್ನು ಸ್ಪಷ್ಟವಾಗಿ ನಿಷೇಧಿಸಿರುವನು.

وَلَا تَقْتُلُوٓا۟ أَوْلَـٰدَكُمْ خَشْيَةَ إِمْلَـٰقٍ ۖ نَّحْنُ نَرْزُقُهُمْ وَإِيَّاكُمْ ۚ إِنَّ قَتْلَهُمْ كَانَ خِطْـًٔا كَبِيرًا ۝

"ನಿಮ್ಮ ಸಂತಾನವನ್ನು ದಾರಿದ್ರ್ಯದ ಭಯದಿಂದ ವಧಿಸದಿರಿ. ನಾವು ಅವರಿಗೂ ಆಹಾರ ಕೊಡುವೆವು ಮತ್ತು ನಿಮಗೂ ನಾವೇ ಆಹಾರ ನೀಡುತ್ತಿದ್ದೇವೆ. ವಾಸ್ತವದಲ್ಲಿ ಸಂತಾನ ಹರಣವು ಮಹಾಪಾತಕವಾಗಿದೆ". (ಪವಿತ್ರ ಕುರ್‌ಆನ್, 17:31)

ಒಮ್ಮೆ ಓರ್ವ ಸಹಾಬಿ ಈ ರೀತಿ ವಿಚಾರಿಸಿದರು: "ಓ ಪ್ರವಾದಿವರ್ಯರೇ! ಅತಿ ದೊಡ್ಡ ಪಾಪ ಕಾರ್ಯ ಯಾವುದು?' ಪ್ರವಾದಿ(ಸ) 'ಶಿರ್ಕ್ (ದೇವ ಸಹಭಾಗಿತ್ವ ಅಥವಾ ಬಹುದೇವಾರಾಧನೆ)' ಎಂದರು. 'ಆ ಬಳಿಕ ಯಾವುದು?' ಎಂದು ಪ್ರಶ್ನಿಸಿದಾಗ, 'ತಂದೆ ತಾಯಿಗಳ ಆಜ್ಞೋಲ್ಲಂಘನೆ' ಎಂದು ಉತ್ತರಿಸಿದರು. ತರುವಾಯ ಯಾವುದು ಎಂದು ವಿಚಾರಿಸಿದಾಗ ನಿಮ್ಮೊಡನೆ ತಿಂದೀತು ಎಂಬ ಭಯದಿಂದ ನಿಮ್ಮ ಸಂತಾನವನ್ನು ವಧಿಸುವುದು ಎಂದು ಉತ್ತರಿಸಿದರು.

5. ಹೆರಿಗೆಯ ಸಮಯದಲ್ಲಿ ಮಹಿಳೆಯ ಬಳಿ ಆಯತುಲ್ ಕುರ್ಸಿ ಮತ್ತು ಸೂರತುಲ್ ಅಲ್‌ರಾಫ್‌ನ ಈ ಕೆಳಗಿನ ಎರಡು ಸೂಕ್ತಗಳನ್ನು ಪಠಿಸಿರಿ. ಸೂರತುಲ್ ಫಲಕ್ ಮತ್ತು ಸೂರತುನ್ನಾಸ್ ಓದುತ್ತಾ ಊದುತ್ತಲಿರಿ. ಆಯತುಲ್ ಕುರ್ಸಿ ಈ ರೀತಿ ಇದೆ:

ٱللَّهُ لَآ إِلَـٰهَ إِلَّا هُوَ ٱلْحَىُّ ٱلْقَيُّومُ ۚ لَا تَأْخُذُهُۥ سِنَةٌ وَلَا نَوْمٌ ۚ لَّهُۥ مَا فِى ٱلسَّمَـٰوَٰتِ وَمَا فِى ٱلْأَرْضِ ۗ مَن ذَا ٱلَّذِى يَشْفَعُ عِندَهُۥٓ إِلَّا بِإِذْنِهِۦ ۚ يَعْلَمُ مَا بَيْنَ أَيْدِيهِمْ وَمَا خَلْفَهُمْ ۖ وَلَا يُحِيطُونَ بِشَىْءٍ مِّنْ عِلْمِهِۦٓ إِلَّا بِمَا شَآءَ ۚ وَسِعَ كُرْسِيُّهُ ٱلسَّمَـٰوَٰتِ وَٱلْأَرْضَ ۖ وَلَا يَـُٔودُهُۥ حِفْظُهُمَا ۚ وَهُوَ ٱلْعَلِىُّ ٱلْعَظِيمُ ۝

"ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಚಿರಂತನನು, ಸರ್ವಲೋಕ ಗಳನ್ನು ಸಂರಕ್ಷಿಸುವವನು. ಅವನು ನಿದ್ರಿಸುವುದೂ ಇಲ್ಲ, ಅವನಿಗೆ ತೂಕಡಿಕೆ ಬಾಧಿಸು ವುದೂ ಇಲ್ಲ. ಭೂಮ್ಯಾಕಾಶಗಳಲ್ಲಿ ಇರುವುದೆಲ್ಲವೂ ಆತನದೇ ಆಗಿವೆ. ಅವನ ಆಸ್ಥಾನ ದಲ್ಲಿ ಅವನ ಅನುಮತಿ ಇಲ್ಲದೆ ಶಿಫಾರಸು ಮಾಡಬಲ್ಲವರು ಯಾರಿರುವರು? ದಾಸರ ಮುಂದಿರುವುದನ್ನು ಅವನು ಬಲ್ಲನು. ಅವರಿಂದ ಮರೆಯಾಗಿರುವುದನ್ನೂ ಅವನು ಬಲ್ಲನು. ಅವನು ತನಗಿಷ್ಟ ಬಂದಷ್ಟು ಜ್ಞಾನವನ್ನು ಮನುಷ್ಯರಿಗೆ ದಯಪಾಲಿಸುವ ಹೊರತು ಅವನ ಜ್ಞಾನದ ಯಾವ

ವಿಷಯವನ್ನೂ ಗ್ರಹಿಸುವ ಶಕ್ತಿ ಮನುಷ್ಯನಿಗಿಲ್ಲ. ಅವನ ಆಧಿಪತ್ಯವು ಭೂಮ್ಯಾಕಾಶಗಳನ್ನು ವ್ಯಾಪಿಸಿದೆ. ಅವುಗಳ ಸಂರಕ್ಷಣೆ ಮತ್ತು ಮೇಲ್ನೋಟ ಅವನ ಮಟ್ಟಿಗೆ ದಣಿವಾಗಿಸುವ ಕಾರ್ಯವಲ್ಲ. ಅವನು ಅತ್ಯುನ್ನತನೂ, ಅತಿ ಮಹಾನನೂ ಆಗಿರುವನು".

(ಪವಿತ್ರ ಕುರ್‌ಆನ್, 2:255)

ಸೂರತುಲ್ ಅಲ್‌ರಾಫ್‌ನ 2 ಸೂಕ್ತಗಳು(54,55) ಈ ರೀತಿ ಇವೆ.

إِنَّ رَبَّكُمُ اللَّهُ الَّذِي خَلَقَ السَّمَاوَاتِ وَالْأَرْضَ فِي سِتَّةِ أَيَّامٍ ثُمَّ اسْتَوَىٰ عَلَى الْعَرْشِ يُغْشِي اللَّيْلَ النَّهَارَ يَطْلُبُهُ حَثِيثًا وَالشَّمْسَ وَالْقَمَرَ وَالنُّجُومَ مُسَخَّرَاتٍ بِأَمْرِهِ ۗ أَلَا لَهُ الْخَلْقُ وَالْأَمْرُ ۗ تَبَارَكَ اللَّهُ رَبُّ الْعَالَمِينَ ﴿٥٤﴾ ادْعُوا رَبَّكُمْ تَضَرُّعًا وَخُفْيَةً ۚ إِنَّهُ لَا يُحِبُّ الْمُعْتَدِينَ ﴿٥٥﴾

"ಭೂಮ್ಯಾಕಾಶಗಳನ್ನು ಆರು ದಿನಗಳಲ್ಲಿ ಸೃಷ್ಟಿಸಿ ತರುವಾಯ ತನ್ನ ಅಧಿಕಾರ, ಗದ್ದುಗೆಯಲ್ಲಿ ವಿರಾಜಮಾನವಾದ ಅಲ್ಲಾಹನೇ ವಾಸ್ತವದಲ್ಲಿ ನಿಮ್ಮ ಪ್ರಭು. ಅವನೇ ರಾತ್ರಿಯನ್ನು ದಿನದ ಮೇಲೆ ಹೊದಿಸುವನು ಮತ್ತು ದಿನವು ರಾತ್ರಿಯ ಹಿಂದೆ ಓಡಿ ಬರುತ್ತದೆ. ಅವನೇ ಸೂರ್ಯ, ಚಂದ್ರ, ನಕ್ಷತ್ರಗಳನ್ನು ಸೃಷ್ಟಿಸಿದನು. ಅವು ಅವನ ಆಜ್ಞೆಯಂತೆ ಕಾರ್ಯಮಗ್ನವಾಗಿವೆ. ತಿಳಿಯಿರಿ! ಸೃಷ್ಟಿಸುವುದು ಅವನದೇ ಕಾರ್ಯ ಮತ್ತು ಆಜ್ಞಾಧಿಕಾರವೂ ಅವನ ಹಕ್ಕೇ ಆಗಿದೆ. ಸರ್ವಲೋಕಗಳ ಒಡೆಯ ಮತ್ತು ಪ್ರಭು ಎಷ್ಟು ಮಂಗಳಮಯನು. ನಿಮ್ಮ ಪ್ರಭುವನ್ನು ಅಳುತ್ತಲೂ ಮೆಲುದನಿಯಿಂದಲೂ ಕರೆದು ಪ್ರಾರ್ಥಿಸಿರಿ. ನಿಸ್ಸಂದೇಹವಾಗಿಯೂ ಅವನು ಮೇರೆ ಮೀರುವವರನ್ನು ಇಷ್ಟಪಡುವುದಿಲ್ಲ".

6. ಹೆರಿಗೆಯಾದ ಬಳಿಕ ಮಗುವಿಗೆ ಸ್ನಾನ ಮಾಡಿಸಿ ಬಲ ಕಿವಿಯಲ್ಲಿ ಅದಾನ್ ಮತ್ತು ಎಡಕಿವಿಯಲ್ಲಿ ಇಕಾಮತ್ ಹೇಳಿರಿ. ಹ. ಹುಸೈನ್‌ರವರ(ರ) ಜನನವಾದಾಗ ಪ್ರವಾದಿ(ಸ) ಅವರ ಮಗುವಿನ ಕಿವಿಯಲ್ಲಿ ಅದಾನ್ ಮತ್ತು ಇಕಾಮತ್ ಹೇಳಿದ್ದರು. (ತಬ್ರಾನಿ)

ಪ್ರವಾದಿ(ಸ) ಹೇಳಿರುವರು: "ಯಾರಲ್ಲಾದರೂ ಮಗು ಹುಟ್ಟಿದಾಗ ಅವನು ಆ ಮಗುವಿನ ಬಲಕಿವಿಯಲ್ಲಿ ಅದಾನ್ ಮತ್ತು ಎಡಕಿವಿಯಲ್ಲಿ ಇಕಾಮತ್ ಹೇಳಿದರೆ ಆ ಮಗು ಉಮ್ಮುಸ್ಸಿಬ್ಯಾನ್(ಮಕ್ಕಳಿಗಾಗುವ ಅಪಸ್ಮಾರ ರೋಗ. ಇದರಲ್ಲಿ ಮಕ್ಕಳು ಮೂರ್ಛೆ ಗೊಳ್ಳುವರು)ನ ಬಾಧೆಯಿಂದ ಸುರಕ್ಷಿತವಾಗುವುದು". (ಅಬೂಯಅ್‌ಲಾ ಇಬ್ನುಸುನ್ನಿ)

ಜನಿಸುತ್ತಲೇ ಮಗುವಿನ ಕಿವಿಯಲ್ಲಿ ಅಲ್ಲಾಹನ ಮತ್ತು ಪ್ರವಾದಿವರ್ಯರ(ಸ) ಹೆಸರು ಹೇಳುವುದರಲ್ಲಿ ದೊಡ್ಡ ಯುಕ್ತಿ ಅಡಕವಾಗಿದೆ. ಅಲ್ಲಾಮ ಇಬ್ನು ಕಯ್ಯಿಮ್ ತಮ್ಮ 'ತುಹ್ಫತುಲ್ ವುದೂದ್' ಎಂಬ ಗ್ರಂಥದಲ್ಲಿ ಈ ರೀತಿ ಹೇಳಿರುವರು:

"ಮನುಷ್ಯನ ಕಿವಿಯಲ್ಲಿ ಮೊಟ್ಟ ಮೊದಲು ಅಲ್ಲಾಹನ ಮಹಾನತೆಯ ಶಬ್ದವೇ ಬೀಳಬೇಕೆಂಬುದು ಇದರ ತಾತ್ಪರ್ಯ. ಯಾವ ವಚನದ ಸಾಕ್ಷ್ಯವನ್ನು ಆ ಮಗು ವಯಸ್ಕಾದ ಬಳಿಕ ಮಾಡಿ ಇಸ್ಲಾಮಿನಲ್ಲಿ ಪ್ರವೇಶಿಸಲಿರುವುದೋ ಅದನ್ನು ಜನನವಾದ ದಿನದಂದೇ ಅದಕ್ಕೆ ಉಪದೇಶಿಸಬೇಕು. ಇದು ಮರಣಾಸನ್ನವಾಗಿರುವವರಿಗೆ ಪವಿತ್ರ ವಚನದ ಉಪದೇಶ ಮಾಡುವಂತೆಯೇ ಇದೆ. ಅದಾನ್ ಮತ್ತು ಇಕಾಮತ್ ಹೇಳುವುದರ ಇನ್ನೊಂದು ಪ್ರಯೋಜನವೂ ಇದೆ. ಮನುಷ್ಯನನ್ನು ಸದಾ ಪರೀಕ್ಷೆಗೊಳಪಡಿಸಲು ಕಾಯುತ್ತಿರುವ ಶೈತಾನನು ಅದಾನ್ ಮತ್ತು ಇಕಾಮತ್‌ನ ಧ್ವನಿ ಕೇಳಿ ಓಡಿ ಬಿಡುತ್ತಾನೆ. ಮಗುವಿನ ಕಿವಿಗೆ ಶೈತಾನನ ಸಂದೇಶ ತಲುಪುವುದಕ್ಕೆ ಮುಂಚಿತವಾಗಿಯೇ ಮಗುವಿಗೆ ಅಲ್ಲಾಹನ ದಾಸ್ಯದ ಸಂದೇಶ ನೀಡಲಾಗುತ್ತದೆ".

ಅದಾನ್ ಮತ್ತು ಇಕಾಮತ್ ಹೇಳಿದ ಬಳಿಕ ಓರ್ವ ಸಜ್ಜನ ವ್ಯಕ್ತಿಯಿಂದ ಖರ್ಜೂರ ಜಗಿಸಿ ಬಾಯಿಗೆ ಸವರಿಸಿರಿ ಮತ್ತು ಮಗುವಿನ ಒಳಿತು ಮತ್ತು ಶ್ರೇಯಸ್ಸಿಗಾಗಿ ಪ್ರಾರ್ಥಿಸುವಂತೆ ಹೇಳಿರಿ. ಅಬ್ದುಲ್ಲಾ ಬಿನ್ ಝುಬೈರ್‌ರ(ರ) ಜನನವಾದಾಗ ನಾನವರನ್ನು ಪ್ರವಾದಿ ವರ್ಯರ(ಸ) ಮಡಿಲಲ್ಲಿ ಇರಿಸಿದೆ ಎಂದು ಹ. ಅಸ್ಮಾ(ರ) ಹೇಳಿರುತ್ತಾರೆ. ಪ್ರವಾದಿ(ಸ) ಒಂದು ಖರ್ಜೂರ ತರಿಸಿ ಅದನ್ನು ಜಗಿದು ಹ. ಅಬ್ದುಲ್ಲಾ ಬಿನ್ ಝುಬೈರ್‌ರ(ರ) ಬಾಯಿಗೆ ತಾಗಿಸಿದರು ಮತ್ತು ಅವರಿಗಾಗಿ ಒಳಿತು ಮತ್ತು ಸಮೃದ್ಧಿಯ ಪ್ರಾರ್ಥನೆ ಮಾಡಿದರು.

ಹ. ಆಯಿಶಾ(ರ) ಹೇಳುತ್ತಾರೆ: "ಪ್ರವಾದಿವರ್ಯರ(ಸ) ಬಳಿ ಶಿಶುಗಳನ್ನು ತರಲಾಗುತ್ತಿತ್ತು. ಪ್ರವಾದಿ(ಸ) ಖರ್ಜೂರ ಜಗಿದು ಅವುಗಳ ಬಾಯಿಗೆ ತಾಗಿಸುತ್ತಿದ್ದರು ಮತ್ತು ಅವರಿಗಾಗಿ ಒಳಿತು ಮತ್ತು ಸಮೃದ್ಧಿಯ ಪ್ರಾರ್ಥನೆ ಮಾಡುತ್ತಿದ್ದರು". (ಮುಸ್ಲಿಮ್)

ಹ. ಇಮಾಮ್ ಅಹ್ಮದ್ ಬಿನ್ ಹಂಬಲ್‌ರಲ್ಲಿ(ರ) ಮಗು ಹುಟ್ಟಿದಾಗ ಅವರು ಮನೆಯಲ್ಲಿದ್ದ ಮಕ್ಕಾದ ಖರ್ಜೂರ ತರಿಸಿ ಓರ್ವ ಸುಶೀಲೆಯಾದ ಮಹಿಳೆ ಬೀಬಿ ಉಮ್ಮು ಅಲೀ(ರ) ಅವರಿಂದ ಅದನ್ನು ಮಗುವಿಗೆ ತಿನ್ನಿಸಿದರು.

8. ಮಗುವಿಗೆ ಉತ್ತಮ ಹೆಸರಿಡಿರಿ. ಪ್ರವಾದಿಗಳ ಹೆಸರಿಡುವುದು ಮತ್ತು ಅಲ್ಲಾಹನ ಗುಣನಾಮಗಳ ಜೊತೆ ಅಬ್ದ್ ಸೇರಿಸಿ ಹೆಸರಿಡುವುದು ಒಳ್ಳೆಯದು. ಉದಾ: ಅಬ್ದುಲ್ಲಾ, ಅಬ್ದುರ್ರಹ್ಮಾನ್ ಇತ್ಯಾದಿ.

ಪ್ರವಾದಿ(ಸ) ಹೇಳುತ್ತಾರೆ, "ನಿರ್ಣಾಯಕ ದಿನದಂದು ನಿಮ್ಮನ್ನು ನಿಮ್ಮ ನಿಮ್ಮ ಹೆಸರು ಹಿಡಿದು ಕರೆಯಲಾಗುವುದು. ಆದುದರಿಂದ ಉತ್ತಮ ಹೆಸರನ್ನೇ ಇಡಿರಿ". (ಅಬೂದಾವೂದ್)

ಪ್ರವಾದಿ(ಸ) ಹೇಳಿರುವರು: "ನಿಮ್ಮ ಹೆಸರುಗಳ ಪೈಕಿ ಅಬ್ದುಲ್ಲಾ ಮತ್ತು ಅಬ್ದುರ್ರಹ್ಮಾನ್ ಅಲ್ಲಾಹನಿಗೆ ಅತ್ಯಂತ ಪ್ರಿಯವಾದುವು".

ಪ್ರವಾದಿಗಳ ಹೆಸರುಗಳನ್ನು ಇಡಿರಿ ಎಂದೂ ಪ್ರವಾದಿ(ಸ) ಆದೇಶಿಸಿರುವರು.

ಪ್ರವಾದಿ(ಸ) ಹೇಳಿರುವುದಾಗಿ ಬುಖಾರಿಯಲ್ಲಿದೆ: "ನನ್ನಂತೆ ಹೆಸರು ಇಡಿರಿ. ಆದರೆ ನನ್ನ ಕುನಿಯತ್ (ಅಬುಲ್ ಕಾಸಿಮ್)ನಂತೆ ಹೆಸರಿಡಬೇಡಿ".

9. ಅಜ್ಞಾನದಿಂದ ತಪ್ಪು ಹೆಸರು ಇಟ್ಟಿದ್ದರೆ ಅದನ್ನು ಬದಲಾಯಿಸಿ ಒಳ್ಳೆಯ ಹೆಸರು

ಇಡಿರಿ. ಪ್ರವಾದಿ(ಸ) ತಪ್ಪು ಹೆಸರನ್ನು ಬದಲಾಯಿಸುತ್ತಿದ್ದರು. ಹ. ಉಮರ್‌ರ(ರ) ಓರ್ವ ಪುತ್ರಿಯ ಹೆಸರು ಆಸಿಯಾ (ತಪ್ಪು ಮಾಡುವವಳು) ಎಂದಿತ್ತು. ಪ್ರವಾದಿ(ಸ) ಅದನ್ನು ಜಮೀಲ (ಸುಂದರಿ) ಎಂದು ಬದಲಾಯಿಸಿಟ್ಟರು. (ಮುಸ್ಲಿಮ್)

ಹ. ಝೈನಬ್(ರ) ಅಬೂ ಸಲ್ಮಾರ(ರ) ಮಗಳಾಗಿದ್ದಳು. ಅವರ ಹೆಸರು ಬರ್ರಃ ಎಂದಾಗಿತ್ತು. ಅರ್ಥಾತ್ "ಶೀಲವತಿ" ಎಂದು. ಪ್ರವಾದಿ(ಸ) ಇದನ್ನು ಕೇಳಿ ನೀನೇ ನಿನ್ನನ್ನು "ಶೀಲವತಿ" ಎಂದು ಕರೆದುಕೊಳ್ಳುತ್ತೀಯಾ? ಎಂದು ಪ್ರಶ್ನಿಸಿದರು. ಮತ್ತೇನೆಂದು ಹೆಸರಿಡಬೇಕು ಎಂದು ಜನರು ವಿಚಾರಿಸಿದಾಗ ಝೈನಬ್ ಎಂದು ಇಡಿರಿ ಎಂದು ಆದೇಶಿಸಿದರು. (ಅಬೂದಾವೂದ್)

10. ಏಳನೇ ದಿನ ಅಕೀಕ ಮಾಡಿಸಿರಿ. ಹುಡುಗನ ಕಡೆಯಿಂದ ಎರಡು ಆಡು ಮತ್ತು ಹುಡುಗಿಯ ಕಡೆಯಿಂದ ಒಂದು ಆಡು ಬಲಿ ನೀಡಿರಿ. ಹುಡುಗನ ಕಡೆಯಿಂದ ಎರಡೇ ಆಗಬೇಕೆಂದಿಲ್ಲ. ಒಂದು ಆಡನ್ನೂ ಕೊಯ್ಯಬಹುದು. ಮಗುವಿನ ಕೂದಲು ತೆಗೆಸಿ ಅದರಷ್ಟು ತೂಕದ ಬಂಗಾರ ಅಥವಾ ಬೆಳ್ಳಿ ದಾನ ಮಾಡಿರಿ. ಪ್ರವಾದಿ(ಸ) ಹೇಳುತ್ತಾರೆ: "ಏಳನೇ ದಿನ ಮಗುವಿಗೆ ಹೆಸರಿಡಿರಿ, ತಲೆ ಬೋಳಿಸಿರಿ ಮತ್ತು ಅಕೀಕ ಮಾಡಿರಿ". (ತಿರ್ಮಿದಿ)

11. ಏಳನೇ ದಿನದಂದು ಮುಂಜಿ ಕೂಡ ಮಾಡಿಸಿರಿ. ಕಾರಣಾಂತರದಿಂದ ಮಾಡಲಾಗದಿದ್ದರೆ ಏಳನೇ ವರ್ಷ ಪ್ರಾಯ ಆಗುವುದರೊಳಗೆ ತಪ್ಪದೆ ಮಾಡಿಸಿ. ಮುಂಜಿಯು ಇಸ್ಲಾಮೀ ಚಿಹ್ನೆಯಾಗಿದೆ.

12. ಮಗು ಮಾತನಾಡತೊಡಗಿದಾಗ ಮೊಟ್ಟ ಮೊದಲು ಅದಕ್ಕೆ ಪವಿತ್ರ ವಚನ 'ಲಾ ಇಲಾಹ ಇಲ್ಲಲ್ಲಾಹು' ಕಲಿಸಿರಿ.

ಪ್ರವಾದಿ(ಸ) ಈ ರೀತಿ ಆದೇಶಿಸಿರುವರು: "ನಿಮ್ಮ ಮಗು ಮಾತನಾಡತೊಡಗಿದಾಗ ಅದಕ್ಕೆ 'ಲಾ ಇಲಾಹ ಇಲ್ಲಲ್ಲಾಹು' ಕಲಿಸಿ ಕೊಡಿರಿ ಮತ್ತು ಅದರ ಸಾವು ಎಂದು ಸಂಭವಿಸುವುದೆಂಬುದರ ಬಗ್ಗೆ ನಿಶ್ಚಿಂತರಾಗಿರಿ. ಹಾಲು ಹಲ್ಲು ಉದುರತೊಡಗಿದಾಗ ಮಗುವಿಗೆ ನಮಾಝ್‌ನ ಆದೇಶ ನೀಡಿರಿ". (ಇಬ್ನು ಸುನ್ನಿ)

ಪ್ರವಾದಿವರ್ಯರ(ಸ) ಮನೆತನದಲ್ಲಿ ಯಾವುದಾದರೂ ಮಗು ಮಾತನಾಡ ತೊಡಗಿದಾಗ ಅದಕ್ಕೆ ಸೂರತುಲ್ ಫುರ್ಕಾನ್‌ನ ದ್ವಿತೀಯ ಸೂಕ್ತವನ್ನು ಕಲಿಸಲಾಗುತ್ತಿತ್ತು ಎಂದು ಹದೀಸ್‌ನಲ್ಲಿದೆ. ಆ ಸೂಕ್ತದಲ್ಲಿ ಏಕದೇವತ್ವದ ಸಮಗ್ರ ಶಿಕ್ಷಣವನ್ನು ಸಂಕ್ಷಿಪ್ತವಾಗಿ ಕೊಡಲಾಗಿದೆ:

الَّذِي لَهُ مُلْكُ السَّمٰوٰتِ وَالْأَرْضِ وَلَمْ يَتَّخِذْ وَلَدًا وَّلَمْ يَكُنْ لَّهُ شَرِيْكٌ فِي الْمُلْكِ وَخَلَقَ كُلَّ شَيْءٍ فَقَدَّرَهُ تَقْدِيْرًا ۝٢

"ಭೂಮ್ಯಾಕಾಶಗಳ ಪ್ರಭುತ್ವದ ಒಡೆಯನಾದ ಅಲ್ಲಾಹ್, ಅವನು ಯಾರನ್ನೂ ಮಗನಾಗಿಸಲಿಲ್ಲ. ಅವನ ಆಧಿಪತ್ಯದಲ್ಲಿ ಯಾರೂ ಅವನಿಗೆ ಭಾಗೀದಾರರಿಲ್ಲ. ಅವನು ಎಲ್ಲ

ವಸ್ತುಗಳನ್ನೂ ಸೃಷ್ಟಿಸಿದನು. ತರುವಾಯ ಅದಕ್ಕೆ ಅನುಗುಣವಾದ ವಿಧಿಯನ್ನು ನಿರ್ಣಯಿಸಿದನು".

13. ಮಕ್ಕಳಿಗೆ ಮೊಲೆಹಾಲನ್ನೇ ಕುಡಿಸಿರಿ. ಇದು ತಾಯಿಯ ಮೇಲೆ ಮಗುವಿನ ಹಕ್ಕಾಗಿದೆ. ಪವಿತ್ರ ಕುರ್‌ಆನ್, ಮನುಷ್ಯರಿಗೆ ತಾಯಿಯ ಈ ಔದಾರ್ಯವನ್ನು ಜ್ಞಾಪಿಸಿ ಕೊಡುತ್ತದೆ. ಆಕೆಯೊಂದಿಗೆ ಅಸಾಮಾನ್ಯ ಸದ್‌ವ್ಯವಹಾರದ ತಾಕೀತು ಮಾಡಿದೆ. ಮಗುವಿಗೆ ಮೊಲೆಹಾಲಿನ ಒಂದೊಂದು ಹನಿಯ ಜೊತೆಗೆ ಏಕದೇವತ್ವದ ಪಾಠ, ಪ್ರವಾದಿ ಪ್ರೇಮ ಮತ್ತು ಧರ್ಮ ಪ್ರೇಮವನ್ನು ಕುಡಿಸಿರಿ. ಈ ಪ್ರೇಮವು ಮಗುವಿನ ಮನ, ಮಸ್ತಿಷ್ಕಗಳಲ್ಲಿ ಬೇರೂರುವಂತೆ ಪ್ರಯತ್ನಿಸಿರಿ. ಪಾಲನೆ, ಪೋಷಣೆಯ ಹೊಣೆಯನ್ನು ತಂದೆಯ ಮೇಲೆ ಹಾಕಿ ಹೊಣೆ ಮುಕ್ತರಾಗದಿರಿ. ಈ ಆನಂದಮಯ ಧಾರ್ಮಿಕ ಕರ್ತವ್ಯವನ್ನು ಸ್ವಯಂ ನಿರ್ವಹಿಸಿ ಆತ್ಮಶಾಂತಿ ಮತ್ತು ಆನಂದ ಅನುಭವಿಸಿರಿ.

14. ಮಕ್ಕಳನ್ನು ಹೆದರಿಸದಿರಿ. ಎಳೆ ಪ್ರಾಯದಲ್ಲಿ ಹುಟ್ಟಿದ ಹೆದರಿಕೆ ಜೀವನದುದ್ದಕ್ಕೂ ಮನಸ್ಸನ್ನು ಆವರಿಸಿರುತ್ತದೆ. ಇಂತಹ ಮಕ್ಕಳು ಸಾಮಾನ್ಯವಾಗಿ ಜೀವನದಲ್ಲಿ ಯಾವುದೇ ಮಹತ್ಕಾರ್ಯ ಮಾಡಲು ಸಮರ್ಥರಾಗುವುದಿಲ್ಲ.

15. ಮಕ್ಕಳನ್ನು ಮಾತು ಮಾತಿಗೆ ಗದರಿಸುವ, ಬೆದರಿಸುವ ಮತ್ತು ಜರೆಯುವ ಅಭ್ಯಾಸ ತೊರೆಯಿರಿ. ಅವರ ಕುಂದು ಕೊರತೆಗಳ ಬಗ್ಗೆ ಬೇಸರ ಮತ್ತು ದ್ವೇಷ ವ್ಯಕ್ತಪಡಿಸುವ ಬದಲು ವಿವೇಕ ಮತ್ತು ಪ್ರೇಮಾನುಕಂಪದೊಂದಿಗೆ ಅವರನ್ನು ತರಬೇತುಗೊಳಿಸುವ ಪ್ರಯತ್ನ ಮಾಡಿರಿ. ಆದರೆ ಅವರ ಯಾವುದೇ ಧರ್ಮಬಾಹಿರ ಕೃತ್ಯವನ್ನು ಸಹಿಸಲಾಗದು ಎಂಬುದು ಅವರಿಗೆ ಮನವರಿಕೆಯಾಗುವ ರೀತಿಯಲ್ಲಿ ವರ್ತಿಸಿರಿ.

16. ಮಕ್ಕಳೊಂದಿಗೆ ಸದಾ ಪ್ರೇಮ, ಅನುಕಂಪ ಮತ್ತು ಮೃದುತ್ವದ ವರ್ತನೆ ಮಾಡಿರಿ. ಅವರ ಅಗತ್ಯಕ್ಕನುಸಾರ ಮತ್ತು ನಿಮ್ಮ ಸಾಧ್ಯತೆಯ ಪ್ರಕಾರ ಅವರ ಎಲ್ಲ ಬೇಡಿಕೆಗಳನ್ನು ಈಡೇರಿಸಲು ಪ್ರಯತ್ನಿಸಿರಿ. ಅವರಲ್ಲಿ ನಿಮ್ಮ ಅನುಸರಣೆ ಮತ್ತು ವಿಧೇಯತೆಯ ಭಾವನೆಗಳನ್ನು ಪ್ರಚೋದಿಸಿರಿ.

ಒಮ್ಮೆ ಅಹ್ನಫ್ ಬಿನ್ ಕೈಸ್‌ರಲ್ಲಿ(ರ), ಹ. ಮುಆವಿಯಾರು(ರ) 'ಮಕ್ಕಳೊಂದಿಗೆ ಯಾವ ರೀತಿ ವರ್ತಿಸಬೇಕು?' ಎಂದು ವಿಚಾರಿಸಿದರು. ಅದಕ್ಕೆ ಅಹ್ನಫ್ ಬಿನ್ ಕೈಸ್(ರ) ಹೀಗೆಂದರು:

"ಓ ಸತ್ಯವಿಶ್ವಾಸಿಗಳ ನಾಯಕರೇ! ಮಕ್ಕಳು ನಮ್ಮ ಹೃದಯದ ಕುಡಿ ಮತ್ತು ಬೆನ್ನಿನ ಆಸರೆಯಾಗಿದ್ದಾರೆ. ನಾವು ಅವರ ಮಟ್ಟಿಗೆ ಭೂಮಿಯಂತೆ. ಅದು ಮೃದುವೂ, ನಿರುಪದ್ರವಿಯೂ ಆಗಿದೆ. ಅವರ ಮಟ್ಟಿಗೆ ಆಕಾಶದಂತೆ. ಅವರ ಮೂಲಕವೇ ನಾವು ಮಹತ್ಕಾರ್ಯಗಳನ್ನು ಸಾಧಿಸುವ ಧೈರ್ಯ ತಾಳುತ್ತೇವೆ. ಆದ್ದರಿಂದ ಅವರು ನಿಮ್ಮಲ್ಲೇನಾದರೂ ಕೇಳಿದರೆ ಅದನ್ನು ಪೂರೈಸಿರಿ. ಅವರು ಮನನೊಂದಾಗ ಅವರ ನೋವಿಗೆ ಶಮನ ಮಾಡಿರಿ. ಆಗ ಅವರು ನಿಮ್ಮನ್ನು ಪ್ರೀತಿಸುವರು. ನಿಮ್ಮ ಪಿತೃವಾತ್ಸಲ್ಯವನ್ನು ಮೆಚ್ಚುವರು. ಎಂದೂ ಅವರಿಗೆ ಸಹಿಸಲಾಗದ ಹೊರೆಯಾಗದಿರಿ. ಅನ್ಯಥಾ ಅವರು ನಿಮ್ಮಿಂದ ಜಿಗುಪ್ಸೆ

ಹೊಂದುವರು. ನಿಮ್ಮ ಮರಣವನ್ನು ಬಯಸುವರು. ನಿಮ್ಮ ಸಮೀಪ ಬರುವುದನ್ನು ಅವರು ದ್ವೇಷಿಸುವರು."

ಈ ವಿವೇಕಪೂರ್ಣ ಮಾತುಗಳಿಂದ ಪ್ರಭಾವಿತರಾದ ಹ. ಮುಆವಿಯಾ(ರ) ಈ ರೀತಿ ಹೇಳಿದರು: "ನೀವು ಇಲ್ಲಿಗೆ ಬಂದಾಗ ನಾನು ಯಝೀದನ ಬಗ್ಗೆ ಬಹಳ ಕುಪಿತನಾಗಿದ್ದೆ".

ಅಹ್ನಫ್(ರ) ಹೊರಟು ಹೋದ ಬಳಿಕ ಹ. ಮುಆವಿಯಾರ(ರ) ಕೋಪ ತಣಿಯಿತು. ಯಝೀದನೊಂದಿಗೆ ರಾಜಿ ಮಾಡಿಕೊಂಡು ಅವನಿಗೆ 200 ದಿರ್ಹಮ್ ಮತ್ತು 200 ಜೊತೆ ಬಟ್ಟೆ ಕಳುಹಿಸಿಕೊಟ್ಟರು. ಅವುಗಳಲ್ಲಿ ಅರ್ಧ ಭಾಗವನ್ನು ಯಝೀದ್ ಅಹ್ನಫ್‌ರಿಗೆ(ರ) ಕಳುಹಿಸಿಕೊಟ್ಟನು.

17. ಎಳೆಯ ಮಕ್ಕಳ ತಲೆಯನ್ನು ಪ್ರೀತಿಯಿಂದ ನೇವರಿಸಿರಿ. ಅವರನ್ನು ಎತ್ತಿಕೊಂಡು ಪ್ರೀತಿಸಿರಿ. ಅವರೊಂದಿಗೆ ಸದ್ವರ್ತನೆ ಕೈಗೊಳ್ಳಿರಿ. ಸದಾ ಸಿಡುಕು ಮುಖದ ಆಜ್ಞಾಧಿಕಾರಿ ಯಂತೆ ವರ್ತಿಸದಿರಿ. ಇದರಿಂದ ಮಕ್ಕಳ ಮನದಲ್ಲಿ ಹೆತ್ತವರ ಬಗ್ಗೆ ಪ್ರೇಮ, ವಾತ್ಸಲ್ಯ ಕುಂಠಿತವಾಗುತ್ತದೆ. ಅವರ ಸ್ವಾಭಿಮಾನವೂ ಘಾಸಿಗೊಳ್ಳುತ್ತದೆ. ಅವರ ಸಹಜ ಬೆಳವಣಿಗೆಗೂ ಇದು ಅಡ್ಡಿಯಾಗುತ್ತದೆ. ಒಮ್ಮೆ ಅಕ್ರಅ್ ಬಿನ್ ಹಾಬಿಸ್(ರ) ಪ್ರವಾದಿವರ್ಯರ(ಸ) ಬಳಿಗೆ ಆಗಮಿಸಿದರು. ಆಗ ಪ್ರವಾದಿ(ಸ), ಮೊಮ್ಮಗ ಹಸನ್‌ರನ್ನು(ರ) ಮುದ್ದಿಸುತ್ತಿದ್ದರು. ಇದನ್ನು ಕಂಡು ಅಕ್ರಅ್‌ರಿಗೆ(ರ) ಆಶ್ಚರ್ಯವಾಯಿತು. "ಪ್ರವಾದಿವರ್ಯರೇ! ತಾವೂ ಮಕ್ಕಳನ್ನು ಮುದ್ದಿಸುತ್ತಿರುವುದೇ? ನನಗೆ ಹತ್ತು ಮಂದಿ ಮಕ್ಕಳಿದ್ದಾರೆ. ಆದರೆ ನಾನೆಂದೂ ಅವರ ಪೈಕಿ ಯಾರನ್ನೂ ಮುದ್ದಿಸಿದ್ದಿಲ್ಲ!" ಎಂದು ಹೇಳಿದರು. ಇದನ್ನು ಕೇಳಿ ಪ್ರವಾದಿ(ಸ) ಅವರತ್ತ ಕಣ್ಣೆತ್ತಿ ನೋಡುತ್ತಾ, "ನಿಮ್ಮ ಮನದಲ್ಲಿ ಅಲ್ಲಾಹನು ಕರುಣೆ ಮತ್ತು ಅನುಕಂಪವನ್ನು ಇರಿಸದಿದ್ದರೆ ಅದಕ್ಕೆ ನಾನೇನು ಮಾಡಲಿ" ಎಂದು ಉತ್ತರಿಸಿದರು.

ಉಮರ್ ಫಾರೂಕ್‌ರ(ರ) ಆಡಳಿತ ಕಾಲದಲ್ಲಿ ಆಮಿರ್(ರ) ಪ್ರಮುಖ ಹುದ್ದೆಯ ಲ್ಲಿದ್ದರು. ಒಮ್ಮೆ ಉಮರ್‌ರನ್ನು(ರ) ಭೇಟಿಯಾಗಲು ಅವರ ಮನೆಗೆ ಹೋದರು. ಉಮರ್ ಮಲಗಿದ್ದರು ಮತ್ತು ಮಕ್ಕಳು ಅವರ ಎದೆಯ ಮೇಲೆ ಹತ್ತಿ ಆಡುತ್ತಿದ್ದರು. ಆಮಿರ್‌ರಿಗೆ(ರ) ಇದು ಹಿಡಿಸಲಿಲ್ಲ. ಅವರ ಮನದಿಂಗಿತವನ್ನು ಅವರ ಮುಖ ನೋಡಿಯೇ ಅರಿತುಕೊಂಡ ಉಮರ್(ರ), "ನೀವು ನಿಮ್ಮ ಮಕ್ಕಳೊಂದಿಗೆ ಹೇಗೆ ವರ್ತಿಸುತ್ತೀರಿ?" ಎಂದು ಪ್ರಶ್ನಿಸಿದರು.

"ನಾನು ಮನೆಗೆ ಪ್ರವೇಶಿಸುವಾಗ ಮನೆಯವರು ಸಂಪೂರ್ಣ ಮೌನ ತಾಳುತ್ತಾರೆ" ಎಂದು ಆಮಿರ್(ರ) ಉತ್ತರಿಸಿದರು.

"ಪ್ರವಾದಿವರ್ಯರ(ಸ) ಅನುಯಾಯಿಯಾಗಿದ್ದೂ ಮನೆಯವರೊಂದಿಗೆ ಯಾವ ರೀತಿ ಮೃದುವಾಗಿ ವರ್ತಿಸಬೇಕೆಂದು ನಿಮಗೆ ತಿಳಿದಿಲ್ಲವೇ?" ಎಂದು ಉಮರ್(ರ) ಬಹಳ ಕಳಕಳಿಯಿಂದ ಪ್ರಶ್ನಿಸಿದರು.

18. ಮಕ್ಕಳಿಗೆ ಅತ್ಯುತ್ತಮ ಶಿಕ್ಷಣ ತರಬೇತಿ ನೀಡುವಲ್ಲಿ ಸರ್ವಸಾಧ್ಯ ಪ್ರಯತ್ನ ಮಾಡಿರಿ. ಈ ಮಾರ್ಗದಲ್ಲಿ ಸರ್ವ ತ್ಯಾಗಕ್ಕೂ ಸಿದ್ಧರಾಗಿರಿ. ಇದು ನಿಮ್ಮ ಧಾರ್ಮಿಕ ಕರ್ತವ್ಯ.

ನಿಮ್ಮ ಮೇಲೆ ಮತ್ತು ನಿಮ್ಮ ಮಕ್ಕಳ ಮೇಲೆ ನೀವು ಮಾಡುವ ಮಹದುಪಕಾರವೂ ಹೌದು.

ಪವಿತ್ರ ಕುರ್‌ಆನ್ ಈ ರೀತಿ ಆದೇಶಿಸಿದೆ:

يَاَيُّهَا الَّذِيْنَ اٰمَنُوْا قُوْٓا اَنْفُسَكُمْ وَ اَهْلِيْكُمْ نَارًا

**"ಸತ್ಯವಿಶ್ವಾಸಿಗಳೇ! ನಿಮ್ಮನ್ನೂ ನಿಮ್ಮ ಮನೆಯವರನ್ನೂ ನರಕಾಗ್ನಿಯಿಂದ ರಕ್ಷಿಸಿರಿ". (66:6)**

ಧರ್ಮದ ಅಗತ್ಯ ಶಿಕ್ಷಣವನ್ನು ಗಳಿಸುವುದು ಹಾಗೂ ಜೀವನವನ್ನು ಅಲ್ಲಾಹ್ ಮತ್ತು ಪ್ರವಾದಿವರ್ಯರ(ಸ) ಆದೇಶಗಳಿಗನುಸಾರ ಸಾಗಿಸುವುದೇ ನರಕಾಗ್ನಿಯಿಂದ ರಕ್ಷಣೆ ಹೊಂದುವ ಏಕೈಕ ಮಾರ್ಗ.

"ತಂದೆ ತಾಯಿಗಳು ತಮ್ಮ ಮಕ್ಕಳಿಗೆ ನೀಡುವ ಅತ್ಯುತ್ತಮ ಕೊಡುಗೆ ಅವರ ಉತ್ತಮ ಶಿಕ್ಷಣ-ತರಬೇತಿಯಾಗಿದೆ" ಎಂದು ಪ್ರವಾದಿ(ಸ) ಹೇಳಿರುವರು. (ಮಿಷ್ಕಾತ್)

ಪ್ರವಾದಿ(ಸ) ಹೀಗೆ ಹೇಳಿರುವರು, "ಮನುಷ್ಯನು ತೀರಿಕೊಂಡಾಗ ಅವನ ಕರ್ಮಗಳು ಮುಗಿಯುತ್ತವೆ. ಆದರೆ ಮೂರು ವಿಧದ ಪುಣ್ಯಗಳ ಪ್ರತಿಫಲವು ಮರಣಾನಂತರವೂ ಸಿಗುತ್ತಿರುತ್ತದೆ: i) ಅವನು ಮಾಡಿದ ಶಾಶ್ವತ ಸ್ವಭಾವದ ದಾನ-ಧರ್ಮ. ii) ಅವನು ಬಿಟ್ಟು ಹೋದ ಫಲಪ್ರದ ವಿದ್ಯೆ. iii) ತಂದೆಗಾಗಿ ಪ್ರಾರ್ಥಿಸುತ್ತಿರುವ ಸಜ್ಜನರಾದ ಸಂತಾನ." (ಮುಸ್ಲಿಮ್)

ವಾಸ್ತವದಲ್ಲಿ ನಿಮ್ಮ ಕಾಲಾನಂತರ ನಿಮ್ಮ ಸಾಂಸ್ಕೃತಿಕ ಪರಂಪರೆ, ಧಾರ್ಮಿಕ ಶಿಕ್ಷಣ ಮತ್ತು ಏಕದೇವತ್ವದ ಸಂದೇಶವನ್ನು ಜೀವಂತವಾಗಿಡುವ ಮಾಧ್ಯಮ ನಿಮ್ಮ ಮಕ್ಕಳೇ ಆಗಿರುವರು. ತನ್ನ ಸಂದೇಶವನ್ನು ತನ್ನ ಜೀವನಾನಂತರವೂ ಜೀವಂತವಾಗಿರಿಸಲಿಕ್ಕಾಗಿ ಸತ್ಯವಿಶ್ವಾಸಿಯು ಉತ್ತಮ ಸಂತಾನವನ್ನು ಬಯಸುತ್ತಾನೆ.

19. ನಿಮ್ಮ ಮಕ್ಕಳಿಗೆ ಏಳು ವರ್ಷ ಪ್ರಾಯ ತುಂಬಿದಾಗ ಅವರಿಗೆ ನಮಾಝ್ ಮಾಡುವುದನ್ನು ಕಲಿಸಿಕೊಡಿರಿ. ನಮಾಝ್‌ನ ಉಪದೇಶ ಮಾಡಿರಿ. ನಿಮ್ಮ ಜೊತೆ ಮಸೀದಿಗೆ ಕರೆದುಕೊಂಡು ಹೋಗಿ ಅವರಲ್ಲಿ ನಮಾಝ್‌ನ ಬಗ್ಗೆ ಅಭಿರುಚಿ ಹುಟ್ಟಿಸಿರಿ. ಹತ್ತು ವರ್ಷ ಪ್ರಾಯವಾದ ಬಳಿಕ ಅವರು ನಮಾಝ್ ಮಾಡುವಲ್ಲಿ ಅಸಡ್ಡೆ ತೋರಿದರೆ ಅವರಿಗೆ ತಕ್ಕ ಶಿಕ್ಷೆ ನೀಡಿರಿ. ನಮಾಝ್‌ನ ಬಗ್ಗೆ ಅಶ್ರದ್ಧೆಯನ್ನು ನೀವು ಸಹಿಸಲಾರಿರಿ ಎಂಬುದನ್ನು ಅವರಿಗೆ ನಿಮ್ಮ ನಡೆ-ನುಡಿಗಳಿಂದ ಸ್ಪಷ್ಟಪಡಿಸಿರಿ.

20. ಮಕ್ಕಳು 10 ವರ್ಷ ವಯಸ್ಸಿನವರಾದಾಗ ಅವರ ಹಾಸಿಗೆಯನ್ನು ಬೇರ್ಪಡಿಸಿರಿ. ಪ್ರತಿಯೊಬ್ಬನನ್ನು ಬೇರೆ ಬೇರೆ ಮಲಗಿಸಿರಿ.

"ನಿಮ್ಮ ಮಕ್ಕಳಿಗೆ ಏಳು ವರ್ಷ ವಯಸ್ಸಾದಾಗ ಅವರಿಗೆ ನಮಾಝ್ ಮಾಡಲು ಆದೇಶಿಸಿರಿ. ಹತ್ತು ವರ್ಷ ವಯಸ್ಸಾದಾಗ ನಮಾಝ್ ಮಾಡದೆ ಇದ್ದರೆ ಅವರನ್ನು ಶಿಕ್ಷಿಸಿರಿ. ಆ ವಯಸ್ಸಿನಲ್ಲಿ ಅವರ ಹಾಸಿಗೆಯನ್ನು ಬೇರ್ಪಡಿಸಿರಿ" ಎಂದು ಪ್ರವಾದಿ(ಸ) ಆದೇಶಿಸಿರುವರು.

21. ಮಕ್ಕಳನ್ನು ಸದಾ ಶುಚಿಯಾಗಿಡಿರಿ. ಅವರ ಶುದ್ಧಿ, ಸ್ನಾನ ಇತ್ಯಾದಿಗಳ ಬಗ್ಗೆ ಗಮನ ಹರಿಸಿರಿ. ಬಟ್ಟೆಗಳನ್ನು ಸ್ವಚ್ಛವಾಗಿಡಿರಿ. ಆದರೆ ಹೆಚ್ಚು ಆಡಂಬರ ಮತ್ತು ಶೃಂಗಾರ ಗಳನ್ನು ಮಾಡದಿರಿ. ಹೆಣ್ಣು ಮಕ್ಕಳ ಬಟ್ಟೆಬರೆಗಳನ್ನೂ ಸಾದಾ ಆಗಿ ಇರಿಸಿರಿ. ಕಣ್ಣು ಕುಕ್ಕುವ ಬಟ್ಟೆ ಬರೆಗಳನ್ನು ತೊಡಿಸಿ ಅವರ ಅಭ್ಯಾಸವನ್ನು ಕೆಡಿಸದಿರಿ.

22. ಇತರರ ಮುಂದೆ ನಿಮ್ಮ ಮಕ್ಕಳ ಕುಂದು ಕೊರತೆಗಳನ್ನು ವಿವರಿಸಬೇಡಿರಿ. ಅನ್ಯರ ಮುಂದೆ ಅವರನ್ನು ನಾಚಿಕೆಗೊಳಪಡಿಸದಿರಿ. ಅವರ ಸ್ವಾಭಿಮಾನಕ್ಕೆ ಕುಂದುಂಟಾಗುವಂತೆ ಮಾಡದಿರಿ.

23. ಮಕ್ಕಳ ಮುಂದೆ ಅವರ ಸುಧಾರಣೆಯ ಬಗ್ಗೆ ನಿರಾಶೆ ವ್ಯಕ್ತಪಡಿಸದಿರಿ. ಅವರ ಸಾಮಾನ್ಯ ಒಳಿತನ್ನು ಮನಬಿಚ್ಚಿ ಹೊಗಳಿರಿ. ಅವರನ್ನು ಪ್ರೋತ್ಸಾಹಿಸಿರಿ. ಸದಾ ಅವರಲ್ಲಿ ಸ್ವಾಭಿಮಾನ ಮತ್ತು ಧೈರ್ಯ ಉಂಟು ಮಾಡಲು ಪ್ರಯತ್ನಿಸಿರಿ. ಇದರಿಂದ ಅವರು ಜಗತ್ತಿನಲ್ಲಿ ಉನ್ನತ ಸ್ಥಾನವನ್ನು ಪಡೆಯುವಂತಾದೀತು.

24. ಮಕ್ಕಳಿಗೆ ಪ್ರವಾದಿಗಳ ಚರಿತ್ರೆ, ಸಜ್ಜನರ ಕಥೆ ಮತ್ತು ಸಹಾಬಿವರ್ಯರ ಧೀರೋದಾತ್ತ ಮಹತ್ಕಾರ್ಯಗಳನ್ನು ವಿವರಿಸುತ್ತಲಿರಿ. ಇದು ತರಬೇತಿ, ಸಂಸ್ಕರಣೆ, ಚಾರಿತ್ರ್ಯ ನಿರ್ಮಾಣ ಮತ್ತು ಧರ್ಮಾಸಕ್ತಿಯ ಬೆಳವಣಿಗೆಗೆ ಅತ್ಯಗತ್ಯ. ಎಷ್ಟೇ ಕೆಲಸ ಕಾರ್ಯಗಳಿದ್ದರೂ ಇದಕ್ಕಾಗಿ ಸಮಯ ವ್ಯಯಿಸಿರಿ. ಪವಿತ್ರ ಕುರ್‌ಆನ್ ಉತ್ತಮವಾಗಿ ಓದಿ ಅವರಿಗೆ ಕೇಳಿಸಿರಿ. ಪ್ರವಾದಿ ವಚನಗಳನ್ನೂ ಅವರಿಗೆ ಬೋಧಿಸುತ್ತಿರಿ. ಬಾಲ್ಯದಲ್ಲೇ ಅವರಲ್ಲಿ ಪ್ರವಾದಿ ಪ್ರೇಮವು ಉಕ್ಕಿ ಬರುವಂತೆ ಪ್ರಯತ್ನಿಸಿರಿ.

25. ಮಕ್ಕಳಲ್ಲಿ ದೀನದಲಿತರ ಬಗ್ಗೆ ಪ್ರೇಮಾನುಕಂಪ ಮತ್ತು ದಾನ ಧರ್ಮದ ಭಾವನೆ ಬೆಳೆಸಲಿಕ್ಕಾಗಿ ಅವರ ಕೈಯಿಂದ ಬಡಬಗ್ಗರಿಗೆ ದಾನ ಮಾಡಿಸಿರಿ. ಅಣ್ಣ ತಮ್ಮಂದಿರಿಗೆ ಹಂಚಿ ತಿನ್ನುವ ಅಭ್ಯಾಸ ಬೆಳೆಸಲಿಕ್ಕಾಗಿ ಅವರಲ್ಲಿ ತಿಂಡಿ ಕೊಟ್ಟು ಹಂಚಿಸಿರಿ. ಇದರಿಂದ ಪರಸ್ಪರ ಹಕ್ಕು ಬಾಧ್ಯತೆಗಳನ್ನು ಅವರು ಅರಿಯುವರಲ್ಲದೆ ನ್ಯಾಯ, ನೀತಿಯ ಅಭ್ಯಾಸವೂ ಅವರಲ್ಲಿ ಬೆಳೆಯುವುದು.

26. ಮಕ್ಕಳ ಅಲ್ಲಸಲ್ಲದ ಎಲ್ಲ ಬೇಡಿಕೆಗಳನ್ನು ಪೂರ್ತಿಗೊಳಿಸಬೇಡಿರಿ. ಅವರು ಅದಕ್ಕೆ ಹಟ ಹಿಡಿಯುವುದಾದರೆ ವಿವೇಕ ಪೂರ್ಣವಾಗಿ ಆ ಅಭ್ಯಾಸವನ್ನು ಹೋಗಲಾಡಿಸಲು ಪ್ರಯತ್ನಿಸಿರಿ. ಸಂದರ್ಭಕ್ಕನುಸಾರ ಸ್ವಲ್ಪ ಕಠಿಣತೆಯನ್ನೂ ತೋರಿಸಿರಿ. ಅನಗತ್ಯ ಪ್ರೀತಿ, ವಾತ್ಸಲ್ಯದ ಪ್ರಕಟಣೆಯಿಂದ ಅವರನ್ನು ಲಂಗು ಲಗಾಮಿಲ್ಲದವರಾಗಿ ಮಾಡದಿರಿ.

27. ಬೊಬ್ಬೆ ಹಾಕಿ ಮಾತನಾಡದಿರಿ. ಮಕ್ಕಳಿಗೂ ಅದನ್ನೇ ಆದೇಶಿಸಿರಿ. ಸದಾ ಮಧ್ಯಮ ಸ್ವರದಲ್ಲೇ ಮಾತನಾಡುವಂತೆ ಮತ್ತು ಪರಸ್ಪರ ಬೊಬ್ಬೆ ಹಾಕಿ ಮಾತನಾಡದಂತೆ ಅವರಿಗೆ ಆದೇಶಿಸಿರಿ.

28. ಮಕ್ಕಳು ತಮ್ಮ ಕೆಲಸ ಕಾರ್ಯಗಳನ್ನು ತಮ್ಮ ಕೈಗಳಿಂದಲೇ ಮಾಡುವಂತೆ ಅಭ್ಯಾಸ ಮಾಡಿಸಿರಿ. ಪ್ರತಿಯೊಂದು ಕೆಲಸಕ್ಕೆ ನೌಕರರನ್ನು ಆಶ್ರಯಿಸಲು ಬಿಡದಿರಿ. ಇದರಿಂದ

ಮಕ್ಕಳು ಆಲಸಿಗಳಾಗುತ್ತಾರೆ. ಮಕ್ಕಳನ್ನು ಶ್ರಮಜೀವಿ ಮತ್ತು ಚುರುಕು ಸ್ವಭಾವದವರಾಗಿ ಬೆಳೆಸಿರಿ.

29. ಮಕ್ಕಳಲ್ಲಿ ಪರಸ್ಪರ ಜಗಳ ಉಂಟಾದರೆ ನಿಮ್ಮ ಮಕ್ಕಳ ಪಕ್ಷ ವಹಿಸಿ ಮಾತನಾಡಬೇಡಿರಿ. ನಿಮ್ಮ ಮನದಲ್ಲಿ ನಿಮ್ಮ ಮಕ್ಕಳ ಬಗೆಗಿರುವ ಭಾವನೆಗಳೇ ಇತರರಿಗೂ ಅವರ ಮಕ್ಕಳ ಬಗ್ಗೆ ಇದೆಯೆಂಬುದನ್ನು ಮರೆಯದಿರಿ. ನೀವು ಸದಾ ನಿಮ್ಮ ಮಕ್ಕಳ ತಪ್ಪುಗಳ ಮೇಲೆ ನಿಗಾ ಇಡಿರಿ. ಏನಾದರೂ ಅಪ್ರಿಯ ಘಟನೆ ಸಂಭವಿಸಿದಾಗಲೆಲ್ಲಾ ನಿಮ್ಮ ಮಕ್ಕಳಿಂದಾದ ತಪ್ಪುಗಳನ್ನು ಕಂಡು ಹಿಡಿದು ಯುಕ್ತಿ ಯುಕ್ತವಾಗಿ ಮತ್ತು ಕಳಕಳಿ ಯಿಂದ ಅವುಗಳನ್ನು ದೂರೀಕರಿಸಲು ಪ್ರಯತ್ನಿಸುತ್ತಲಿರಿ.

30. ಮಕ್ಕಳೊಂದಿಗೆ ಸಮಾನತೆಯ ವ್ಯವಹಾರ ಮಾಡಿರಿ. ಈ ಬಗ್ಗೆ ಸದಾ ಸಮತೋಲನ ವನ್ನು ಕಾಪಾಡಿರಿ. ಪ್ರಕೃತಿದತ್ತವಾಗಿ ಒಂದು ಮಗುವಿನ ಬಗ್ಗೆ ಹೆಚ್ಚು ಒಲವಿಲ್ಲ ದಿದ್ದರೆ ಪರವಾಗಿಲ್ಲ. ಆದರೆ ವರ್ತನೆ ಮತ್ತು ವ್ಯವಹಾರಗಳಲ್ಲಿ ಸದಾ ನ್ಯಾಯ ಮತ್ತು ಸಮಾನತೆಯನ್ನು ಪಾಲಿಸಿರಿ. ಉಳಿದವರಿಗೆ ಅಹಿತವಾಗುವಂತೆ ಒಂದು ಮಗುವಿನೊಂದಿಗೆ ಪಕ್ಷಪಾತದ ವ್ಯವಹಾರ ಮಾಡದಿರಿ. ಇದರಿಂದ ಇತರ ಮಕ್ಕಳಲ್ಲಿ ಕೀಳರಿಮೆ, ದ್ವೇಷ, ನಿರಾಶೆ ಮತ್ತು ಬಂಡಾಯ ನೀತಿಗಳು ಬೆಳೆಯುತ್ತವೆ. ಈ ಕೆಡುಕುಗಳು ಅವರ ಸ್ವಾಭಾವಿಕ ಬೆಳವಣಿಗೆಯನ್ನು ಕುಂಠಿತಗೊಳಿಸುತ್ತವೆ. ಇದು ಅವರ ನೈತಿಕ ಮತ್ತು ಆಧ್ಯಾತ್ಮಿಕ ಉನ್ನತಿಗೂ ಮಾರಕವಾಗಿದೆ.

ಒಮ್ಮೆ ಹ. ಬಶೀರ್(ರ) ತಮ್ಮ ಮಗನಾದ ನುಅ್‌ಮಾನ್‌ರೊಂದಿಗೆ(ರ) ಪ್ರವಾದಿವರ್ಯರ(ಸ) ಬಳಿಗೆ ಬಂದು, 'ಓ ಪ್ರವಾದಿವರ್ಯರೇ! ನನ್ನ ಬಳಿ ಓರ್ವ ಗುಲಾಮನಿದ್ದ. ನಾನವನನ್ನು ಈ ಹುಡುಗನಿಗೆ ನೀಡಿದೆ' ಎಂದರು. ಆಗ ಪ್ರವಾದಿ(ಸ), 'ನೀವು ನಿಮ್ಮ ಎಲ್ಲ ಮಕ್ಕಳಿಗೆ ಒಬ್ಬೊಬ್ಬ ಗುಲಾಮನನ್ನು ನೀಡಿರುವಿರಾ?' ಎಂದು ಕೇಳಿದರು. ಹ. ಬಶೀರ್(ರ), 'ಇಲ್ಲ' ಎಂದಾಗ ಪ್ರವಾದಿ(ಸ), "ಈ ಗುಲಾಮನನ್ನು ನೀವು ಹಿಂದಕ್ಕೆ ಪಡೆಯಿರಿ. ದೇವನನ್ನು ಭಯಪಡಿರಿ. ನಿಮ್ಮ ಮಕ್ಕಳ ಜೊತೆ ಸಮಾನತೆಯ ವ್ಯವಹಾರ ಮಾಡಿರಿ ಎಂದು ಆದೇಶಿಸಿದರು. ಅದರಂತೆ ಮನೆಗೆ ಮರಳಿದಾಗ ಹ. ಬಶೀರ್(ರ) ಆ ಗುಲಾಮನನ್ನು ಹಿಂತೆಗೆದುಕೊಂಡರು. ಇನ್ನೊಂದು ವರದಿಯಂತೆ ಪ್ರವಾದಿ(ಸ) 'ಹಾಗಾದರೆ ನನ್ನನ್ನು ಪಾಪಕ್ಕೆ ಸಾಕ್ಷಿಯಾಗಿಸದಿರಿ. ನಾನು ಅನ್ಯಾಯಕ್ಕೆ ಸಾಕ್ಷಿಯಾಗಲಾರೆ' ಎಂದರು. ಮತ್ತೊಂದು ವರದಿಯಂತೆ ಪ್ರವಾದಿ(ಸ) 'ಎಲ್ಲಾ ಮಕ್ಕಳೂ ನಿಮ್ಮೊಂದಿಗೆ ಉತ್ತಮ ವ್ಯವಹಾರ ಮಾಡಬೇಕೆಂದು ನೀವು ಬಯಸುವುದಿಲ್ಲವೇ?' ಎಂದು ಪ್ರಶ್ನಿಸಿದರು. ಹ. ಬಶೀರ್(ರ) 'ಹೌದೆ'ಂದಾಗ 'ಹಾಗಿದ್ದರೆ ಇಂತಹ ಕೆಲಸ ಮಾಡದಿರಿ' ಎಂದು ಆಜ್ಞಾಪಿಸಿದರು. (ಬುಖಾರಿ, ಮುಸ್ಲಿಮ್)

31. ಮಕ್ಕಳ ಮುಂದೆ ಸದಾ ಉತ್ತಮ ಮಾದರಿಯನ್ನಿರಿಸಿರಿ. ನಿಮ್ಮ ಜೀವನವು ಮಕ್ಕಳ ಮಟ್ಟಿಗೆ ಒಂದು ಪೂರ್ಣಾವಧಿ ಮೌನ ಶಿಕ್ಷಣವಾಗಿದೆ. ನಿಮ್ಮಿಂದ ಮಕ್ಕಳು ಕಲಿಯುತ್ತಿ ರುವರು. ಮಕ್ಕಳ ಮುಂದೆ ತಮಾಷೆಗೂ ಸುಳ್ಳಾಡದಿರಿ.

ಹ. ಅಬ್ದುಲ್ಲಾ ಬಿನ್ ಆಮಿರ್(ರ) ತಮ್ಮ ಒಂದು ವೃತ್ತಾಂತವನ್ನು ಈ ರೀತಿ

ವಿವರಿಸಿದ್ದಾರೆ: ಒಮ್ಮೆ ಪ್ರವಾದಿ(ಸ) ನಮ್ಮ ಮನೆಗೆ ಆಗಮಿಸಿದರು. ಆಗ ನನ್ನ ತಾಯಿ ನನ್ನನ್ನು ಕರೆದು, 'ಇಲ್ಲಿ ಬಾ, ಒಂದು ವಸ್ತು ಕೊಡುವೆ' ಎಂದರು. ಪ್ರವಾದಿ(ಸ) ಇದನ್ನು ಕಂಡು, 'ನೀವು ಮಗುವಿಗೆ ಏನು ಕೊಡ ಬಯಸಿದ್ದೀರಿ' ಎಂದಾಗ ಅವರು 'ಖರ್ಜೂರ ಕೊಡಬಯಸಿದ್ದೆ' ಎಂದರು. ಆಗ ಪ್ರವಾದಿ(ಸ) 'ಕೊಡುವ ನೆಪ ಮಾಡಿ ಬಂದಾಗ ಏನನ್ನೂ ಕೊಡದೆ ಇರುತ್ತಿದ್ದರೆ ಅದು ನಿಮ್ಮ ಕರ್ಮಪತ್ರದಲ್ಲಿ ಒಂದು ಸುಳ್ಳೆಂದು ಬರೆಯಲ್ಪಡುತ್ತಿತ್ತು' ಎಂದರು.

32. ಗಂಡು ಮಗುವಾದಾಗ ಸಂತೋಷ ಪಡುವಂತೆ ಹೆಣ್ಣು ಮಗುವಾದಾಗಲೂ ಸಂತೋಷ ಪಡಿರಿ. ಹೆಣ್ಣು, ಗಂಡುಗಳೆರಡೂ ಅಲ್ಲಾಹನ ಕೊಡುಗೆಗಳು. ಅವುಗಳ ಪೈಕಿ ನಿಮ್ಮ ಮಟ್ಟಿಗೆ ಯಾವುದು ಉತ್ತಮವೆಂಬುದನ್ನು ಅಲ್ಲಾಹನೇ ಚೆನ್ನಾಗಿ ಬಲ್ಲನು. ಹೆಣ್ಣು ಹುಟ್ಟಿದಾಗ ಮುಖ ಸಿಂಡರಿಸುವುದು ಮತ್ತು ನಿರಾಶರಾಗುವುದು ಅನುಸರಣಶೀಲ ಸತ್ಯ ವಿಶ್ವಾಸಿಗೆ ಭೂಷಣವಲ್ಲ. ಇದು ಕೃತಘ್ನತೆ, ಮಾತ್ರವಲ್ಲ ಸರ್ವಜ್ಞನೂ ಕರುಣಾಳುವೂ ಆದ ಅಲ್ಲಾಹನಿಗೆ ಮಾಡುವ ಅವಮಾನವಾಗಿದೆ.

ಒಂದು ಮನೆಯಲ್ಲಿ ಹೆಣ್ಣು ಹಡೆಯಲ್ಪಟ್ಟರೆ ಅಲ್ಲಾಹನು ದೇವಚರರನ್ನು ಅಲ್ಲಿಗೆ ಕಳುಹಿಸುವನು. ಅವರು ಬಂದು ಮನೆ ಮಂದಿಗೆ ರಕ್ಷಣೆ ಕೋರುತ್ತಾ ಆ ಮಗುವನ್ನು ತಮ್ಮ ರೆಕ್ಕೆಗಳ ನೆರಳಲ್ಲಿರಿಸುತ್ತಾರೆ ಮತ್ತು ಅದರ ತಲೆ ನೇವರಿಸುತ್ತಾ 'ಇದು ಅಬಲೆಯ ಒಡಲಲ್ಲಿ ಹುಟ್ಟಿದ ಅಬಲೆ. ಈ ಮಗುವನ್ನು ಚೆನ್ನಾಗಿ ಸಾಕಿ ಸಲಹುವವನ ಮೇಲೆ ಅಲ್ಲಾಹನ ಸಹಾಯ ಅಂತಿಮ ದಿನದವರೆಗೂ ಇರುವುದು' ಎಂದು ಹೇಳುತ್ತಾರೆ. (ತಬ್ರಾನಿ)

33. ಒಳ್ಳೆಯ ಮನಸ್ಸಿನಿಂದ ಆತ್ಮೀಯ ಸಂತೋಷದೊಂದಿಗೆ ಹಾಗೂ ಧರ್ಮ ಪ್ರಜ್ಞೆಯೊಂದಿಗೆ ಹೆಣ್ಣು ಮಕ್ಕಳ ಪಾಲನೆ, ಪೋಷಣೆ ಮಾಡಿರಿ. ಅದಕ್ಕೆ ಪ್ರತಿಯಾಗಿ ಅಲ್ಲಾಹನ ಸ್ವರ್ಗವನ್ನು ಬಯಸಿರಿ. 'ಯಾವನು ಮೂವರು ಹೆಣ್ಣು ಮಕ್ಕಳನ್ನು ಅಥವಾ ಮೂವರು ಸೋದರಿಯರನ್ನು ಅವರು ದೊಡ್ಡವರಾಗುವ ತನಕ ಮತ್ತು ಅವರಿಗೆ ನಿಮ್ಮ ಆಶ್ರಯ ಇಲ್ಲವಾಗುವ ತನಕ ಸಾಕಿ ಸಲಹುವನೋ, ಅವರಿಗೆ ವಿದ್ಯೆ, ಬುದ್ಧಿಯನ್ನು ಕಲಿಸುವನೋ, ಅವರೊಂದಿಗೆ ಕರುಣೆಯಿಂದ ವರ್ತಿಸುವನೋ ಅವನಿಗೆ ಅಲ್ಲಾಹನು ಸ್ವರ್ಗವನ್ನು ಕಡ್ಡಾಯಗೊಳಿಸುವನು' ಎಂದು ಪ್ರವಾದಿ(ಸ) ಹೇಳಿರುವರು. ಇದನ್ನು ಕೇಳಿ ಒಬ್ಬ ವ್ಯಕ್ತಿ 'ಇಬ್ಬರೇ ಇದ್ದರೆ?' ಎಂದು ಪ್ರಶ್ನಿಸಿದರು. ಪ್ರವಾದಿ(ಸ) 'ಇಬ್ಬರು ಹೆಣ್ಣು ಮಕ್ಕಳ ಪಾಲನೆಗೂ ಇದೇ ಪುಣ್ಯಫಲವಿದೆ' ಎಂದರು. ಒಬ್ಬಳೇ ಹೆಣ್ಣಿನ ಬಗ್ಗೆ ಕೇಳುತ್ತಿದ್ದರೂ ಪ್ರವಾದಿ(ಸ) ಇದೇ ಸುವಾರ್ತೆಯನ್ನು ನೀಡುತ್ತಿದ್ದರು ಎಂದು ಹ. ಇಬ್ನು ಅಬ್ಬಾಸ್(ರ) ಹೇಳಿರುವರು. (ಮಿಷ್ಕಾತ್)

ಹ. ಆಯಿಶಾ(ರ) ಹೇಳುತ್ತಾರೆ, ಒಮ್ಮೆ ಓರ್ವ ಮಹಿಳೆ ತನ್ನ ಇಬ್ಬರು ಪುತ್ರಿಯರೊಂದಿಗೆ ನನ್ನ ಬಳಿಗೆ ಬಂದು ಏನಾದರೂ ಕೊಡಿರೆಂದು ಕೇಳಿದರು. ನನ್ನ ಬಳಿ ಒಂದು ಖರ್ಜೂರ ಮಾತ್ರವಿತ್ತು. ನಾನದನ್ನು ಆಕೆಗೆ ನೀಡಿದೆ. ಆಕೆ ಅದನ್ನು ಎರಡು ಹೋಳು ಮಾಡಿ ತನ್ನ ಇಬ್ಬರೂ ಪುತ್ರಿಯರಿಗೆ ನೀಡಿದರು. ಸ್ವತಃ ತಿನ್ನಲಿಲ್ಲ. ಆ ಬಳಿಕ ಆಕೆ ಎದ್ದು ಹೋದರು. ಆಗಲೇ ಪ್ರವಾದಿ(ಸ) ಮನೆಗೆ ಬಂದರು. ನಾನು ಈ ವಿಷಯ ಅವರಿಗೆ ತಿಳಿಸಿದೆ. ಅದಕ್ಕೆ

ಪ್ರವಾದಿ(ಸ) ಈ ರೀತಿ ಹೇಳಿದರು, 'ಯಾರು ಹೆಣ್ಣು ಮಕ್ಕಳ ಜನನದ ಮೂಲಕ ಪರೀಕ್ಷಿಸಲ್ಪಡುವರೋ ಮತ್ತು ಅವರೊಂದಿಗೆ ಉತ್ತಮವಾಗಿ ವ್ಯವಹರಿಸಿ ಆ ಪರೀಕ್ಷೆಯಲ್ಲಿ ಸಫಲರಾಗುವರೋ ಆ ಹೆಣ್ಣು ಮಕ್ಕಳು ನಿರ್ಣಾಯಕ ದಿನದಂದು ಅವರ ಮಟ್ಟಿಗೆ ನರಕಾಗ್ನಿಯಿಂದ ರಕ್ಷಿಸುವ ಗುರಾಣಿಯಾಗಿ ಮಾರ್ಪಡುವರು'. (ಮಿಷ್ಕಾತ್)

34. ಪುತ್ರಿಯನ್ನು ಕಡೆಗಣಿಸದಿರಿ. ಪುತ್ರರಿಗೆ ಯಾವ ವಿಷಯದಲ್ಲೂ ಅವರಿಗಿಂತ ಹೆಚ್ಚು ಪ್ರಾಶಸ್ತ್ಯ ನೀಡದಿರಿ. ಇಬ್ಬರನ್ನೂ ಸಮಾನವಾಗಿ ಪ್ರೀತಿಸಿರಿ. ಇಬ್ಬರೊಂದಿಗೂ ಸಮಾನವಾಗಿ ವ್ಯವಹರಿಸಿರಿ. ಹೆಣ್ಣು ಹುಟ್ಟಿದಾಗ ಅದನ್ನು ಅಜ್ಞಾನ ಕಾಲದ ರೂಢಿಯಂತೆ ಜೀವಂತವಾಗಿ ಹೂಳದೆ, ಅದನ್ನು ನಿರ್ಲಕ್ಷಿಸದೆ ಹಾಗೂ ಗಂಡು ಮಗುವಿಗೆ ಅದಕ್ಕಿಂತ ಹೆಚ್ಚು ಪ್ರಾಶಸ್ತ್ಯ ನೀಡದೆ ಇರುವ ವ್ಯಕ್ತಿಯನ್ನು ಅಲ್ಲಾಹನು ಸ್ವರ್ಗದಲ್ಲಿ ಪ್ರವೇಶ ಮಾಡಿಸುವನು. (ಅಬೂದಾವೂದ್)

35. ಸೊತ್ತಿನಲ್ಲಿ ಹೆಣ್ಣಿನ ನಿರ್ಧರಿತ ಪಾಲನ್ನು ಸಂತೋಷದಿಂದ ಕ್ರಮಪ್ರಕಾರ ನೀಡಿರಿ. ಇದು ಅಲ್ಲಾಹನಿಂದ ನಿರ್ಣಯಿಸಲ್ಪಟ್ಟ ಹಕ್ಕು. ಇದರಲ್ಲಿ ಹೆಚ್ಚು ಕಡಿಮೆ ಮಾಡುವ ಅಧಿಕಾರ ಯಾರಿಗೂ ಇಲ್ಲ. ಹೆಣ್ಣಿನ ಪಾಲು ನೀಡುವ ಬಗ್ಗೆ ಎಣಿಸುವುದು ಅಥವಾ ತನಗಿಷ್ಟ ಬಂದಷ್ಟು ನೀಡಿ ಕೈ ತೊಳೆದುಕೊಳ್ಳುವುದು ವಿಧೇಯನಾದ ಸತ್ಯವಿಶ್ವಾಸಿಯ ಲಕ್ಷಣವಲ್ಲ. ಹೀಗೆ ಮಾಡುವುದು ವಂಚನೆಯೂ, ಧರ್ಮಕ್ಕೆ ಮಾಡುವ ಅಪಚಾರವೂ ಆಗಿದೆ.

36. ಈ ಎಲ್ಲ ಕ್ರಿಯಾತ್ಮಕ ಉಪಾಯಗಳ ಜೊತೆಗೆ ಅತ್ಯಂತ ಕಳಕಳಿಯಿಂದ ಮತ್ತು ಹೃದಯಂಗಮವಾಗಿ ಮಕ್ಕಳಿಗಾಗಿ ಪ್ರಾರ್ಥಿಸುತ್ತಿರಿ. ಹೆತ್ತವರ ಹೃದಯದಾಳದಿಂದ ಹೊರಡುವ ಪ್ರಾರ್ಥನೆಯನ್ನು ಪರಮ ದಯಾಮಯನೂ, ಕರುಣಾನಿಧಿಯೂ ಆದ ಅಲ್ಲಾಹನು ನಿರರ್ಥಕಗೊಳಿಸಲಾರನು.

# ಸ್ನೇಹಿತರು

1. ಸ್ನೇಹಿತರನ್ನು ಪ್ರೀತಿಸಿ, ಅವರ ಪ್ರೀತಿಗೆ ಪಾತ್ರರಾಗಿರಿ. ಸ್ನೇಹಿತರನ್ನು ಪ್ರೀತಿಸುವ ಮತ್ತು ಸ್ನೇಹಿತರಿಂದ ಪ್ರೀತಿಸಲ್ಪಡುವ ವ್ಯಕ್ತಿ ನಿಜಕ್ಕೂ ಭಾಗ್ಯಶಾಲಿ. ಜನರಿಂದ ದೂರವಿರುವ ಮತ್ತು ಜನರು ದೂರವಿರಿಸುವಂತಹ ವ್ಯಕ್ತಿ ಅತ್ಯಂತ ಹತಭಾಗ್ಯನು. ಹಣವಿಲ್ಲದವನು ಬಡವನಲ್ಲ. ಮಿತ್ರರಿಲ್ಲದವನೇ ನೈಜ ಬಡವ. ಸ್ನೇಹಿತನು ಜೀವನದ ಶೋಭೆ, ಬಾಳಿನ ಸಂಗಾತಿ ಮತ್ತು ದೇವನ ಅನುಗ್ರಹವಾಗಿದ್ದಾನೆ. ಸ್ನೇಹ ಬೆಳೆಸಿರಿ. ಸ್ನೇಹ ಗಳಿಸಿರಿ. ಪ್ರವಾದಿ(ಸ) ಈ ರೀತಿ ಹೇಳಿರುವರು:

"ಸತ್ಯವಿಶ್ವಾಸಿಯು ಅಡಿಯಿಂದ ಮುಡಿ ತನಕ ಪ್ರೀತಿ ವತ್ಸಲನಾಗಿರುತ್ತಾನೆ. ಜನರನ್ನು ಪ್ರೀತಿಸದ ಮತ್ತು ಜನರಿಂದ ಪ್ರೀತಿಸಲ್ಪಡದ ವ್ಯಕ್ತಿಯಲ್ಲಿ ಯಾವುದೇ ಒಳಿತಿಲ್ಲ". (ಮಿಷ್ಕಾತ್)

ಪವಿತ್ರ ಕುರ್‌ಆನ್ ಈ ರೀತಿ ಹೇಳುತ್ತದೆ:

وَالْمُؤْمِنُوْنَ وَالْمُؤْمِنٰتُ بَعْضُهُمْ اَوْلِيَآءُ بَعْضٍ

**"ಸತ್ಯವಿಶ್ವಾಸಿಗಳಾದ ಸ್ತ್ರೀ ಪುರುಷರು ಪರಸ್ಪರ ಸ್ನೇಹಿತರೂ ಸಹಕಾರಿಗಳೂ ಆಗಿರುತ್ತಾರೆ".** **(9:71)**

ಪ್ರವಾದಿ(ಸ) ತಮ್ಮ ಸಂಗಾತಿಗಳನ್ನು ಅತ್ಯಧಿಕ ಪ್ರೀತಿಸುತ್ತಿದ್ದರು. ಪ್ರತಿಯೊಬ್ಬರೂ ಪ್ರವಾದಿ(ಸ) ತನ್ನನ್ನೇ ಹೆಚ್ಚು ಪ್ರೀತಿಸುತ್ತಿದ್ದಾರೆಂದು ಭಾವಿಸುತ್ತಿದ್ದರು.

ಹ. ಅಮ್ರ್ ಬಿನ್ ಆಸ್(ರ) ಹೇಳುತ್ತಾರೆ: "ಪ್ರವಾದಿ(ಸ) ಅತ್ಯಂತ ಪ್ರೀತಿಯಿಂದ ನನ್ನನ್ನು ಮಾತನಾಡಿಸುತ್ತಿದ್ದರು. ನನ್ನ ಬಗ್ಗೆ ಬಹಳ ಕಾಳಜಿ ವಹಿಸುತ್ತಿದ್ದರು. ಇದರಿಂದಾಗಿ ನನ್ನ ಸಮುದಾಯದ ಅತ್ಯುತ್ತಮ ವ್ಯಕ್ತಿ ನಾನೇ ಆಗಿದ್ದೇನೆಂಬ ಭಾವನೆ ನನ್ನಲ್ಲಿ ಬೆಳೆಯಿತು. ಒಂದು ದಿನ ನಾನು ಪ್ರವಾದಿವರ್ಯರಲ್ಲಿ(ಸ) ಕೇಳಿಯೇ ಬಿಟ್ಟೆ. 'ನಾನು ಉತ್ತಮನೋ ಅಬೂಬಕರ್(ರ) ಅವರೋ?' ಪ್ರವಾದಿ(ಸ) 'ಅಬೂಬಕರ್' ಎಂದು ಉತ್ತರಿಸಿದರು. ನಾನು ಮತ್ತೆ ಕೇಳಿದೆ, 'ನಾನು ಉತ್ತಮನೋ ಉಮರ್(ರ) ಉತ್ತಮರೋ?' ಪ್ರವಾದಿ(ಸ), 'ಉಮರ್' ಎಂದು ಉತ್ತರಿಸಿದರು. ತರುವಾಯ ನಾನು ಕೇಳಿದೆ. 'ನಾನು ಉತ್ತಮನೋ, ಹ. ಉಸ್ಮಾನ್(ರ) ಉತ್ತಮರೋ?' ಪ್ರವಾದಿ(ಸ), 'ಉಸ್ಮಾನ್' ಎಂದು ಉತ್ತರಿಸಿದರು. ಆ ಬಳಿಕ ಪ್ರವಾದಿ(ಸ) ಅವರಲ್ಲಿ ನಾನು ನೇರವಾಗಿಯೇ ವಾಸ್ತವಿಕತೆ ಏನೆಂದು ಕೇಳಿದೆ. ಪ್ರವಾದಿವರ್ಯರು(ಸ) ಬಹಳ ಸ್ಪಷ್ಟವಾಗಿಯೇ ಉತ್ತರಿಸಿದರು. ನನಗೆ ನನ್ನ ಬಗ್ಗೆಯೇ ಬಹಳ ಮುಜುಗರವಾಯಿತು. 'ಇಂತಹ ಪ್ರಶ್ನೆ ಏಕೆ ಕೇಳಬೇಕಾಗಿತ್ತು' ಎಂದು ಮನಸ್ಸಿನಲ್ಲೇ ಅಂದುಕೊಂಡೆ!

2. ಸ್ನೇಹಿತರೊಂದಿಗೆ ಬೆರೆತು ಸೌಹಾರ್ದಪೂರ್ಣ ಜೀವನ ಸಾಗಿಸಿರಿ. ಸ್ನೇಹಿತರೊಂದಿಗೆ ನಿಷ್ಕಾಪೂರ್ಣ ಸಂಪರ್ಕವಿರಿಸಿರಿ. ಸ್ನೇಹಿತರೊಂದಿಗೆ ದ್ವೇಷ, ಬೇಸರ ಮತ್ತು ಮುನಿಸಿನ ಧೋರಣೆಯನ್ನು ಕೈಗೊಳ್ಳದಿರಿ. ಸ್ನೇಹಿತರೊಂದಿಗೆ ಕೂಡಿಕೊಂಡಿದ್ದು ಎಲ್ಲ ವಿಷಯಗಳಲ್ಲಿ ಭಾಗಿಯಾಗುತ್ತಲಿದ್ದರೆ ಅದರಿಂದಾಗಿ ತರತರದ ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ. ಕೆಲವೊಮ್ಮೆ ವಿಕಾರ ಕೆರಳುತ್ತದೆ. ಕೆಲವೊಮ್ಮೆ ಅಭಿಮಾನಕ್ಕೆ ಧಕ್ಕೆಯೊದಗುತ್ತದೆ. ಕೆಲವೊಮ್ಮೆ ವಿಶ್ರಾಂತಿಯಲ್ಲಿ ಅಡಚಣೆಯಾಗಬಹುದು. ಕೆಲವೊಮ್ಮೆ ದೈನಂದಿನ ಕೆಲಸ ಕಾರ್ಯಗಳಿಗೆ ತೊಂದರೆಯಾಗಬಹುದು. ಕೆಲವೊಮ್ಮೆ ಅವನ ಇಚ್ಛೆಗೆ ವಿರುದ್ಧವಾದ ಮಾತು ಮುಂದೆ ಬರಬಹುದು. ಕೆಲವೊಮ್ಮೆ ಅವನ ಸಹನೆ ಪರೀಕ್ಷಿಸಲ್ಪಡುತ್ತದೆ. ಕೆಲವೊಮ್ಮೆ ಆರ್ಥಿಕ ನಷ್ಟ ಸಂಭವಿಸುತ್ತದೆ. ಈ ರೀತಿ ಒಂದಲ್ಲ ಒಂದು ವಿಧದ ತೊಂದರೆ ಮತ್ತು ಕಷ್ಟ ಒದಗ ಬಹುದು. ಈ ತೊಂದರೆಗಳನ್ನು ತಾಳ್ಮೆಯೊಂದಿಗೆ ಸೈರಿಸಿಕೊಂಡರೆ ಅವನ ಹೃದಯ ಅರಳುತ್ತದೆ. ಚಾರಿತ್ರ್ಯ ಉನ್ನತವಾಗುತ್ತದೆ. ಆತ್ಮ ಸಂಸ್ಕರಣೆಯಾಗುತ್ತದೆ. ಇದರಿಂದ ಆಧ್ಯಾತ್ಮಿಕ ಮತ್ತು ನೈತಿಕ ಪ್ರಗತಿ ಪ್ರಾಪ್ತವಾಗುತ್ತದೆ. ಅವನಲ್ಲಿ ಸಹನೆ, ಸಂಯಮ, ತ್ಯಾಗ, ವಾತ್ಸಲ್ಯ, ಹಿತಚಿಂತನೆ, ನಿಷ್ಠೆ, ವಿನಯ, ಸಹಕಾರ, ಔದಾರ್ಯ, ಶೌರ್ಯ, ಕರುಣೆ, ಅನುಕಂಪಗಳಂತಹ ಉದಾತ್ತ ಗುಣಗಳು ಬೆಳೆಯುತ್ತವೆ. ಮಾನವ ಸಮಾಜಕ್ಕೆ ಅವನು ಒಂದು ಅನುಗ್ರಹವಾಗಿ ಮಾರ್ಪಡುತ್ತಾನೆ. ಎಲ್ಲರ ಮನಸ್ಸಿನಲ್ಲೂ ಅವನ ಬಗ್ಗೆ ಗೌರವ ಅಭಿಮಾನಗಳ ಭಾವನೆಯು ನೆಲೆಸುತ್ತದೆ. ಪ್ರತಿಯೊಬ್ಬನೂ ಆತನನ್ನು ತನ್ನ ಮಟ್ಟಿಗೆ ಕರುಣೆಯ ನೆರಳೆಂದು ಭಾವಿಸುತ್ತಾನೆ. ಪ್ರವಾದಿ(ಸ) ಈ ರೀತಿ ಹೇಳಿರುವರು:

"ಮುಸ್ಲಿಮರೊಂದಿಗೆ ಅನ್ಯೋನ್ಯವಾಗಿದ್ದು ಅವರಿಂದ ಬರುವ ತೊಂದರೆಗಳನ್ನು ತಾಳ್ಮೆಯಿಂದ ಸಹಿಸಿಕೊಳ್ಳುವವನು ಜನರಿಂದ ದೂರವಿದ್ದು ಅವರಿಂದ ಒದಗುವ ತೊಂದರೆ ಗಳ ಬಗ್ಗೆ ಕಳವಳಗೊಳ್ಳುವವನಿಗಿಂತ ಎಷ್ಟೋ ಪಾಲು ಉತ್ತಮನು". (ತಿರ್ಮಿದಿ)

3. ಸದಾ ಸಜ್ಜನರೊಂದಿಗೆ ಸ್ನೇಹ ಬೆಳೆಸಿರಿ. ನೀವು ಮಿತ್ರರಾಗಿ ಆರಿಸಿಕೊಳ್ಳುವ ವ್ಯಕ್ತಿಗಳು ಧರ್ಮನೀತಿಯ ವಿಷಯದಲ್ಲಿ ನಿಮಗೆಷ್ಟು ಪ್ರಯೋಜನಕಾರಿಗಳಾಗಬಲ್ಲರೆಂಬು ದನ್ನು ನೋಡಿಕೊಳ್ಳಿರಿ. 'ಒಬ್ಬನ ಚಾರಿತ್ರ್ಯದ ಮಟ್ಟವನ್ನು ಅರಿಯಬೇಕಿದ್ದರೆ ಅವನ ಸ್ನೇಹಿತರ ನೈತಿಕ ಮಟ್ಟವನ್ನು ತಿಳಿಯಿರಿ' ಎಂಬುದು ಒಂದು ಪ್ರಸಿದ್ಧ ನಾಣ್ಣುಡಿ. ಪ್ರವಾದಿ(ಸ) ಈ ರೀತಿ ಹೇಳಿರುವರು. 'ಮನುಷ್ಯನು ತನ್ನ ಮಿತ್ರರ ಧರ್ಮದಲ್ಲಿರುತ್ತಾನೆ. ಆದ್ದರಿಂದ ಪ್ರತಿ ಯೊಬ್ಬನೂ ತಾನು ಯಾರನ್ನು ಮಿತ್ರರಾಗಿ ಮಾಡಿಕೊಳ್ಳುತ್ತಿದ್ದೇನೆಂಬುದನ್ನು ಯೋಚಿಸಬೇಕು'.

(ಮುಸ್ನದ್ ಅಹ್ಮದ್, ಮಿಷ್ಕಾತ್)

ಮಿತ್ರನ ಧರ್ಮದಲ್ಲಿರುವುದೆಂದರೆ ಮಿತ್ರನ ಸಂಗ ಬೆಳೆಸಿದಾಗ ಅವನ ವಿಚಾರ, ಅಭಿರುಚಿಗಳೇ ಇವನಲ್ಲೂ ಬೆಳೆಯುವುವು. ಅವನ ಬೇಕು ಬೇಡಗಳ ಮಾನದಂಡವೇ ಇವನದೂ ಆಗುವುದು ಎಂದರ್ಥ. ಆದ್ದರಿಂದ ಮಿತ್ರನನ್ನು ಆರಿಸುವಾಗ ಬಹಳ ಯೋಚನೆ ಮಾಡಬೇಕು. ಸತ್ಯವಿಶ್ವಾಸದ ಬೇಡಿಕೆಗಳಿಗೆ ಅನುಗುಣವಾದ ಅಭಿರುಚಿ, ವಿಚಾರ ಹಾಗೂ

ಚಟುವಟಿಕೆಗಳಿರುವ ವ್ಯಕ್ತಿಗಳನ್ನೇ ಮಿತ್ರರಾಗಿ ಆಯ್ಕೆ ಮಾಡಬೇಕು. ಪ್ರೇಮ ಸಂಬಂಧವನ್ನು ಸತ್ಯವಿಶ್ವಾಸಿಯೊಂದಿಗೇ ಇರಿಸಬೇಕೆಂದೂ ಅವನ ಜೊತೆಯೇ ಊಟ ಮಾಡಬೇಕೆಂದೂ ಪ್ರವಾದಿ(ಸ) ತಾಕೀತು ಮಾಡಿರುವರು. ಪ್ರವಾದಿ(ಸ) ಹೀಗೆ ಆದೇಶಿಸಿರುವರು: "ಸತ್ಯವಿಶ್ವಾಸಿಯ ಸಂಗದಲ್ಲೇ ಇರಿ. ನಿಮ್ಮ ಊಟದ ಹಾಸಿನಲ್ಲಿ ಧರ್ಮನಿಷ್ಠ ವ್ಯಕ್ತಿಗಳಿಗೇ ಉಣಿಸಿರಿ".

ಒಂದೇ ಊಟದ ಹಾಸಿನಲ್ಲಿ ಕುಳಿತು ಉಣ್ಣುವುದು ಮಾನಸಿಕ ಸಂಬಂಧ ಮತ್ತು ಪ್ರೀತಿಯ ಹೆಚ್ಚಳಕ್ಕೆ ಸಹಜ ಪ್ರೇರಕವಾಗುತ್ತದೆ. ಈ ಸಂಬಂಧ ಮತ್ತು ಪ್ರೀತಿಯು ಧರ್ಮನಿಷ್ಠನಾದ ಸತ್ಯವಿಶ್ವಾಸಿಯೊಂದಿಗೇ ಇರಬೇಕು. ದೇವನ ಬಗ್ಗೆ ಅನಾಸ್ಥೆ ಹೊಂದಿರುವ ಹೊಣೆಗೇಡಿ, ಕರ್ಮಭ್ರಷ್ಟ ಹಾಗೂ ನೀತಿಯಿಲ್ಲದ ವ್ಯಕ್ತಿಗಳಿಂದ ಸದಾ ದೂರವಿರಿ. ಪ್ರವಾದಿ(ಸ) ಒಳ್ಳೆಯ ಮತ್ತು ಕೆಟ್ಟ ಮಿತ್ರರ ಸಂಗವನ್ನು ಒಂದು ಉತ್ತಮ ಉದಾಹರಣೆ ಯೊಂದಿಗೆ ಈ ರೀತಿ ವಿವರಿಸಿರುವರು: "ಒಳ್ಳೆಯ ಮತ್ತು ಕೆಟ್ಟ ಸ್ನೇಹಿತರ ಉದಾಹರಣೆಯು ಸುಗಂಧ ದ್ರವ್ಯದ ವ್ಯಾಪಾರಿ ಮತ್ತು ಕಮ್ಮಾರನಂತಿದೆ. ಸುಗಂಧ ದ್ರವ್ಯದ ವ್ಯಾಪಾರಿಯಿಂದ ನಿಮಗೆ ಪ್ರಯೋಜನವಾಗು ವುದು ಖಚಿತ. ಒಂದೋ ನೀವು ಸುಗಂಧ ದ್ರವ್ಯ ಖರೀದಿಸಬಹುದು. ಇಲ್ಲವಾದರೆ ಅದರ ಸುಗಂಧವಾದರೂ ನಿಮಗೆ ದೊರಕಬಹುದು. ಕಮ್ಮಾರನ ಒಲೆಯು ನಿಮ್ಮ ವಸ್ತುವನ್ನು ಸುಟ್ಟೀತು ಅಥವಾ ನಿಮಗೆ ಅದರ ಹೊಗೆಯಾದರೂ ತಲುಪಬಹುದು".

(ಬುಖಾರಿ, ಮುಸ್ಲಿಮ್)

ಅಬೂದಾವೂದ್‌ರ ಹದೀಸ್ ಗ್ರಂಥದಲ್ಲಿ ಈ ರೀತಿ ವರದಿಯಾಗಿದೆ: "ಉತ್ತಮ ಸ್ನೇಹಿತನು ಸುಗಂಧ ದ್ರವ್ಯಗಳ ವ್ಯಾಪಾರಿಯ ಅಂಗಡಿ ಇದ್ದಂತೆ. ಇದರಿಂದ ಬೇರೇನೂ ಪ್ರಯೋಜನ ಸಿಗದಿದ್ದರೆ ಕನಿಷ್ಠ ಅದರ ಪರಿಮಳವನ್ನಾದರೂ ಅನುಭವಿಸ ಬಹುದು. ಕೆಟ್ಟ ಸ್ನೇಹಿತನು ಕಮ್ಮಾರನ ಒಲೆಯಂತೆ. ಬೆಂಕಿ ತಾಗದಿದ್ದರೂ ಹೊಗೆಯಿಂದ ಬಟ್ಟೆ ಕಪ್ಪಾದೀತು".

4. ಸ್ನೇಹಿತರನ್ನು ಕೇವಲ ಅಲ್ಲಾಹನಿಗಾಗಿ ಪ್ರೀತಿಸಿರಿ. ಅಲ್ಲಾಹನ ಧರ್ಮದ ಆಧಾರ ದಲ್ಲಿ ಪರಸ್ಪರ ಒಗ್ಗೂಡಿ ಭುಜಕ್ಕೆ ಭುಜ ಕೊಟ್ಟು ಮನಸ್ಸುಗಳು ಅನ್ಯೋನ್ಯವಾಗಿ ಧರ್ಮ ಸಂಸ್ಥಾಪನೆಗಾಗಿ ಶ್ರಮಿಸುವ ಹಾಗೂ ಉಕ್ಕಿನ ಗೋಡೆಯಂತೆ ಧರ್ಮ ರಕ್ಷಣೆಯ ಕರ್ತವ್ಯ ನಿರ್ವಹಿಸುವ ಜನರೇ ಆತನ ಪ್ರೀತಿಗೆ ಪಾತ್ರರಾಗುವರು.

ಪವಿತ್ರ ಕುರ್‌ಆನ್ ಹೀಗೆ ಹೇಳುತ್ತದೆ:

إِنَّ اللَّهَ يُحِبُّ الَّذِينَ يُقَاتِلُونَ فِي سَبِيلِهِ صَفًّا كَأَنَّهُم بُنْيَانٌ مَّرْصُوصٌ ﴿٤﴾

"ಅಲ್ಲಾಹನ ಮಾರ್ಗದಲ್ಲಿ ಉಕ್ಕಿನ ಗೋಡೆಯಂತೆ ಒಗ್ಗೂಡಿ ಹೋರಾಡುವವರೇ ವಾಸ್ತವದಲ್ಲಿ ಅಲ್ಲಾಹನ ಅತ್ಯಧಿಕ ಪ್ರೀತಿ ಪಾತ್ರರು". **(61:4)**

ಪ್ರವಾದಿ(ಸ) ಈ ರೀತಿ ಹೇಳಿರುವರು: "ನಿರ್ಣಾಯಕ ದಿನದಂದು ಅಲ್ಲಾಹನು ಹೇಳುವನು, ಕೇವಲ ನನಗಾಗಿ ಜನರನ್ನು ಪ್ರೀತಿಸುತ್ತಿದ್ದವರು ಎಲ್ಲಿದ್ದಾರೆ? ಇಂದು ನಾನು ಅವರನ್ನು ನನ್ನ ನೆರಳಲ್ಲಿ ಇರಿಸುವೆನು." (ಮುಸ್ಲಿಮ್)

ನಿರ್ಣಾಯಕ ದಿನದಂದು ಅವರಿಗೆ ಲಭಿಸುವ ಅಸೂಯಾರ್ಹ ಸ್ಥಾನಮಾನಗಳ ಕುರಿತು ಪ್ರವಾದಿ(ಸ) ಹೀಗೆ ಹೇಳಿರುವರು: "ಅಲ್ಲಾಹನ ದಾಸರ ಪೈಕಿ ಕೆಲವರು ಪ್ರವಾದಿಗಳೋ ಹುತಾತ್ಮರೋ ಅಲ್ಲದಿದ್ದರೂ ಪ್ರವಾದಿಗಳೂ ಹುತಾತ್ಮರೂ ಈರ್ಷ್ಯೆ ಪಡುವಷ್ಟು ಉನ್ನತ ಸ್ಥಾನಮಾನವನ್ನು ಅಲ್ಲಾಹನು ಅವರಿಗೆ ದಯಪಾಲಿಸುವನು. ಆ ಸೌಭಾಗ್ಯಶಾಲಿಗಳು ಯಾರೆಂದು ಸಹಾಬಿಗಳು ಕೇಳಿದಾಗ ಪ್ರವಾದಿ(ಸ), 'ಪರಸ್ಪರ ರಕ್ತ ಸಂಬಂಧವಿಲ್ಲದೆ ಹಾಗೂ ಪರಸ್ಪರ ಹಣದ ವ್ಯವಹಾರವೂ ಇಲ್ಲದೆ ಕೇವಲ ಅಲ್ಲಾಹನ ಧರ್ಮದ ಆಧಾರದಲ್ಲಿ ಪರಸ್ಪರ ಪ್ರೀತಿಸಿದ ಜನರು. ದೇವನಾಣೆ ನಿರ್ಣಾಯಕ ದಿನದಂದು ಅವರ ಮುಖಗಳು ಪ್ರಕಾಶದಿಂದ ಶೋಭಿಸುವುವು. ಅಲ್ಲ, ಅವರು ಅಡಿಯಿಂದ ಮುಡಿ ತನಕ ಪ್ರಕಾಶಮಾನವಾಗಿರುವರು. ಎಲ್ಲ ಜನರು ಭಯ ದಿಂದ ಕಂಪಿಸುತ್ತಿರುವಾಗ ಅವರಿಗೆ ಯಾವ ಭಯವೂ ಇರದು. ಎಲ್ಲ ಜನರೂ ದುಖದಿಂದಿರು ವಾಗ ಅವರಿಗೆ ಯಾವ ದುಃಖವೂ ಇರದು' ಎನ್ನುತ್ತಾ ಈ ಕುರ್‌ಆನ್ ವಾಕ್ಯವನ್ನು ಪಠಿಸಿದರು.

أَلَآ إِنَّ أَوْلِيَآءَ ٱللَّهِ لَا خَوْفٌ عَلَيْهِمْ وَلَا هُمْ يَحْزَنُونَ ﴿٦٢﴾

**"ಕೇಳಿರಿ! ಖಂಡಿತವಾಗಿಯೂ ಅಲ್ಲಾಹನ ಮಿತ್ರರಿಗೆ ಯಾವ ಭಯವೂ ಇರದು. ಅವರು ದುಃಖಿತರಾಗಲಿಕ್ಕೂ ಇಲ್ಲ".** **(10:62)**

ಪ್ರವಾದಿ(ಸ) ಹೇಳಿರುವುದಾಗಿ ಹ. ಅಬುದ್ದರ್ದಾ(ರ) ವರದಿ ಮಾಡಿರುವರು: "ನಿರ್ಣಾಯಕ ದಿನದಂದು ಕೆಲವರು ತಮ್ಮ ಗೋರಿಗಳಿಂದ ಎದ್ದು ಬರುವರು. ಅವರ ಮುಖಗಳು ಪ್ರಕಾಶ ದಿಂದ ಶೋಭಿಸುವುವು. ಅವರು ಮುತ್ತುಗಳ ಆಸನದಲ್ಲಿ ಕುಳ್ಳಿರಿಸಲ್ಪಡು ವರು. ಜನರು ಅವರ ಸ್ಥಾನಮಾನಗಳ ಬಗ್ಗೆ ಅಸೂಯೆ ಪಡುವರು. ಅವರು ಪ್ರವಾದಿಗಳೋ ಹುತಾತ್ಮರೋ ಆಗಿರ ಲಿಕ್ಕಿಲ್ಲ. ಆಗ ಓರ್ವ ಗ್ರಾಮೀಣ ವ್ಯಕ್ತಿ ಪ್ರಶ್ನಿಸಿದರು, 'ಪ್ರವಾದಿವರ್ಯರೇ! ಇವರು ಯಾರೆಂದು ನಮಗೆ ಸ್ವಲ್ಪ ಪರಿಚಯ ಹೇಳಿರಿ.' 'ಅದು ಅಲ್ಲಾಹನಿಗಾಗಿ ಪರಸ್ಪರ ಪ್ರೀತಿಸುವ ಜನರು' ಎಂದು ಪ್ರವಾದಿ(ಸ) ಉತ್ತರಿಸಿದರು". (ತಬ್ರಾನಿ)

5. ಸಜ್ಜನರೊಂದಿಗಿನ ಪ್ರೀತಿಯೇ ಪರಲೋಕ ಮೋಕ್ಷ ಮತ್ತು ದೇವ ಸಂಪ್ರೀತಿಯ ಮಾರ್ಗವೆಂದು ತಿಳಿಯಿರಿ. 'ಸಜ್ಜನರ ಪ್ರೇಮ ದಯಪಾಲಿಸು. ನಮ್ಮನ್ನು ಸಜ್ಜನರಲ್ಲಿ ಸೇರಿಸು' ಎಂದು ಅಲ್ಲಾಹನಲ್ಲಿ ಪ್ರಾರ್ಥಿಸುತ್ತಿರಿ. ಒಬ್ಬ ವ್ಯಕ್ತಿ ಪ್ರವಾದಿವರ್ಯರ(ಸ) ಸನ್ನಿಧಿಯಲ್ಲಿ ಹಾಜರಾಗಿ ಈ ರೀತಿ ಪ್ರಶ್ನಿಸಿದರು ಎಂದು ಅಬ್ದುಲ್ಲಾ ಬಿನ್ ಮಸ್‌ವೂದ್(ರ) ಹೇಳುತ್ತಾರೆ: "ಓ ಪ್ರವಾದಿವರ್ಯರೇ! ಒಬ್ಬ ವ್ಯಕ್ತಿ ಓರ್ವ ಸಜ್ಜನರನ್ನು ಅವರ ಸತ್ಕರ್ಮಗಳ ಕಾರಣದಿಂದ ಪ್ರೀತಿಸುವರು. ಆದರೆ ಅವರು ಸ್ವತಃ ಆ ಸಜ್ಜನರಂತೆ ಸತ್ಕರ್ಮಗಳನ್ನು ಮಾಡುವುದಿಲ್ಲ. ಪ್ರವಾದಿ(ಸ) ಹೇಳಿದರು: ಚಿಂತಿಲ್ಲ; ಮನುಷ್ಯನು ಯಾರನ್ನು ಪ್ರೀತಿಸುವನೋ ನಿರ್ಣಾಯಕ ದಿನದಂದು ಅವರ ಜೊತೆಗೇ ಇರುವನು". (ಬುಖಾರಿ)

ಒಂದು ರಾತ್ರೆ ಪ್ರವಾದಿವರ್ಯರಿಗೆ(ಸ) ಅಲ್ಲಾಹನ ದರ್ಶನವಾಯಿತು. 'ಬೇಕಾದುದನ್ನು ಕೇಳಿರಿ' ಎಂದು ಅಲ್ಲಾಹನು ಅವರಲ್ಲಿ(ಸ) ಹೇಳಿದಾಗ ಅವರು(ಸ) ಹೀಗೆ ಪ್ರಾರ್ಥಿಸಿದರು:

اَللّٰهُمَّ اِنِّىْ اَسْئَلُكَ فِعْلَ الْخَيْرَاتِ وَتَرْكَ الْمُنْكَرَاتِ وَحُبَّ الْمَسَاكِيْنِ
وَاَنْ تَغْفِرَ لِىْ وَتَرْحَمَنِىْ وَاِذَا اَرَدْتَّ فِتْنَةً فِىْ قَوْمٍ فَتَوَفَّنِىْ غَيْرَ مَفْتُوْنٍ
وَاَسْئَلُكَ حُبَّكَ وَحُبَّ مَنْ يُحِبُّكَ وَحُبَّ عَمَلٍ يُقَرِّبُنِىْ اِلٰى حُبِّكَ
(مسند احمد)

"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಫಿಅ್‌ಲಲ್‌ಖೈರಾತಿ ವ ತರ್ಕಲ್ ಮುಂಕರಾತಿ ವ ಹುಬ್ಬಲ್ ಮಸಾಕೀನಿ ವ ಅನ್‌ತಗ್‌ಫಿರಲೀ ವ ತರ್ಹಮನೀ ವ ಇದಾ ಅರತ್ತ ಫಿತ್‌ನತನ್ ಫೀ ಕೌಮಿನ್ ಫತವಫ್ಫನೀ ಗೈರ ಮಫ್‌ತೂನಿನ್ ವ ಅಸ್‌ಅಲುಕ ಹುಬ್ಬಕ ವಹುಬ್ಬ ಮನ್ ಯುಹಿಬ್ಬುಕ ವ ಹುಬ್ಬ ಅಮಲಿನ್ ಯುಕರ್‌ರಿಬುನೀ ಇಲಾ ಹುಬ್ಬಿಕ".

(ಓ ಅಲ್ಲಾಹ್! ನಾನು ನಿನ್ನಿಂದ ಸತ್ಕರ್ಮಗಳ ಅನುಗ್ರಹವನ್ನು ಯಾಚಿಸುತ್ತೇನೆ. ದುಷ್ಕರ್ಮಗಳಿಂದ ದೂರವಿರುವ ಶಕ್ತಿಯನ್ನು ಯಾಚಿಸುತ್ತೇನೆ. ದೀನ ದಲಿತರ ಪ್ರೇಮವನ್ನು ಯಾಚಿಸುತ್ತೇನೆ. ನನ್ನನ್ನು ಕ್ಷಮಿಸುವಂತೆಯೂ ನನ್ನ ಮೇಲೆ ದಯೆ ತೋರುವಂತೆಯೂ ಯಾಚಿಸುತ್ತೇನೆ. ನೀನು ಒಂದು ಜನಾಂಗವನ್ನು ಶಿಕ್ಷಿಸಬಯಸಿದಾಗ ನನ್ನನ್ನು ಸುರಕ್ಷಿತವಾಗಿ ಎಬ್ಬಿಸು. ನಾನು ನಿನ್ನಿಂದ ನಿನ್ನ ಪ್ರೀತಿಯನ್ನು ಯಾಚಿಸುತ್ತೇನೆ. ನಿನ್ನನ್ನು ಪ್ರೀತಿಸುವವರ ಪ್ರೀತಿಯನ್ನು ಯಾಚಿಸುತ್ತೇನೆ. ನಿನ್ನ ಸಾಮಿಪ್ಯದ ಹೇತುವಾಗಬಲ್ಲ ಸತ್ಕರ್ಮಗಳ ಸೌಭಾಗ್ಯ ವನ್ನು ಯಾಚಿಸುತ್ತೇನೆ.) (ಮುಸ್ನದ್ ಅಹ್ಮದ್)

ಪ್ರವಾದಿ(ಸ) ಹೇಳಿರುವುದಾಗಿ ಹ. ಮುಆದ್ ಬಿನ್ ಜಬಲ್(ರ) ಹೇಳುತ್ತಾರೆ:

ಅಲ್ಲಾಹನು ಹೇಳುತ್ತಾನೆ, "ನನಗಾಗಿ ಪರಸ್ಪರ ಪ್ರೀತಿಸುವವರನ್ನು, ನನ್ನ ಧ್ಯಾನಕ್ಕಾಗಿ ಒಂದೆಡೆ ಒಟ್ಟುಗೂಡುವವರನ್ನು, ನನ್ನ ಪ್ರೀತಿಯ ಕಾರಣ ಪರಸ್ಪರ ಭೇಟಿಯಾಗುವವರನ್ನು ಮತ್ತು ನನ್ನ ಪ್ರೀತಿಗಾಗಿ ಪರಸ್ಪರ ಸದ್‌ವ್ಯವಹಾರ ಮಾಡುವವರನ್ನು ಪ್ರೀತಿಸುವುದು ನನ್ನ ಮೇಲೆ ಕಡ್ಡಾಯವಾಗಿದೆ". (ಅಹ್ಮದ್, ತಿರ್ಮಿದಿ)

ಇಬ್ಬರು ಸ್ನೇಹಿತರ ಭೇಟಿಯ ಬಗ್ಗೆ ಒಂದು ವಿಶ್ವಾಸವರ್ಧಕ ಘಟನೆಯನ್ನು ಪ್ರವಾದಿ(ಸ) ಈ ರೀತಿ ವಿವರಿಸಿರುವರು: "ಪರ ಊರಲ್ಲಿದ್ದ ತನ್ನ ಮಿತ್ರನ ಭೇಟಿಗಾಗಿ ಒಬ್ಬ ವ್ಯಕ್ತಿ ಹೊರಟ. ಅವನ ಮಾರ್ಗದಲ್ಲಿ ಒಬ್ಬ ದೇವಚರರನ್ನು ಅಲ್ಲಾಹನು ನಿಯುಕ್ತಗೊಳಿಸಿದನು. ಎಲ್ಲಿಗೆ ಹೋಗುತ್ತಿರುವಿರಿ? ಎಂದು ಆ ದೇವಚರ ಪ್ರಶ್ನಿಸಿತು. 'ನನ್ನ ಸೋದರನ ಭೇಟಿಗಾಗಿ ಒಂದು ಊರಿಗೆ ಹೋಗುತ್ತಿರುವೆನು' ಎಂದು ಅವರು ಉತ್ತರಿಸಿದರು. 'ನೀವು ಮಾಡಿದ ಯಾವುದಾದರೂ ಉಪಕಾರದ ಪ್ರತಿಫಲವನ್ನು ಪಡೆಯಲಿಕ್ಕಾಗಿ ಹೋಗುತ್ತಿರುವಿರಾ?' ಎಂದು ದೇವಚರ ಪ್ರಶ್ನಿಸಿತು. 'ನಾನು ಆತನನ್ನು ಅಲ್ಲಾಹನಿಗೋಸ್ಕರ ಪ್ರೀತಿಸುತ್ತೇನೆ. ಆದಕ್ಕಾಗಿ ಆತನ ಬಳಿ ಹೋಗುತ್ತಿರುವೆನು'

ಎಂದು ಆ ವ್ಯಕ್ತಿ ಉತ್ತರಿಸಿದನು. ದೇವಚರ ಹೇಳಿತು, 'ಹಾಗಿದ್ದರೆ ಕೇಳಿರಿ! ನೀವು ನಿಮ್ಮ ಸಂಗಾತಿಯೊಂದಿಗೆ ಅಲ್ಲಾಹನಿಗಾಗಿ ಯಾವ ರೀತಿಯ ಪ್ರೀತಿಯನ್ನು ಇಟ್ಟುಕೊಂಡಿರುವಿರೋ ಅಲ್ಲಾಹನು ನಿಮ್ಮೊಂದಿಗೆ ಅದೇ ರೀತಿಯ ಪ್ರೀತಿಯನ್ನು ಇಟ್ಟುಕೊಂಡಿದ್ದಾನೆ' ಎಂಬ ಶುಭವಾರ್ತೆಯನ್ನು ನಿಮಗೆ ನೀಡಲಿಕ್ಕಾಗಿ ಆತನು ನನ್ನನ್ನು ನಿಮ್ಮ ಬಳಿಗೆ ಕಳುಹಿಸಿರುವನು". (ಮುಸ್ಲಿಮ್)

6. ಇಸ್ಲಾಮೀ ದೃಷ್ಟಿಕೋನದಿಂದ ಮಿತ್ರತ್ವಕ್ಕೆ ಯೋಗ್ಯರಾದವರನ್ನೇ ಮಿತ್ರರಾಗಿ ಆರಿಸಿರಿ. ಜೀವನದಾದ್ಯಂತ ಆ ಮಿತ್ರತ್ವದ ಕರ್ತವ್ಯಗಳನ್ನು ಪಾಲಿಸಿರಿ. ಮಿತ್ರತ್ವಕ್ಕೆ ಉತ್ತಮರನ್ನೇ ಆರಿಸುವುದು ಎಷ್ಟು ಮುಖ್ಯವೋ ಮಿತ್ರತ್ವವನ್ನು ಸದಾ ಪಾಲಿಸುವುದು ಮತ್ತು ಅದನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡುವುದು ಕೂಡ ಅಷ್ಟೇ ಮುಖ್ಯವಾಗಿದೆ.

ಪ್ರವಾದಿ(ಸ) ಹೇಳುತ್ತಾರೆ: ನಿರ್ಣಾಯಕ ದಿನದಂದು ಅಲ್ಲಾಹನ ಸಿಂಹಾಸನದ ನೆರಳಿನ ಹೊರತು ಬೇರಾವ ನೆರಳೂ ಇಲ್ಲದ ಸಂದರ್ಭದಲ್ಲಿ ಏಳು ವಿಧದ ಜನರು ಅಲ್ಲಾಹನ ಸಿಂಹಾಸನದ ನೆರಳಿನಲ್ಲಿರುವರು. ಆ ಪೈಕಿ ಒಂದು ವಿಧದ ಜನರು ಕೇವಲ ಅಲ್ಲಾಹನಿಗಾಗಿ ಪರಸ್ಪರ ಪ್ರೀತಿಸುತ್ತಿದ್ದ ಇಬ್ಬರು ವ್ಯಕ್ತಿಗಳಾಗಿರುವರು. ದೇವ ಸಂಪ್ರೀತಿಯೇ ಅವರನ್ನು ಒಗ್ಗೂಡಿಸಿತ್ತು. ದೇವ ಸಂಪ್ರೀತಿಗಾಗಿಯೇ ಅವರು ಪರಸ್ಪರ ಬೇರ್ಪಟ್ಟಿದ್ದರು. ಅರ್ಥಾತ್ ಅವರ ಸ್ನೇಹವು ಅಲ್ಲಾಹನಿಗಾಗಿದ್ದು ಜೀವನದಾದ್ಯಂತ ಅವರು ಆ ಸ್ನೇಹವನ್ನು ಪಾಲಿಸಲು ಮತ್ತು ಉಳಿಸಲು ಪ್ರಯತ್ನಿಸುವರು. ಅವರಲ್ಲಿ ಒಬ್ಬನು ಇಹಲೋಕ ತ್ಯಾಗ ಮಾಡುವಾಗಲೂ ಆ ಸ್ನೇಹವು ಉಳಿದಿರುವುದು.

7. ಸ್ನೇಹಿತರ ಮೇಲೆ ಭರವಸೆ ಇಡಿರಿ. ಅವರೊಂದಿಗೆ ನಗುನಗುತ್ತಾ ಇರಿ. ಸ್ವಯಂ ಉದಾಸೀನರಾಗದಿರಿ. ಸ್ನೇಹಿತರನ್ನೂ ಉದಾಸೀನರಾಗಲು ಬಿಡದಿರಿ. ಸ್ನೇಹಿತರ ಮಧ್ಯೆ ಸಂಕೋಚವಿಲ್ಲದೆ ಸಂತೋಷದಿಂದಿರಿ. ಹುಬ್ಬೇರಿಸಿ ಅಥವಾ ಮುಖ ಸಿಂಡರಿಸಿಕೊಂಡು ಇರಬೇಡಿರಿ. ಸ್ನೇಹಿತರ ಮಧ್ಯೆ ನಿರಾಡಂಬರ, ನಿಸ್ಸಂಕೋಚ, ಹಸನ್ಮುಖ ಸಂಗಾತಿಯಾಗಿ ಇರಲು ಪ್ರಯತ್ನಿಸಿರಿ. ನಿಮ್ಮ ಜೊತೆಗಿದ್ದು ಅವರು ಬೇಸರ ತಾಳಬಾರದು. ಸಂತೋಷ, ಚೈತನ್ಯ ಮತ್ತು ಆಕರ್ಷಣೆ ಅನುಭವಿಸಬೇಕು.

ಹ. ಅಬ್ದುಲ್ಲಾ ಬಿನ್ ಹಾರಿಸ್(ರ) ಹೇಳುತ್ತಾರೆ: "ನಾನು ಪ್ರವಾದಿಯವರಿಗಿಂತ(ಸ) ಮಿಗಿಲಾದ ಹಸನ್ಮುಖಿಯನ್ನು ಕಂಡಿಲ್ಲ". (ತಿರ್ಮಿದಿ)

ಹ. ಜಾಬಿರ್ ಬಿನ್ ಸಮ್ರಃ(ರ) ಹೇಳುತ್ತಾರೆ, "ನಾನು ಪ್ರವಾದಿವರ್ಯರ(ಸ) ಜೊತೆ ನೂರಕ್ಕಿಂತಲೂ ಹೆಚ್ಚು ಸಭೆಗಳಲ್ಲಿ ಕುಳಿತಿದ್ದೆ. ಆ ಸಭೆಗಳಲ್ಲಿ ಸಹಾಬಿಗಳು(ರ) ಕವಿತೆಗಳನ್ನೂ ಹೇಳುತ್ತಿದ್ದರು, ಅಜ್ಞಾನ ಕಾಲದ ಕತೆಗಳನ್ನೂ ಹೇಳುತ್ತಿದ್ದರು. ಪ್ರವಾದಿ(ಸ) ಇವುಗಳನ್ನು ಮೌನವಾಗಿ ಕುಳಿತು ಆಲಿಸುತ್ತಿದ್ದರು. ಕೆಲವೊಮ್ಮೆ ಅವರ ಜತೆಗೂಡಿ ನಗುತ್ತಿದ್ದರು". (ತಿರ್ಮಿದಿ)

ಹ. ಶರೀದ್(ರ) ಹೇಳುತ್ತಾರೆ, "ಒಮ್ಮೆ ನಾನು ಪ್ರವಾದಿವರ್ಯರ(ಸ) ಜೊತೆ ಕುದುರೆಯಲ್ಲಿ ಕುಳಿತಿದ್ದೆ. ಕುಳಿತಲ್ಲಿಂದಲೇ ನಾನು ಪ್ರವಾದಿವರ್ಯರಿಗೆ(ಸ) ಉಮಯ್ಯ ಬಿನ್

ಸಲತ್‌ರ ನೂರು ದ್ವಿಪದಿಗಳನ್ನು ಹೇಳಿದೆ. ಪ್ರತಿಯೊಂದು ದ್ವಿಪದಿಯ ಬಳಿಕ ಇನ್ನೂ ಹೇಳಿರಿ ಎಂದು ಪ್ರವಾದಿ(ಸ) ಹೇಳುತ್ತಿದ್ದರು". (ತಿರ್ಮಿದಿ)

ಅಂತೆಯೇ ಪ್ರವಾದಿ(ಸ) ತಮ್ಮ ಸಭೆಗಳಲ್ಲಿ ಕೆಲವೊಮ್ಮೆ ಕತೆ ಹೇಳುತ್ತಿದ್ದರು. ಒಮ್ಮೆ ಮನೆಯವರಿಗೆ ಪ್ರವಾದಿ(ಸ) ಒಂದು ಕತೆ ಹೇಳಿದರು ಎಂದು ಆಯಿಶಾ(ರ) ಹೇಳುತ್ತಾರೆ. ಈ ವಿಚಿತ್ರ ಕತೆಗಳು 'ಖುರಾಫ'ರ ಕತೆಗಳಂತಿವೆ ಎಂದು ಓರ್ವ ಮಹಿಳೆ ಹೇಳಿದರು. ಇದನ್ನು ಕೇಳಿ ಪ್ರವಾದಿ(ಸ) ನಿಮಗೆ 'ಖುರಾಫ'ರ ನೈಜ ಕತೆ ತಿಳಿದಿದೆಯೇ? ಎಂದು ಕೇಳಿದರು. ಆ ಬಳಿಕ ಖುರಾಫರ ನೈಜ ಕತೆಯನ್ನು ಸ್ವತಃ ಪ್ರವಾದಿವರ್ಯರೇ ವಿವರವಾಗಿ ಹೇಳಿದರು. ಇದೇ ರೀತಿ ಒಮ್ಮೆ ಆಯಿಶಾ(ರ)ರವರಿಗೆ ಹನ್ನೊಂದು ಮಹಿಳೆಯರ ಒಂದು ಸ್ವಾರಸ್ಯಕರ ಕತೆ ಹೇಳಿದರು.

ಹ. ಬಕರ್ ಬಿನ್ ಅಬ್ದುಲ್ಲಾರು(ರ) ಸಹಾಬಿಗಳ ಸರಳತೆ ಮತ್ತು ಪ್ರಸನ್ನತೆಯ ಕುರಿತು ಹೀಗೆ ಹೇಳಿರುವರು: ಸಹಾಬಿಗಳು ಪರಸ್ಪರರ ಮೇಲೆ ಮೋಜಿಗಾಗಿ ಕಲ್ಲಂಗಡಿ ಹಣ್ಣಿನ ಸಿಪ್ಪೆ ಗಳನ್ನು ಎಸೆಯುತ್ತಿದ್ದರು. ಆದರೆ ಯುದ್ಧ ಮತ್ತು ಹೋರಾಟದ ಸಮಯ ಬಂದಾಗ ವೀರಾಧಿ ವೀರರೂ ಆಗಿದ್ದರು. (ಅಲ್ ಅದಬುಲ್ ಮುಫ್ರದ್)

ಹ. ಮುಹಮ್ಮದ್ ಬಿನ್ ಝಿಯಾದ್(ರ) ಹೇಳುತ್ತಾರೆ: "ನಮ್ಮ ಪೂರ್ವಜರ ಹಲವು ಕುಟುಂಬಗಳು ಒಂದೇ ಕಟ್ಟಡದಲ್ಲಿ ವಾಸಿಸುವುದನ್ನು ನಾನು ಕಂಡಿದ್ದೇನೆ. ಅನೇಕ ಸಲ ಆ ಪೈಕಿ ಒಂದು ಕುಟುಂಬದ ಬಳಿ ಅತಿಥಿ ಬಂದಾಗ ಯಾರ ಮನೆಯಲ್ಲಿ ಉತ್ತಮ ಆಹಾರ ಸಿದ್ಧವಿರುತ್ತಿತ್ತೋ ಅದನ್ನು ತಮ್ಮ ಅತಿಥಿಗಾಗಿ ತರುತ್ತಿದ್ದರು. ಆ ಬಳಿಕ ಅದರ ಮಾಲಿಕ ತನ್ನ ತಿಂಡಿ ತಿನಿಸುಗಳಿಗಾಗಿ ಹುಡುಕಾಡುತ್ತಿದ್ದ. ನನ್ನ ಊಟದ ಮಡಕೆ ಯಾರು ಕೊಂಡು ಹೋದರು ಎಂದು ಜನರಲ್ಲಿ ವಿಚಾರಿಸಿದಾಗ "ನಾನು ನನ್ನ ಅತಿಥಿಗಾಗಿ ತಂದಿರುವೆನು" ಎಂದು ಆತಿಥೇಯನು ಹೇಳುತ್ತಿದ್ದನು ಮತ್ತು ಅವನು 'ಬಾರಕಲ್ಲಾಹ್' (ಅಲ್ಲಾಹನು ನಿಮಗದರಲ್ಲಿ ಸಮೃದ್ಧಿ ನೀಡಲಿ) ಎಂದು ಪ್ರಾರ್ಥಿಸುತ್ತಿದ್ದನು. ಈ ಜನರು ರೊಟ್ಟಿ ತಯಾರಿಸಿದಾಗಲೂ ಹೀಗೆಯೇ ಆಗುತ್ತಿತ್ತು". (ಅಲ್ ಅದಬುಲ್ ಮುಫ್ರದ್)

ಹ. ಅಲೀ(ರ) ಹೇಳುತ್ತಾರೆ, "ಮನಸ್ಸನ್ನು ಮುಕ್ತವಾಗಿಯೂ ಬಿಡಿರಿ. ವಿನೋದ ವಿಷಯಗಳ ಬಗ್ಗೆಯೂ ಯೋಚಿಸಿರಿ. ಏಕೆಂದರೆ ಶರೀರದಂತೆ ಮನಸ್ಸೂ ದಣಿಯುತ್ತದೆ!"

8. ಸದಾ ಖಿನ್ನ ಮನಸ್ಕರಾಗಿರಬೇಡಿ. ಪ್ರಸನ್ನ ವದನರಾಗಿರಿ. ಆದರೆ ನಿಮ್ಮ ಸಂತೋಷವೂ ಮೇರೆಯೊಳಗಿರುವಂತೆ ನೋಡಿಕೊಳ್ಳಿರಿ. ಪ್ರಸನ್ನತೆ ಹಾಗೂ ವಿನೋದದ ಜೊತೆಗೆ ಗಾಂಭೀರ್ಯ, ಸ್ವಾಭಿಮಾನ ಮತ್ತು ಸಮತೋಲನವನ್ನು ಕಾಪಾಡಿರಿ.

ಹ. ಅಬ್ದುರ್ರಹ್ಮಾನ್(ರ) ಹೇಳುತ್ತಾರೆ: "ಪ್ರವಾದಿವರ್ಯರ(ಸ) ಸಂಗಾತಿಗಳು ಖಿನ್ನ ಮನಸ್ಕರಾಗಿರುತ್ತಿರಲಿಲ್ಲ. ನಿರ್ಜೀವಿಗಳಂತೆ ನಡೆಯುತ್ತಲೂ ಇರಲಿಲ್ಲ. ಅವರು ತಮ್ಮ ಸಭೆಗಳಲ್ಲಿ ಕವಿತೆಗಳನ್ನೂ ಹೇಳುತ್ತಿದ್ದರು. ಅಜ್ಞಾನಕಾಲದ ಕತೆಗಳನ್ನೂ ಹೇಳುತ್ತಿದ್ದರು. ಆದರೆ ಸತ್ಯಕ್ಕೆದುರಾದ ಬೇಡಿಕೆ ಅವರ ಮುಂದೆ ಬಂದಾಗಲೆಲ್ಲಾ ಕೋಪದಿಂದ ಅವರ ಕಣ್ಣು ಕೆಂಪೇರುತ್ತಿತ್ತು. ಅವರು ಹುಚ್ಚರಾದಂತೆ ಭಾಸವಾಗುತ್ತಿತ್ತು". (ಅಲ್ ಅದಬುಲ್ ಮುಫ್ರದ್)

ಸುಪ್ರಸಿದ್ಧ ಹದೀಸ್ ಸಂಗ್ರಹಕಾರ ಹ. ಸುಫ್ಯಾನ್ ಬಿನ್ ಐನ್ ಅವರಿಗೆ ಯಾರೋ ವಿನೋದವೂ ಒಂದು ಆಪತ್ತು ಎಂದಾಗ ಅವರು ಅದನ್ನು ಅಲ್ಲಗಳೆಯುತ್ತಾ, "ಅದು ಒಂದು ಸುನ್ನತ್(ಪ್ರವಾದಿಚರ್ಯೆ) ಆಗಿದೆ. ಆದರೆ ಅದು ಸಂದರ್ಭ ಅರಿತು ಉತ್ತಮ ವಿನೋದ ಮಾಡುವವರಿಗೆ ಮಾತ್ರ" ಎಂದರು. (ತಿರ್ಮಿದಿ ವ್ಯಾಖ್ಯಾನ)

9. ನೀವು ಯಾರನ್ನು ಪ್ರೀತಿಸುತ್ತೀರೋ ಅವರಿಗೆ ಈ ವಿಷಯ ಅವಶ್ಯವಾಗಿ ತಿಳಿಸಿ. ಇದರಿಂದ ಭಾವನಾತ್ಮಕ ಪ್ರಭಾವ ಉಂಟಾಗುತ್ತದೆ. ಅವರಿಗೂ ಮಿತ್ರತ್ವದ ಅನುಭವವಾಗುತ್ತದೆ. ಪರಸ್ಪರ ಮನಸ್ಸಿನ ಭಾವನೆಗಳ ವಿನಿಮಯದಿಂದ ಪ್ರೇಮ ಸೌಹಾರ್ದಗಳಲ್ಲಿ ವೃದ್ಧಿಯಾಗು ತ್ತದೆ. ಸ್ನೇಹವು ಕೇವಲ ಒಂದು ಮಾನಸಿಕ ಸ್ಥಿತಿಯಾಗಿ ಉಳಿಯದೆ ಅದರ ಪ್ರಭಾವ ದೈನಂದಿನ ಜೀವನದಲ್ಲೂ ಬೀರುವುದು. ಇದರಿಂದಾಗಿ ಪರಸ್ಪರರ ಖಾಸಗೀ ವಿಷಯಗಳಲ್ಲಿ ಆಸಕ್ತಿ ಹೆಚ್ಚಿ ಅನ್ಯೋನ್ಯತೆ ಬೆಳೆಯುವ ಸಾಧ್ಯತೆ ಉಂಟಾಗುತ್ತದೆ. ಪ್ರವಾದಿ(ಸ) ಈ ರೀತಿ ಆದೇಶಿಸಿರುವರು, "ಒಬ್ಬನ ಹೃದಯದಲ್ಲಿ ತನ್ನ ಸೋದರನ ಬಗ್ಗೆ ಸ್ನೇಹ-ವಿಶ್ವಾಸಗಳಿದ್ದರೆ ಅವನು ಅದನ್ನು ತನ್ನ ಸ್ನೇಹಿತನಿಗೆ ತಿಳಿಸಬೇಕು". (ಅಬೂದಾವೂದ್)

ಒಮ್ಮೆ ಪ್ರವಾದಿ(ಸ) ತಮ್ಮ ಸಂಗಾತಿಗಳ ಜೊತೆ ಕುಳಿತಿದ್ದರು. ಓರ್ವ ವ್ಯಕ್ತಿ ಆ ಕಡೆಯಿಂದ ಹಾದು ಹೋದರು. ಆಗ ಪ್ರವಾದಿವರ್ಯರ(ಸ) ಜೊತೆ ಕುಳಿತಿದ್ದವರೊಬ್ಬರು, 'ಓ ಪ್ರವಾದಿವರ್ಯರೇ! ನಾನು ಆ ವ್ಯಕ್ತಿಯನ್ನು ಕೇವಲ ಅಲ್ಲಾಹನಿಗೋಸ್ಕರ ಪ್ರೀತಿಸುತ್ತೇನೆ' ಎಂದರು. 'ನೀವು ಈ ವಿಷಯ ಆ ವ್ಯಕ್ತಿಗೆ ತಿಳಿಸಿದ್ದೀರಾ?' ಎಂದು ಪ್ರವಾದಿ(ಸ) ವಿಚಾರಿಸಿದರು. 'ಇಲ್ಲ' ಎಂಬ ಉತ್ತರ ಕೇಳಿ 'ಹಾಗಾದರೆ ಹೋಗಿ ಆ ವ್ಯಕ್ತಿಗೆ ನೀವು ಅಲ್ಲಾಹನಿಗೋಸ್ಕರ ಅವರನ್ನು ಪ್ರೀತಿಸುವುದಾಗಿ ತಿಳಿಸಿರಿ' ಎಂದು ಪ್ರವಾದಿ(ಸ) ಆದೇಶಿ ಸಿದರು. ಅವರು ಕೂಡಲೇ ಹೋಗಿ ಆ ವ್ಯಕ್ತಿಗೆ ತಮ್ಮ ಮನದಿಂಗಿತವನ್ನು ತಿಳಿಸಿದರು. 'ಯಾರಿಗಾಗಿ ನೀವು ನನ್ನನ್ನು ಪ್ರೀತಿಸುತ್ತೀರೋ ಅವನೂ ನಿಮ್ಮನ್ನು ಪ್ರೀತಿಸಲಿ' ಎಂದು ಆ ವ್ಯಕ್ತಿ ಹರಸಿದರು.

(ತಿರ್ಮಿದಿ, ಅಬೂದಾವೂದ್)

ಸ್ನೇಹ ಸಂಬಂಧದ ಬೆಳವಣಿಗೆಗೆ ಪರಸ್ಪರ ಖಾಸಗೀ ವ್ಯವಹಾರಗಳಲ್ಲಿಯೂ ಸಾಕಷ್ಟು ಅಭಿರುಚಿ ತೋರಬೇಕಾದುದು ಅಗತ್ಯ. ಪ್ರವಾದಿ(ಸ) ಹೀಗೆ ಹೇಳಿರುವರು: "ಒಬ್ಬ ವ್ಯಕ್ತಿ ಇನ್ನೊಬ್ಬನೊಂದಿಗೆ ಸ್ನೇಹ ಸಂಬಂಧ ಬೆಳೆಸುವಾಗ ಅವನ ಹೆಸರು, ಅವನ ತಂದೆಯ ಹೆಸರು ಮತ್ತು ಅವನ ಮನೆಯವರ ಸ್ಥಿತಿಗತಿಗಳ ಬಗ್ಗೆ ತಿಳಿದುಕೊಳ್ಳಬೇಕು. ಇದರಿಂದ ಪರಸ್ಪರ ಪ್ರೇಮವು ಬಲವಾಗಿ ಬೇರೂರುತ್ತದೆ". (ತಿರ್ಮಿದಿ)

10. ಸ್ನೇಹ ಪ್ರಕಟನೆಯಲ್ಲಿ ಸದಾ ಸಮತೋಲನವನ್ನು ಕಾಪಾಡಿರಿ. ಸ್ನೇಹಿತನು ನಿಮ್ಮ ಪ್ರೀತಿಯ ಬಗ್ಗೆ ಸಂಶಯ ತಾಳುವಷ್ಟು ನೀರಸರಾಗದಿರಿ. ಪ್ರೀತಿಯ ಉತ್ಸಾಹವು ಹುಚ್ಚಾಟ ಬಟ್ಟೆಯಾಗಲು ಬಿಡದಿರಿ. ಇದರಿಂದ ಮುಂದೆ ಪಶ್ಚಾತ್ತಾಪ ಪಡುವ ಸಂದರ್ಭ ಬಂದೀತು. ಆದ್ದರಿಂದ ಸಮತೋಲನದೊಂದಿಗೆ ಸದಾ ಪರಿಪಾಲಿಸಲು ಸಾಧ್ಯವಾಗುವಂತಹ ಮಧ್ಯಮ ಮಾರ್ಗವನ್ನೇ ಅನುಸರಿಸಿರಿ.

ಹ. ಅಸ್ಲಮ್(ರ) ಹೇಳುತ್ತಾರೆ: "ನಿಮ್ಮ ಪ್ರೇಮವು ಹುಚ್ಚುತನವಾಗದಂತೆ ಮತ್ತು ನಿಮ್ಮ ದ್ವೇಷವು ಕಿರುಕುಳ ಕೊಡುವ ಹಂತಕ್ಕೆ ತಲುಪದಂತೆ ಜಾಗ್ರತೆ ವಹಿಸಿರಿ' ಎಂದು ಹ. ಉಮರ್(ರ) ಹೇಳಿದರು. ಆಗ ನಾನು ಅದು ಹೇಗೆಂದು ವಿಚಾರಿಸಿದೆ. 'ಸ್ನೇಹ ಬೆಳೆಸುವಾಗ ಮಕ್ಕಳಂತೆ ಮುದ್ದಿಸುವುದು, ಕೋಪಗೊಂಡಾಗ ಅವನ ಪ್ರಾಣಸೊತ್ತುಗಳ ನಾಶಕ್ಕೆ ಶ್ರಮಿಸುವುದು' ಎಂದು ಹ. ಉಮರ್(ರ) ಉತ್ತರಿಸಿದರು. (ಅಲ್ ಅದಬುಲ್ ಮುಫ್ರದ್)

ಹ. ಉಬೈದ್ ಕಂದಿಯವರು ಹೇಳುತ್ತಾರೆ: ಹ ಅಲೀ(ರ) ಈ ರೀತಿ ಹೇಳಿರುವರು: "ನಿಮ್ಮ ಸ್ನೇಹಿತನೊಂದಿಗೆ ಪ್ರೀತಿಯಲ್ಲಿ ಸಮತೋಲನ ಕಾಪಾಡಿರಿ. ಅವನು ಎಂದಾದರೂ ನಿಮ್ಮ ಶತ್ರುವಾಗಿ ಮಾರ್ಪಡಬಹುದು. ನಿಮ್ಮ ಶತ್ರುವಿನೊಂದಿಗೆ ಶತ್ರುತ್ವದಲ್ಲಿ ಮಿತಿ ಮೀರದಿರಿ. ಅವನು ಯಾವಾಗಲಾದರೂ ನಿಮ್ಮ ಮಿತ್ರನಾಗಿ ಮಾರ್ಪಡಬಹುದು".

(ಅಲ್ ಅದಬುಲ್ ಮುಫ್ರದ್)

11. ಸ್ನೇಹಿತರೊಂದಿಗೆ ಪ್ರಾಮಾಣಿಕತೆ ಮತ್ತು ಹಿತಾಕಾಂಕ್ಷೆಯ ವ್ಯವಹಾರ ಮಾಡಿರಿ. ಅವನ ನೈತಿಕ ಮಟ್ಟವನ್ನು ಸುಧಾರಿಸುವ ಪ್ರಯತ್ನ ಮಾಡುವುದು ಮತ್ತು ಅವನ ಲೌಕಿಕ ಅಭಿವೃದ್ಧಿಗಿಂತಲೂ ಪಾರತ್ರಿಕ ಅಭಿವೃದ್ಧಿಯ ಬಗ್ಗೆ ಕಾಳಜಿ ವಹಿಸುವುದು ಅವನ ನೈಜ ಹಿತಾಕಾಂಕ್ಷೆಯಾಗಿದೆ. 'ಧರ್ಮವು ಸಾದ್ಯಂತ ಹಿತಾಕಾಂಕ್ಷೆಯಾಗಿದೆ' ಎಂದು ಪ್ರವಾದಿ(ಸ) ಹೇಳಿರುವರು. ನೀವು ನಿಮಗಾಗಿ ಇಷ್ಟಪಡುವುದನ್ನೇ ನಿಮ್ಮ ಸ್ನೇಹಿತನಿಗಾಗಿಯೂ ಇಷ್ಟ ಪಡುವುದೇ ಹಿತಾಕಾಂಕ್ಷೆಯ ನೈಜ ಮಾನದಂಡವಾಗಿದೆ. ಪ್ರವಾದಿ(ಸ) ಹೀಗೆ ಹೇಳಿರುವರು: "ನನ್ನ ಪ್ರಾಣ ಯಾರ ವಶವಿದೆಯೋ ಆತನಾಣೆ, ನಿಮ್ಮ ಪೈಕಿ ಒಬ್ಬರು ತನಗಾಗಿ ಬಯಸುವುದನ್ನೇ ತನ್ನ ಸೋದರರಿಗೆ ಬಯಸುವ ತನಕ ಸತ್ಯವಿಶ್ವಾಸಿಯಾಗಲಾರ".

ಒಬ್ಬ ಮುಸ್ಲಿಮನ ಮೇಲೆ ಇನ್ನೊಬ್ಬ ಮುಸ್ಲಿಮನ ಆರು ಹಕ್ಕುಗಳನ್ನು ವಿವರಿಸುತ್ತಾ ಪ್ರವಾದಿ(ಸ) ಈ ರೀತಿ ಹೇಳಿರುವರು: "ಉಪಸ್ಥಿತಿಯಲ್ಲೂ ಅನುಪಸ್ಥಿತಿಯಲ್ಲೂ ಸೋದರನ ಹಿತಾಕಾಂಕ್ಷೆ ಮಾಡುವುದು."

ಪ್ರವಾದಿ(ಸ) ಹೀಗೂ ಹೇಳಿರುವರು: "ಆಣೆ ಹಾಕಿ ಒಬ್ಬ ಮುಸ್ಲಿಮನ ವಸ್ತುವನ್ನು ಕಸಿಯುವವನ ಮೇಲೆ ನರಕಾಗ್ನಿಯು ವಿಧಿಸಲ್ಪಟ್ಟಿದೆ ಮತ್ತು ಸ್ವರ್ಗವು ನಿಷೇಧಿಸಲ್ಪಟ್ಟಿದೆ. ಸಹಾಬಿಗಳು ಕೇಳಿದರು- ಅದು ಒಂದು ಸಾಮಾನ್ಯ ವಸ್ತುವಾಗಿದ್ದರೂ ಹಾಗೆಯೇ? ಪ್ರವಾದಿ(ಸ) ಹೇಳಿದರು, ಹೌದು, ಮರದ ಒಂದು ಸಾಮಾನ್ಯ ಗೆಲ್ಲಾದರೂ ಸರಿಯೆ.

12. ಸ್ನೇಹಿತರ ಸುಖ ದುಃಖಗಳಲ್ಲಿ ಭಾಗಿಗಳಾಗಿರಿ. ಅವರ ಸುಖದಲ್ಲಿ ಅವರೊಂದಿಗೆ ಸೇರಿ ಸಂತೋಷ ಪಡಿರಿ. ಅವರ ದುಃಖದಲ್ಲಿ ಅವರ ಜೊತೆ ಸೇರಿ ಅದನ್ನು ನೀಗಿಸಲು ಪ್ರಯತ್ನಿಸಿರಿ. ಕಷ್ಟ ಕಾಲದಲ್ಲಿ ನೆರವಾಗುವರೆಂದು ಸ್ನೇಹಿತರ ಬಗ್ಗೆ ಭರವಸೆ ಇಡುವುದು ಸಹಜ. ಸುಖ ಸಂತೋಷಗಳಲ್ಲಿ ಭಾಗವಹಿಸಿ ಅದನ್ನು ಇಮ್ಮಡಿಗೊಳಿಸುವರೆಂಬ ನಿರೀಕ್ಷೆಯೂ ಅಷ್ಟೇ ಸ್ವಾಭಾವಿಕ.

ಪ್ರವಾದಿ(ಸ) ಹೀಗೆ ಹೇಳಿರುವರು: "ಒಬ್ಬ ಮುಸ್ಲಿಮನು ಇನ್ನೊಬ್ಬ ಮುಸ್ಲಿಮನ

ಮಟ್ಟಿಗೆ ಒಂದು ಕಟ್ಟಡದಂತೆ. ಅದರ ಒಂದು ಭಾಗ ಇನ್ನೊಂದು ಭಾಗವನ್ನು ಬಲ ಪಡಿಸುತ್ತದೆ ಮತ್ತು ಕಟ್ಟಡದ ಇಟ್ಟಿಗೆಗಳು ಪರಸ್ಪರ ಆಸರೆಯಾಗುವಂತೆ ಅದಕ್ಕೆ ಆಸರೆಯಾಗಿರುತ್ತದೆ. ಆ ಬಳಿಕ ತಮ್ಮ ಒಂದು ಕೈಯ ಬೆರಳುಗಳನ್ನು ಇನ್ನೊಂದು ಕೈಯ ಬೆರಳು ಗಳೊಳಗೆ ಪೋಣಿಸಿದರು." (ಈ ರೀತಿ ಮುಸ್ಲಿಮರ ಪರಸ್ಪರ ಸಂಬಂಧವನ್ನು ಸ್ಪಷ್ಟ ಪಡಿಸಿರುವರು) (ಬುಖಾರಿ, ಮುಸ್ಲಿಮ್)

ಪ್ರವಾದಿ(ಸ) ಹೀಗೂ ಹೇಳಿರುವರು "ಯಾವ ರೀತಿ ದೇಹದ ಒಂದು ಭಾಗಕ್ಕೆ ರೋಗ ತಗಲಿದರೆ ಇಡೀ ದೇಹವೇ ಜ್ವರದಲ್ಲಿ ಸಿಲುಕಿ ನಿದ್ರೆಗೆಟ್ಟು, ಅದಕ್ಕೆ ನೆರವಾಗುತ್ತದೋ ಅದೇ ರೀತಿ ಮುಸ್ಲಿಮರು ಪರಸ್ಪರ ಕರುಣೆ, ಅನುಕಂಪ, ಪ್ರೀತಿ ಉಳ್ಳವರೂ ಪರಸ್ಪರ ಕಷ್ಟಗಳಲ್ಲಿ ಪಾಲ್ಗೊಳ್ಳುವವರೂ ಆಗಿರುತ್ತಾರೆ". (ಬುಖಾರಿ, ಮುಸ್ಲಿಮ್)

13. ಗೆಳೆಯರನ್ನು ನಯ-ವಿನಯ ಮತ್ತು ಸಂತೋಷದಿಂದ ಭೇಟಿಯಾಗಿರಿ. ಗೌರವಾದರದೊಂದಿಗೆ ಹಸನ್ಮುಖಿಯಾಗಿ ಅವರನ್ನು ಸ್ವಾಗತಿಸಿರಿ. ಒಣಜಂಭ ಹಾಗೂ ಅಲಕ್ಷ್ಯ ತೋರದಿರಿ. ಇವು ಮನಸ್ಸನ್ನು ಮುರಿಯುವ ಕೆಡುಕುಗಳಾಗಿವೆ. ಭೇಟಿಯ ವೇಳೆ ಸದಾ ಸಂತೃಪ್ತಿ, ಸಂತೋಷ ಮತ್ತು ಕೃತಜ್ಞತೆಯನ್ನು ಪ್ರಕಟಿಸಿರಿ. ನಿರಾಶೆ ಹಾಗೂ ದುಃಖದ ಮಾತನ್ನು ಎತ್ತಬೇಡಿ. ನಿಮ್ಮನ್ನು ಕಂಡು ಗೆಳೆಯನಲ್ಲಿ ಸಂತೋಷ ಮತ್ತು ಚೈತನ್ಯ ಮೂಡು ವಂತಾಗಬೇಕು. ಸಪ್ಪೆ ಮೋರೆಯೊಂದಿಗೆ ಭೇಟಿಯಾಗದಿರಿ. ಅನ್ಯಥಾ ನಿಮ್ಮ ಭೇಟಿಯನ್ನು ಅವನು ಒಂದು ಹೊರೆಯಾಗಿ ಭಾವಿಸುವನು.

ಪ್ರವಾದಿ(ಸ) ಹೀಗೆ ಆದೇಶಿಸಿರುವರು: "ಯಾವ ಪುಣ್ಯವನ್ನೂ ಕಡೆಗಣಿಸದಿರಿ. ನೀವು ನಿಮ್ಮ ಸೋದರನನ್ನು ನಗುಮುಖದಿಂದ ಭೇಟಿಯಾಗುವುದಾದರೂ ಸರಿಯೇ". (ಮುಸ್ಲಿಮ್)

ಮತ್ತೊಂದು ಸಂದರ್ಭದಲ್ಲಿ ಪ್ರವಾದಿ(ಸ) ಹೀಗೆ ಹೇಳಿರುವರು: "ನಿಮ್ಮ ಸೋದರನನ್ನು ಕಂಡಾಗ ನೀವು ನಗುಮುಖದಿಂದಿರುವುದೂ ಒಂದು ದಾನವಾಗಿದೆ". (ತಿರ್ಮಿದಿ)

ನಯ-ವಿನಯ ಹಾಗೂ ಸದಾಚಾರಗಳಿಂದಲೇ ಮನಸ್ಸಿನಲ್ಲಿ ಪ್ರೇಮ ಉಂಟಾಗುತ್ತದೆ. ಈ ಗುಣಗಳಿಂದಲೇ ಒಂದು ಉತ್ತಮ ಸಮಾಜ ಅಸ್ತಿತ್ವಕ್ಕೆ ಬರುತ್ತದೆ.

ಪ್ರವಾದಿ(ಸ) ಹೀಗೆ ಹೇಳಿರುವರು: "ನರಕದ ಅಗ್ನಿಯು ಯಾವನ ಮೇಲೆ ನಿಷಿದ್ಧವೋ ಮತ್ತು ಯಾವನು ನರಕಾಗ್ನಿಗೆ ನಿಷೇಧಿಸಲ್ಪಟ್ಟಿರುವನೋ ಅವನ ಪರಿಚಯ ಹೇಳುತ್ತೇನೆ. ಅವನು ನಡೆನುಡಿಗಳಲ್ಲಿ ನಯ ವಿನಯವನ್ನು ಪಾಲಿಸುವ ವ್ಯಕ್ತಿ." (ತಿರ್ಮಿದಿ)

ಸಹಾಬಿಗಳು(ರ) ಹೇಳುತ್ತಾರೆ: ಪ್ರವಾದಿ(ಸ) ಯಾರನ್ನಾದರೂ ಭೇಟಿಯಾಗುವಾಗ ಪೂರ್ಣ ಲಕ್ಷ್ಯವಿಟ್ಟು ಭೇಟಿಯಾಗುತ್ತಿದ್ದರು. ಯಾರಾದರೂ ಪ್ರವಾದಿವರ್ಯರೊಂದಿಗೆ(ಸ) ಮಾತನಾಡುವಾಗ ಪೂರ್ಣ ಲಕ್ಷ್ಯವಿಟ್ಟು ಅವನ ಮಾತನ್ನು ಆಲಿಸುತ್ತಿದ್ದರು.

ಒಮ್ಮೆ ಪ್ರವಾದಿ(ಸ) ಮಸೀದಿಯಲ್ಲಿ ಕುಳಿತಿದ್ದಾಗ ಓರ್ವ ವ್ಯಕ್ತಿ ಬಂದರು. ಪ್ರವಾದಿ(ಸ) ಸ್ವಲ್ಪ ಸರಿದು ಅವರಿಗೆ ಇನ್ನಷ್ಟು ಜಾಗ ಮಾಡಿ ಕೊಟ್ಟರು. ಸ್ಥಳವು ವಿಶಾಲವಾಗಿದೆಯಲ್ಲವೇ? ಎಂದು ಈ ವ್ಯಕ್ತಿ ಕೇಳಿದರು. ಆಗ ಪ್ರವಾದಿ(ಸ) ಹೇಳಿದರು: "ತನ್ನ ಸಹೋದರನೊಬ್ಬನು

ಬರುವಾಗ ತನ್ನ ಸ್ಥಾನದಿಂದ ಸ್ವಲ್ಪ ಸರಿಯುವುದು ಮುಸ್ಲಿಮನ ಹಕ್ಕಾಗಿದೆ." (ಬೈಹಕಿ)

ಸತ್ಯವಿಶ್ವಾಸಿಗಳ ಗುಣಗಾನ ಮಾಡುತ್ತಾ ಕುರ್‌ಆನ್ ಈ ರೀತಿ ಹೇಳಿದೆ:

أَذِلَّةٍ عَلَى الْمُؤْمِنِينَ

"ಅವರು ಸತ್ಯವಿಶ್ವಾಸಿಗಳ ಮಟ್ಟಿಗೆ ಬಹಳ ವಿನಮ್ರರಾಗಿರುತ್ತಾರೆ".

(ಪವಿತ್ರ ಕುರ್‌ಆನ್, 5:54)

ಪ್ರವಾದಿ(ಸ) ಈ ವಾಸ್ತವಿಕತೆಯನ್ನು ಈ ರೀತಿ ಸ್ಪಷ್ಟಪಡಿಸಿರುವರು: "ಸತ್ಯವಿಶ್ವಾಸಿಗಳು ವಿನಮ್ರರೂ ಸಹನಶೀಲರೂ ಕೋಮಲ ಹೃದಯದವರೂ ಆಗಿರುತ್ತಾರೆ. ಮೂಗಿಗೆ ಲಗಾಮು ಹಾಕಲ್ಪಟ್ಟ ಒಂಟೆಯಂತೆ ಅದನ್ನು ಎಳೆದರೆ ಅದು ಎಳೆಯುತ್ತಾ ಸಾಗುತ್ತದೆ. ಒಂದು ಬಂಡೆಯ ಮೇಲೆ ಅದನ್ನು ಕುಳ್ಳಿರಿಸಿದರೆ ಅದು ಕೂತು ಬಿಡುತ್ತದೆ". (ತಿರ್ಮಿದಿ)

14. ಯಾವುದಾದರೂ ವಿಷಯದ ಬಗ್ಗೆ ಎಂದಾದರೂ ಜಗಳ ಉಂಟಾದರೆ ಕೂಡಲೇ ಅದನ್ನು ಪರಿಹರಿಸಿರಿ. ಕ್ಷಮಾಯಾಚನೆಯಲ್ಲಿ ಹಾಗೂ ತಪ್ಪೊಪ್ಪಿಗೆಯಲ್ಲಿ ಸದಾ ಮುಂದಾಗಿರಿ.

ಒಮ್ಮೆ ಯಾವುದೋ ವಿಷಯದ ಬಗ್ಗೆ ಹ. ಅಬೂಬಕರ್ ಮತ್ತು ಹ. ಉಮರ್‌ರ(ರ) ಮಧ್ಯೆ ಮಾತಿಗೆ ಮಾತು ಬೆಳೆಯಿತು. ಅನಂತರ ಹ. ಅಬೂಬಕರ್‌ರವರಿಗೆ(ರ) ಇದರ ಬಗ್ಗೆ ಬಹಳ ಚಿಂತೆಯಾಯಿತು. ಅವರು ಬಹಳ ದುಃಖಿತರಾಗಿ ಪ್ರವಾದಿವರ್ಯರ(ಸ) ಬಳಿಗೆ ತಲುಪಿದರು. "ನನ್ನ ಮತ್ತು ಉಮರ್‌ರ(ರ) ಮಧ್ಯೆ ಭಿನ್ನಾಭಿಪ್ರಾಯ ಉಂಟಾಗಿತ್ತು. ನನಗೆ ಕೋಪ ಬಂದಿತ್ತು. ನಾನು ಕೆಲವು ಕಠಿಣ ಮಾತುಗಳನ್ನಾಡಿದೆ. ಆ ಬಳಿಕ ನನಗೆ ಬಹಳ ಬೇಸರ ವಾಯಿತು. ನಾನು ಉಮರ್‌ರ(ರ) ಬಳಿ ಕ್ಷಮೆ ಯಾಚಿಸಿದೆ. ಆದರೆ ಪ್ರವಾದಿ ವರ್ಯರೇ! ಅವರು ನನ್ನನ್ನು ಕ್ಷಮಿಸಲು ಸಿದ್ಧರಿಲ್ಲ. ನಾನು ಚಿಂತೆಗೀಡಾಗಿ ತಮ್ಮ ಬಳಿ ಬಂದಿರುವೆನು" ಎಂದು ಪ್ರವಾದಿವರ್ಯರಲ್ಲಿ(ಸ) ಅರಿಕೆ ಮಾಡಿಕೊಂಡಾಗ ಪ್ರವಾದಿ(ಸ) ಹೀಗೆಂದರು: "ನಿಮ್ಮನ್ನು ಅಲ್ಲಾಹನು ಕ್ಷಮಿಸುವನು". ಅತ್ತ ಹ. ಉಮರ್‌ರಿಗೂ(ರ) ತಮ್ಮ ತಪ್ಪಿನ ಅರಿವಾಯಿತು. ಅವರು ಹ. ಅಬೂಬಕರ್‌ರ(ರ) ಮನೆಗೆ ಓಡೋಡಿ ಬಂದರು. ಅಲ್ಲಿಂದ ಅವರು ಪ್ರವಾದಿವರ್ಯರ(ಸ) ಬಳಿಗೆ ಹೋಗಿರುವುದನ್ನು ತಿಳಿದು ಅಲ್ಲಿಗೆ ಧಾವಿಸಿದರು. ಹ. ಉಮರ್(ರ) ಅವರನ್ನು ಕಂಡಾಗ ಪ್ರವಾದಿ(ಸ) ಕುಪಿತರಾಗಿರುವಂತೆ ಭಾಸವಾಯಿತು. ಇದನ್ನು ಕಂಡು ಹ. ಅಬೂಬಕರ್(ರ) ಗಾಬರಿಗೊಂಡು ಪ್ರವಾದಿವರ್ಯರಲ್ಲಿ(ಸ) ವಿನಮ್ರತೆಯೊಂದಿಗೆ ಹೀಗೆ ಅರಿಕೆ ಮಾಡಿದರು. "ಓ ಪ್ರವಾದಿವರ್ಯರೇ! ಉಮರ್‌ರದೇನೂ(ರ) ತಪ್ಪಿಲ್ಲ. ತಪ್ಪು ನನ್ನದೇ. ನಾನೇ ಅತಿಕ್ರಮವೆಸಗಿದೆ. ನಾನೇ ಅವರ ಮೇಲೆ ರೇಗಿದೆ".

ಇದನ್ನು ಕಂಡು ಪ್ರವಾದಿ(ಸ) ಹೀಗೆಂದರು: "ದೇವನು ನನ್ನನ್ನು ನಿಮ್ಮ ಬಳಿಗೆ ಪ್ರವಾದಿ ಯಾಗಿ ನಿಯೋಗಿಸಿದನು. ಆರಂಭದಲ್ಲಿ ನೀವೆಲ್ಲರೂ ನನ್ನನ್ನು ನಿರಾಕರಿಸುತ್ತಿದ್ದಾಗ ಅಬೂಬಕರ್(ರ) ನನ್ನ ಪ್ರವಾದಿತ್ವವನ್ನು ಅಂಗೀಕರಿಸಿದರು. ತನುಮನಧನದಿಂದ ನನಗೆ ನೆರವಾದರು. ನೀವು ನನ್ನ ಸಂಗಾತಿಯನ್ನು ದುಃಖಕ್ಕೀಡು ಮಾಡುವುದೇ?"

ಜಗಳ ತೀರಿಸುವ ಪ್ರಯತ್ನದಲ್ಲಿ ಎಂದೂ ವಿಳಂಬ ಮಾಡದಿರಿ. ತಡವಾದಷ್ಟು ಕೆಡುಕು ಸುದೃಢವಾಗುತ್ತವೆ. ಮನಸ್ಸುಗಳ ಮಧ್ಯೆ ಅಂತರ ಹೆಚ್ಚುತ್ತಿರುತ್ತದೆ. ಹ. ಈಸಾರ(ಅ) ಒಂದು ಉಪದೇಶವು ಬಹಳ ಪ್ರಭಾವಶಾಲಿಯಾಗಿದೆ: "ಬಲಿಪೀಠದಲ್ಲಿ ನಿನ್ನ ಹರಕೆಯನ್ನು ಬಲಿ ನೀಡುತ್ತಿರುವ ಸಮಯದಲ್ಲಿ ನಿನ್ನ ಸೋದರನ ಬಗ್ಗೆ ಇರುವ ಆಕ್ಷೇಪದ ನೆನಪು ಬಂದಾಗ ಬಲಿಯನ್ನು ಅಲ್ಲೇ ಬಿಟ್ಟು ನಿನ್ನ ಸೋದರನ ಜೊತೆ ಸಂಧಾನ ಮಾಡಿಕೋ. ಆ ಬಳಿಕ ಬಂದು ನಿನ್ನ ಹರಕೆ ಪೂರೈಸು".

ಪ್ರವಾದಿ(ಸ) ಹೀಗೆ ಹೇಳಿರುವರು: ವಾರಕ್ಕೆರಡು ದಿನ ಪ್ರತಿ ಸೋಮವಾರ ಮತ್ತು ಗುರು ವಾರ ಜನರ ಕರ್ಮಗಳು ದೇವನ ಮುಂದೆ ಸಮರ್ಪಿಸಲ್ಪಡುತ್ತವೆ. ಯಾರ ಮನದಲ್ಲಿ ತನ್ನ ಸತ್ಯವಿಶ್ವಾಸಿ ಸಹೋದರನ ಬಗ್ಗೆ ದ್ವೇಷವಿರುವುದೋ ಅವರನ್ನು ಬಿಟ್ಟು ಉಳಿದ ಎಲ್ಲ ಸತ್ಯವಿಶ್ವಾಸಿಗಳನ್ನು ಕ್ಷಮಿಸಲಾಗುವುದು. ಇವರನ್ನು ಪರಸ್ಪರ ಸಂಧಾನ ಮಾಡಿಕೊಳ್ಳಲು ಬಿಟ್ಟುಬಿಡಿರಿ" ಎಂದು ಹೇಳಲಾಗುತ್ತದೆ.

ಮುಂದಿನ ಕ್ಷಣ ಜೀವನವೋ ಮರಣವೋ ಎಂದು ಯಾರಿಗೆ ಗೊತ್ತು. ಸೋಮವಾರ ಅಥವಾ ಗುರುವಾರ ತನಕ ಜೀವನ ಇರುತ್ತದೋ ಇಲ್ಲವೋ ಎಂಬುದು ಯಾರಿಗೆ ಖಾತ್ರಿ ಇದೆ. ಮತ್ತೆ ಗೆಳೆಯರ ಮಧ್ಯೆ ಇರುವ ಮನಃಸ್ತಾಪವನ್ನು ದೂರೀಕರಿಸಲು ಹಾಗೂ ಆಕ್ಷೇಪ ವನ್ನು ಹೋಗಲಾಡಿಸಲು ತಡವೇಕೆ? ತಡ ಮಾಡುವುದಾದರೂ ಯಾವ ಭರವಸೆಯ ಮೇಲೆ. ಪರಲೋಕದ ಮೇಲೆ ವಿಶ್ವಾಸವಿರುವ ಪ್ರಜ್ಞಾವಂತ ವ್ಯಕ್ತಿ ಕಾಪಟ್ಯ ತುಂಬಿದ, ಅಂಧಕಾರಭರಿತ ಮನಸ್ಸಿನೊಂದಿಗೆ ದೇವಸನ್ನಿಧಿಯಲ್ಲಿ ಹಾಜರಾಗಲು ಸಿದ್ಧನಾಗುವನೇ?

ಪ್ರವಾದಿ(ಸ) ಈ ರೀತಿ ಹೇಳಿರುವರು: "ಓರ್ವನು ತನ್ನ ಮುಸ್ಲಿಮ್ ಸಹೋದರನ ಬಳಿ ತನ್ನ ತಪ್ಪು ಒಪ್ಪಿಕೊಂಡಾಗ ಅವನನ್ನು ಕ್ಷಮಿಸದಿದ್ದರೆ ಅನ್ಯಾಯವಾಗಿ ಕರ ವಸೂಲಿ ಮಾಡುವವನಿಗೆ ಅವನ ಅಕ್ರಮಕ್ಕೆ ಆಗುವಷ್ಟು ಪಾಪವೇ ಅವನಿಗೂ ಆಗುತ್ತದೆ".

15. ಗೆಳೆಯನ ಕಡೆಯಿಂದ ನಿಮಗೆ ಅರೋಚಕವಾದ ಮಾತು ಬಂದರೂ ನಿಮ್ಮ ನಾಲಗೆ ಯನ್ನು ಹತೋಟಿಯಲ್ಲಿಡಿರಿ. ನೀವು ಕೆಟ್ಟ ಮಾತು ಆಡದಿರಿ. ವಿವೇಕ ಮತ್ತು ವಿನಯದೊಂದಿಗೆ ಆ ಮಾತನ್ನು ಕಡೆಗಣಿಸಿರಿ.

ಪ್ರವಾದಿ(ಸ) ಹೇಳುತ್ತಾರೆ: "ಪ್ರಭೂ! ನಿನ್ನ ಬಳಿ ನಿನ್ನ ದಾಸರ ಪೈಕಿ ಯಾರು ಹೆಚ್ಚು ಪ್ರಿಯರು" ಎಂದು ಹ. ಮೂಸಾ(ಅ) ಅಲ್ಲಾಹನನ್ನು ಕೇಳಿದಾಗ "ಪ್ರತೀಕಾರದ ಶಕ್ತಿ ಇದ್ದೂ ಕ್ಷಮಿಸುವವನು" ಎಂದು ಅಲ್ಲಾಹನು ಉತ್ತರಿಸಿದನು. (ಮಿಷ್ಕಾತ್)

ಪ್ರವಾದಿ(ಸ) ಹೀಗೂ ಹೇಳಿರುವರು: "ಸತ್ಯವಿಶ್ವಾಸಿಯ ತಕ್ಕಡಿಯಲ್ಲಿ ನಿರ್ಣಾಯಕ ದಿನದಂದು ಇಡಲ್ಪಡುವ ಕರ್ಮಗಳ ಪೈಕಿ ಅತ್ಯಂತ ಭಾರವಾದುದು ಅವನ ಸದಾಚಾರವಾಗಿರು ವುದು. ನಾಲಗೆಯಿಂದ ಅಶ್ಲೀಲ ಮತ್ತು ಅವಾಚ್ಯ ಶಬ್ದಗಳನ್ನು ಹೇಳುವವನು ದೇವನಿಗೆ ಅತ್ಯಂತ ಅಪ್ರಿಯನಾಗಿರುವನು".

ಹ. ಅಬ್ದುಲ್ಲಾ ಬಿನ್ ಮುಬಾರಕ್ ಸದಾಚಾರವನ್ನು ಮೂರು ವಿಷಯಗಳಾಗಿ ವಿವರಿಸಿರುವರು:

i) ಯಾರನ್ನಾದರೂ ಭೇಟಿಯಾಗುವಾಗ ನಗುಮುಖದೊಂದಿಗೆ ಭೇಟಿಯಾಗುವುದು.

ii) ನಿರ್ಗತಿಕರಿಗೂ ಬಡವರಿಗೂ ಖರ್ಚು ಮಾಡುವುದು.

iii) ಯಾರಿಗೂ ತೊಂದರೆ ಕೊಡದಿರುವುದು.

ಹ. ಆಯಿಶಾ(ರ) ಹೇಳುತ್ತಾರೆ: "ಅಶ್ಲೀಲ ಮತ್ತು ಅವಾಚ್ಯ ಮಾತುಗಳಿಂದಾಗಿ ಜನರು ಭೇಟಿಯಾಗುವುದನ್ನೇ ಬಿಟ್ಟು ಬಿಡುವಂತಹ ಮನುಷ್ಯನು ನಿರ್ಣಾಯಕ ದಿನದಂದು ಅಲ್ಲಾಹನ ದೃಷ್ಟಿಯಲ್ಲಿ ಅತ್ಯಂತ ನೀಚ ವ್ಯಕ್ತಿಯಾಗಿರುವನು ಎಂದು ಪ್ರವಾದಿ(ಸ) ಹೇಳಿರುವರು".

(ಬುಖಾರಿ, ಮುಸ್ಲಿಮ್)

16. ನಿಮ್ಮ ಗೆಳೆಯರ ತರಬೇತಿ ಮತ್ತು ಸುಧಾರಣೆಯಲ್ಲಿ ಎಂದೂ ಅಲಕ್ಷ್ಯರಾಗದಿರಿ. ಹೆಮ್ಮೆ ಮತ್ತು ಅಹಂಭಾವ ಅವರಲ್ಲಿ ಬೆಳೆಯದಂತೆ ನೋಡಿಕೊಳ್ಳಿರಿ. ಅದು ತರಬೇತಿಯ ಹಾದಿಯಲ್ಲಿ ಅತಿದೊಡ್ಡ ತೊಡಕಾಗಿದೆ. ತಮ್ಮ ತಪ್ಪುಗಳನ್ನು ತಾವೇ ತಿಳಿಯುವಂತೆ ಸ್ನೇಹಿತರನ್ನು ಪ್ರೋತ್ಸಾಹಿಸಿರಿ. ನಿಮ್ಮ ತಪ್ಪುಗಳನ್ನು ಧೈರ್ಯದಿಂದ ಒಪ್ಪಿಕೊಳ್ಳಿರಿ. ತಪ್ಪುಗಳನ್ನು ತಿಳಿಯದೆ ಇದ್ದರೆ ಮತ್ತು ತಪ್ಪುಗಳನ್ನು ಸಮರ್ಥಿಸುತ್ತಾ ಹೋದರೆ ನಿಮ್ಮ 'ಅಹಂ' ಇನ್ನಷ್ಟು ಬೆಳೆಯುತ್ತದೆಂಬ ವಾಸ್ತವಿಕತೆಯನ್ನು ಅರಿಯಿರಿ.

ತೋರಿಕೆಗೆ ವಿನಮ್ರನಾಗುವುದು, ಮಾತಿನಲ್ಲಿ ತನ್ನನ್ನು ಕೀಳಾಗಿ ಹೇಳುವುದು, ನಡೆನುಡಿಗಳಲ್ಲಿ ದೈನ್ಯತೆ ಪ್ರದರ್ಶಿಸುವುದು ಸುಲಭ. ಆದರೆ ತನ್ನ ಮನಸ್ಸಿಗೆ ಆಗುವ ಆಘಾತವನ್ನು ಸಹಿಸುವುದು, ತನ್ನ ತಪ್ಪುಗಳನ್ನು ಶಾಂತಚಿತ್ತದಿಂದ ಕೇಳುವುದು ಮತ್ತು ಒಪ್ಪಿಕೊಳ್ಳುವುದು, ತನ್ನ ವಿರುದ್ಧ ಮಿತ್ರರ ವಿಮರ್ಶೆಗಳನ್ನು ಸಹಿಸುವುದು ಬಹಳ ಕಷ್ಟದ ಕಾರ್ಯ. ಆದರೆ ಜಾಗ್ರತೆಯಿಂದ ಪರಸ್ಪರರ ಜೀವನವನ್ನು ಅವಲೋಕಿಸುತ್ತಿದ್ದು ಸುಧಾರಣೆಗೆ ಪ್ರಯತ್ನಿಸುವುದು ಮತ್ತು ಅಹಂಭಾವದಿಂದ ರಕ್ಷಿಸುವುದು ನೈಜ ಗೆಳೆಯನ ಲಕ್ಷಣವಾಗಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು, ಮೂರು ವಿಷಯ ವಿನಾಶಕಾರಿಗಳಾಗಿವೆ: i) ಜನರು ತನ್ನ ಅಧೀನ ದಾಸರಾಗಿರಬೇಕೆಂಬ ಬಯಕೆ. ii) ಜೀವನವನ್ನೇ ನಿಯಂತ್ರಿಸುವಂತಹ ಅತಿ ಆಸೆ. iii) ಅಹಂಭಾವ. ಇದು ಈ ಮೂರರ ಪೈಕಿ ಅತ್ಯಧಿಕ ಅಪಾಯಕಾರಿ.

(ಬೈಹಕಿ, ಮಿಷ್ಕಾತ್)

ವಿಮರ್ಶೆ ಮತ್ತು ಅವಲೋಕನವು ನೈತಿಕ ಜೀವನದ ಎಲ್ಲ ಕೆಡುಕುಗಳನ್ನು ಹೊರ ಹಾಕುವ ಸಾಧನ. ಇದು ನೈತಿಕ ಶಕ್ತಿಗಳನ್ನು ಬಲಪಡಿಸಿ ವ್ಯಕ್ತಿ ಮತ್ತು ಸಮಾಜದ ಜೀವನದಲ್ಲಿ ಹೊಸ ಸ್ಫೂರ್ತಿಯನ್ನು ಮೂಡಿಸುತ್ತದೆ. ಗೆಳೆಯರ ವಿಮರ್ಶೆಗಳ ಬಗ್ಗೆ ರೇಗುವುದು, ಹುಬ್ಬೇರಿಸುವುದು ಮತ್ತು ತಿರಸ್ಕಾರ ಭಾವ ತಾಳುವುದು ಕೂಡ ವಿನಾಶಕಾರಿಯಾಗಿದೆ. ಗೆಳೆಯರ ವಿಮರ್ಶೆ ಮಾಡದಿರುವುದೂ ಅಷ್ಟೆ. ಗೆಳೆಯರಲ್ಲಿ ಕುಂದು ಕೊರತೆಗಳನ್ನು ಕಂಡಾಗ ವಿವೇಕದಿಂದ ಅವುಗಳನ್ನು ದೂರೀಕರಿಸಲು ಶ್ರಮಿಸಿರಿ. ನಿಮ್ಮ ಕುಂದುಕೊರತೆಗಳನ್ನು ತೋರಿಸಿ

ಕೊಡಲು ನಿಮ್ಮ ಮಿತ್ರರಿಗೆ ಅವಕಾಶ ಕೊಡಿರಿ. ಅವರು ಹಾಗೆ ಮಾಡಿದಾಗ ರೇಗುವ ಬದಲು ವಿಶಾಲ ಹೃದಯದೊಂದಿಗೆ ಅದನ್ನು ಸ್ವಾಗತಿಸಿರಿ. ಅವರಿಗೆ ಕೃತಜ್ಞತೆ ಅರ್ಪಿಸಿರಿ. ಆದರ್ಶಪ್ರಾಯ ವಾದ ಇಂತಹ ಮಿತ್ರತ್ವವನ್ನು ಪ್ರವಾದಿ(ಸ) ಒಂದು ಉದಾಹರಣೆಯಲ್ಲಿ ಈ ರೀತಿ ಸ್ಪಷ್ಟ ಪಡಿಸಿರುವರು: "ನಿಮ್ಮಲ್ಲಿ ಪ್ರತಿಯೊಬ್ಬನೂ ತನ್ನ ಸಹೋದರನ ಕನ್ನಡಿಯಾಗಿರುವನು. ಅವನು ತನ್ನ ಸಹೋದರನಲ್ಲಿ ಏನಾದರೂ ಕುಂದು ಕೊರತೆ ಕಂಡರೆ ಅದನ್ನು ದೂರೀಕರಿಸಲಿ". (ತಿರ್ಮಿದಿ)

ಈ ಉದಾಹರಣೆಯಲ್ಲಿ ಐದು ಸ್ಪಷ್ಟ ಆದೇಶಗಳು ಸಿಗುತ್ತವೆ. ಅವುಗಳ ಆಧಾರದಲ್ಲಿ ನೀವು ನಿಮ್ಮ ಮಿತ್ರತ್ವವನ್ನು ಆದರ್ಶಪ್ರಾಯವಾಗಿ ಮಾಡಬಹುದಾಗಿದೆ.

i) ನೀವು ನಿಮ್ಮಲ್ಲಿರುವ ಕುಂದು ಕೊರತೆಗಳನ್ನು ನೋಡುವ ಇರಾದೆಯಿಂದ ಕನ್ನಡಿಯ ಮುಂದೆ ನಿಂತಾಗ ಮಾತ್ರ ಅದು ನಿಮಗೆ ನಿಮ್ಮ ಕುಂದು ಕೊರತೆಯನ್ನು ತೋರಿಸುತ್ತದೆ. ನೀವು ಅದರ ಮುಂದಿನಿಂದ ಸರಿದಾಗ ಅದು ಸಂಪೂರ್ಣ ಮೌನ ತಾಳುತ್ತದೆ.

ಹೀಗೆಯೇ ನೀವೂ ನಿಮ್ಮ ಮಿತ್ರನು ಅದಕ್ಕೆ ಅವಕಾಶ ಕೊಟ್ಟಾಗಲೇ ಅವನ ಕೊರತೆಗಳನ್ನು ಅವನ ಮುಂದಿಡಿರಿ. ಅವನು ನಿಮ್ಮ ವಿಮರ್ಶೆಯನ್ನು ಕೇಳುವ ಮತ್ತು ಅದರಂತೆ ಸುಧಾರಣೆ ಮಾಡಿಕೊಳ್ಳುವ ಪರಿಸ್ಥಿತಿಯಲ್ಲಿದ್ದಾನೆ ಎಂದು ಖಾತ್ರಿಯಾದಾಗ ಮಾತ್ರ ವಿಮರ್ಶೆ ಮಾಡಬೇಕು. ಅವನು ಈ ಪರಿಸ್ಥಿತಿಯಲ್ಲಿ ಇಲ್ಲದಿದ್ದರೆ ವಿವೇಕದಿಂದ ನಿಮ್ಮ ವಿಮರ್ಶೆಯನ್ನು ಇನ್ನೊಂದು ಸಂದರ್ಭಕ್ಕಾಗಿ ಕಾದಿರಿಸಿರಿ. ಅವನ ಅನುಪಸ್ಥಿತಿಯಲ್ಲಿ ಅವನ ಕುಂದುಕೊರತೆಗಳ ಪ್ರಸ್ತಾಪವೂ ನಿಮ್ಮ ಬಾಯಿಯಿಂದ ಹೊರಡಬಾರದು. ಏಕೆಂದರೆ ಇದು ಪರನಿಂದೆ ಎನಿಸುತ್ತದೆ. ಪರನಿಂದೆಯಿಂದ ಮನಸ್ಸುಗಳು ಪರಸ್ಪರ ಬೆಸೆಯುವ ಬದಲು ಹೋಳಾಗುತ್ತವೆ.

ii) ಕನ್ನಡಿಯು ನಿಮ್ಮ ಮುಖದಲ್ಲಿ ನಿಜವಾಗಿ ಇರುವ ಕಲೆಗಳನ್ನು ಸ್ಪಷ್ಟವಾಗಿ ತೋರಿಸುತ್ತದೆ. ಅದರಲ್ಲಿ ಯಾವುದೇ ಹೆಚ್ಚು ಕಡಿಮೆ ಮಾಡುವುದಿಲ್ಲ. ಕನ್ನಡಿಗೆ ಅಭಿಮುಖ ವಾದ ಭಾಗಗಳನ್ನು ಮಾತ್ರ ಕನ್ನಡಿ ತೋರಿಸುತ್ತದೆ. ಅಡಗಿರುವ ಕುಂದು ಕೊರತೆಗಳನ್ನು ಅದು ಶೋಧಿಸುವುದಿಲ್ಲ. ಇಲ್ಲಸಲ್ಲದ ಕುಂದು ಕೊರತೆಗಳನ್ನು ಸೃಷ್ಟಿಸಿ ತೋರಿಸುವುದೂ ಇಲ್ಲ. ಹೀಗೆಯೇ ನೀವು ನಿಮ್ಮ ಮಿತ್ರರ ಕುಂದು ಕೊರತೆಗಳನ್ನು ಹೆಚ್ಚು ಕಡಿಮೆ ಮಾಡದೆ ತೋರಿಸಿ ಕೊಡಿ. ಸಂಕೋಚದಿಂದಾಗಿ ಅದನ್ನು ಅಡಗಿಸಬೇಡಿರಿ. ಅಂತೆಯೇ ನಿಮ್ಮ ವಾಕ್‌ಚಾತುರ್ಯದಿಂದ ಅದನ್ನು ದೊಡ್ಡದು ಮಾಡಿ ತೋರಿಸಲೂ ಬೇಡಿರಿ. ಸಾಮಾನ್ಯವಾಗಿ ನಿಮ್ಮ ಮುಂದೆ ಬಂದ ಕುಂದು ಕೊರತೆಗಳನ್ನೇ ಹೇಳಿರಿ. ಕುಂದು ಕೊರತೆಗಳ ಅನ್ವೇಷಣೆ ಮಾಡದಿರಿ. ರಹಸ್ಯ ವಾಗಿರುವ ಕುಂದು ಕೊರತೆಗಳ ಶೋಧನೆ ಒಂದು ಸೇವೆಯಲ್ಲ. ಅದೊಂದು ವಿನಾಶಕಾರೀ ಮತ್ತು ಅನೈತಿಕ ಪ್ರವೃತ್ತಿಯಾಗಿದೆ.

ಒಮ್ಮೆ ಪ್ರವಾದಿ(ಸ) ವೇದಿಕೆಗೆ ಏರಿ ಉಚ್ಚ ಸ್ವರದಲ್ಲಿ ಸಭಿಕರನ್ನು ಹೀಗೆ ಎಚ್ಚರಿಸಿದರು:

"ಮುಸ್ಲಿಮರ ಕುಂದು ಕೊರತೆಗಳನ್ನು ಹುಡುಕಬೇಡಿರಿ. ಓರ್ವನು ತನ್ನ ಮುಸ್ಲಿಮ್ ಸಹೋದರನ ಗುಪ್ತ ಕುಂದುಕೊರತೆಗಳ ಹಿಂದೆ ಬಿದ್ದರೆ ಅಲ್ಲಾಹನು ಅವನ ಗುಪ್ತ ಕುಂದು

ಕೊರತೆಗಳನ್ನು ಬಹಿರಂಗಗೊಳಿಸುವನು. ಅಲ್ಲಾಹನು ಒಬ್ಬನ ಕುಂದು ಕೊರತೆಗಳನ್ನು ಬಹಿರಂಗಗೊಳಿಸ ತೊಡಗಿದನೆಂದರೆ ಅವನನ್ನು ನೀಚನಾಗಿಸಿ ಬಿಡುವನು. ಅವನು ತನ್ನ ಮನೆಯಲ್ಲಿ ಅಡಗಿ ಕುಳಿತರೂ ಸರಿಯೇ". (ತಿರ್ಮಿದಿ)

iii) ಕನ್ನಡಿಯು ಯಾವುದೇ ಸ್ವಾರ್ಥವಿಲ್ಲದೆ ತನ್ನ ಕರ್ತವ್ಯವನ್ನು ನೆರವೇರಿಸುತ್ತದೆ. ಅದರ ಮುಂದೆ ಮುಖ ಮಾಡುವವನ ನೈಜ ಪ್ರತಿಬಿಂಬವನ್ನು ನಿಸ್ವಾರ್ಥವಾಗಿ ಅವನ ಮುಂದಿಡುತ್ತದೆ. ಅದು ಯಾರ ಬಗ್ಗೆಯೂ ದ್ವೇಷ ಅಸೂಯೆಯ ಭಾವನೆ ಇರಿಸುವುದಿಲ್ಲ. ಯಾರಿಗೂ ಪ್ರತೀಕಾರ ಮಾಡುವುದಿಲ್ಲ. ನೀವು ಕೂಡ ಸ್ವಾರ್ಥ, ಪ್ರತೀಕಾರ ಮನೋಭಾವ, ದ್ವೇಷ, ಅಸೂಯೆ ಮತ್ತು ಎಲ್ಲ ವಿಧದ ಕೆಟ್ಟ ಭಾವನೆಗಳಿಂದ ಮುಕ್ತರಾಗಿ ಅವಲೋಕನ ನಡೆಸಿರಿ. ಒಬ್ಬನು ಕನ್ನಡಿಯನ್ನು ನೋಡಿ ತನ್ನ ಮುಖವನ್ನು ಸರಿಪಡಿಸಿಕೊಳ್ಳುವಂತೆ ನಿಮ್ಮ ಮಿತ್ರನೂ ಸರಿಪಡಿಸಿಕೊಳ್ಳಲಿ ಎಂಬ ಉದ್ದೇಶದಿಂದಲೇ ಈ ಕೆಲಸ ಮಾಡಿರಿ.

iv) ಕನ್ನಡಿಯಲ್ಲಿ ತನ್ನ ನೈಜ ಚಿತ್ರವನ್ನು ನೋಡಿ ಯಾರೂ ಉದ್ರೇಕಗೊಳ್ಳುವುದಿಲ್ಲ. ಕೋಪಗೊಂಡು ಕನ್ನಡಿಯನ್ನು ಒಡೆದು ಹಾಕುವುದೂ ಇಲ್ಲ. ಬದಲಾಗಿ ತನ್ನ ಕುಂದು ಕೊರತೆ ಗಳನ್ನು ನೀಗಿಸಲು ಪ್ರಯತ್ನಿಸುತ್ತಾನೆ. ಮನದಲ್ಲೇ ಕನ್ನಡಿಯ ಬಗ್ಗೆ ಕೃತಜ್ಞತಾಭಾವ ತಾಳು ತ್ತಾನೆ. ಅದನ್ನು ಜಾಗರೂಕತೆಯಿಂದ ಇಡುತ್ತಾನೆ. ಇದೇ ರೀತಿ ನಿಮ್ಮ ಗೆಳೆಯನು ತನ್ನ ಮಾತಿನ ಕನ್ನಡಿಯಲ್ಲಿ ನಿಮ್ಮ ಚಿತ್ರವನ್ನು ನಿಮ್ಮ ಮುಂದಿಟ್ಟಾಗ ನೀವು ಕೋಪಗೊಂಡು ಅವನ ಮೇಲೆ ಪ್ರತಿಧಾಳಿ ನಡೆಸಬೇಡಿರಿ. ಅವನು ಗೆಳೆತನದ ಹಕ್ಕನ್ನು ನಿಭಾಯಿಸಿದ್ದಕ್ಕಾಗಿ ಅವನಿಗೆ ಕೃತಜ್ಞರಾಗಿರಿ. ಕೇವಲ ನಾಲಗೆಯಿಂದಾಗಿರದೆ ಹೃದಯಂಗಮವಾಗಿ ಅವನಿಗೆ ಋಣಿ ಯಾಗುತ್ತಾ ತಕ್ಷಣ ಸುಧಾರಣಾ ಕಾರ್ಯವನ್ನು ಆರಂಭಿಸಿರಿ. ಮುಂದೆಯೂ ಇಂತಹ ಕುಂದು ಕೊರತೆಗಳನ್ನು ಕಂಡಾಗ ಸೂಚನೆ ನೀಡುವಂತೆ ಮಿತ್ರನನ್ನು ವಿನಂತಿಸಿರಿ.

v) ಕೊನೆಯದಾಗಿ ಮುಸ್ಲಿಮರ ಪೈಕಿ ಪ್ರತಿಯೊಬ್ಬನೂ ತನ್ನ ಸಹೋದರನ ಕನ್ನಡಿ ಯಾಗಿರುವನು. ಸೋದರನ ಮಟ್ಟಿಗೆ ನಿರ್ವಂಚನೆಯ ಮತ್ತು ನಿಷ್ಕಳಂಕ ಹಿತಾಕಾಂಕ್ಷಿಯಾಗಿ ರುತ್ತಾನೆ. ಸುಖ-ದುಃಖಗಳಲ್ಲಿ ಭಾಗಿಯಾಗುತ್ತಾನೆ. ಸೋದರನನ್ನು ಸಂತೋಷದಲ್ಲಿ ಕಂಡಾಗ ಹಿಗ್ಗುತ್ತಾನೆ. ದುಃಖದಲ್ಲಿ ಕಂಡಾಗ ಕುಗ್ಗುತ್ತಾನೆ. ತನ್ನ ಸೋದರನ ಬಗ್ಗೆ ಮಾಡುವ ಆತನ ವಿಮರ್ಶೆಯು ಹಿತಚಿಂತನೆ ಮತ್ತು ಅನುಕಂಪದಿಂದ ಕೂಡಿರುತ್ತದೆ. ಪ್ರೇಮ ಮತ್ತು ಪ್ರಾಮಾಣಿಕತೆಯಿಂದ ತುಂಬಿರುತ್ತದೆ. ಪ್ರತಿಯೊಂದು ಶಬ್ದವೂ ಸುಧಾರಣೆಯ ಭಾವನೆಯಿಂದ ಕೂಡಿರುತ್ತದೆ. ಇಂತಹ ವಿಮರ್ಶೆಗಳಿಂದಲೇ ಹೃದಯಗಳು ಬೆಸೆಯುತ್ತವೆ. ಅದು ಜೀವನಕ್ಕೆ ಹೊಸ ತಿರುವು ನೀಡುತ್ತದೆ.

17. ಮಿತ್ರರೊಂದಿಗೆ ನಿಮ್ಮ ಬಂಧುತ್ವ ಮತ್ತು ಪ್ರೇಮದ ಪ್ರಕಟನೆಗಾಗಿ ಹಾಗೂ ಅದರ ವರ್ಧನೆಗಾಗಿ ಪರಸ್ಪರ ಬಹುಮಾನ, ಉಡುಗೊರೆಗಳನ್ನು ಕೊಡುತ್ತಿರಿ. ಬಹುಮಾನಗಳನ್ನು ಕೊಡುತ್ತಿರುವುದರಿಂದ ಹೃದಯ ಬೆಸೆಯುತ್ತದೆ. ಪ್ರೇಮ ವರ್ಧಿಸುತ್ತದೆ. ಪ್ರವಾದಿ(ಸ) ಹೀಗೆ

ಹೇಳಿರುವರು: "ಒಬ್ಬರಿಗೊಬ್ಬರು ಉಡುಗೊರೆಗಳನ್ನು ಕೊಡುತ್ತಿರಿ. ಇದರಿಂದ ಪರಸ್ಪರ ಪ್ರೇಮ ಕುದುರುತ್ತದೆ. ಹೃದಯದ ದ್ವೇಷಾಸೂಯೆ ಮಾಯವಾಗುತ್ತದೆ". (ಮಿಷ್ಕಾತ್)

ಪ್ರವಾದಿ(ಸ) ತಮ್ಮ ಸಂಗಾತಿಗಳಿಗೆ ಆಗಾಗ ಉಡುಗೊರೆಗಳನ್ನು ನೀಡುತ್ತಿದ್ದರು. ಸಹಾಬಿವರ್ಯರು ಕೂಡ ಪರಸ್ಪರ ಕೊಡುಗೆಗಳ ವಿತರಣೆ ಹೆಚ್ಚೆಚ್ಚು ಮಾಡುತ್ತಿದ್ದರು.

ಉಡುಗೊರೆಯಾಗಿ ಕೊಡುವ ವಸ್ತು ಅಮೂಲ್ಯವಾಗಿರಬೇಕೆಂಬ ಭಾವನೆ ತಾಳಬೇಡಿರಿ. ನಿಮ್ಮ ಅಂತಸ್ತಿಗೆ ತಕ್ಕ ಉಡುಗೊರೆಯನ್ನೇ ಕೊಡಿರಿ. ನಿಮ್ಮಲ್ಲಿರುವುದನ್ನೇ ಕೊಡಿರಿ. ನಿಮ್ಮ ಹೃದಯದ ಭಾವನೆಯಿಂದಲೇ ನಿಮ್ಮ ಕೊಡುಗೆ ಅಮೂಲ್ಯವಾಗುತ್ತದೆ. ಆದ್ದರಿಂದ ಹೆಚ್ಚು ಪ್ರಾಮಾಣಿಕ ಮತ್ತು ನಿಷ್ಕಳಂಕ ಭಾವನೆಯೊಂದಿಗೆ ಬಹುಮಾನ ನೀಡಿರಿ. ಈ ಭಾವನೆಯು ಹೃದಯಗಳನ್ನು ಬೆಸೆಯುತ್ತದೆಯೇ ವಿನಾ ಉಡುಗೊರೆಯಾಗಿ ನೀಡಲ್ಪಟ್ಟ ವಸ್ತುವಿನ ಬೆಲೆಯಲ್ಲ. ಹಾಗೆಯೇ ನಿಮ್ಮ ಮಿತ್ರನ ಕೊಡುಗೆಯನ್ನು ಎಂದೂ ಕೀಳಾಗಿ ಕಾಣದಿರಿ. ಅವನು ನೀಡುವ ವಸ್ತುವಿನ ಮೌಲ್ಯಕ್ಕಿಂತಲೂ ಅವನ ಪ್ರೇಮ ಮತ್ತು ಪ್ರಾಮಾಣಿಕತೆಯನ್ನು ನೋಡಿರಿ.

"ಯಾರಾದರೂ ನನಗೆ ಬಹುಮಾನವಾಗಿ ಆಡಿನ ಒಂದು ಕಾಲನ್ನು ನೀಡಿದರೂ ನಾನು ಅದನ್ನು ಸ್ವೀಕರಿಸುವೆ. ಒಬ್ಬನು ನನ್ನನ್ನು ಕೇವಲ ಒಂದು ಆಡಿನ ಕಾಲಿನ ಸಾರಿಗಾಗಿ ಆಹ್ವಾನಿಸಿದರೆ ನಾನು ಆ ಆಹ್ವಾನವನ್ನು ಖಂಡಿತ ಸ್ವೀಕರಿಸುವೆನು" ಎಂದು ಪ್ರವಾದಿ(ಸ) ಹೇಳಿರುವರು. (ತಿರ್ಮಿದಿ)

ನಿಮ್ಮ ಮಿತ್ರನ ಉಡುಗೊರೆಗೆ ಪ್ರತಿಯಾಗಿ ನೀವೂ ಉಡುಗೊರೆ ನೀಡಿರಿ. ಪ್ರವಾದಿ(ಸ) ತಪ್ಪದೆ ಹಾಗೆ ಮಾಡುತ್ತಿದ್ದರು. ಪ್ರವಾದಿವರ್ಯರಿಗೆ(ಸ) ಪ್ರಿಯವಾದ ಉಡುಗೊರೆ ಸುಗಂಧ ದ್ರವ್ಯದ ಉಡುಗೊರೆಯಾಗಿತ್ತು. ನೀವೂ ಇದನ್ನೇ ಮೆಚ್ಚಿರಿ. ಇಂದಿನ ಪರಿಸ್ಥಿತಿಯಲ್ಲಿ ಪುಸ್ತಕವೂ ಒಂದು ಉತ್ತಮ ಕೊಡುಗೆ.

ಕೆಲವೊಮ್ಮೆ ಮಿತ್ರರೊಂದಿಗೆ ಸಹ ಭೋಜನದ ಏರ್ಪಾಡನ್ನೂ ಮಾಡಿರಿ. ಮಿತ್ರರನ್ನು ಊಟಕ್ಕೆ ನಿಮ್ಮಲ್ಲಿಗೆ ಆಮಂತ್ರಿಸಿರಿ. ಬಂಧುಮಿತ್ರರಲ್ಲಿ ಔತಣ ಕೂಟಗಳಾದಾಗ ಸಂತೋಷ ದಿಂದ ಅವುಗಳಲ್ಲಿ ಪಾಲ್ಗೊಳ್ಳಿರಿ. ಇದರಿಂದ ಪರಸ್ಪರ ಪ್ರೇಮ ಹೆಚ್ಚುತ್ತದೆ ಮತ್ತು ಸುದೃಢವಾಗು ತ್ತದೆ. ಆದರೆ ಇಂತಹ ಸಂದರ್ಭಗಳಲ್ಲಿ ಆಡಂಬರ ಮಾಡಬೇಡಿರಿ. ಅನ್ನ ಪಾನೀಯಗಳ ಆಧಿಕ್ಯ ತೋರಿಸುವುದಕ್ಕಿಂತ ಹೆಚ್ಚಾಗಿ ನಿಮ್ಮ ಪ್ರಾಮಾಣಿಕತೆ ಮತ್ತು ಪ್ರೇಮದ ಭಾವನೆಯನ್ನು ಹೆಚ್ಚಿಸುವತ್ತ ಗಮನ ಹರಿಸಿರಿ.

18. ಗೆಳೆಯರ ನೆರವಿಗೆ ತಲುಪಿರಿ. ಅಗತ್ಯ ಸಂದರ್ಭಗಳಲ್ಲಿ ಅವರಿಗೆ ಸಹಾಯ ಮಾಡಿರಿ. ತನು-ಮನ-ಧನದಿಂದ ಅವರ ಅಗತ್ಯವನ್ನು ಪೂರೈಸಲು ನೆರವಾಗಿರಿ. 'ಅಸ್‌ಬಹಾನಿ' ಯಲ್ಲಿ ಬಂದ ಒಂದು ವರದಿಯಂತೆ ಒಬ್ಬ ವ್ಯಕ್ತಿ ಹ. ಅಬ್ದುಲ್ಲಾ ಬಿನ್ ಉಮರ್‌ರ(ರ) ಬಳಿಗೆ ಬಂದು 'ಅಲ್ಲಾಹನ ಬಳಿ ಅತ್ಯಂತ ಪ್ರಿಯನು ಯಾರು?' ಎಂದು ಪ್ರಶ್ನಿಸಿದರು. ಅದಕ್ಕೆ ಅವರು ಈ ರೀತಿ ಉತ್ತರಿಸಿದರು: "ಎಲ್ಲ ಜನರ ಪೈಕಿ ಮನುಷ್ಯರಿಗೆ ಹೆಚ್ಚು ನೆರವಾಗುವವನೇ

ಅಲ್ಲಾಹನಿಗೆ ಅತ್ಯಂತ ಪ್ರಿಯನು. ಒಬ್ಬ ಮುಸ್ಲಿಮನನ್ನು ಸಂತೋಷಪಡಿಸುವ ಕಾರ್ಯವೇ ಅಲ್ಲಾಹನಿಗೆ ಅತ್ಯಂತ ಪ್ರಿಯವಾದ ಕಾರ್ಯ. ಅದು ಅವನ ಸಂಕಷ್ಟವನ್ನು ದೂರೀಕರಿಸುವ ಮೂಲಕ ಅಥವಾ ಅವನ ಹಸಿವು ನೀಗಿಸುವ ಮೂಲಕವಾಗಿರಬಹುದು. ಈ ಮಸೀದಿ (ಮಸ್ಜಿದುನ್ನಬವಿ)ಯಲ್ಲಿ ಇಅ್‌ತಿಕಾಫ್ (ತಪಶ್ಚರ್ಯೆ) ಮಾಡುವುದಕ್ಕಿಂತಲೂ ಒಬ್ಬ ಮುಸ್ಲಿಮ್ ಸಹೋದರನ ಅಗತ್ಯವನ್ನು ಪೂರೈಸಲು ಹೋಗುವುದು ನನಗೆ ಹೆಚ್ಚು ಪ್ರಿಯ. ತನ್ನ ಕೋಪ ವನ್ನು ತೀರಿಸುವ ಶಕ್ತಿ ಇದ್ದು ಕೂಡ ಅದನ್ನು ತಡೆ ಹಿಡಿದವನ ಹೃದಯವನ್ನು ಅಲ್ಲಾಹನು ನಿರ್ಣಾಯಕ ದಿನದಂದು ತನ್ನ ಸಂಪ್ರೀತಿಯಿಂದ ತುಂಬುವನು. ತನ್ನ ಸೋದರನೊಂದಿಗೆ ಅವನ ಯಾವುದೇ ಅಗತ್ಯವನ್ನು ಪೂರೈಸುವ ಸಲುವಾಗಿ ಹೋಗಿ ಅದನ್ನು ಪೂರೈಸಿದವನ ಪಾದಗಳಿಗೆ ಅಲ್ಲಾಹನು ಎಲ್ಲ ಪಾದಗಳೂ ಅಸ್ಥಿರವಾಗಿರುವ ದಿನದಂದು ಸ್ಥಿರತೆಯನ್ನು ದಯಪಾಲಿಸುವನು".

ಪ್ರವಾದಿ(ಸ) ಈ ರೀತಿ ಹೇಳಿರುವರು: "ಯಾವನು ತನ್ನ ಸೋದರನ ಅಗತ್ಯವನ್ನು ಪೂರೈಸುವನೋ ಅಲ್ಲಾಹನು ಅವನ ಅಗತ್ಯವನ್ನು ಪೂರೈಸಲು ತೊಡಗುವನು. ಯಾವನು ತನ್ನ ಮುಸ್ಲಿಮ್ ಸೋದರನ ಸಂಕಷ್ಟವನ್ನು ದೂರೀಕರಿಸುವನೋ ಅಲ್ಲಾಹನು ನಿರ್ಣಾಯಕ ದಿನದ ಯಾವುದಾದರೂ ಸಂಕಷ್ಟವನ್ನು ಅವನಿಂದ ನೀಗಿಸುವನು". (ಬುಖಾರಿ, ಮುಸ್ಲಿಮ್)

ಪ್ರವಾದಿ(ಸ) ಹೀಗೂ ಹೇಳಿರುವರು: "ಮನುಷ್ಯನು ತನ್ನ ಸೋದರನ ನೆರವಿನಲ್ಲಿ ನಿರತನಾಗಿರುವ ತನಕ ಅಲ್ಲಾಹನು ಅವನ ನೆರವಿನಲ್ಲಿ ನಿರತನಾಗಿರುತ್ತಾನೆ". (ತಿರ್ಮಿದಿ)

"ಓರ್ವ ಮುಸ್ಲಿಮನ ಅಗತ್ಯವನ್ನು ಪೂರೈಸುವ ಪುಣ್ಯವು ಹತ್ತು ವರ್ಷದ 'ಇಅ್‌ತಿಕಾಫ್' (ತಪಶ್ಚರ್ಯೆ)ಗಿಂತಲೂ ಹೆಚ್ಚಾಗಿದೆ" ಎಂದು ಪ್ರವಾದಿ(ಸ) ಹೇಳಿರುವುದಾಗಿ ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ) ವರದಿ ಮಾಡಿರುವರು. (ತಬ್ರಾನಿ)

ಹ. ಅನಸ್(ರ) ಹೇಳುತ್ತಾರೆ. ಪ್ರವಾದಿ(ಸ) ಈ ರೀತಿ ಹೇಳಿರುವರು: ಯಾವನು ತನ್ನ ಮುಸ್ಲಿಮ್ ಸೋದರನ ಬಳಿ ಯಾವುದೇ ಸಂತೋಷವಾರ್ತೆಯನ್ನು ಕೊಂಡು ಹೋಗಿ ಅವ ನನ್ನು ಸಂತುಷ್ಟಗೊಳಿಸುವನೋ ನಿರ್ಣಾಯಕ ದಿನದಂದು ಅಲ್ಲಾಹನು ಅವನನ್ನು ಸಂತುಷ್ಟ ಗೊಳಿಸುವನು. (ತಬ್ರಾನಿ)

19. ಮಿತ್ರನ ಮಟ್ಟಿಗೆ ಉತ್ತಮ ರಹಸ್ಯ ಪಾಲಕರಾಗಿರಿ: ನಿಮ್ಮ ಮೇಲೆ ಭರವಸೆ ಇಟ್ಟು ಮಿತ್ರನು ತನ್ನ ಮನಸ್ಸಿನ ಮಾತು ನಿಮಗೆ ತಿಳಿಸಿದರೆ ಅದನ್ನು ಕಾಪಾಡಿರಿ. ಎಂದೂ ಮಿತ್ರನ ಭರವಸೆಗೆ ಭಂಗ ತರಬೇಡಿ. ನಿಮ್ಮ ಹೃದಯವು ಅವನ ರಹಸ್ಯಗಳ ಗೋರಿಯಾಗಲಿ. ಹಾಗಿದ್ದರೆ ಮಾತ್ರ ನಿಮ್ಮ ಮಿತ್ರನು ನಿಸ್ಸಂಕೋಚವಾಗಿ ಎಲ್ಲ ವಿಷಯಗಳಲ್ಲೂ ನಿಮ್ಮಲ್ಲಿ ಸಮಾಲೋಚಿಸಬಲ್ಲನು. ಆಗ ಮಾತ್ರ ನೀವು ಮಿತ್ರನಿಗೆ ಉತ್ತಮ ಸಲಹೆ ನೀಡಿ ನೆರವಾಗಬಲ್ಲಿರಿ.

ಹ. ಉಮರ್(ರ) ಹೇಳುತ್ತಾರೆ: ಹ. ಹಫ್ಸಾ(ರ) ವಿಧವೆಯಾದಾಗ ನಾನು ಉಸ್ಮಾನ್(ರ) ರನ್ನು ಭೇಟಿಯಾದೆ. 'ನೀವು ಬಯಸಿದರೆ ನಾನು ಹಫ್ಸಾರ(ರ) ಮದುವೆ ನಿಮ್ಮೊಂದಿಗೆ ಮಾಡಿ

ಕೊಡುತ್ತೇನೆ' ಎಂದು ಹೇಳಿದೆ. 'ನಾನು ಈ ಬಗ್ಗೆ ಯೋಚಿಸುತ್ತೇನೆ' ಎಂದು ಹ. ಉಸ್ಮಾನ್(ರ) ಉತ್ತರಿಸಿದರು. ನಾನು ಹಲವು ದಿನ ಕಾದೆ. ತರುವಾಯ ಹ. ಉಸ್ಮಾನ್(ರ) ಬಂದು 'ಈಗ ನಾನು ಮದುವೆಯಾಗುವುದಿಲ್ಲ' ಎಂದರು. ಬಳಿಕ ನಾನು ಅಬೂಬಕರ್‌ರನ್ನು(ರ) ಭೇಟಿಯಾಗಿ, 'ನೀವು ಬಯಸಿದರೆ ಹಫ್ಸಾರನ್ನು(ರ) ವರಿಸಬಹುದೆಂದೆ. ಅವರು ಉತ್ತರಿಸದೆ ಮೌನ ತಾಳಿದರು. ನನಗೆ ಅವರ ಮೌನ ಉಸ್ಮಾನ್‌ರ(ರ) ನಿರಾಕರಣೆಗಿಂತಲೂ ಅರೋಚಕವಾಯಿತು. ಹೀಗೆ ಹಲವು ದಿನಗಳು ಕಳೆದುವು. ತರುವಾಯ ಪ್ರವಾದಿವರ್ಯರು(ಸ) ಹಫ್ಸಾರಿಗೆ(ರ) ವಿವಾಹ ಸಂದೇಶ ಕಳುಹಿಸಿದರು. ನಾನು ಹಫ್ಸಾರನ್ನು(ರ) ಪ್ರವಾದಿವರ್ಯರೊಂದಿಗೆ(ಸ) ವಿವಾಹ ಮಾಡಿಕೊಟ್ಟೆ. ಆ ಬಳಿಕ ಹ. ಅಬೂಬಕರ್(ರ) ನನ್ನನ್ನು ಭೇಟಿಯಾಗಿ, 'ನೀವು ಹಫ್ಸಾರ(ರ) ಬಗ್ಗೆ ನನ್ನಲ್ಲಿ ಪ್ರಸ್ತಾಪಿಸಿದಾಗ ನಾನು ಮೌನ ತಾಳಿದ್ದೆ. ನಿಮಗೆ ಒಂದು ವೇಳೆ ನನ್ನ ಮೌನ ಹಿಡಿಸಿರಲಿಕ್ಕಿಲ್ಲ' ಎಂದರು. ನಾನು 'ಹೌದು, ನನಗೆ ಬೇಸರವಾಗಿತ್ತು' ಎಂದು ಉತ್ತರಿಸಿದೆ. 'ಪ್ರವಾದಿ(ಸ) ಆ ಬಗ್ಗೆ ಯೋಚಿಸುತ್ತಿದ್ದರೆಂದು ನನಗೆ ತಿಳಿದಿತ್ತು. ಇದು ಅವರ ಒಂದು ರಹಸ್ಯವಾಗಿತ್ತು. ನಾನದನ್ನು ಬಯಲುಗೊಳಿಸಲು ಇಷ್ಟಪಡಲಿಲ್ಲ. ಪ್ರವಾದಿವರ್ಯರು(ಸ) ಹಫ್ಸಾರ(ರ) ಬಗ್ಗೆ ಪ್ರಸ್ತಾಪಿಸದಿರುತ್ತಿದ್ದರೆ ನಾನು ನಿಮ್ಮ ಕೊಡುಗೆಯನ್ನು ಖಂಡಿತ ಸ್ವೀಕರಿಸುತ್ತಿದ್ದೆ' ಎಂದು ಹ. ಅಬೂಬಕರ್(ರ) ವಿವರಿಸಿದರು. (ಬುಖಾರಿ)

ಒಂದು ದಿನ ಹ. ಅನಸ್(ರ)ರವರು ಮಕ್ಕಳ ಜೊತೆ ಆಟವಾಡುತ್ತಿದ್ದರು. ಆಗ ಪ್ರವಾದಿ(ಸ) ಆಗಮಿಸಿದರು. ನಮಗೆ ಸಲಾಮ್ ಹೇಳಿದರು. ತರುವಾಯ ಒಂದು ಕೆಲಸ ಹೇಳಿ ಹೊರಟು ಹೋದರು. ಆ ಕೆಲಸ ಮಾಡುವಾಗ ನನ್ನಿಂದ ತಡವಾಯಿತು. ಕೆಲಸ ಮುಗಿಸಿ ಮನೆಗೆ ಮರಳಿದಾಗ 'ಇಷ್ಟು ಹೊತ್ತು ಎಲ್ಲಿದ್ದೆ' ಎಂದು ತಾಯಿ ಪ್ರಶ್ನಿಸಿದರು. ಪ್ರವಾದಿ(ಸ) ಒಂದು ಕಾರ್ಯ ನಿಮಿತ್ತ ನನ್ನನ್ನು ಕಳುಹಿಸಿದ್ದರೆಂದೆ. ಏನು ಕೆಲಸವೆಂದು ವಿಚಾರಿಸಿದಾಗ, 'ಅದೊಂದು ರಹಸ್ಯ' ಎಂದು ಉತ್ತರಿಸಿದೆ. 'ಪ್ರವಾದಿವರ್ಯರ(ಸ) ರಹಸ್ಯವನ್ನು ಯಾರಿಗೂ ಹೇಳಬೇಡ' ಎಂದು ತಾಯಿ ಉಪದೇಶಿಸಿದರು. (ಮುಸ್ಲಿಮ್)

20. ಸಹಜೀವನದಲ್ಲಿ ಎಲ್ಲ ಪ್ರಕೃತಿಯ, ವಿಚಾರಧಾರೆಯ ಮತ್ತು ಅಭಿರುಚಿಯ ವ್ಯಕ್ತಿಗಳು ನಿಮ್ಮಲ್ಲಿ ಅಸಾಮಾನ್ಯ ಆಕರ್ಷಣೆ ಅನುಭವಿಸುವಂತೆ ನಿಮ್ಮ ಚಾರಿತ್ರ್ಯದಲ್ಲಿ ವೈಶಾಲ್ಯತೆ, ವಿನಯ, ಸಂಯಮ ಮತ್ತು ಹೊಂದಾಣಿಕೆಯನ್ನು ಬೆಳೆಸಿಕೊಳ್ಳಿರಿ. ಯಾರ ಭಾವನೆ ಗಳಿಗೂ ನೋವಾಗದಂತೆ ಎಲ್ಲ ತರದ ಜನರೊಂದಿಗೆ ಅವರವರ ವಿಚಾರ, ಪ್ರಕೃತಿ ಮತ್ತು ಅಭಿರುಚಿಗೆ ತಕ್ಕಂತೆ ವರ್ತಿಸಿರಿ. ಎಲ್ಲರನ್ನೂ ನಿಮ್ಮ ಅಭಿರುಚಿಯ ಮಾನದಂಡ ದಿಂದ ಅಳೆಯುವ ಅವಿವೇಕ ತೋರಬೇಡಿರಿ. ಎಲ್ಲರ ಅಭಿರುಚಿಯನ್ನು ನಿಮ್ಮಿಷ್ಟದಂತೆ ಬದಲಾಯಿಸುವ ಅಸಾಧ್ಯ ಮತ್ತು ವ್ಯಥಾ ಪ್ರಯತ್ನ ಮಾಡದಿರಿ. ಪ್ರಕೃತಿ ಮತ್ತು ಅಭಿರುಚಿಯ ವ್ಯತ್ಯಾಸ ಒಂದು ಸಹಜ ಸೌಂದರ್ಯ. ಈ ಸಹಜ ಸೌಂದರ್ಯವನ್ನು ತೋರಿಕೆಯ ಸಮಾನತೆಗಾಗಿ ಬಲಿ ಕೊಡಬೇಡಿರಿ. ಎಲ್ಲ ಮಿತ್ರರನ್ನು ಅವರ ಪ್ರಕೃತಿಯಂತೆ ಕಂಡು ಅವರಲ್ಲಿ ಅಭಿರುಚಿ ತಾಳಿರಿ. ಅವರನ್ನು ಗೌರವಾದರದಿಂದ ಕಾಣಿರಿ. ನಿಮ್ಮ ಹೊಂದಾಣಿಕೆಯ ಗುಣದಿಂದ ಅವರೆಲ್ಲರನ್ನು ನಿಮ್ಮ ಗೆಳೆತನದಲ್ಲಿ ಹೆಣೆದಿಡುವ ಪ್ರಯತ್ನ ಮಾಡಿರಿ.

ಎಲ್ಲಾ ಅಭಿರುಚಿ ಮತ್ತು ಪ್ರಕೃತಿಯ ಜನರೂ ಪ್ರವಾದಿವರ್ಯರ(ಸ) ಸಹವಾಸದಲ್ಲಿ ನೆಮ್ಮದಿ ಗಳಿಸುತ್ತಿದ್ದರು. ಇದು ಪ್ರವಾದಿವರ್ಯರ(ಸ) ವೈವಿಧ್ಯಮಯ ಹೊಂದಾಣಿಕೆಯ ಗುಣದ ಫಲವಾಗಿತ್ತು. ಯಾರೂ ತನ್ನ ಅಭಿರುಚಿಗೆ ವಿರುದ್ಧವಾದ ಪರಕೀಯತೆಯನ್ನು ಪ್ರವಾದಿವರ್ಯರಲ್ಲಿ(ಸ) ಕಂಡಿರಲಿಲ್ಲ. ಪ್ರವಾದಿವರ್ಯರ(ಸ) ಸಭೆಗಳಲ್ಲಿ ಹ. ಅಬೂಬಕರ್‌ರಂತಹ(ರ) ಸಂಯಮಶೀಲ ಮತ್ತು ಕರುಣಾಳುವೂ ಇದ್ದರು. ಹ. ಉಮರ್‌ರಂತಹ(ರ) ಪರಾಕ್ರಮಿಯೂ ಇದ್ದರು. ಹ. ಹಸ್ಸಾನ್ ಬಿನ್ ಸಾಬಿತ್‌ರಂತಹ(ರ) ಪುಕ್ಕಲು ಸ್ವಭಾವದವರೂ ಇದ್ದರು. ಹ. ಅಲೀಯವರಂತಹ(ರ) ಖೈಬರ್ ವಿಜಯಿಯೂ ಇದ್ದರು. ಅಬೂದರ್ ಗಿಫಾರಿಯವರಂತಹ(ರ) ಸಾಧು ಮನುಷ್ಯರೂ ಇದ್ದರು. ಅಬ್ದುರ್ರಹ್ಮಾನ್ ಬಿನ್ ಔಫ್ ರಂತಹ(ರ) ಐಶ್ವರ್ಯವಂತರೂ ಇದ್ದರು. ಆದರೆ ಪ್ರವಾದಿವರ್ಯರ(ಸ) ಉನ್ನತ ಚಾರಿತ್ರ್ಯ, ಸದಾಚಾರ ಮತ್ತು ಸದ್ವಿಚಾರಗಳ ಕಾರಣ ಇವರೆಲ್ಲರೂ ಪ್ರವಾದಿವರ್ಯರೊಂದಿಗೆ(ಸ) ಅಪ್ರತಿಮ ಮತ್ತು ಅಪಾರ ಪ್ರೀತಿ ವಿಶ್ವಾಸವನ್ನು ಹೊಂದಿದ್ದರು. ಪ್ರತಿಯೊಬ್ಬರೂ ಪ್ರವಾದಿ(ಸ) ತಮ್ಮನ್ನೇ ಅತ್ಯಧಿಕ ಪ್ರೀತಿಸುತ್ತಾರೆಂದು ತಿಳಿಯುವ ರೂಪದಲ್ಲಿ ಪ್ರವಾದಿ(ಸ) ಎಲ್ಲರೊಂದಿಗೂ ಅತ್ಯಂತ ಪ್ರೀತಿ ಪೂರ್ವಕವಾಗಿ ವರ್ತಿಸುತ್ತಿದ್ದರು. ಈ ಉನ್ನತ ಚಾರಿತ್ರ್ಯ, ಸದಾಚಾರ ಮತ್ತು ಸದ್ವಿವೇಕದ ಫಲವಾಗಿ ಪ್ರಕೃತಿ ಮತ್ತು ಅಭಿರುಚಿಯಲ್ಲಿ ವೈವಿಧ್ಯತೆ ಇರುವ ಸಹಾಬಿವರ್ಯರು(ರ) ಒಂದು ಮಾದರೀ ಯೋಗ್ಯ ಸಂಘವಾಗಿ ಮಾರ್ಪಟ್ಟರು. ಅವರ ಮಧ್ಯೆ ಅತುಲ್ಯ ಸಾಮರಸ್ಯ, ಅಸಾಮಾನ್ಯ ಏಕತೆ, ಸಹಕಾರ ಹಾಗೂ ಅಸೂಯಾರ್ಹ ಪ್ರೇಮವಿತ್ತು. ಮಾನವ ಇತಿಹಾಸವು ಈ ಅಧ್ಯಾಯಗಳನ್ನು ತನ್ನ ಸುದೀರ್ಘ ಬಾಳಿನ ಗಳಿಕೆಯೆಂದು ಸಹಜವಾಗಿಯೇ ಭಾವಿಸುತ್ತದೆ.

ನಿಮ್ಮ ಗೆಳೆತನ ಯಶಸ್ವಿಯಾಗಬೇಕಾದರೆ ನಿಮ್ಮ ಸಾಮೂಹಿಕ ಚಾರಿತ್ರ್ಯದಲ್ಲಿ ವಿವೇಕ ಯುತವಾದ ಹೊಂದಾಣಿಕೆಯ ಗುಣ ಮತ್ತು ಅಸಾಮಾನ್ಯ ಸಹನೆ ಉಂಟಾಗಬೇಕು. ಗೆಳೆತನ ದಲ್ಲಿ ಕ್ಷಮಾಶೀಲತೆ, ಔದಾರ್ಯ, ತ್ಯಾಗ ಮನೋಭಾವ, ಪರಸ್ಪರ ಹೊಂದಾಣಿಕೆ, ನಯವಿನಯ ಪರಸ್ಪರ ಭಾವನೆಗಳ ಆದರ ಮತ್ತು ಪರಸ್ಪರ ಹಿತಾಕಾಂಕ್ಷೆಯನ್ನು ಸಾಧ್ಯ ವಿದ್ದಷ್ಟು ಪಾಲಿಸಿರಿ. ಪ್ರವಾದಿವರ್ಯರು(ಸ) ಜನರ ಸಹಜ ಬೇಡಿಕೆಗಳು, ಭಾವನೆಗಳು ಮತ್ತು ನ್ಯೂನತೆಗಳನ್ನು ಎಷ್ಟು ಗಮನದಲ್ಲಿಡುತ್ತಿದ್ದರೆಂಬುದು ಹಾಗೂ ಎಷ್ಟು ವಿಶಾಲ ಮನೋಭಾವ, ಔದಾರ್ಯ ಮತ್ತು ಸಂಯಮವನ್ನು ಪಾಲಿಸುತ್ತಿದ್ದರೆಂಬುದು ಈ ಕೆಳಗಿನ ಘಟನೆಗಳಿಂದ ವ್ಯಕ್ತವಾಗುತ್ತದೆ:

ಪ್ರವಾದಿ(ಸ) ಹೀಗೆ ಹೇಳಿರುವರು: "ನಾನು ನಮಾಝ್‌ಗಾಗಿ ಬಂದಾಗ ದೀರ್ಘ ನಮಾಝ್ ಮಾಡಬೇಕೆಂದು ಆಶೆಯಾಗುತ್ತದೆ. ಆದರೆ ಯಾವುದಾದರೂ ಮಗುವಿನ ಅಳು ಕೇಳಿಸುತ್ತಲೇ ನಾನದನ್ನು ಸಂಕ್ಷಿಪ್ತಗೊಳಿಸುತ್ತೇನೆ. ಏಕೆಂದರೆ ನಮಾಝನ್ನು ದೀರ್ಘಗೊಳಿಸಿ ಆ ಮಗುವಿನ ತಾಯಿಗೆ ತೊಂದರೆ ಕೊಡುವುದು ನನಗೆ ಅತ್ಯಂತ ಅಸಹನೀಯವಾಗುತ್ತದೆ".

(ಬುಖಾರಿ)

ಮಾಲಿಕ್ ಬಿನ್ ಹುವೈರಿಸ್(ರ) ಹೇಳುತ್ತಾರೆ: "ನಾವು ಕೆಲವು ಮಂದಿ ಯುವಕರು ಧಾರ್ಮಿಕ ಜ್ಞಾನ ಗಳಿಸಲಿಕ್ಕಾಗಿ ಪ್ರವಾದಿವರ್ಯರ(ಸ) ಬಳಿ ಹೋದೆವು. ನಾವು 20 ದಿನ

ಪ್ರವಾದಿವರ್ಯರ(ಸ) ಜೊತೆ ವಾಸಿಸಿದೆವು. ಪ್ರವಾದಿವರ್ಯರು(ಸ) ಅತ್ಯಂತ ದಯಾಳು ಮತ್ತು ಮೃದು ಸ್ವಭಾವಿಯಾಗಿದ್ದರು. (20 ದಿನಗಳು ಕಳೆದಾಗ) ನಾವು ಮನೆಗೆ ಹೋಗಲು ಆತುರರಾಗಿರುವೆವೆಂಬುದು ಪ್ರವಾದಿವರ್ಯರಿಗೆ(ಸ) ತಿಳಿಯಿತು. 'ನೀವು ಮನೆಯಲ್ಲಿ ಯಾರ್‍ಯಾರನ್ನು ಬಿಟ್ಟು ಬಂದಿದ್ದೀರಿ' ಎಂದು ನಮ್ಮನ್ನು ಪ್ರಶ್ನಿಸಿದರು. ನಾವು ಮನೆಯ ಸ್ಥಿತಿ ತಿಳಿಸಿದಾಗ, ಪ್ರವಾದಿವರ್ಯರು(ಸ) ಹೀಗೆಂದರು: ನೀವು ನಿಮ್ಮ ಮಡದಿ ಮಕ್ಕಳೆಡೆಗೆ ಮರಳಿರಿ. ಅವರ ಜೊತೆಗಿದ್ದು ಇಲ್ಲಿ ಕಲಿತದ್ದನ್ನು ಅವರಿಗೂ ಕಲಿಸಿರಿ. ಅವರಿಗೆ ಸತ್ಕಾರ್ಯಗಳನ್ನು ಉಪದೇಶಿಸಿರಿ. ನಮಾಝನ್ನು ಸಮಯಕ್ಕೆ ಸರಿಯಾಗಿ ನಿರ್ವಹಿಸಿರಿ. ನಮಾಝ್‌ನ ವೇಳೆಯಾದಾಗ ನಿಮ್ಮಲ್ಲೊಬ್ಬರು ಅದಾನ್ ಹೇಳಲಿ. ನಿಮ್ಮ ಪೈಕಿ ಜ್ಞಾನ ಮತ್ತು ಚಾರಿತ್ರ್ಯದಲ್ಲಿ ಉತ್ತಮನಾದವನು ನಮಾಝ್ ಮಾಡಿಸಲಿ". (ಬುಖಾರಿ, ಮುಸ್ಲಿಮ್)

ಹ. ಮುಆವಿಯಾ ಬಿನ್ ಹಕಮ್ ಸಲಮಿಯವರು(ರ) ತಮ್ಮ ವೃತ್ತಾಂತವನ್ನು ಈ ರೀತಿ ವಿವರಿಸಿರುವರು: ನಾನು ಪ್ರವಾದಿವರ್ಯರ(ಸ) ಜೊತೆಯಲ್ಲಿ ನಮಾಝ್ ಮಾಡುತ್ತಿದ್ದೆ. ಅಷ್ಟರಲ್ಲಿ ಒಬ್ಬರಿಗೆ ಸೀನು ಬಂತು. ನಮಾಝ್ ಮಾಡುತ್ತಿರುವಂತೆಯೇ ನಾನು 'ಯರ್ ಹಮುಕಲ್ಲಾಹ್' ಎಂದೆ. ಜನರು ನನ್ನನ್ನೇ ದಿಟ್ಟಿಸತೊಡಗಿದರು. 'ನನ್ನನ್ನು ಏಕೆ ದಿಟ್ಟಿಸುತ್ತಿರುವಿರೆಂದು' ಅವರಲ್ಲಿ ಕೇಳಿದಾಗ, ಅವರು ನನಗೆ ಮೌನವಾಗಿರುವಂತೆ ಸಂಕೇತ ಮಾಡುತ್ತಿರುವುದಾಗಿ ಭಾಸವಾಯಿತು. ನಾನು ಮೌನವಹಿಸಿದೆ. ಪ್ರವಾದಿ(ಸ) ನಮಾಝ್ ಮಾಡಿ ಮುಗಿಸಿದಾಗ ನನ್ನನ್ನು ಗದರಿಸಲೂ ಇಲ್ಲ, ಹೊಡೆಯಲೂ ಇಲ್ಲ, ಜರೆಯಲೂ ಇಲ್ಲ. ಅವರಷ್ಟು ಉತ್ತಮ ಶಿಕ್ಷಣ-ತರಬೇತಿ ನೀಡುವವರನ್ನು ನಾನು ಈ ಹಿಂದೆಯಾಗಲಿ ಅನಂತರವಾಗಲೀ ಕಂಡಿಲ್ಲ. ಪ್ರವಾದಿ(ಸ) ಕೇವಲ ಇಷ್ಟೇ ಹೇಳಿದರು: ಇದು ನಮಾಝ್. ನಮಾಝ್‌ನಲ್ಲಿ ಮಾತುಕತೆ ಸಲ್ಲದು. ನಮಾಝ್ ಕೇವಲ ಅಲ್ಲಾಹನ ಪಾವನತೆಯನ್ನು ಕೊಂಡಾಡುವ, ಅವನ ಹಿರಿಮೆಯನ್ನು ಪ್ರಕಟಿಸುವ ಮತ್ತು ಕುರ್‌ಆನ್ ಪಠಿಸುವುದರ ಹೆಸರಾಗಿದೆ. (ಮುಸ್ಲಿಮ್)

21. ಪ್ರಾರ್ಥನೆಗಳನ್ನು ರೂಢಿಸಿಕೊಳ್ಳಿರಿ. ಸ್ನೇಹಿತರಿಗಾಗಿ ಪ್ರಾರ್ಥಿಸುತ್ತಲಿರಿ. ಅವರಲ್ಲಿಯೂ ನಿಮಗಾಗಿ ಪ್ರಾರ್ಥಿಸುವಂತೆ ಕೇಳಿಕೊಳ್ಳಿರಿ. ಗೆಳೆಯರ ಮುಂದೆಯೂ ಅವರ ಅನುಪಸ್ಥಿತಿಯಲ್ಲೂ ಅವರಿಗಾಗಿ ಪ್ರಾರ್ಥಿಸಿರಿ. ಸ್ನೇಹಿತರ ಅನುಪಸ್ಥಿತಿಯಲ್ಲಿ ಅವರ ಹೆಸರೆತ್ತಿ ಪ್ರಾರ್ಥಿಸಿರಿ. ಹ. ಉಮರ್(ರ) ಹೇಳುತ್ತಾರೆ. 'ನಾನು ಪ್ರವಾದಿವರ್ಯರಿಂದ(ಸ) ಉಮ್ರಾಕ್ಕೆ ಅನುಮತಿ ಕೋರಿದೆ. ಪ್ರವಾದಿವರ್ಯರು(ಸ) ನನಗೆ ಅನುಮತಿ ನೀಡುತ್ತಾ, ಸಹೋದರಾ! ನಿಮ್ಮ ಪ್ರಾರ್ಥನೆಗಳಲ್ಲಿ ನನ್ನನ್ನು ಮರೆಯಬಾರದು' ಎಂದರು. ಹ. ಉಮರ್(ರ) ಹೇಳುತ್ತಾರೆ, 'ನನಗೆ ಈ ಮಾತಿನಿಂದ ಎಷ್ಟು ಸಂತೋಷವಾಯಿತೆಂದರೆ ಇದಕ್ಕೆ ಪ್ರತಿಯಾಗಿ ನನಗೆ ಇಡೀ ಲೋಕವೇ ಸಿಗುತ್ತಿದ್ದರೂ ಇಷ್ಟು ಸಂತೋಷವಾಗುತ್ತಿರಲಿಲ್ಲ'.

"ಒಬ್ಬನು ತನ್ನ ಮಿತ್ರನ ಅನುಪಸ್ಥಿತಿಯಲ್ಲಿ ಅವನಿಗಾಗಿ ಪ್ರಾರ್ಥಿಸಿದರೆ ಆ ಪ್ರಾರ್ಥನೆಯನ್ನು ಅಲ್ಲಾಹನು ಸ್ವೀಕರಿಸುತ್ತಾನೆ. ಪ್ರಾರ್ಥಿಸುವವನ ತಲೆಯ ಪಕ್ಕದಲ್ಲಿ ಒಬ್ಬ ದೇವಚರ ನಿಯುಕ್ತವಾಗಿರುತ್ತದೆ. ಅದು ಅವನ ಪ್ರಾರ್ಥನೆಗೆ ಆಮೀನ್ (ತಥಾಸ್ತು) ಎನ್ನುತ್ತದಲ್ಲದೆ

ನೀನು ಮಿತ್ರನಿಗಾಗಿ ಪ್ರಾರ್ಥಿಸಿದುದೇ ನಿನಗೂ ಇದೆ ಎನ್ನುತ್ತದೆ" ಎಂದು ಪ್ರವಾದಿ(ಸ) ಹೇಳಿರುವರು. (ಮುಸ್ಲಿಮ್)

ನಿಮ್ಮ ನಿಷ್ಕಳಂಕವಾದ ಪ್ರಾರ್ಥನೆಯಲ್ಲಿ ಈ ರೀತಿ ಯಾಚಿಸುತ್ತಲಿರಿ: 'ಓ ಅಲ್ಲಾಹ್! ನಮ್ಮ ಹೃದಯಗಳನ್ನು ದ್ವೇಷ, ಅಸೂಯೆ ಹಾಗೂ ಈರ್ಷ್ಯೆಯ ಭಾವನೆಗಳಿಂದ ಮುಕ್ತಗೊಳಿಸು. ನಮ್ಮ ಹೃದಯಗಳನ್ನು ಪ್ರೇಮ ಸೌಹಾರ್ದಗಳಿಂದ ಜೋಡಿಸು. ನಮ್ಮ ಸಂಬಂಧಗಳನ್ನು ಪರಸ್ಪರ ಐಕ್ಯ ಮತ್ತು ಪ್ರೇಮದ ಮುಖಾಂತರ ಉತ್ತಮಗೊಳಿಸು'.

ಪವಿತ್ರ ಕುರ್‌ಆನಿನ ಈ ದುಆವನ್ನು ಆಗಾಗ ಪಠಿಸುತ್ತಿರಿ.

رَبَّنَا اغْفِرْ لَنَا وَلِإِخْوَانِنَا الَّذِينَ سَبَقُونَا بِالْإِيمَانِ وَلَا تَجْعَلْ فِي قُلُوبِنَا غِلًّا
لِّلَّذِينَ آمَنُوا رَبَّنَا إِنَّكَ رَءُوفٌ رَّحِيمٌ

"ರಬ್ಬನಗ್‌ಫಿರ್‌ಲನಾ ವಲಿ ಇಖ್‌ವಾನಿನಲ್ಲದೀನ ಸಬಕೂನಾ ಬಿಲ್ ಈಮಾನ್ ವಲಾ ತಜ್‌ಅಲ್ ಫೀ ಕುಲೂಬಿನಾ ಗಿಲ್ಲಲ್ಲಿಲ್ಲದೀನ ಆಮನೂ ರಬ್ಬನಾ ಇನ್ನಕ ರಊಫುರ್ರಹೀಮ್".

(ಓ ನಮ್ಮ ಪ್ರಭೂ! ನಮ್ಮನ್ನೂ ಸತ್ಯವಿಶ್ವಾಸದಲ್ಲಿ ನಮಗಿಂತ ಮುಂದಾದವರನ್ನೂ ಕ್ಷಮಿಸು. ನಮ್ಮ ಹೃದಯಗಳಲ್ಲಿ ಪರಸ್ಪರ ದ್ವೇಷಾಸೂಯೆಯನ್ನು ಇರಿಸದಿರು. ಓ ನಮ್ಮ ಪ್ರಭೂ! ನೀನು ಅತ್ಯಧಿಕ ದಯೆಯುಳ್ಳವನೂ ಕರುಣಾನಿಧಿಯೂ ಆಗಿರುತ್ತಿ!)

(ಪವಿತ್ರ ಕುರ್‌ಆನ್, 59:10)

# ಅತಿಥಿ ಸತ್ಕಾರ

1. ಅತಿಥಿಯ ಆಗಮನಕ್ಕೆ ಸಂತೋಷ ಮತ್ತು ಪ್ರೀತಿಯನ್ನು ವ್ಯಕ್ತಪಡಿಸಿರಿ. ಸಂತೋಷ, ಹೃದಯ ವೈಶಾಲ್ಯ ಮತ್ತು ಗೌರವಾದರಗಳೊಂದಿಗೆ ಅವರನ್ನು ಬರಮಾಡಿಕೊಳ್ಳಿರಿ. ಸಂಕುಚಿತತೆ, ಅನಾದರ, ಉದಾಸೀನತೆ ಮತ್ತು ಜಿಗುಪ್ಸೆಯನ್ನು ಎಂದೂ ವ್ಯಕ್ತಪಡಿಸದಿರಿ.

ಪ್ರವಾದಿ(ಸ) ಹೇಳಿದರು: "ಯಾರು ದೇವನ ಮೇಲೆ ಮತ್ತು ಪರಲೋಕದ ಮೇಲೆ ವಿಶ್ವಾಸವಿರಿಸುವರೋ ಅವರು ತಮ್ಮ ಅತಿಥಿಯ ಸತ್ಕಾರ ಮಾಡಬೇಕು".

(ಬುಖಾರಿ, ಮುಸ್ಲಿಮ್)

ಸತ್ಕಾರದಲ್ಲಿ ಅತಿಥಿಯ ಗೌರವಾದರ, ಸುಖ, ಸಂತೋಷ, ವಿಶ್ರಾಂತಿ ನೆಮ್ಮದಿಗಳ ಬಗ್ಗೆ ಗಮನವಿರಿಸುವುದು ಸೇರಿವೆ. ನಗುಮುಖದಿಂದ ಹಾಗೂ ಸದಾಚಾರದಿಂದ ವರ್ತಿಸುವುದು, ಸಂತೋಷದ ಮಾತುಗಳಿಂದ ಮನರಂಜಿಸುವುದು, ಗೌರವಾದರಗಳೊಂದಿಗೆ ಕುಳಿತುಕೊಳ್ಳುವ ಮತ್ತು ಮಲಗುವ ಏರ್ಪಾಡು ಮಾಡುವುದು, ತನ್ನ ಆದರಣೀಯ ಮಿತ್ರರೊಂದಿಗೆ ಭೇಟಿ ಮಾಡಿಸುವುದು, ಅವರ ಅವಶ್ಯಕತೆಗಳ ಬಗ್ಗೆ ಗಮನವಿರಿಸುವುದು, ಅತ್ಯಂತ ಸಂತೋಷ ಮತ್ತು ವಿಶಾಲ ಹೃದಯದೊಂದಿಗೆ ಊಟೋಪಚಾರ ಮಾಡುವುದು, ಸ್ವತಃ ಅವರ ಆದರ ಸತ್ಕಾರದಲ್ಲಿ ತೊಡಗಿರುವುದು ಇತ್ಯಾದಿ ಆತಿಥ್ಯದ ಮರ್ಯಾದೆಗಳಾಗಿವೆ.

ಪ್ರವಾದಿವರ್ಯರ(ಸ) ಬಳಿ ಗೌರವಾನ್ವಿತ ಅತಿಥಿಗಳು ಬಂದಾಗ ಪ್ರವಾದಿ(ಸ) ಸ್ವತಃ ಅವರ ಸತ್ಕಾರ ಮಾಡುತ್ತಿದ್ದರು. ಅತಿಥಿಗೆ ಊಟ ಬಡಿಸುವಾಗ ಪ್ರವಾದಿ(ಸ) 'ಉಣ್ಣಿರಿ, ಇನ್ನೂ ಉಣ್ಣಿರಿ' ಎನ್ನುತ್ತಿದ್ದರು. ಅತಿಥಿಯು ಹೊಟ್ಟೆ ತುಂಬಾ ಉಂಡು ಇನ್ನು ಸಾಕು ಎನ್ನುವ ತನಕ ಪ್ರವಾದಿ(ಸ) ಈ ರೀತಿ ಒತ್ತಾಯಪಡಿಸುತ್ತಿದ್ದರು.

2. ಅತಿಥಿ ಬಂದಾಗ ಮೊಟ್ಟ ಮೊದಲು ಅವರಿಗೆ ಸಲಾಮ್ ಹೇಳಿ ಪ್ರಾರ್ಥಿಸಿರಿ. ಅವರ ಯೋಗಕ್ಷೇಮ ವಿಚಾರಿಸಿರಿ. ಪವಿತ್ರ ಕುರ್‌ಆನ್ ಈ ರೀತಿ ಹೇಳುತ್ತದೆ:

هَلْ أَتٰىكَ حَدِيثُ ضَيْفِ إِبْرٰهِيمَ الْمُكْرَمِينَ ﴿٢٤﴾ إِذْ دَخَلُوا عَلَيْهِ

فَقَالُوا سَلٰمًا ۖ قَالَ سَلٰمٌ ۚ

**"ನಿಮಗೆ ಇಬ್ರಾಹೀಮರ ಗೌರವಾನ್ವಿತ ಅತಿಥಿಯ ವೃತ್ತಾಂತ ತಲುಪಿದೆಯೇ? ಅವರು ಆತನ (ಹ. ಇಬ್ರಾಹೀಮ್) ಬಳಿಗೆ ಬಂದಾಗ ಸಲಾಮ್ ಹೇಳಿದರು. ಇಬ್ರಾಹೀಮರು ಪ್ರತಿ ಸಲಾಮ್ ಹೇಳಿದರು".** **(51:24-25)**

3. ಮನಬಿಚ್ಚಿ ಅತಿಥಿಯ ಸತ್ಕಾರ ಮಾಡಿರಿ. ನಿಮ್ಮಲ್ಲಿರುವ ಅತ್ಯುತ್ತಮ ಆಹಾರವನ್ನು ಅವರ ಮುಂದಿರಿಸಿರಿ. ಹ. ಇಬ್ರಾಹೀಮರ(ಅ) ಮನೆಗೆ ಅತಿಥಿಗಳು ಬಂದ ಕೂಡಲೇ ಅವರಿಗೆ ಅನ್ನಾಹಾರಗಳನ್ನು ಸಿದ್ಧಪಡಿಸುವುದರಲ್ಲಿ ನಿರತರಾದರು. ತಮ್ಮಲ್ಲಿದ್ದ ದಷ್ಟಪುಷ್ಟ ಕರುವೊಂದರ ಮಾಂಸದ ಅಡುಗೆ ಮಾಡಿ ಅತಿಥಿಗಳ ಮುಂದಿರಿಸಿದರು.

ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಇದೆ:

فَرَاغَ إِلَىٰٓ أَهْلِهِۦ فَجَآءَ بِعِجْلٍ سَمِينٍ ﴿٢٦﴾ فَقَرَّبَهُۥٓ إِلَيْهِمْ

**"ಕೂಡಲೇ ಮನೆಯೊಳಗೆ ಹೋಗಿ ಒಂದು ದಷ್ಟಪುಷ್ಟವಾದ ಕರುವನ್ನು (ಅಡುಗೆ ಮಾಡಿ) ತಂದು ಅತಿಥಿಗಳ ಮುಂದಿರಿಸಿದರು". (51:26-27)**

ಪ್ರಸ್ತುತ ಸೂಕ್ತದ ಒಂದು ಅರ್ಥ ಹೀಗೂ ಆಗಬಹುದು. ಇಬ್ರಾಹೀಮ್(ಅ) ಮೌನವಾಗಿ ಅತಿಥಿಗಳ ಸತ್ಕಾರದ ವ್ಯವಸ್ಥೆ ಮಾಡಲು ಮನೆಯೊಳಗೆ ಪ್ರವೇಶಿಸಿದರು. ಏಕೆಂದರೆ ಬಹಿರಂಗವಾಗಿಯೇ ಅತಿಥಿಗಳ ಊಟ, ಉಪಚಾರದ ವ್ಯವಸ್ಥೆ ಮಾಡಿದರೆ ಅವರಿಗೆ ಸಂಕೋಚವಾದೀತು. ಮಾತ್ರವಲ್ಲ ಆತಿಥೇಯನ ಕಷ್ಟವನ್ನು ಕಂಡು ಅವರನ್ನು ತಡೆಯಲೂ ಬಹುದು. ಇದರಿಂದ ಅತಿಥಿ ಸತ್ಕಾರದ ಸಂದರ್ಭವೇ ಕಳೆದು ಹೋಗಬಹುದು.

ಅತಿಥಿ ಸತ್ಕಾರದ ಬಗ್ಗೆ ಪ್ರವಾದಿ(ಸ) ನೀಡಿರುವ ಉತ್ತೇಜನವನ್ನು ಹ. ಅಬೂ ಶುರೈಹ್(ರ) ಈ ರೀತಿ ವಿವರಿಸಿರುವರು: "ನನ್ನೆರಡು ಕಣ್ಣುಗಳು ಕಂಡುವು ಹಾಗೂ ನನ್ನೆರಡು ಕಿವಿಗಳು ಕೇಳಿದುವು. ಪ್ರವಾದಿ(ಸ) ಈ ರೀತಿ ಆದೇಶಿಸಿದರು: ಅಲ್ಲಾಹನ ಮೇಲೆ ಮತ್ತು ಪರಲೋಕದ ಮೇಲೆ ವಿಶ್ವಾಸವಿರಿಸು ವವರು ತಮ್ಮ ಅತಿಥಿಗಳ ಸತ್ಕಾರ ಮಾಡಲಿ. ಅತಿಥಿಯ ಬಹುಮಾನದ ಸಂದರ್ಭ ಪ್ರಥಮ ಹಗಲು ರಾತ್ರಿಯಾಗಿದೆ". (ಬುಖಾರಿ, ಮುಸ್ಲಿಮ್)

ಪ್ರಥಮ ಹಗಲು ರಾತ್ರಿಯ ಸತ್ಕಾರವನ್ನು ಬಹುಮಾನವೆಂದು ಹೇಳಿರುವುದರ ತಾತ್ಪರ್ಯ ವೇನೆಂದರೆ, ಬಹುಮಾನ ಕೊಡುವವನು ಸಂತೋಷ ಮತ್ತು ಪ್ರೀತಿಯ ಭಾವನೆ ಗಳೊಂದಿಗೆ ಬಹುಮಾನ ಕೊಡುವಾಗ ಆತ್ಮೀಯ ಸಂತೋಷ ಅನುಭವಿಸುವಂತೆ ಆತಿಥೇಯನೂ ಪ್ರಥಮ ಹಗಲು ರಾತ್ರಿ ಅತಿಥಿ ಸತ್ಕಾರ ಮಾಡಿ ಸಂತೋಷ ಪಡಬೇಕು. ಬಹುಮಾನ ಸ್ವೀಕರಿಸು ವವನು ಅತೀವ ಸಂತೋಷದಿಂದ ಬಹುಮಾನ ನೀಡುವವನ ಭಾವನೆಗಳನ್ನು ಗೌರವಿಸುತ್ತಾ ತನ್ನ ಹಕ್ಕೆಂದು ಪರಿಗಣಿಸಿ ಬಹುಮಾನ ಸ್ವೀಕರಿಸುವಂತೆ ಅತಿಥಿಯು ಪ್ರಥಮ ಹಗಲು ರಾತ್ರಿ ನಿಸ್ಸಂಕೋಚವಾಗಿ ತನ್ನ ಹಕ್ಕೆಂದು ಬಗೆದು ಸತ್ಕಾರವನ್ನು ಸ್ವೀಕರಿಸಬೇಕು.

4. ಅತಿಥಿಯು ಬಂದಾಗ ಅವರ ನೈಸರ್ಗಿಕ ಬೇಡಿಕೆಗಳ ಬಗ್ಗೆ ಗಮನವಿರಿಸಿರಿ. ಮಲಮೂತ್ರ ವಿಸರ್ಜನೆಯ ಅಗತ್ಯವಿದೆಯೋ ಎಂದು ವಿಚಾರಿಸಿರಿ. ಕೈಕಾಲು ತೊಳೆಯುವ ಏರ್ಪಾಡು ಮಾಡಿರಿ. ಅಗತ್ಯವಿದ್ದರೆ ಸ್ನಾನದ ಏರ್ಪಾಡನ್ನು ಮಾಡಿರಿ. ಊಟದ ಸಮಯವಲ್ಲ ದಿದ್ದರೂ ವಿಚಾರಿಸಿಕೊಳ್ಳಿರಿ. ನೀವು ವಿಚಾರಿಸುವ ರೀತಿಯಲ್ಲಿ ಅತಿಥಿಯು ಸಂಕೋಚದಿಂದ ನಿರಾಕರಿಸುವಂತಾಗಬಾರದು. ಅತಿಥಿಗೆ ಉಳಕೊಳ್ಳಬೇಕಾದ ಕೋಣೆಯನ್ನು ತೋರಿಸಿಕೊಡಿರಿ.

5. ಸದಾ ಅತಿಥಿಯ ಬಳಿ ಧರಣಿ ಕೂರಬೇಡಿ. ರಾತ್ರಿ ಹೆಚ್ಚು ಹೊತ್ತು ಅತಿಥಿಗೆ ತೊಂದರೆ ಕೊಡಬೇಡಿ. ಅವರಿಗೆ ವಿಶ್ರಾಂತಿಗೆ ಸಾಕಷ್ಟು ಸಮಯ ಸಿಗುವಂತಾಗಲಿ. ಹ. ಇಬ್ರಾಹೀಮ್‌ರ(ಅ) ಬಳಿ ಅತಿಥಿ ಬಂದಾಗ ಅವರು ಊಟದ ಏರ್ಪಾಡು ಮಾಡುವ ಸಲುವಾಗಿ ಸ್ವಲ್ಪ ಹೊತ್ತು ಅವರಿಂದ ದೂರ ಉಳಿದರು.

6. ಅತಿಥಿಗಳು ನಿಮ್ಮಲ್ಲಿ ಉಣ್ಣುವುದರಿಂದ ಸಂತೋಷಪಡಿರಿ. ಆ ಬಗ್ಗೆ ಸಂಕುಚಿತತೆ ಮತ್ತು ಬೇಸರ ಪಡಬೇಡಿ. ಅತಿಥಿಯು ನಿಮ್ಮ ಪಾಲಿಗೆ ತ ಡಕಲ್ಲ. ಬದಲಾಗಿ ಅನುಗ್ರಹ, ಒಳಿತು ಮತ್ತು ಸಮೃದ್ಧಿಯ ಹೇತು. ಯಾರನ್ನು ದೇವನು ನಿಮ್ಮ ಬಳಿ ಕಳುಹಿಸುವನೋ ಅವನ ಪಾಲಿನ ಅನ್ನಾಹಾರವನ್ನೂ ನಿಮಗೆ ದಯಪಾಲಿಸುವನು. ಅವನು ನಿಮ್ಮ ಊಟದ ಹಾಸಿನಿಂದ ತನ್ನ ಪಾಲನ್ನು ತಿನ್ನುತ್ತಾನೆಯೇ ಹೊರತು ನಿಮ್ಮ ಪಾಲನ್ನಲ್ಲ ಮತ್ತು ಅವನು ನಿಮ್ಮ ಸ್ಥಾನಮಾನ ದಲ್ಲಿ ಉನ್ನತಿಯ ಹೇತುವಾಗುತ್ತಾನೆ.

7. ಅತಿಥಿಯ ಘನತೆ ಗೌರವಗಳ ಬಗೆಗೂ ಗಮನವಿರಿಸಿರಿ. ಅತಿಥಿಯ ಘನತೆ ಗೌರವ ಗಳನ್ನು ನಿಮ್ಮ ಘನತೆ-ಗೌರವಗಳೆಂದೇ ಪರಿಗಣಿಸಿರಿ. ನಿಮ್ಮ ಅತಿಥಿಯ ಗೌರವಕ್ಕೆ ವಿರುದ್ಧ ಯಾರಾದರೂ ಆಕ್ರಮಣ ಮಾಡಿದರೆ ಅದನ್ನು ನಿಮ್ಮ ಘನತೆ-ಗೌರವಗಳ ವಿರುದ್ಧ ಆಕ್ರಮಣವೆಂದು ಪರಿಗಣಿಸಿರಿ.

ಹ. ಲೂತ್‌ರವರ(ಅ) ಅತಿಥಿಗಳ ಮೇಲೆ ಊರವರು ದುರುದ್ದೇಶದಿಂದ ಧಾಳಿ ಮಾಡಿದಾಗ ಹ. ಲೂತ್(ಅ) ಅವರ ರಕ್ಷಣೆಗೆ ಎದ್ದು ನಿಂತರು. 'ಇವರು ನಮ್ಮ ಅತಿಥಿಗಳು. ಇವರೊಂದಿಗೆ ದುರ್ವ್ಯವಹಾರ ಮಾಡಿ ನನ್ನನ್ನು ಹೀನೈಸಬೇಡಿರಿ. ಅವರ ನಿಂದೆ ನನ್ನ ನಿಂದೆಯಾಗಿದೆ' ಎಂದರು.

قَالَ إِنَّ هَٰٓؤُلَآءِ ضَيۡفِي فَلَا تَفۡضَحُونِ ﴿٦٨﴾ وَٱتَّقُواْ ٱللَّهَ وَلَا تُخۡزُونِ ﴿٦٩﴾

**"ಲೂತ್‌ರು(ಅ) ಹೇಳಿದರು, ಸೋದರರೇ! ಇವರು ನನ್ನ ಅತಿಥಿಗಳು ನನ್ನನ್ನು ಅವಮಾನಗೊಳಿಸದಿರಿ. ದೇವನನ್ನು ಭಯಪಡಿರಿ. ನನ್ನ ಅವಮಾನ ಮಾಡದಿರಿ".**

**(ಪವಿತ್ರ ಕುರ್‌ಆನ್, 15: 68-69)**

8. ಮೂರು ದಿನಗಳ ತನಕ ಉತ್ಸಾಹದಿಂದ ಆತಿಥ್ಯದ ಬೇಡಿಕೆಗಳನ್ನು ಪೂರೈಸಿರಿ. ಮೂರು ದಿನಗಳ ಆತಿಥ್ಯವು ಅತಿಥಿಯ ಹಕ್ಕಾಗಿದೆ. ಹಕ್ಕು ತೀರಿಸುವ ಬಗ್ಗೆ ಸತ್ಯವಿಶ್ವಾಸಿಯು ಅತ್ಯಂತ ವಿಶಾಲ ಹೃದಯಿಯಾಗಿರಬೇಕು. ಪ್ರಥಮ ದಿನ ವಿಶೇಷ ಆದರ ಸತ್ಕಾರದ ದಿನವಾಗಿದೆ. ಆದ್ದರಿಂದ ಪ್ರಥಮ ದಿನ ಅತಿಥಿ ಸತ್ಕಾರದ ಪೂರ್ಣ ಮರ್ಯಾದೆಗಳನ್ನು ಪಾಲಿಸಿರಿ. ಉಳಿದೆರಡು ದಿನಗಳಲ್ಲಿ ಅಷ್ಟೊಂದು ವಿಶೇಷ ಏರ್ಪಾಡು ಮಾಡಲಾಗದಿದ್ದರೂ ಚಿಂತೆಯಿಲ್ಲ. ಪ್ರವಾದಿ(ಸ) ಈ ರೀತಿ ಹೇಳಿರುವರು:

وَالضِّيَافَةُ ثَلَاثَةُ أَيَّامٍ فَمَا بَعْدَ ذٰلِكَ فَهُوَ لَهُ صَدَقَةٌ

"ಅತಿಥಿ ಸತ್ಕಾರವು ಮೂರು ದಿನಗಳವರೆಗಿದೆ. ಆ ಬಳಿಕ ಆತಿಥೇಯನು ಮಾಡುವುದೆಲ್ಲವೂ ಅವನ ಪಾಲಿಗೆ ದಾನವಾಗುವುದು". (ಬುಖಾರಿ, ಮುಸ್ಲಿಮ್)

9. ಅತಿಥಿಯ ಸೇವೆ ನಿಮ್ಮ ನೈತಿಕ ಹೊಣೆ ಎಂಬುದನ್ನು ಅರಿತುಕೊಳ್ಳಿರಿ. ಅವರ ಸೇವೆಗೆ ಸೇವಕರನ್ನು ಅಥವಾ ಮಕ್ಕಳನ್ನು ಬಿಡುವ ಬದಲು ನೀವು ಸ್ವತಃ ಅವರ ಸೇವೆ ಮತ್ತು ಸತ್ಕಾರದ ಬಗ್ಗೆ ಮುತುವರ್ಜಿ ವಹಿಸಿರಿ. ಗೌರವಾನ್ವಿತ ಅತಿಥಿಗಳನ್ನು ಪ್ರವಾದಿ(ಸ) ಸ್ವತಃ ಸತ್ಕರಿಸುತ್ತಿದ್ದರು. ಇಮಾಮ್ ಶಾಫಿಈಯವರು(ರ) ಇಮಾಮ್ ಮಾಲಿಕ್‌ರ(ರ) ಅತಿಥಿಯಾಗಿ ಹೋದಾಗ, ಇಮಾಮ್ ಮಾಲಿಕ್(ರ) ಬಹಳ ಗೌರವಾದರಗಳೊಂದಿಗೆ ಅವರನ್ನು ಒಂದು ಕೋಣೆಯಲ್ಲಿ ಮಲಗಿಸಿದರು. ಪ್ರಭಾತದ ವೇಳೆ ಕದ ತಟ್ಟುವ ಸದ್ದು ಕೇಳಿ ಇಮಾಮ್ ಶಾಫಿಈ(ರ) ಎಚ್ಚೆತ್ತಾಗ, 'ನಿಮ್ಮ ಮೇಲೆ ಅಲ್ಲಾಹನ ಅನುಗ್ರಹವಿರಲಿ. ನಮಾಝ್‌ನ ವೇಳೆಯಾಯಿತು' ಎಂದು ವಿನಯಪೂರ್ವಕ ಹೇಳುವ ಶಬ್ದ ಕೇಳಿಸಿತು. ಇಮಾಮ್ ಶಾಫಿಈ(ರ) ಎದ್ದು ನೋಡಿದಾಗ ಇಮಾಮ್ ಮಾಲಿಕ್‌ರವರು(ರ) ಕೈಯಲ್ಲಿ ನೀರು ತುಂಬಿದ ಲೋಟ ಹಿಡಿದು ನಿಂತಿದ್ದರು. ಇದನ್ನು ಕಂಡು ಇಮಾಮ್ ಶಾಫಿಈಯವರಿಗೆ(ರ) ಸ್ವಲ್ಪ ಸಂಕೋಚವಾಯಿತು. ಇದನ್ನರಿತ ಇಮಾಮ್ ಮಾಲಿಕ್(ರ), 'ಸೋದರಾ! ನೀವೇನೂ ಸಂಕೋಚಪಡಬೇಡಿ. ಅತಿಥಿಯ ಸೇವೆ ಮಾಡಲೇಬೇಕು' ಎಂದರು.

10. ಅತಿಥಿಯು ತಂಗಿದಾಗ ಅವರಿಗೆ ಶೌಚಗೃಹವನ್ನು ತೋರಿಸಿಕೊಡಿರಿ. ನೀರಿನ ಲೋಟೆಯನ್ನು ಕೊಡಿರಿ. ಕಿಬ್ಲಾದ ದಿಕ್ಕನ್ನು ತೋರಿಸಿರಿ. ನಮಾಝ್ ಮಾಡುವ ಸ್ಥಳ ನಿಗದಿಪಡಿಸಿರಿ. ನಮಾಝ್‌ನ ಹಾಸು(ಮುಸಲ್ಲಾ) ಒದಗಿಸಿ ಕೊಡಿರಿ. ಇಮಾಮ್ ಶಾಫಿಈಯವರನ್ನು(ರ) ಕೋಣೆಯಲ್ಲಿ ತಂಗಿಸಿದ ಬಳಿಕ ಇಮಾಮ್ ಮಾಲಿಕ್‌ರ(ರ) ಓರ್ವ ಸೇವಕ ಹೀಗೆಂದನು, 'ಗುರುಗಳೇ! ಕಿಬ್ಲಾ ಈ ಕಡೆ ಇದೆ. ನೀರಿನ ಪಾತ್ರೆ ಇಲ್ಲಿ ಇರಿಸಿದೆ. ಶೌಚಗೃಹ ಈ ಕಡೆ ಇದೆ'.

11. ಊಟಕ್ಕಾಗಿ ಮೊದಲು ನೀವು ಕೈ ತೊಳೆದು ತರುವಾಯ ಅತಿಥಿಯ ಕೈ ತೊಳೆಯಿಸಿರಿ. ಇಮಾಮ್ ಮಾಲಿಕ್‌ರವರು(ರ) ಹೀಗೆ ಮಾಡಿದಾಗ ಶಾಫಿಈ(ರ) ಅದರ ಕಾರಣ ಕೇಳಿದರು. ಊಟಕ್ಕೆ ಮುಂಚೆ ಆತಿಥೇಯನೇ ಮೊದಲು ಕೈ ತೊಳೆಯಬೇಕು ಮತ್ತು ಊಟದ ಹಾಸಿಗೆ ಅತಿಥಿಗಳನ್ನು ಸ್ವಾಗತಿಸಬೇಕು. ಊಟ ಮುಗಿಸಿದ ಮೇಲೆ ಮೊದಲು ಅತಿಥಿಗಳ ಕೈ ತೊಳೆಯಿಸಬೇಕು. ಆತಿಥೇಯನು ಕೊನೆಗೆ ಕೈ ತೊಳೆಯಬೇಕು. ಊಟದಿಂದ ಏಳುವ ಮೊದಲು ಬೇರೆ ಅತಿಥಿಗಳೂ ಬರಬಹುದು.

12. ಊಟದ ಹಾಸಿನಲ್ಲಿ ಅತಿಥಿಗಳ ಸಂಖ್ಯೆಗಿಂತ ಸ್ವಲ್ಪ ಹೆಚ್ಚು ಅನ್ನ ಪಾನೀಯ ಮತ್ತು ಪಾತ್ರೆಗಳನ್ನು ಇರಿಸಬೇಕು. ಊಟದ ಮಧ್ಯೆ ಯಾರಾದರೂ ಬರಬಹುದು. ಆಗ ತೊಂದರೆಯಾಗಬಾರದು. ಊಟ ಮತ್ತು ಪಾತ್ರೆ ಮೊದಲೇ ಸಿದ್ಧವಾಗಿದ್ದರೆ ಆಗಂತುಕನಿಗೂ ಸಂಕೋಚವಿರಲಾರದು.

13. ಅತಿಥಿಗಾಗಿ ತ್ಯಾಗ ಮಾಡಿರಿ. ಸ್ವಯಂ ಕಷ್ಟಪಟ್ಟು ಅವರಿಗೆ ಸುಖ ನೀಡಿರಿ.

ಒಮ್ಮೆ ಪ್ರವಾದಿವರ್ಯರ(ಸ) ಬಳಿ ಓರ್ವ ಅತಿಥಿ ಬಂದರು. 'ನಾನು ಹಸಿವಿನಿಂದ ಇದ್ದೇನೆ' ಎಂದು ತಿಳಿಸಿದರು. ಪ್ರವಾದಿ(ಸ), ತಮ್ಮ ಓರ್ವ ಪತ್ನಿಯ ಬಳಿಗೆ ಊಟ ಕಳುಹಿಸಿ ಕೊಡುವಂತೆ ಹೇಳಿ ಕಳುಹಿಸಿದರು. ಅಲ್ಲಿಂದ 'ತಮ್ಮನ್ನು ಪ್ರವಾದಿಯಾಗಿ ನಿಯೋಗಿಸಿದವನಾಣೆ! ಇಲ್ಲಿ ನೀರಿನ ಹೊರತು ಇನ್ನೇನೂ ಇಲ್ಲ'ವೆಂಬ ಉತ್ತರ ಬಂತು. ಆಗ ಪ್ರವಾದಿವರ್ಯರು(ಸ) ಮತ್ತೋರ್ವ ಪತ್ನಿಯ ಬಳಿಗೆ ಹೇಳಿ ಕಳುಹಿಸಿದರು. ಅಲ್ಲಿಂದಲೂ ಇದೇ ಉತ್ತರ ಬಂತು. ಈ ರೀತಿ ಪ್ರವಾದಿವರ್ಯರು(ಸ) ತಮ್ಮ ಎಲ್ಲ ಪತ್ನಿಯರ ಬಳಿಗೂ ಕಳುಹಿಸಿದ್ದಾಯಿತು. ಎಲ್ಲ ಕಡೆಯಿಂದಲೂ ಇದೇ ತರದ ಉತ್ತರ ಬಂತು. ತರುವಾಯ ಪ್ರವಾದಿ(ಸ) ತಮ್ಮ ಸಂಗಾತಿಗಳಿಗೆ ಈ ರೀತಿ ಹೇಳಿದರು: ಈ ರಾತ್ರಿಯ ಮಟ್ಟಿಗೆ ಈ ಅತಿಥಿಯನ್ನು ಯಾರು ಸ್ವೀಕರಿಸುತ್ತಾರೆ? ಓರ್ವ ಅನ್ಸಾರಿ ಸಹಾಬಿಯವರು,* 'ಓ ಪ್ರವಾದಿವರ್ಯರೇ! ನಾನು ಸ್ವೀಕರಿಸುತ್ತೇನೆ' ಎಂದರು.

ಆ ಅನ್ಸಾರಿ ಅತಿಥಿಯನ್ನು ತಮ್ಮ ಮನೆಗೆ ಕರೆದೊಯ್ದರು. 'ನನ್ನ ಜೊತೆ ಪ್ರವಾದಿ ವರ್ಯರ(ಸ) ಈ ಅತಿಥಿ ಬಂದಿರುವರು. ಇವರನ್ನು ಸತ್ಕರಿಸು' ಎಂದು ತಮ್ಮ ಪತ್ನಿಗೆ ಹೇಳಿದರು. 'ಮನೆಯಲ್ಲಿ ಕೇವಲ ಮಕ್ಕಳಿಗಾಗುವಷ್ಟು ಆಹಾರವಿದೆ' ಎಂದು ಪತ್ನಿ ಉತ್ತರಿ ಸಿದರು. 'ಮಕ್ಕಳನ್ನು ಹೇಗಾದರೂ ಪುಸಲಾಯಿಸಿ ಮಲಗಿಸು. ಅತಿಥಿಯ ಮುಂದೆ ಊಟ ಇಟ್ಟ ಬಳಿಕ ಯಾವುದಾದರೂ ನೆಪದಿಂದ ದೀಪ ಆರಿಸಿ ಬಿಡು. ನಾವು ಅತಿಥಿಯ ಜೊತೆ ಕುಳಿತು ಉಂಡಂತೆ ಮಾಡೋಣ' ಎಂದು ಆ ಸಹಾಬಿ(ರ) ತಮ್ಮ ಪತ್ನಿಗೆ ಆದೇಶಿಸಿದರು.

ಈ ರೀತಿ ಅತಿಥಿಯು ಹೊಟ್ಟೆ ತುಂಬ ಉಂಡರು. ಮನೆಯವರು ರಾತ್ರಿಯಿಡೀ ಉಪವಾಸದಲ್ಲಿ ಕಳೆದರು. ಬೆಳಿಗ್ಗೆ ಆ ಸಹಾಬಿಯು ಪ್ರವಾದಿವರ್ಯರ(ಸ) ಬಳಿ ಹೋದರು. ಅವರನ್ನು ಕಂಡ ಕೂಡಲೇ ಪ್ರವಾದಿ(ಸ) ಈ ರೀತಿ ಹೇಳಿದರು, 'ನೀವಿಬ್ಬರೂ ನಿನ್ನೆ ರಾತ್ರಿ ನಿಮ್ಮ ಅತಿಥಿಯೊಡನೆ ಮಾಡಿದ ಸದ್‌ವ್ಯವಹಾರವು ಅಲ್ಲಾಹನಿಗೆ ಬಹಳ ಮೆಚ್ಚುಗೆ ಯಾಗಿದೆ'. (ಬುಖಾರಿ, ಮುಸ್ಲಿಮ್)

14. ನಿಮ್ಮ ಅತಿಥಿಯು ಎಂದಾದರೂ ನಿಮ್ಮೊಂದಿಗೆ ಅಪ್ರಿಯ ವ್ಯವಹಾರ ಮಾಡಿದ್ದರೂ ನೀವು ಅವರೊಂದಿಗೆ ವಿಶಾಲ ಮನೋಭಾವ ಹಾಗೂ ಔದಾರ್ಯದಿಂದ ವರ್ತಿಸಿರಿ.

ಹ. ಅಬುಲ್ ಅಹ್ವಸ್ ಜಶ್ಮಿಯವರು(ರ) ತಮ್ಮ ತಂದೆಯ ಬಗ್ಗೆ ವಿವರಿಸುತ್ತಾ, 'ಒಂದು ದಿನ ಅವರು ಪ್ರವಾದಿವರ್ಯರಲ್ಲಿ(ಸ) ಈ ರೀತಿ ಪ್ರಶ್ನಿಸಿದರು ಎಂದು ಹೇಳುತ್ತಾರೆ: 'ಒಬ್ಬರ ಬಳಿಗೆ ನಾನು ಹೋದಾಗ ಅವರು ನನ್ನನ್ನು ಸತ್ಕರಿಸದಿದ್ದರೆ ಕೆಲವು ದಿನಗಳ ಬಳಿಕ ಅವರು ನನ್ನಲ್ಲಿಗೆ ಬಂದಾಗ ನಾನು ಅವರನ್ನು ಸತ್ಕರಿಸಬೇಕೇ? ಅಥವಾ ಅವನ ದುರ್ವ್ಯವಹಾರದ ಪ್ರತೀಕಾರವೆಸಗಬೇಕೆ?' ಆಗ ಪ್ರವಾದಿ(ಸ) ಈ ರೀತಿ ಉತ್ತರಿಸಿದರು, 'ಬೇಡ, ಹೇಗಿದ್ದರೂ ನೀವು ಅವರನ್ನು ಸತ್ಕರಿಸಬೇಕು'. (ಮಿಷ್ಕಾತ್)

15. ನಿಮಗಾಗಿ ಪ್ರಾರ್ಥಿಸುವಂತೆ ಅತಿಥಿಯನ್ನು ವಿನಂತಿಸಿರಿ. ವಿಶೇಷವಾಗಿ ಅವರು

• ಹ. ಅಬೂತಲ್ಹಾ(ರ). – ಅನು

ಸದ್ಗುಣ ಸಂಪನ್ನರೂ, ಧರ್ಮನಿಷ್ಠರೂ ಆಗಿದ್ದರೆ ಅವರಲ್ಲಿ ನಿಮ್ಮ ಒಳಿತು ಮತ್ತು ಸಮೃದ್ಧಿಗಾಗಿ ಪ್ರಾರ್ಥಿಸುವಂತೆ ವಿನಂತಿಸಿರಿ. ಹ. ಅಬ್ದುಲ್ಲಾ ಬಿನ್ ಬಸರ್(ರ) ಹೇಳುತ್ತಾರೆ: ಪ್ರವಾದಿ(ಸ) ನಮ್ಮ ತಂದೆಯವರ ಮನೆಗೆ ಅತಿಥಿಯಾಗಿ ಬಂದರು. ನಾವು ಅವರಿಗೆ 'ಹರೀಸ' ನೀಡಿದೆವು. ಪ್ರವಾದಿ(ಸ) ಅದರಿಂದ ಸ್ವಲ್ಪ ತಿಂದರು. ಆ ಬಳಿಕ ನಾವು ಖರ್ಜೂರ ನೀಡಿದೆವು. ಪ್ರವಾದಿ(ಸ) ಖರ್ಜೂರ ತಿಂದು ಅದರ ಬೀಜವನ್ನು ತೋರ್ಬೆರಳು ಮತ್ತು ಮಧ್ಯ ಬೆರಳಲ್ಲಿ ಹಿಡಿದು ಬಿಸಾಡುತ್ತಿದ್ದರು. ಆ ಬಳಿಕ ನಾವು ಪಾನೀಯ ನೀಡಿದೆವು. ಪ್ರವಾದಿ(ಸ) ಅದನ್ನು ಕುಡಿದರು. ತರುವಾಯ ತಮ್ಮ ಬಲ ಬದಿಯಲ್ಲಿದ್ದವರಿಗೆ ನೀಡಿದರು. ಪ್ರವಾದಿ(ಸ) ಹೊರಡಲು ನುವಾದಾಗ ತಂದೆಯವರು ಕುದುರೆಯ ಲಗಾಮನ್ನು ಹಿಡಿದು, 'ಪ್ರವಾದಿ ವರ್ಯರೇ! ನಮಗಾಗಿ ಪ್ರಾರ್ಥಿಸಿರಿ' ಎಂದರು. ಪ್ರವಾದಿ(ಸ) ಈ ರೀತಿ ಪ್ರಾರ್ಥಿಸಿದರು:

اَللّٰهُمَّ بَارِكْ لَهُمْ فِيْمَا رَزَقْتَهُمْ، وَاغْفِرْ لَهُمْ وَارْحَمْهُمْ (ترمذی)

"ಅಲ್ಲಾಹುಮ್ಮ ಬಾರಿಕ್ ಲಹುಮ್ ಫೀಮಾ ರಝುಕ್ತಹುಮ್ ವಗ್‌ಫಿರ್‌ಲಹುಮ್ ವರ್‌ಹಮ್‌ಹುಮ್".

(ಓ ಅಲ್ಲಾಹ್! ನೀನು ಇವರಿಗೆ ನೀಡಿರುವ ಸಂಪತ್ ಸೌಕರ್ಯಗಳಲ್ಲಿ ಸಮೃದ್ಧಿ ಉಂಟು ಮಾಡು. ಇವರನ್ನು ಕ್ಷಮಿಸು. ಇವರ ಮೇಲೆ ಕರುಣೆ ತೋರು.) (ತಿರ್ಮಿದಿ)

❖ ❖ ❖ ❖

# ಅತಿಥಿಯ ಕರ್ತವ್ಯಗಳು

1. ಎಲ್ಲಿಗಾದರೂ ಅತಿಥಿಯಾಗಿ ಹೋಗುವಾಗ ನಿಮ್ಮ ಅಂತಸ್ತಿಗೆ ತಕ್ಕಂತೆ ಆತಿಥೇಯನಿಗೆ ಅಥವಾ ಅವರ ಮಕ್ಕಳಿಗೆ ಉಡುಗೊರೆಗಳನ್ನು ಕೊಂಡು ಹೋಗಿರಿ. ಉಡುಗೊರೆಗಳ ಆಯ್ಕೆಯಲ್ಲಿ ಆತಿಥೇಯನ ಅಭಿರುಚಿ ಮತ್ತು ಆಯ್ಕೆಯನ್ನು ಪರಿಗಣಿಸಿರಿ. ಉಡುಗೊರೆ ಮತ್ತು ಕೊಡುಗೆಗಳ ವಿನಿಮಯದಿಂದ ಪ್ರೀತಿ ಮತ್ತು ಬಂಧುತ್ವ ಬೆಳೆಯುತ್ತದೆ. ಉಡುಗೊರೆ ನೀಡುವವನ ಬಗ್ಗೆ ಹೃದಯದಲ್ಲಿ ಗೌರವದ ಭಾವನೆ ಮೂಡುತ್ತದೆ.

2. ಅತಿಥಿಯಾಗಿ ಹೋದಲ್ಲಿ ಮೂರು ದಿನಗಳಿಗಿಂತ ಹೆಚ್ಚು ತಂಗಬೇಡಿರಿ. ಅನಿವಾರ್ಯ ಪರಿಸ್ಥಿತಿಯಲ್ಲಿ ಅಥವಾ ಆತಿಥೇಯನ ತೀವ್ರ ಒತ್ತಾಯವಿದ್ದರೆ ಹಾಗೆ ಮಾಡಬಹುದಾಗಿದೆ.

ಪ್ರವಾದಿ(ಸ) ಹೇಳಿರುವರು: "ಆತಿಥೇಯನನ್ನು ತೊಂದರೆಗೊಳಪಡಿಸುವಷ್ಟು ದೀರ್ಘ ಕಾಲ ಅಲ್ಲಿ ಉಳಿಯುವುದು ಅತಿಥಿಗೆ ಧರ್ಮಸಮ್ಮತವಲ್ಲ". (ಅಲ್ ಅದಬುಲ್ ಮುಫ್ರದ್)

'ಸಹೀಹ್ ಮುಸ್ಲಿಮ್'ನಲ್ಲಿ ಈ ರೀತಿ ವರದಿಯಾಗಿದೆ: "ಆತಿಥೇಯನನ್ನು ಅಪರಾಧಿಯಾಗಿ ಮಾರ್ಪಡಿಸುವಷ್ಟು ದೀರ್ಘ ಕಾಲ ಅಲ್ಲಿ ತಂಗುವುದು ಮುಸ್ಲಿಮನಿಗೆ ಧರ್ಮಸಮ್ಮತವಲ್ಲ.' ಜನರು, "ಓ ಪ್ರವಾದಿವರ್ಯರೇ! ಅಪರಾಧಿಯಾಗಿ ಮಾರ್ಪಡಿಸುವುದು ಹೇಗೆ?" ಎಂದು ಕೇಳಿದಾಗ, "ಆತಿಥೇಯನ ಬಳಿ ಸತ್ಕಾರ ಮಾಡಲು ಏನೂ ಉಳಿಯದಷ್ಟು ದೀರ್ಘ ಕಾಲ ಅಲ್ಲಿ ತಂಗುವುದು" ಎಂದು ಪ್ರವಾದಿ(ಸ) ಹೇಳಿದರು.

3. ಸದಾ ಇತರರ ಅತಿಥಿಯಾಗಿರಬೇಡಿರಿ. ಇತರರನ್ನೂ ನಿಮ್ಮಲ್ಲಿಗೆ ಆಹ್ವಾನಿಸಿರಿ. ಮನಬಿಚ್ಚಿ ಅವರನ್ನು ಸತ್ಕರಿಸಿರಿ.

4. ಅತಿಥಿಯಾಗಿ ಹೋಗುವಾಗ ಕಾಲಕ್ಕೆ ತಕ್ಕಂತೆ ಆವಶ್ಯಕ ವಸ್ತುಗಳನ್ನೂ ಹಾಸಿಗೆ ಇತ್ಯಾದಿಗಳನ್ನೂ ಒಯ್ಯಿರಿ. ಚಳಿಗಾಲದಲ್ಲಿ ವಿಶೇಷವಾಗಿ ಬೆಚ್ಚಗಿನ ಹಾಸಿಗೆಯನ್ನು ಒಯ್ಯಿರಿ. ಅನ್ಯಥಾ ಆತಿಥೇಯನಿಗೆ ಸಹಿಸಲಾಗದ ತೊಂದರೆಯಾದೀತು. ಅತಿಥಿಯು ಎಂದೂ ಆತಿಥೇಯನಿಗೆ ಕಂಟಕಪ್ರಾಯನಾಗಬಾರದು.

5. ಆತಿಥೇಯನ ಕೆಲಸ ಕಾರ್ಯಗಳ ಬಗ್ಗೆ ನೆನಪಿಡಿರಿ. ನಿಮ್ಮಿಂದಾಗಿ ಆ ಕೆಲಸ ಕಾರ್ಯಗಳಲ್ಲಿ ಅಡ್ಡಿ ಆತಂಕಗಳಾಗದಂತೆ ನೋಡಿಕೊಳ್ಳಿರಿ.

6. ಆತಿಥೇಯನಲ್ಲಿ ಬಗೆಬಗೆಯ ಬೇಡಿಕೆಗಳನ್ನಿರಿಸಬೇಡಿರಿ. ಅವರು ಸ್ವಯಂ ನಿಮಗಾಗಿ ಮಾಡುವ ಆದರ, ಸತ್ಕಾರಗಳನ್ನು ಕೃತಜ್ಞತಾಪೂರ್ವಕ ಸ್ವೀಕರಿಸಿರಿ. ಅವರನ್ನು ಅನಗತ್ಯವಾಗಿ ತೊಂದರೆಗೊಳಪಡಿಸದಿರಿ.

7. ನೀವು ಆತಿಥೇಯನ ಮುಂದೆ ಮನೆಯ ಮಹಿಳೆಯರ ಮಟ್ಟಿಗೆ ಪರಕೀಯರಾಗಿದ್ದರೆ

ಆತಿಥೇಯನ ಅನುಪಸ್ಥಿತಿಯಲ್ಲಿ ಅನಗತ್ಯವಾಗಿ ಅವರೊಂದಿಗೆ ಮಾತನಾಡಬೇಡಿರಿ. ಅವರ ಪರಸ್ಪರ ಸಂಭಾಷಣೆಯನ್ನು ಆಲಿಸುವ ಪ್ರಯತ್ನವನ್ನೂ ಮಾಡದಿರಿ. ನಿಮ್ಮ ಮಾತು, ಕೃತಿ ಗಳಿಂದ ಅವರಿಗೆ ಯಾವುದೇ ರೀತಿಯ ತೊಂದರೆಯಾಗದಂತೆ ವರ್ತಿಸಿರಿ. ಪರ್ದಾದ ನಿಯಮಗಳನ್ನು ಪಾಲಿಸುವಲ್ಲಿ ಅವರಿಗೆ ಅಡಚಣೆಯಾಗದಂತೆ ನೋಡಿಕೊಳ್ಳಿರಿ.

8. ಕಾರಣಾಂತರದಿಂದ ನೀವು ಆತಿಥೇಯನ ಜೊತೆ ಊಟ ಮಾಡಲಾರಿರಾದರೆ ಅಥವಾ ನೀವು ಉಪವಾಸ ವ್ರತ ಆಚರಿಸಿದ್ದರೆ ಉತ್ತಮ ರೀತಿಯಲ್ಲಿ ನಿರಾಕರಿಸಿರಿ. ಆತಿಥೇಯನಿಗಾಗಿ ಒಳಿತು ಸಮೃದ್ಧಿಯ ಪ್ರಾರ್ಥನೆ ಮಾಡಿರಿ.

ಹ. ಇಬ್ರಾಹೀಮ್(ಅ) ಅತ್ಯುತ್ತಮ ಔತಣ ಸಿದ್ಧಪಡಿಸಿ ತಮ್ಮ ಅತಿಥಿಗಳ ಮುಂದಿರಿ ಸಿದಾಗ ಅವರದನ್ನು ಸ್ವೀಕರಿಸಲು ಹಿಂಜರಿದರು. 'ನೀವು ಏಕೆ ತಿನ್ನುತ್ತಿಲ್ಲ?' ಎಂದು ಹ. ಇಬ್ರಾಹೀಮ್(ಅ) ಪ್ರಶ್ನಿಸಿದಾಗ, ಸಾಂತ್ವನ ನೀಡುತ್ತಾ ದೇವಚರರು ಹೀಗೆಂದರು, 'ನೀವು ಬೇಸರಿಸಬೇಡಿರಿ. ನಾವು ತಿನ್ನಲಾರೆವು. ನಾವಂತೂ ತಮಗೊಬ್ಬ ಉತ್ತಮ ಪುತ್ರನ ಶುಭ ವಾರ್ತೆ ನೀಡಲು ಬಂದವರು.'

9. ಎಲ್ಲಿಗಾದರೂ ಅತಿಥಿಯಾಗಿ ಹೋದರೆ ಊಟವಾದ ಬಳಿಕ ಆತಿಥೇಯನ ಸುಖ ಸಂಪತ್ತಿನಲ್ಲಿ ವೃದ್ಧಿಗಾಗಿ, ಒಳಿತು ಸಮೃದ್ಧಿಗಳಿಗಾಗಿ ಹಾಗೂ ಕ್ಷಮೆ ಮತ್ತು ಕರುಣೆಗಾಗಿ ಅಲ್ಲಾಹನಲ್ಲಿ ಪ್ರಾರ್ಥಿಸಿರಿ. ಒಮ್ಮೆ ಹ. ಅಬುಲ್ ಹಸೀಮ್ ಬಿನ್ ತೈಹಾನ್(ರ), ಪ್ರವಾದಿ(ಸ) ಮತ್ತು ಸಹಾಬಿಗಳಿಗೆ ಔತಣ ಏರ್ಪಡಿಸಿದ್ದರು. ಊಟ ಮುಗಿದ ಬಳಿಕ ಪ್ರವಾದಿ(ಸ) 'ನಿಮ್ಮ ಸೋದರನಿಗೆ ಸಂಭಾವನೆ ನೀಡಿರಿ' ಎಂದು ಹೇಳಿದರು. 'ಪ್ರವಾದಿ ವರ್ಯರೇ! ಯಾವ ಸಂಭಾವನೆ ನೀಡಬೇಕು' ಎಂದು ಕೇಳಿದಾಗ, 'ಮನುಷ್ಯನು ತನ್ನ ಸೋದರನ ಬಳಿ ಹೋಗಿ ತನ್ನ ಅನ್ನಪಾನೀಯ ಸೇವಿಸಿ ಅವನಿಗಾಗಿ ಒಳಿತು-ಸಮೃದ್ಧಿಯ ಪ್ರಾರ್ಥನೆ ಮಾಡಬೇಕು. ಇದುವೇ ಅವನ ಸಂಭಾವನೆ' ಎಂದು ಪ್ರವಾದಿ(ಸ) ಉತ್ತರಿಸಿದರು. (ಅಬೂದಾವೂದ್)

ಒಮ್ಮೆ ಪ್ರವಾದಿ(ಸ) ಹ. ಸಅದ್ ಬಿನ್ ಉಬಾದರ(ರ) ಮನೆಗೆ ಹೋದರು. ಹ. ಸಅದ್‌ರು(ರ) ಪ್ರವಾದಿವರ್ಯರಿಗೆ(ಸ) ರೊಟ್ಟಿ ಮತ್ತು ಝೈತೂನ್ ನೀಡಿದರು. ಪ್ರವಾದಿ(ಸ) ಅದನ್ನು ತಿಂದ ಬಳಿಕ ಈ ರೀತಿ ಪ್ರಾರ್ಥಿಸಿದರು:

اَفْطَرَ عِنْدَكُمُ الصَّائِمُوْنَ وَاَكَلَ طَعَامَكُمُ الْاَبْرَارُ وَصَلَّتْ عَلَيْكُمُ الْمَلَائِكَةُ (ابوداؤد)

"ಅಫ್‌ತರ ಇಂದಕುಮುಸ್ಸಾಇಮೂನ ವಅಕಲ ತಆಮಕುಮುಲ್ ಅಬ್‌ರಾರು ವಸಲ್ಲತ್ ಅಲೈಕುಮುಲ್ ಮಲಾಇಕಃ".

(ನಿಮ್ಮಲ್ಲಿ ಉಪವಾಸಿಗರು ಪಾರಣೆ ಮಾಡುವಂತಾಗಲಿ. ಸಜ್ಜನರು ನಿಮ್ಮಲ್ಲಿ ಉಣ್ಣು ವಂತಾಗಲಿ ಮತ್ತು ದೇವಚರರು ನಿಮಗಾಗಿ ಕ್ಷಮೆ ಮತ್ತು ಕರುಣೆಯ ಪ್ರಾರ್ಥನೆ ಮಾಡುವಂತಾಗಲಿ.) (ಅಬೂದಾವೂದ್)

# ಸಭೆಯ ಮರ್ಯಾದೆಗಳು

1. ಸದಾ ಸಜ್ಜನರ ಸಹವಾಸದಲ್ಲಿ ಕುಳಿತುಕೊಳ್ಳಲು ಪ್ರಯತ್ನಿಸಿರಿ.

2. ಸಭೆಯಲ್ಲಿ ನಡೆಯುವ ಚರ್ಚೆಯಲ್ಲಿ ಭಾಗವಹಿಸಿರಿ. ಸಭೆಯಲ್ಲಿದ್ದುಕೊಂಡು ಸಂಭಾಷಣೆಯಲ್ಲಿ ಭಾಗವಹಿಸದೆ ಹುಬ್ಬೇರಿಸಿ ಕುಳಿತಿರುವುದು ಅಹಂಭಾವದ ಸಂಕೇತವಾಗಿದೆ. ಸಹಾಬಿವರ್ಯರ ಸಭೆಗಳಲ್ಲಿ ಅವರು ನಡೆಸುತ್ತಿದ್ದ ಸಂಭಾಷಣೆಗಳಲ್ಲಿ ಪ್ರವಾದಿವರ್ಯರು(ಸ) ಭಾಗವಹಿಸುತ್ತಿದ್ದರು. ಸಭೆಯಲ್ಲಿ ಖಿನ್ನರಾಗಿ ಮತ್ತು ನೀರಸವಾಗಿ ಕುಳಿತುಕೊಳ್ಳದಿರಿ. ನಗು ಮುಖದೊಂದಿಗೆ ಲವಲವಿಕೆಯಿಂದ ಕುಳಿತುಕೊಳ್ಳಿರಿ.

3. ನಿಮ್ಮ ಯಾವ ಸಭೆಯಲ್ಲಿಯೂ ಅಲ್ಲಾಹನ ಮತ್ತು ಪರಲೋಕದ ಪ್ರಸ್ತಾಪವಿಲ್ಲದೆ ಹೋಗಬಾರದು. ಧಾರ್ಮಿಕ ಸಂಭಾಷಣೆಯಲ್ಲಿ ಸಭಿಕರು ಅಭಿರುಚಿ ಇಲ್ಲದವರೆಂದು ಭಾಸವಾದಾಗ ಲೌಕಿಕ ವಿಷಯಗಳ ಬಗ್ಗೆ ಚರ್ಚಿಸಿರಿ. ಸಂದರ್ಭ ಸಿಕ್ಕಾಗ ಸಂಭಾಷಣೆಯನ್ನು ಯುಕ್ತಿಯುಕ್ತವಾಗಿ ಧಾರ್ಮಿಕ ವಿಷಯಕ್ಕೆ ತಿರುಗಿಸಲು ಪ್ರಯತ್ನಿಸಿರಿ.

4. ಸಭೆಯಲ್ಲಿ ಸ್ಥಳ ಸಿಕ್ಕಿದಲ್ಲಿ ಕುಳಿತುಕೊಳ್ಳಿರಿ. ಸಭೆಯನ್ನು ಭೇದಿಸಿ ಇಬ್ಬರ ಮಧ್ಯೆ ಲಾಗ ಹಾಕಿ ಮುಂದೆ ಹೋಗುವ ಪ್ರಯತ್ನ ಮಾಡದಿರಿ. ಇದರಿಂದ ಮೊದಲು ಬಂದು ಕುಳಿತವರಿಗೆ ತೊಂದರೆಯಾಗುತ್ತದೆ. ಹೀಗೆ ಮಾಡುವವರು ದೊಡ್ಡಸ್ತಿಕೆ ಮತ್ತು ಅಹಂಭಾವದಲ್ಲಿ ಸಿಲುಕುತ್ತಾರೆ.

5. ಸಭೆಯಲ್ಲಿ ಕುಳಿತವರನ್ನು ಎಬ್ಬಿಸಿ ಅವರ ಸ್ಥಳದಲ್ಲಿ ಕುಳಿತುಕೊಳ್ಳಬೇಡಿ. ಇದು ಅತ್ಯಂತ ಕೆಟ್ಟ ಅಭ್ಯಾಸ. ಇದರಿಂದ ಇತರರ ಮನಸ್ಸಿನಲ್ಲಿ ದ್ವೇಷಾಸೂಯೆ ಹುಟ್ಟುತ್ತದೆ. ತಮ್ಮ ದೊಡ್ಡತನವನ್ನು ಮೆರೆಯುವ ಚಟವೂ ಇದರಲ್ಲಿ ಶಾಮೀಲಾಗುತ್ತದೆ.

6. ಸಭೆಯಲ್ಲಿ ಜನರು ವೃತ್ತ ಮಾಡಿ ಕುಳಿತುಕೊಂಡಿದ್ದರೆ ಅದರ ಮಧ್ಯೆ ಪ್ರವೇಶಿಸುವ ಪ್ರಯತ್ನ ನಡೆಸದಿರಿ. ಇದು ಅಸಭ್ಯ ಕೆಲಸ. ಇದರಿಂದ ನೀವು ನಗೆಪಾಟಲಿಗೀಡಾಗುವಿರಿ. ಹಾಗೆ ಮಾಡುವವರನ್ನು ಪ್ರವಾದಿ(ಸ) ಶಪಿಸಿರುವರು.

7. ಸಭೆಯಲ್ಲಿ ಕುಳಿತವರ ಪೈಕಿ ಯಾರಾದರೂ ತಮ್ಮ ಆವಶ್ಯಕತೆಗಾಗಿ ಎದ್ದು ಹೋದಾಗ ಅವರ ಸ್ಥಳವನ್ನು ಅತಿಕ್ರಮಿಸಬೇಡಿರಿ. ಆ ಸ್ಥಳವನ್ನು ಕಾದಿರಿಸಿರಿ. ಅವರು ಹಿಂತಿರುಗಿ ಬರಲಾರರೆಂದು ಖಾತ್ರಿಯಾದರೆ ಮಾತ್ರ ನಿಸ್ಸಂಕೋಚವಾಗಿ ಕುಳಿತುಕೊಳ್ಳಬಹುದು.

8. ಸಭೆಯಲ್ಲಿ ಇಬ್ಬರು ಜೊತೆಗೆ ಕುಳಿತಿದ್ದರೆ ಅವರ ಅನುಮತಿ ಇಲ್ಲದೆ ಅವರನ್ನು ಬೇರ್ಪಡಿಸಬೇಡಿರಿ. ಅವರು ಪರಸ್ಪರ ಸ್ನೇಹದ ಕಾರಣ ಅಥವಾ ಇನ್ನಾವುದಾದರೂ ಕಾರಣದಿಂದ ಜೊತೆಗೆ ಕುಳಿತಿರಬಹುದು. ಅವರನ್ನು ಪರಸ್ಪರ ಬೇರ್ಪಡಿಸಿದರೆ ಅವರ ಮನ ನೊಂದೀತು.

9. ಸಭೆಯಲ್ಲಿ ಕುಳಿತುಕೊಳ್ಳಲು ವಿಶೇಷ ಸ್ಥಳವನ್ನು ಬಯಸಬೇಡಿರಿ. ಅತಿಥಿಯಾಗಿ ಹೋದಲ್ಲಿಯೂ ವಿಶಿಷ್ಟ ಸ್ಥಳದಲ್ಲಿ ಕುಳಿತುಕೊಳ್ಳುವ ಪ್ರಯತ್ನ ಮಾಡಬೇಡಿರಿ. ಅವರು ಒತ್ತಾಯಪೂರ್ವಕ ಕೂರಿಸಿದರೆ ಚಿಂತಿಲ್ಲ. ಸಭೆಯಲ್ಲಿ ಸದಾ ಸಭ್ಯತೆಯೊಂದಿಗೆ ಕುಳಿತು ಕೊಳ್ಳಿರಿ. ಕಾಲುಚಾಚಿ ಕುಳಿತುಕೊಳ್ಳದಿರಿ.

10. ಸಭಾಧ್ಯಕ್ಷರ ಹತ್ತಿರವೇ ಕುಳಿತುಕೊಳ್ಳಬೇಕೆಂದು ಪ್ರಯತ್ನಿಸದಿರಿ. ಸ್ಥಳ ಸಿಕ್ಕಲ್ಲಿ ಕುಳಿತುಕೊಳ್ಳಿರಿ. ಅನಂತರ ಬರುವವರಿಗೆ ತೊಂದರೆಯಾಗದಂತೆ ಕುಳಿತುಕೊಳ್ಳಿರಿ. ಹೆಚ್ಚು ಜನರು ಬಂದಾಗ ಸೇರಿ ಕುಳಿತುಕೊಂಡು ಇತರರಿಗೆ ಸ್ಥಳಾವಕಾಶ ಮಾಡಿಕೊಡಿರಿ.

11. ಸಭೆಯಲ್ಲಿ ಇನ್ನೊಬ್ಬರ ಮುಂದೆ ಅಥವಾ ಸುತ್ತಮುತ್ತ ನಿಲ್ಲಬೇಡಿರಿ. ಗೌರವ ಸೂಚನೆಯ ಈ ಕ್ರಮ ಇಸ್ಲಾಮಿ ಶಿಷ್ಟಾಚಾರಕ್ಕೆ ವಿರುದ್ಧವಾಗಿದೆ.

12. ಸಭೆಯಲ್ಲಿ ಇಬ್ಬರು ಪರಸ್ಪರ ರಹಸ್ಯ ಸಂಭಾಷಣೆ ನಡೆಸಬಾರದು. ಇದರಿಂದ ಇತರರ ಮನಸ್ಸಿನಲ್ಲಿ ಸಂಶಯ ಮೂಡುವ ಸಂಭವವಿದೆ.

13. ಸಭೆಯಲ್ಲಿ ನಿಮಗೇನಾದರೂ ಹೇಳಬೇಕಾಗಿದ್ದಲ್ಲಿ ಸಭಾಧ್ಯಕ್ಷರ ಅನುಮತಿ ಪಡೆದು ಹೇಳಿರಿ. ಸಂಭಾಷಣೆ ಅಥವಾ ವಿಚಾರ ವಿನಿಮಯದಲ್ಲಿ ನೀವೇ ಅಧ್ಯಕ್ಷರೋ ಎಂದು ಭಾಸ ವಾಗುವಂತೆ ವರ್ತಿಸದಿರಿ. ಇದು ಡಂಬಾಚಾರ. ಸಭಾಧ್ಯಕ್ಷರ ಮೇಲೆ ಮಾಡುವ ಅನ್ಯಾಯ.

14. ಒಮ್ಮೆ ಒಬ್ಬನೇ ಮಾತಾಡಬೇಕು. ಇತರರೆಲ್ಲಾ ಆತನ ಮಾತುಗಳನ್ನು ಗಮನ ವಿಟ್ಟು ಕೇಳಬೇಕು. ತಮ್ಮ ಮಾತನ್ನು ಹೇಳುವ ತವಕದಲ್ಲಿ ಎಲ್ಲರೂ ಒಮ್ಮೆಲೇ ಮಾತಾಡ ಬಾರದು. ಅದರಿಂದ ಯಾರ ಮಾತೂ ಕೇಳಿಸಲಾರದ ಗೊಂದಲದ ಸ್ಥಿತಿ ಉಂಟಾದೀತು.

15. ಸಭೆಯಲ್ಲಿ ಪ್ರಸ್ತಾಪಿತ ರಹಸ್ಯ ಮಾತುಗಳನ್ನು ಎಲ್ಲೆಡೆ ಹೇಳುತ್ತ ತಿರುಗಬೇಡಿ. ರಹಸ್ಯವನ್ನು ಕಾಪಾಡಬೇಕಾದುದು ಸಭೆಯ ಹಕ್ಕಾಗಿದೆ.

16. ಸಭೆಯಲ್ಲಿ ಒಂದು ವಿಷಯ ಚರ್ಚೆಯಾಗುತ್ತಿರುವಾಗ ಅದು ತೀರ್ಮಾನವಾಗದೆ ಇನ್ನೊಂದು ವಿಷಯ ಎತ್ತಬೇಡಿ. ಇತರರ ಮಾತಿನ ಮಧ್ಯೆ ನಿಮ್ಮ ಮಾತನ್ನು ಆರಂಭಿಸಬೇಡಿ. ಎಂದಾದರೂ ನಿಮಗೆ ಮಧ್ಯೆ ಹೇಳಲೇ ಬೇಕಾದ ಸಂದರ್ಭ ಬಂದರೆ ಅದಕ್ಕೆ ಮಾತಾಡು ವವನ ಅನುಮತಿ ಪಡೆಯಿರಿ.

17. ಯಾವುದಾದರೂ ವಿಷಯದ ಬಗ್ಗೆ ಚರ್ಚೆ ನಡೆಯುತ್ತಿರುವಾಗ ಸಭಾಧ್ಯಕ್ಷರು ಎಲ್ಲರ ಕಡೆಯೂ ಗಮನಹರಿಸಬೇಕು. ಎಡಬಲಗಳಿಗೆ ತಿರುಗಿ ಎಲ್ಲ ಕಡೆಯವರನ್ನು ನೋಡಿ ಮಾತಾಡಬೇಕು. ಪ್ರತಿಯೊಬ್ಬನಿಗೂ ಪೂರ್ಣ ಸ್ವಾತಂತ್ರ್ಯದೊಂದಿಗೆ ಮಾತನಾಡುವ ಮುಕ್ತ ಅವಕಾಶ ಕೊಡಬೇಕು.

18. ಸಭೆ ವಿಸರ್ಜನೆಗೆ ಮುಂಚೆ ಈ ಕೆಳಗಿನಂತೆ ಪ್ರಾರ್ಥಿಸಿರಿ. ಆ ಬಳಿಕ ಸಭೆ ಬರ್ಖಾಸ್ತುಗೊಳಿಸಿರಿ.

اَللّٰهُمَّ اقْسِمْ لَنَا مِنْ خَشْيَتِكَ مَا تَحُوْلُ بَيْنَنَا وَبَيْنَ مَعْصِيَتِكَ وَمِنْ طَاعَتِكَ مَا تُبَلِّغُنَا بِهِ جَنَّتَكَ، وَمِنَ الْيَقِيْنِ مَا تُهَوِّنُ بِهِ عَلَيْنَا مَصَائِبَ الدُّنْيَا ـ اَللّٰهُمَّ مَتِّعْنَا بِاَسْمَاعِنَا وَاَبْصَارِنَا وَقُوَّتِنَا مَا اَحْيَيْتَنَا وَاجْعَلْهُ الْوَارِثَ مِنَّا، وَاجْعَلْ ثَأْرَنَا عَلٰى مَنْ ظَلَمَنَا وَانْصُرْنَا عَلٰى مَنْ عَادَانَا وَلَا تَجْعَلْ مُصِيْبَتَنَا فِيْ دِيْنِنَا وَلَا تَجْعَلِ الدُّنْيَا اَكْبَرَ هَمِّنَا، وَلَا مَبْلَغَ عِلْمِنَا وَلَا تُسَلِّطْ عَلَيْنَا مَنْ لَّا يَرْحَمُنَا (ترمذی)

"ಅಲ್ಲಾಹುಮ್ಮಕ್‌ಸಿಮ್ ಲನಾ ಮಿನ್ ಖಿಷ್‌ಯತಿಕ ಮಾ ತಹೂಲು ಬೈನನಾ ವಬೈನ ಮಲ್‌ಸಿಯತಿಕ ವಮಿನ್ ತಾಅತಿಕ ಮಾ ತುಬಲ್ಲಿಗುನಾ ಬಿಹೀ ಜನ್ನತಕ, ವ ಮಿನಲ್ ಯಕೀನಿ ಮಾ ತಹೂನು ಬಿಹೀ ಅಲೈನಾ ಮದಾರ್ರುದ್ದುನ್ಯಾ. ಅಲ್ಲಾಹುಮ್ಮ ಮತ್ತಿಲ್‌ನಾ ಬಿಅಸ್‌ಮಾಇನಾ ವ ಅಬ್‌ಸಾರಿನಾ ವ ಕುವ್ವತಿನಾ ಮಾ ಅಹ್‌ಯಯ್ತನಾ ವಜ್‌ಅಲ್‌ಹುಲ್ ವಾರಿಸ ಮಿನ್ನಾ ವಜ್‌ಅಲ್ ಸಲ್‌ರನಾ ಅಲಾಮನ್ ಝುಲಮನಾ ವನ್‌ಸುರ್‌ನಾ ಅಲಾ ಮನ್ ಆದಾನಾ ವಲಾ ತಜ್‌ಅಲ್ ಮುಸೀಬತನಾ ಫೀ ದೀನಿನಾ ವಲಾ ತಜ್‌ಅಲಿದ್ದುನ್ಯಾ ಅಕ್ಬರ ಹಮ್ಮಿನಾ ವಲಾ ಮಬ್‌ಲಗ ಇಲ್ಮಿನಾ ವಲಾ ತುಸಲ್ಲಿತ್ ಅಲೈನಾ ಮಲ್ಲಾ ಯರ್‌ಹಮುನಾ".

(ಓ ಅಲ್ಲಾಹ್! ನಮ್ಮ ಮತ್ತು ಅಪರಾಧಗಳ ಮಧ್ಯೆ ಮರೆಯಾಗುವಂತೆ ನೀನು ನಮಗೆ ನಿನ್ನ ಭಯ-ಭಕ್ತಿಯನ್ನು ದಯಪಾಲಿಸು. ನಮ್ಮನ್ನು ನಿನ್ನ ಸ್ವರ್ಗಕ್ಕೆ ತಲುಪಿಸು ವಂತಹ ನಿನ್ನ ಅನುಗ್ರಹವನ್ನು ನಮಗೆ ದಯಪಾಲಿಸು. ಲೌಕಿಕ ನಷ್ಟಗಳು ಕ್ಷುಲ್ಲಕವಾಗಿ ನಮಗೆ ಕಾಣುವಂತಹ ದೃಢವಿಶ್ವಾಸವನ್ನು ದಯಪಾಲಿಸು. ಓ ಅಲ್ಲಾಹ್! ನೀನು ನಮ್ಮನ್ನು ಬದುಕಿಸುವ ತನಕ ನಮಗೆ ನಮ್ಮ ಶ್ರವಣ, ದೃಷ್ಟಿ ಮತ್ತು ದೈಹಿಕ ಶಕ್ತಿಗಳಿಂದ ಪ್ರಯೋಜನ ಪಡೆಯುವ ಅವಕಾಶ ಒದಗಿಸು. ಈ ಒಳಿತನ್ನು ನಮ್ಮ ನಂತರವೂ ಜಾರಿಯಲ್ಲಿಡು. ನಮ್ಮ ಮೇಲೆ ಅನ್ಯಾಯ ಮಾಡುವವರಿಗೆ ನೀನೇ ನಮ್ಮ ಪತಿಯಿಂದ ಪ್ರತೀಕಾರವೆಸಗು. ನಮ್ಮನ್ನು ದ್ವೇಷಿಸುವವರ ಮೇಲೆ ನಮಗೆ ಮೇಲುಗೈ ದಯಪಾಲಿಸು. ನಮ್ಮನ್ನು ಧಾರ್ಮಿಕವಾದ ಪರೀಕ್ಷೆಗಳಿಗೆ ಒಳಪಡಿಸಬೇಡ. ಲೋಕವನ್ನು ನಮ್ಮ ಪರಮೋದ್ದೇಶವಾಗಿಸಬೇಡ. ಲೋಕವನ್ನೇ ನಮ್ಮ ವಿದ್ಯೆ ಬುದ್ಧಿಯ ಗುರಿಯಾಗಿರಿಸಬೇಡ. ನಮ್ಮ ಮೇಲೆ ಕರುಣೆ ಇಲ್ಲದವರ ಆಡಳಿತಕ್ಕೆ ನಮ್ಮನ್ನು ಒಳಪಡಿಸಬೇಡ.) (ತಿರ್ಮಿದಿ)

❖ ❖ ❖ ❖

# ಸಲಾಮ್‌ನ ಮಹತ್ವ

1. ಮುಸ್ಲಿಮ್ ಸಹೋದರನೊಬ್ಬನನ್ನು ಭೇಟಿಯಾದಾಗ ಅವನೊಂದಿಗೆ ನಿಮ್ಮ ಸಂಬಂಧ ಮತ್ತು ಅಭಿನಂದನೆಯ ಪ್ರಕಟನೆಗಾಗಿ 'ಅಸ್ಸಲಾಮು ಅಲೈಕುಮ್' ಎಂದು ಹೇಳಿರಿ. ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಇದೆ:

وَإِذَا جَاءَكَ الَّذِينَ يُؤْمِنُونَ بِآيَاتِنَا فَقُلْ سَلَامٌ عَلَيْكُمْ

**"ಓ ಪ್ರವಾದಿವರ್ಯರೇ! ನಮ್ಮ ಸೂಕ್ತಗಳಲ್ಲಿ ವಿಶ್ವಾಸವಿರಿಸುವವರು ನಿಮ್ಮ ಬಳಿ ಬಂದಾಗ ಅವರಿಗೆ 'ಅಸ್ಸಲಾಮು ಅಲೈಕುಮ್' ಎಂದು ಹೇಳಿರಿ". (6:54)**

ಈ ಸೂಕ್ತದಲ್ಲಿ ಪ್ರವಾದಿವರ್ಯರನ್ನು ಸಂಬೋಧಿಸುತ್ತಾ, ಪರೋಕ್ಷವಾಗಿ ಮುಸ್ಲಿಮ್ ಸಮುದಾಯಕ್ಕೆ ಒಂದು ತಾತ್ವಿಕ ಆದೇಶ ನೀಡಲಾಗಿದೆ. ಮುಸ್ಲಿಮರು ಮುಸ್ಲಿಮರನ್ನು ಭೇಟಿಯಾದಾಗಲೆಲ್ಲಾ ಪರಸ್ಪರ ಪ್ರೇಮ, ಅಭಿನಂದನೆಯ ಭಾವನೆಯನ್ನು ವಿನಿಮಯ ಮಾಡಬೇಕು. ಅದರ ಅತ್ಯುತ್ತಮ ವಿಧಾನವೆಂದರೆ ಪರಸ್ಪರ ಶಾಂತಿ ಮತ್ತು ಕ್ಷೇಮಕ್ಕಾಗಿ ಪ್ರಾರ್ಥಿಸುವುದು. ಒಬ್ಬನು 'ಅಸ್ಸಲಾಮು ಅಲೈಕುಮ್' ಎಂದಾಗ ಇನ್ನೊಬ್ಬನು 'ವಅಲೈಕುಮುಸ್ಸಲಾಮ್' ಎನ್ನಬೇಕು. ಸಲಾಮ್ ಪರಸ್ಪರ ಪ್ರೀತಿ, ವಿಶ್ವಾಸಗಳನ್ನು ಬೆಳೆಸುವ ಮತ್ತು ದೃಢಗೊಳಿಸುವ ಸಾಧನವಾಗಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು: "ನೀವು ಸತ್ಯವಿಶ್ವಾಸಿಗಳಾಗುವ ತನಕ ಸ್ವರ್ಗ ಪ್ರವೇಶಿಸಲಾರಿರಿ. ನೀವು ಪರಸ್ಪರ ಪ್ರೀತಿಸುವ ತನಕ ಸತ್ಯವಿಶ್ವಾಸಿಗಳಾಗಲಾರಿರಿ. ನೀವು ಪರಸ್ಪರ ಪ್ರೀತಿಸುವಂತಹ ಒಂದು ಉಪಾಯವನ್ನು ನಾನು ಹೇಳಲೇ? ಪರಸ್ಪರ ಸಲಾಮ್ ವರ್ಧಿಸಿರಿ". (ಮಿಷ್ಕಾತ್)

2. ಸದಾ ಇಸ್ಲಾಮೀ ಕ್ರಮದಲ್ಲಿ ಸಲಾಮ್ ಹೇಳಿರಿ. ಸಂಭಾಷಣೆ ಇರಲಿ. ಪತ್ರ ವ್ಯವಹಾರ ಇರಲಿ. ಸದಾ ಕುರ್‌ಆನ್ ಮತ್ತು ಸುನ್ನತ್‌ನಲ್ಲಿ ಬಂದಿರುವ ಈ ಪದಗಳನ್ನೇ ಉಪಯೋಗಿಸಿರಿ. ಈ ಇಸ್ಲಾಮೀ ಕ್ರಮವನ್ನು ಬಿಟ್ಟು ಸಮಾಜದಲ್ಲಿ ಪ್ರಚಲಿತವಿರುವ ಪದ ಗಳನ್ನು ಮತ್ತು ಕ್ರಮಗಳನ್ನು ಕೈಗೊಳ್ಳಬೇಡಿರಿ. ಇಸ್ಲಾಮ್ ಕಲಿಸಿದ ಈ ಅಭಿನಂದನಾ ಕ್ರಮವು ಅತ್ಯಂತ ಸರಳ, ಅರ್ಥಗರ್ಭಿತ, ಪ್ರಭಾವಶಾಲಿಯಾಗಿದ್ದು, ಶಾಂತಿ ಕ್ಷೇಮಗಳ ಸಮಗ್ರ ಪ್ರಾರ್ಥನೆಯಾಗಿದೆ. ನೀವು ನಿಮ್ಮ ಓರ್ವ ಸಹೋದರನನ್ನು ಕಂಡಾಗ 'ಅಸ್ಸಲಾಮು ಅಲೈಕುಮ್' ಎಂದು ಹೇಳಿದರೆ ಅದರ ಅರ್ಥ 'ದೇವನು ನಿಮ್ಮನ್ನು ಎಲ್ಲಾ ರೀತಿಯ

ಸಂರಕ್ಷಣೆ, ಶಾಂತಿ ಮತ್ತು ಕ್ಷೇಮದಿಂದ ಅನುಗ್ರಹಿಸಲಿ' ಎಂದಾಗುತ್ತದೆ. ದೇವನು ನಿಮ್ಮ ಪ್ರಾಣ, ಸೊತ್ತುಗಳನ್ನು ರಕ್ಷಿಸಲಿ. ಮನೆ ಮಂದಿಯನ್ನು ರಕ್ಷಿಸಲಿ. ಧರ್ಮ ಮತ್ತು ವಿಶ್ವಾಸ ವನ್ನು ರಕ್ಷಿಸಲಿ. ನಿಮ್ಮ ಇಹಪರಗಳು ಶಾಂತಿಯುತವಾಗಿರಲಿ. ನನ್ನ ಅರಿವಿನಲ್ಲಿರುವ ಮತ್ತು ಇಲ್ಲದಿರುವ ಎಲ್ಲ ಸಂರಕ್ಷಣೆಗಳಿಂದಲೂ ಅಲ್ಲಾಹನು ನಿಮ್ಮನ್ನು ಅನುಗ್ರಹಿಸಲಿ. ನನ್ನ ಮನದಲ್ಲಿ ನಿಮ್ಮ ಬಗ್ಗೆ ಪ್ರಾಮಾಣಿಕತೆ, ಪ್ರೇಮ, ವಾತ್ಸಲ್ಯ, ಹಿತಾಕಾಂಕ್ಷೆ, ಶಾಂತಿ ಹಾಗೂ ಕ್ಷೇಮಗಳ ಗಹನವಾದ ಭಾವನೆಗಳಿವೆ. ಆದ್ದರಿಂದ ನನ್ನ ಬಗ್ಗೆ ನೀವು ಯಾವುದೇ ತರದ ಭೀತಿಗೊಳಗಾಗಬೇಕಿಲ್ಲ. ನನ್ನ ವರ್ತನೆಗಳಿಂದ ನಿಮಗೆ ಯಾವುದೇ ದುಃಖವಾಗದು. 'ಸಲಾಮ್' ಎಂಬ ಪದಕ್ಕೆ 'ಅಲಿಫ್ ಲಾಮ್' ಸೇರಿಸಿ 'ಅಸ್ಸಲಾಮು ಅಲೈಕುಮ್' ಎಂದು ಹೇಳುವ ಮೂಲಕ ನೀವು ನಿಮ್ಮ ಬಂಧುವಿಗೆ ಶಾಂತಿ, ಕ್ಷೇಮದ ಎಲ್ಲ ಹಾರೈಕೆಗಳನ್ನೂ ಸಂಚಯಿಸುತ್ತೀರಿ. ನೀವು ಪ್ರಜ್ಞಾಪೂರ್ವಕವಾಗಿ ನಿಮ್ಮ ಮಿತ್ರನಿಗೆ ಈ ರೀತಿ ಸಲಾಮ್ ಹೇಳಿದಾಗ ಆಗಬಹುದಾದ ಪರಿಣಾಮದ ಬಗ್ಗೆ ನೀವೇ ಊಹಿಸಿರಿ. ಭೇಟಿಯ ವೇಳೆ ನಿಮ್ಮ ಮನದಾಳದ ಪ್ರೇಮ, ಸೌಹಾರ್ದತೆ, ನಿಷ್ಕಾಪಟ್ಯ, ಅನುಕಂಪ ಮತ್ತು ನಿಷ್ಠೆಯ ಪ್ರಕಟನೆಗೆ ಇದಕ್ಕಿಂತ ಉತ್ತಮ ವಿಧಾನ ಬೇರೆ ಇರಬಹುದೇ? 'ಅಸ್ಸಲಾಮು ಅಲೈಕುಮ್' ಎಂಬ ಪದಗಳಲ್ಲಿ ನೀವು ನಿಮ್ಮ ಸೋದರನನ್ನು ಸ್ವಾಗತಿಸುತ್ತೀರಿ. ತನ್ಮೂಲಕ ಕ್ಷೇಮ ಮತ್ತು ಶಾಂತಿಯ ಆಗರವಾದ ಅಲ್ಲಾಹನು ನಿಮಗೆ ಸಂರಕ್ಷಣೆ ದಯಪಾಲಿಸಲಿ ಎಂದು ಪ್ರಾರ್ಥಿಸುತ್ತೀರಿ. 'ಅಸ್ಸಲಾಮ್' ಎಂಬುದು ಅಲ್ಲಾಹನ ಗುಣನಾಮಗಳಲ್ಲೊಂದು. ಯಾರಿಗೆ ಅಲ್ಲಾಹನು ಶಾಂತಿ, ಕ್ಷೇಮಗಳನ್ನು ದಯಪಾಲಿಸಿದನೋ ಅವನೇ ಅದನ್ನು ಪಡೆಯಬಲ್ಲನು. ಅಲ್ಲಾಹನು ಶಾಂತಿಯಿಂದ ವಂಚಿಸಿದವನು ಇಹ-ಪರಗಳೆರಡರಲ್ಲೂ ಶಾಂತಿ ಕ್ಷೇಮದಿಂದ ವಂಚಿತನಾಗುವನು.

ಪ್ರವಾದಿ(ಸ) ಹೀಗೆ ಹೇಳಿರುವರು: 'ಅಸ್ಸಲಾಮ್' ಎಂಬುದು ಅಲ್ಲಾಹನ ನಾಮಗಳ ಪೈಕಿ ಒಂದು ನಾಮ. ಅದನ್ನವನು ಭೂಮಿಯಲ್ಲಿ (ಭೂವಾಸಿಗಳಿಗೆ) ಇರಿಸಿರುವನು. ಆದ್ದರಿಂದ 'ಅಸ್ಸಲಾಮ'ನ್ನು ಪರಸ್ಪರ ಹೆಚ್ಚೆಚ್ಚು ಪಸರಿಸಿರಿ. (ಅಲ್ ಅದಬುಲ್ ಮುಫ್ರದ್)

ಹ. ಅಬೂ ಹುರೈರಾ(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು: ಅಲ್ಲಾಹನು ಹ. ಆದಮ್‌ರನ್ನು(ಅ) ಸೃಷ್ಟಿಸಿದಾಗ ಅವರನ್ನು ದೇವಚರರ ಒಂದು ತಂಡದ ಬಳಿ ಕಳುಹಿಸುತ್ತಾ ಈ ರೀತಿ ಆದೇಶಿಸಿದನು, 'ಹೋಗಿ ಅಲ್ಲಿ ಕುಳಿತಿರುವ ದೇವಚರರಿಗೆ 'ಸಲಾಮ್' ಹೇಳಿರಿ. ಅವರು ಅದಕ್ಕುತ್ತರವಾಗಿ ಹೇಳುವ ಪ್ರಾರ್ಥನೆಯನ್ನು ಗಮನವಿಟ್ಟು ಆಲಿಸಿರಿ. (ಮನನ ಮಾಡಿರಿ) ಏಕೆಂದರೆ ಅದುವೇ ನಿಮ್ಮ ಮತ್ತು ನಿಮ್ಮ ಸಂತತಿಗಳ ಪ್ರಾರ್ಥನೆ ಆಗಲಿದೆ. ಹೀಗೆ ಹ. ಆದಮ್(ಅ) ದೇವಚರರ ಬಳಿ ಹೋದರು. ಅವರಿಗೆ 'ಅಸ್ಸಲಾಮು ಅಲೈಕುಮ್' ಎಂದು ಹೇಳಿದರು. ಅದಕ್ಕುತ್ತರವಾಗಿ ದೇವಚರರು 'ಅಸ್ಸಲಾಮು ಅಲೈಕ ವ ರಹ್ಮತುಲ್ಲಾ' ಎಂದರು. ಅರ್ಥಾತ್ 'ವರಹ್ಮತುಲ್ಲಾ' ಎಂಬ ಪದವನ್ನು ಸೇರಿಸಿ ಉತ್ತರಿಸಿದರು.

(ಬುಖಾರಿ, ಮುಸ್ಲಿಮ್)

ದೇವಚರರು ಸತ್ಯವಿಶ್ವಾಸಿಗಳ ಪ್ರಾಣ ತೆಗೆಯಲು ಬಂದಾಗ 'ಸಲಾಮುನ್ ಅಲೈಕ್' ಎಂದು ಹೇಳುತ್ತಾರೆಂದು ಪವಿತ್ರ ಕುರ್‌ಆನಿನಲ್ಲಿದೆ.

كَذَٰلِكَ يَجْزِى ٱللَّهُ ٱلْمُتَّقِينَ ﴿٣١﴾ ٱلَّذِينَ تَتَوَفَّىٰهُمُ ٱلْمَلَٰٓئِكَةُ طَيِّبِينَ ۙ

يَقُولُونَ سَلَٰمٌ عَلَيْكُمُ ٱدْخُلُوا۟ ٱلْجَنَّةَ بِمَا كُنتُمْ تَعْمَلُونَ ﴿٣٢﴾

"ದೇವ ಭಯಭಕ್ತಿ ಉಳ್ಳವರಿಗೆ ಅಲ್ಲಾಹನು ಈ ರೀತಿ ಪ್ರತಿಫಲ ನೀಡುತ್ತಾನೆ. ಆ ದೇವನಿಷ್ಠರ ಆತ್ಮಗಳನ್ನು ದೇವಚರರು ಸೆರೆ ಹಿಡಿಯುವಾಗ 'ಸಲಾಮುನ್ ಅಲೈಕುಮ್' ಎನ್ನುತ್ತಾ ನಿಮ್ಮ ಸತ್ಕರ್ಮಗಳ ಫಲವಾಗಿ ಸ್ವರ್ಗ ಪ್ರವೇಶ ಮಾಡಿರಿ ಎಂದು ಹೇಳುತ್ತಾರೆ".
**(16: 31-32)**

ಸ್ವರ್ಗದ ದ್ವಾರದ ಬಳಿ ಈ ದೇವನಿಷ್ಠರು ಹೋದಾಗ ಸ್ವರ್ಗದ ಮೇಲ್ವಿಚಾರಕರೂ ಇದೇ ಮಾತುಗಳಲ್ಲಿ ಅವರಿಗೆ ಭವ್ಯ ಸ್ವಾಗತ ನೀಡುವರು.

وَسِيقَ ٱلَّذِينَ ٱتَّقَوْا۟ رَبَّهُمْ إِلَى ٱلْجَنَّةِ زُمَرًا ۖ حَتَّىٰٓ إِذَا جَآءُوهَا وَفُتِحَتْ

أَبْوَٰبُهَا وَقَالَ لَهُمْ خَزَنَتُهَا سَلَٰمٌ عَلَيْكُمْ طِبْتُمْ فَٱدْخُلُوهَا خَٰلِدِينَ ﴿٧٣﴾

"ಇನ್ನು ದೇವನ ನಿಷ್ಠಾವಂತರಾಗಿ, ವಿಧೇಯತೆಯ ಜೀವನ ಸಾಗಿಸುವವರ ತಂಡವನ್ನು ಸ್ವರ್ಗದ ಕಡೆಗೆ ಕಳುಹಿಸಲಾಗುವುದು. ಅವರು ಅಲ್ಲಿಗೆ ತಲುಪಿದಾಗ ಅದರ ದ್ವಾರಗಳು (ಅವರ ಸ್ವಾಗತಕ್ಕಾಗಿ) ಮೊದಲೇ ತೆರೆದಿರುವುದು. ಸ್ವರ್ಗದ ಮೇಲ್ವಿಚಾರಕರು ಅವರಿಗೆ 'ಸಲಾಮುನ್ ಅಲೈಕುಮ್, ಚೆನ್ನಾಗಿದ್ದಿರಿ. ಈ ಸ್ವರ್ಗದಲ್ಲಿ ನಿತ್ಯ ನಿವಾಸಕ್ಕಾಗಿ ಪ್ರವೇಶಿಸಿರಿ' ಎನ್ನುವರು".
**(ಪವಿತ್ರ ಕುರ್‌ಆನ್, 39:73)**

ಇವರು ಸ್ವರ್ಗ ಪ್ರವೇಶಿಸಿದ ಬಳಿಕ ದೇವಚರರು ಸ್ವರ್ಗದ ಎಲ್ಲ ದ್ವಾರಗಳ ಮೂಲಕವೂ ಪ್ರವೇಶಿಸಿ ಅವರಿಗೆ 'ಅಸ್ಸಲಾಮು ಅಲೈಕುಮ್' ಎಂದು ಹೇಳುವರು.

وَٱلْمَلَٰٓئِكَةُ يَدْخُلُونَ عَلَيْهِم مِّن كُلِّ بَابٍ ﴿٢٣﴾ سَلَٰمٌ عَلَيْكُم بِمَا صَبَرْتُمْ ۚ فَنِعْمَ عُقْبَى ٱلدَّارِ ﴿٢٤﴾

"ದೇವಚರರು ಅವರ ಸ್ವಾಗತಕ್ಕಾಗಿ ಎಲ್ಲಾ ಬಾಗಿಲುಗಳಿಂದಲೂ ಬರುವರು. 'ಅಸ್ಸಲಾಮು ಅಲೈಕುಮ್' ನೀವು ವಹಿಸಿದ ಸಹನೆಯ ಪ್ರತಿಫಲವಿದು. ಅದೆಷ್ಟು ಉತ್ತಮವಿದೆ ಈ ಶಾಶ್ವತ ಭವನ!" **(ಪವಿತ್ರ ಕುರ್‌ಆನ್, 13:23-24)**

ಸ್ವರ್ಗವಾಸಿಗಳು ಪರಸ್ಪರ ಈ ಮಾತುಗಳಿಂದಲೇ ಅಭಿನಂದಿಸುವರು:

دَعْوٰىهُمْ فِيْهَا سُبْحٰنَكَ اللّٰهُمَّ وَتَحِيَّتُهُمْ فِيْهَا سَلٰمٌ

"ಅಲ್ಲಿ ಅವರ ಘೋಷಣೆ, 'ಓ ಅಲ್ಲಾಹ್! ನೀನು ಪರಮ ಪಾವನನು' ಎಂದಾಗಿರು ವುದು. ಅವರ ಪರಸ್ಪರ ಅಭಿನಂದನಾ ನುಡಿಯು (ನಿಮಗೆ) 'ಸಲಾಮ್' ಎಂದಾಗಿರುವುದು".

(ಪವಿತ್ರ ಕುರ್‌ಆನ್, **10:10**)

ಅಲ್ಲಾಹನ ವತಿಯಿಂದಲೂ ಅವರಿಗೆ ಸಲಾಮ್ ಮತ್ತು ದಯೆಯ ಘೋಷಣೆಗಳಿರುವುವು:

اِنَّ اَصْحٰبَ الْجَنَّةِ الْيَوْمَ فِيْ شُغُلٍ فٰكِهُوْنَ ﴿٥٥﴾ هُمْ وَاَزْوَاجُهُمْ فِيْ ظِلٰلٍ عَلَى الْاَرَآئِكِ مُتَّكِـُٔوْنَ ﴿٥٦﴾ لَهُمْ فِيْهَا فَاكِهَةٌ وَّلَهُمْ مَّا يَدَّعُوْنَ ﴿٥٧﴾ سَلٰمٌ قَوْلًا مِّنْ رَّبٍّ رَّحِيْمٍ ﴿٥٨﴾

"ಈ ದಿವಸ ಸ್ವರ್ಗವಾಸಿಗಳು ಸುಖಾಡಂಬರಗಳಲ್ಲಿ ತಲ್ಲೀನರಾಗಿರುವರು. ಅವರೂ, ಅವರ ಪತ್ನಿಯರೂ ಆಹ್ಲಾದಕರವಾದ ದಟ್ಟ ನೆರಳಲ್ಲಿ ದಿಂಬುಗಳಿಗೆ ಒರಗಿ (ಆನಂದ ತುಂದಿಲರಾಗಿ) ಕುಳಿತಿರುವರು. ಅವರಿಗಾಗಿ ಸ್ವರ್ಗದಲ್ಲಿ ಎಲ್ಲ ತರದ ರುಚಿಕರ ಫಲಗಳಿರು ವುವು ಮತ್ತು ಅವರು ಬಯುಸುವುದೆಲ್ಲವೂ ಇರುವುದು. ಕರುಣಾನಿಧಿಯಾದ ಪ್ರಭುವಿನ ವತಿಯಿಂದ ಅವರಿಗೆ 'ಸಲಾಮ್' ಎಂಬ ಘೋಷಣೆ ಇರುವುದು". (ಪವಿತ್ರ ಕುರ್‌ಆನ್, **36:55-58**)

ಒಟ್ಟಿನಲ್ಲಿ ಸ್ವರ್ಗವಾಸಿಗಳಿಗೆ ದಶ ದಿಕ್ಕುಗಳಿಂದಲೂ 'ಸಲಾಮ್', 'ಸಲಾಮ್' ಎಂಬ ಘೋಷಣೆಯೇ ಕೇಳಿಸುವುದು.

لَا يَسْمَعُوْنَ فِيْهَا لَغْوًا وَّلَا تَاْثِيْمًا ﴿٢٥﴾ اِلَّا قِيْلًا سَلٰمًا سَلٰمًا ﴿٢٦﴾

"ಅವರು ಅಲ್ಲಿ ವ್ಯರ್ಥ ಮಾತನ್ನಾಗಲೀ, ಪಾಪದ ಮಾತನ್ನಾಗಲೀ ಕೇಳಲಾರರು. ಎಲ್ಲೆಡೆಯಿಂದಲೂ ಕೇವಲ 'ಸಲಾಮ್' ಎಂಬ ಘೋಷಣೆ ಕೇಳಿಸುವುದು".

(ಪವಿತ್ರ ಕುರ್‌ಆನ್, **56:25-26**)

ಕುರ್‌ಆನ್ ಮತ್ತು ಪ್ರವಾದಿಚರ್ಯೆಯ ಈ ಸ್ಪಷ್ಟ ಆದೇಶಗಳು ಮತ್ತು ಸಾಕ್ಷ್ಯಗಳು ಇರುತ್ತಾ ಅಲ್ಲಾಹನು ಮತ್ತು ಪ್ರವಾದಿವರ್ಯರು(ಸ) ತೋರಿಸಿಕೊಟ್ಟ ಕ್ರಮವನ್ನು ಬಿಟ್ಟು ಅಭಿನಂದನೆ ಮತ್ತು ಪ್ರೀತಿ-ವಿಶ್ವಾಸ ಪ್ರಕಟನೆಯ ಬೇರೆ ಕ್ರಮಗಳನ್ನು ಕೈಗೊಳ್ಳುವುದು ಓರ್ವ ಸತ್ಯವಿಶ್ವಾಸಿಯ ಮಟ್ಟಿಗೆ ಸರ್ವಥಾ ಧರ್ಮಸಮ್ಮತವಲ್ಲ.

3. ಪರಿಚಿತರೂ, ಅಪರಿಚಿತರೂ ಆದ ಎಲ್ಲ ಮುಸ್ಲಿಮರಿಗೂ ಸಲಾಮ್ ಹೇಳಿರಿ. ಆತ ನಿಮ್ಮ ಮುಸ್ಲಿಮ್ ಸಹೋದರನೆಂಬುದು ಆತನೊಂದಿಗೆ ನಿಮ್ಮ ಸಂಬಂಧಕ್ಕೆ ಧಾರಾಳ ಸಾಕು.

ಒಬ್ಬ ಮುಸ್ಲಿಮನ ಬಗ್ಗೆ ಇನ್ನೊಬ್ಬ ಮುಸ್ಲಿಮನ ಮನದಲ್ಲಿ ಪ್ರೇಮ, ನಿಷ್ಠೆ ಮತ್ತು ಹಿತಾಕಾಂಕ್ಷೆಯ ಭಾವನೆಗಳಿರಬೇಕು. ಇಸ್ಲಾಮಿನ ಅತ್ಯುತ್ತಮ ಕರ್ಮ ಯಾವುದೆಂದು ಓರ್ವರು ಪ್ರವಾದಿವರ್ಯರೊಡನೆ(ಸ) ಕೇಳಿದರು. ಪ್ರವಾದಿ(ಸ) ಈ ರೀತಿ ಉತ್ತರಿಸಿದರು: 'ಬಡವರಿಗೆ ಊಟ ಮಾಡಿಸುವುದು, ನಿಮಗೆ ಪರಿಚಯವಿದ್ದರೂ ಇಲ್ಲದಿದ್ದರೂ ಎಲ್ಲ ಮುಸ್ಲಿಮರಿಗೂ ಸಲಾಮ್ ಹೇಳುವುದು'. (ಬುಖಾರಿ, ಮುಸ್ಲಿಮ್)

4. ನೀವು ನಿಮ್ಮ ಮನೆಗೆ ಪ್ರವೇಶಿಸುವಾಗ ಮನೆಮಂದಿಗಳಿಗೆ ಸಲಾಮ್ ಹೇಳಿರಿ. ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಇದೆ:

فَإِذَا دَخَلْتُم بُيُوتًا فَسَلِّمُوا عَلَىٰ أَنفُسِكُمْ تَحِيَّةً مِّنْ عِندِ اللَّهِ مُبَارَكَةً طَيِّبَةً ۚ

"ನೀವು ನಿಮ್ಮ ಮನೆಗಳನ್ನು ಪ್ರವೇಶಿಸುವಾಗ ನಿಮ್ಮ (ಮನೆಯವರ) ಮೇಲೆ ಸಲಾಮ್ ಹೇಳಿರಿ. ಅಲ್ಲಾಹನಿಂದ ಕಲಿಸಲ್ಪಟ್ಟ ಬಹಳ ಮಂಗಳದಾಯಕ ಮತ್ತು ಪಾವನ ಪ್ರಾರ್ಥನೆ". (24:61)

ಹ. ಅನಸ್(ರ) ಹೇಳುತ್ತಾರೆ, ಪ್ರವಾದಿ(ಸ) ನನಗೆ ಈ ರೀತಿ ತಾಕೀದು ಮಾಡಿದರು: "ಪ್ರಿಯ ಪುತ್ರಾ! ನೀನು ನಿನ್ನ ಮನೆಯನ್ನು ಪ್ರವೇಶಿಸುವಾಗ ಮನೆ ಮಂದಿಗೆ ಸಲಾಮ್ ಹೇಳು. ಇದು ನಿನಗೂ ನಿನ್ನ ಮನೆಯವರಿಗೂ ಒಳಿತು ಹಾಗೂ ಮಂಗಳದಾಯಕವಾಗಿದೆ". (ತಿರ್ಮಿದಿ)

ಇದೇ ರೀತಿ ಅನ್ಯರ ಮನೆಗೆ ಹೋದಾಗಲೂ ಮನೆಗೆ ಪ್ರವೇಶಿಸುವಾಗ ಸಲಾಮ್ ಹೇಳಿರಿ. ಸಲಾಮ್ ಹೇಳದೆ ಮನೆಗೆ ಪ್ರವೇಶಿಸದಿರಿ.

يَا أَيُّهَا الَّذِينَ آمَنُوا لَا تَدْخُلُوا بُيُوتًا غَيْرَ بُيُوتِكُمْ حَتَّىٰ تَسْتَأْنِسُوا وَتُسَلِّمُوا عَلَىٰ أَهْلِهَا ۚ

"ಓ ಸತ್ಯವಿಶ್ವಾಸಿಗಳೇ! ನಿಮ್ಮ ಮನೆಯಲ್ಲದೆ ಇತರರ ಮನೆಗಳನ್ನು ಪ್ರವೇಶಿಸುವಾಗ ಮನೆಯವರ ಅನುಮತಿ ಪಡೆಯದೆ ಮತ್ತು ಮನೆ ಮಂದಿಗೆ ಸಲಾಮ್ ಹೇಳದೆ ಪ್ರವೇಶಿಸದಿರಿ!" (ಪವಿತ್ರ ಕುರ್‌ಆನ್, 24:27)

ಹ. ಇಬ್ರಾಹೀಮ್‌ರ(ಅ) ಬಳಿ ದೇವಚರರು, ಗೌರವಾನ್ವಿತ ಅತಿಥಿಗಳ ರೂಪದಲ್ಲಿ ಬಂದಾಗ ಮೊದಲು ಅವರು ಸಲಾಮ್ ಹೇಳಿದರು. ಹ. ಇಬ್ರಾಹೀಮ್(ಅ) ಅದಕ್ಕುತ್ತರ ವಾಗಿ ಅವರಿಗೂ ಸಲಾಮ್ ಹೇಳಿದರು.

5. ಎಳೆಯ ಮಕ್ಕಳಿಗೂ ಸಲಾಮ್ ಹೇಳಿರಿ. ಇದು ಮಕ್ಕಳಲ್ಲಿ ಸಲಾಮ್‌ನ ಪರಿಪಾಠ ವನ್ನು ರೂಢಿಸುವ ಅತ್ಯುತ್ತಮ ಉಪಾಧಿ. ಪ್ರವಾದಿವರ್ಯರ(ಸ) ಚರ್ಯೆಯೂ ಹೌದು.

ಅನಸ್‌ರು(ರ) ಮಕ್ಕಳ ಬಳಿಯಿಂದ ಸಾಗಿದಾಗ ಅವರಿಗೆ ಸಲಾಮ್ ಹೇಳುತ್ತಾ, ಪ್ರವಾದಿವರ್ಯರೂ(ಸ) ಹೀಗೆಯೇ ಮಾಡುತ್ತಿದ್ದರೆಂದರು. (ಬುಖಾರಿ, ಮುಸ್ಲಿಮ್)

6. ಮಹಿಳೆಯರು ಪುರುಷರಿಗೂ, ಪುರುಷರು ಮಹಿಳೆಯರಿಗೂ ಸಲಾಮ್ ಹೇಳ ಬಹುದಾಗಿದೆ. ಹ. ಅಸ್ಮಾ ಅನ್ಸಾರಿಯಃ(ರ) ಹೇಳುತ್ತಾರೆ, ನಾನು ನನ್ನ ಗೆಳತಿಯರ ಜೊತೆ ಕುಳಿತಿದ್ದೆ. ಪ್ರವಾದಿ(ಸ) ನಮ್ಮ ಬಳಿಯಿಂದ ಸಾಗಿದರು. ಅವರು ನಮಗೆ ಸಲಾಮ್ ಹೇಳಿದರು. (ಅಲ್ ಅದಬುಲ್ ಮುಫ್ರದ್)

ಹ. ಉಮ್ಮು ಹಾನಿ(ರ) ಹೇಳುತ್ತಾರೆ, ನಾನೊಮ್ಮೆ ಪ್ರವಾದಿವರ್ಯರ(ಸ) ಸನ್ನಿಧಿ ಯಲ್ಲಿ ಹಾಜರಾದೆ. ಅವರಾಗ ಸ್ನಾನ ಮಾಡುತ್ತಿದ್ದರು. ನಾನು ಅವರಿಗೆ ಸಲಾಮ್ ಹೇಳಿದಾಗ, ಯಾರದು? ಎಂದು ವಿಚಾರಿಸಿದರು. 'ಉಮ್ಮು ಹಾನಿ' ಎಂದು ಹೇಳಿದಾಗ, 'ಸಂತೋಷ! ಬನ್ನಿ ಸ್ವಾಗತ' ಎಂದರು.

7. ಹೆಚ್ಚೆಚ್ಚು ಸಲಾಮ್ ಮಾಡುವ ಅಭ್ಯಾಸ ಬೆಳೆಸಿ. ಸಲಾಮ್ ಹೇಳುವುದರಲ್ಲಿ ಎಂದೂ ಜಿಪುಣತೆ ತೋರದಿರಿ. ಪರಸ್ಪರ ಸಲಾಮ್ ಹೇಳುವುದನ್ನು ವರ್ಧಿಸಿರಿ. ಅದರಿಂದ ಪ್ರೀತಿ ಹೆಚ್ಚುತ್ತದೆ. ಅಲ್ಲಾಹನು ಎಲ್ಲ ದುಃಖ, ದುಮ್ಮಾನಗಳಿಂದ ಸುರಕ್ಷಿತಗೊಳಿಸುತ್ತಾನೆ. ಪ್ರವಾದಿ(ಸ) ಹೇಳಿದರು, 'ನೀವು ಪರಸ್ಪರರನ್ನು ಹೆಚ್ಚೆಚ್ಚು ಪ್ರೀತಿಸುವ ಉಪಾಯವನ್ನು ನಾನು ನಿಮಗೆ ಹೇಳಿಕೊಡುತ್ತೇನೆ. ಪರಸ್ಪರರಿಗೆ ಅಧಿಕಾಧಿಕ ಸಲಾಮ್ ಹೇಳುವುದನ್ನು ರೂಢಿಸಿರಿ.' (ಮುಸ್ಲಿಮ್)

ಪ್ರವಾದಿ(ಸ) ಹೀಗೂ ಹೇಳಿರುವರು: "ಸಲಾಮ್ ಹೇಳುವುದನ್ನು ವರ್ಧಿಸಿರಿ. ಅಲ್ಲಾಹನು ನಿಮ್ಮನ್ನು ರಕ್ಷಿಸುವನು".

ಹ. ಅನಸ್(ರ) ಹೇಳುತ್ತಾರೆ: ಪ್ರವಾದಿವರ್ಯರ(ಸ) ಸಂಗಾತಿಗಳು ಅತ್ಯಧಿಕ ಸಲಾಮ್ ಹೇಳುತ್ತಿದ್ದರು. ಅವರಲ್ಲೊಬ್ಬರು ಮರದ ಮರೆಯಲ್ಲಿ ಹೋಗಿ ಬಂದಾಗ ಪುನಃ ಸಲಾಮ್ ಹೇಳುತ್ತಿದ್ದರು.

ಪ್ರವಾದಿ(ಸ) ಈ ರೀತಿ ಆದೇಶಿಸಿರುವರು: "ಓರ್ವನು ತನ್ನ ಮುಸ್ಲಿಮ್ ಸೋದರನನ್ನು ಕಂಡಾಗ ಸಲಾಮ್ ಹೇಳಲಿ. ಮರ, ಗೋಡೆ ಅಥವಾ ಕಲ್ಲು ಅಡ್ಡ ಬಂದು ಮತ್ತೆ ಸಂದರ್ಶಿಸಿ ದಾಗ ಮತ್ತೊಮ್ಮೆ ಸಲಾಮ್ ಹೇಳಲಿ". (ರಿಯಾದುಸ್ಸಾಲಿಹೀನ್)

ಹ. ತುಫೈಲ್(ರ) ಹೇಳುತ್ತಾರೆ: ನಾನು ಹೆಚ್ಚಾಗಿ ಹ. ಅಬ್ದುಲ್ಲಾ ಬಿನ್ ಉಮರ್ ರನ್ನು(ರ) ಭೇಟಿಯಾಗುತ್ತಿದ್ದೆ. ಅವರ ಜೊತೆ ಪೇಟೆ ಸಂದರ್ಶಿಸುತ್ತಿದ್ದೆ. ನಾವು ಪೇಟೆಯಲ್ಲಿ ಸಂಚರಿಸುತ್ತಿರುವಾಗ ಹ. ಅಬ್ದುಲ್ಲಾ ಬಿನ್ ಉಮರ್(ರ) ಸಿಕ್ಕಿದವರಿಗೆಲ್ಲಾ ಸಲಾಮ್ ಹೇಳುತ್ತಿದ್ದರು. ಅವನು ಸಂತೆ ವ್ಯಾಪಾರಿಯಾಗಲಿ, ಅಂಗಡಿಯವನಾಗಲಿ, ಬಡವನಾಗಲಿ ಕಂಡವರಿಗೆಲ್ಲಾ ತಪ್ಪದೆ ಸಲಾಮ್ ಹೇಳುತ್ತಿದ್ದರು.

ಒಮ್ಮೆ ನಾನವರನ್ನು ಸಂದರ್ಶಿಸಿದೆ. 'ನಡೆಯಿರಿ ಪೇಟೆಗೆ ಹೋಗೋಣ' ಎಂದರವರು. 'ಪೇಟೆಗೆ ಹೋಗಿ ಏನು ಮಾಡೋಣ, ನೀವು ಏನನ್ನೂ ಖರೀದಿಸುವುದಿಲ್ಲ. ಯಾವುದೇ

ವಸ್ತುವಿನ ಬಗ್ಗೆ ವಿಚಾರಿಸುವುದೂ ಇಲ್ಲ. ಪೇಟೆಧಾರಣೆ ಕೋರುವುದೂ ಇಲ್ಲ. ಸಂತೆ ಪೇಟೆಗಳಲ್ಲಿ ಕುಳಿತುಕೊಳ್ಳುವುದೂ ಇಲ್ಲ. ಬನ್ನಿ ಇಲ್ಲೇ ಕುಳಿತು ಮಾತಾಡೋಣ' ಎಂದು ನಾನು ಉತ್ತರಿಸಿದೆ. ಹಝ್ರತ್ ಅಬ್ದುಲ್ಲಾ ಹೇಳಿದರು, 'ಓ ಅಬೂಬತನ್! ನಾನು ಕೇವಲ ಸಿಕ್ಕಿದವರಿಗೆಲ್ಲಾ ಸಲಾಮ್ ಹೇಳುವುದಕ್ಕಾಗಿ ಪೇಟೆಗೆ ಹೋಗುತ್ತಿದ್ದೇನೆ'. (ಮುಅತ್ತಾ)

8. ಸಲಾಮ್ ಹೇಳುವುದನ್ನು ನಿಮ್ಮ ಮುಸ್ಲಿಮ್ ಸೋದರನ ಹಕ್ಕೆಂದು ಪರಿಗಣಿಸಿರಿ. ಈ ಹಕ್ಕನ್ನು ವಿಶಾಲ ಹೃದಯದಿಂದ ಸಲ್ಲಿಸಿರಿ. ಸಲಾಮ್ ಹೇಳುವ ಬಗ್ಗೆ ಎಂದೂ ಲೋಭ ತೋರಿಸದಿರಿ.

ಪ್ರವಾದಿ(ಸ) ಹೇಳಿದರು: "ಒಬ್ಬ ಮುಸ್ಲಿಮನು ಇನ್ನೊಬ್ಬ ಮುಸ್ಲಿಮನನ್ನು ಸಂದರ್ಶಿಸಿದಾಗ ತನ್ನ ಮುಸ್ಲಿಮ್ ಸೋದರನಿಗೆ ಸಲಾಮ್ ಹೇಳುವುದು ಆತನ ಹಕ್ಕಾಗಿದೆ". (ಮುಸ್ಲಿಮ್)

ಹ. ಅಬೂಹುರೈರಾ(ರ) ಹೇಳುತ್ತಾರೆ: "ಸಲಾಮ್ ಹೇಳುವ ಬಗ್ಗೆ ಲೋಭ ತೋರಿಸಿದವನು ಅತಿ ದೊಡ್ಡ ಜಿಪುಣ". (ಅಲ್ ಅದಬುಲ್ ಮುಫ್ರದ್)

9. ಸಲಾಮ್ ಯಾವಾಗಲೂ ನೀವೇ ಮೊದಲು ಮಾಡಿರಿ. ದುರದೃಷ್ಟವಶಾತ್ ಯಾರಲ್ಲಾದರೂ ಮನಸ್ತಾಪ ಉಂಟಾದರೆ ಸಲಾಮ್ ಹೇಳುವುದರಲ್ಲಿ ಮತ್ತು ಸಂಧಾನ ಮಾಡುವುದರಲ್ಲಿ ನೀವೇ ಮೊದಲಿಗರಾಗಿರಿ. ಪ್ರವಾದಿ(ಸ) ಈ ರೀತಿ ಹೇಳಿರುವರು: "ಸಲಾಮ್ ಮೊದಲು ಹೇಳುವ ವ್ಯಕ್ತಿಯೇ ಅಲ್ಲಾಹನಿಗೆ ಹೆಚ್ಚು ನಿಕಟನು". (ಅಬೂದಾವೂದ್)

ಪ್ರವಾದಿ(ಸ) ಹೀಗೂ ಹೇಳಿರುವರು: "ಮೂರು ದಿನಗಳಿಗಿಂತ ಮಿಕ್ಕಿ ತನ್ನ ಮುಸ್ಲಿಮ್ ಸೋದರನೊಂದಿಗೆ ಸಂಬಂಧ ಬೇರ್ಪಟ್ಟಿರುವುದು ಯಾವ ಮುಸ್ಲಿಮನಿಗೂ ಧರ್ಮ ಸಮ್ಮತವಲ್ಲ. ಇಬ್ಬರು ಭೇಟಿಯಾದಾಗ ಪರಸ್ಪರ ಮುಖ ತಿರುಗಿಸಿ ಹೋಗಬಾರದು. ಇವರಲ್ಲಿ ಸಲಾಮ್ ಮೊದಲು ಹೇಳುವವನೇ ಉತ್ತಮನು". (ಅಲ್ ಅದಬುಲ್ ಮುಫ್ರದ್)

ಇಬ್ಬರು ಪರಸ್ಪರ ಭೇಟಿಯಾದಾಗ ಸಲಾಮ್ ಯಾರು ಮೊದಲು ಹೇಳಬೇಕು ಎಂದು ಪ್ರವಾದಿವರ್ಯರಲ್ಲಿ(ಸ) ಪ್ರಶ್ನಿಸಲಾಯಿತು. 'ಆ ಈರ್ವರಲ್ಲಿ ಅಲ್ಲಾಹನ ಬಳಿ ಹೆಚ್ಚು ಉತ್ತಮರು' ಎಂದು ಪ್ರವಾದಿ(ಸ) ಉತ್ತರಿಸಿದರು. (ತಿರ್ಮಿದಿ)

ಹ. ಅಬ್ದುಲ್ಲಾ ಬಿನ್ ಉಮರ್(ರ) ಸದಾ ಸಲಾಮ್ ಮಾಡುವಲ್ಲಿ ಮುಂದಿರುತ್ತಿದ್ದರು. ಯಾರಿಗೂ ಅವರಿಗಿಂತ ಮುಂಚೆ ಸಲಾಮ್ ಹೇಳುವ ಅವಕಾಶ ಸಿಗುತ್ತಿರಲಿಲ್ಲ.

10. ಸದಾ ಬಾಯಿಯಿಂದ 'ಅಸ್ಸಲಾಮು ಅಲೈಕುಮ್' ಎಂದು ಹೇಳಿಯೇ ಸಲಾಮ್ ಮಾಡಿರಿ. ಸಲಾಮ್ ಸ್ವಲ್ಪ ಉಚ್ಚ ಸ್ವರದಲ್ಲಿ ಹೇಳಿರಿ. ನಿಮ್ಮ ಅಭಿಸಂಬೋಧಿತರು ಅದನ್ನು ಚೆನ್ನಾಗಿ ಆಲಿಸುವಂತಾಗಲಿ. ಬಾಯಿಯಿಂದ ಸಲಾಮ್ ಹೇಳುವುದರ ಜೊತೆ ಕೈ ಅಥವಾ ತಲೆಯ ಸನ್ನೆಯ ಅಗತ್ಯವೂ ಇದ್ದರೆ ಹಾಗೆ ಮಾಡುವುದರಲ್ಲಿ ಅಭ್ಯಂತರವಿಲ್ಲ. ಉದಾ: ನೀವು ಯಾರಿಗೆ ಸಲಾಮ್ ಹೇಳುತ್ತಿರುವಿರೋ ಅವರು ನಿಮ್ಮಿಂದ ದೂರವಿದ್ದು ನಿಮ್ಮ ಸ್ವರ ಅವರಿಗೆ ಕೇಳಿಸಲಾರದು ಎಂದು ನೀವು ಶಂಕಿಸಿದರೆ ಅಥವಾ ಅಭಿಸಂಬೋಧಿತನು ಕಿವುಡನಾಗಿದ್ದರೆ ಸಂಜ್ಞೆ ಮಾಡಬಹುದಾಗಿದೆ.

ಹ. ಅಬ್ದುಲ್ಲಾ ಬಿನ್ ಉಮರ್(ರ) ಹೇಳುತ್ತಾರೆ: ನೀವು ಯಾರಿಗಾದರೂ ಸಲಾಮ್ ಹೇಳುವಾಗ ಅವನಿಗೆ ಕೇಳಿಸುವಂತೆ ಹೇಳಿ. ಏಕೆಂದರೆ ಸಲಾಮ್ ಅಲ್ಲಾಹನ ವತಿಯಿಂದ ಅತ್ಯಂತ ಪಾವನ ಮತ್ತು ಮಂಗಳಮಯ ಪ್ರಾರ್ಥನೆಯಾಗಿದೆ. (ಅಲ್ ಅದಬುಲ್ ಮುಫ್ರದ್)

ಹ. ಅಸ್ಮಾ ಬಿಂತು ಯಝೀದ್(ರ) ಹೇಳುತ್ತಾರೆ: ಒಮ್ಮೆ ಪ್ರವಾದಿ(ಸ) ಮಸೀದಿಯ ಬಳಿಯಿಂದ ಸಾಗಿದಾಗ ಅಲ್ಲಿ ಕೆಲವು ಮಹಿಳೆಯರು ಕುಳಿತಿದ್ದರು. ಪ್ರವಾದಿ(ಸ) ಅವರಿಗೆ ಕೈ ಸನ್ನೆಯ ಮೂಲಕ ಸಲಾಮ್ ಮಾಡಿದರು. (ತಿರ್ಮಿದಿ)

ಅರ್ಥಾತ್ ಪ್ರವಾದಿವರ್ಯರು(ಸ) ಬಾಯಿಯಿಂದ 'ಅಸ್ಸಲಾಮು ಅಲೈಕುಮ್' ಹೇಳುವುದರ ಜೊತೆಗೆ ಕೈಯಿಂದಲೂ ಸನ್ನೆ ಮಾಡಿದರು. ಅಬೂದಾವೂದ್‌ನಲ್ಲಿ ಬಂದಿರುವ ಒಂದು ವರದಿಯೂ ಇದನ್ನು ಪುಷ್ಟೀಕರಿಸುತ್ತದೆ. ಹ. ಅಸ್ಮಾ(ರ) ಹೇಳುತ್ತಾರೆ, ಪ್ರವಾದಿ(ಸ) ನಮ್ಮ ಬಳಿಯಿಂದ ಸಾಗಿದಾಗ ನಮಗೆ ಸಲಾಮ್ ಹೇಳಿದರು. ಆದ್ದರಿಂದ ಸಲಾಮ್ ಯಾವಾಗಲೂ ಬಾಯಿಯಿಂದಲೇ ಹೇಳಬೇಕು. ಅಗತ್ಯವಿದ್ದರೆ ಮಾತ್ರ ಕೈಯಿಂದ ಸಂಕೇತ ಮಾಡಬಹುದು.

11. ನಿಮ್ಮ ಹಿರಿಯರಿಗೆ ಸಲಾಮ್ ಹೇಳುವುದನ್ನು ರೂಢಿಸಿರಿ. ನೀವು ನಡೆಯುತ್ತಿದ್ದು ಕೆಲವರು ಕುಳಿತಿದ್ದರೆ ಕುಳಿತಿರುವವರಿಗೆ ಸಲಾಮ್ ಹೇಳಿರಿ. ನೀವು ಸಣ್ಣ ತಂಡದೊಂದಿಗಿದ್ದು, ಹೆಚ್ಚು ಮಂದಿಯಿರುವ ತಂಡವನ್ನು ಭೇಟಿಯಾದಾಗಲೂ ನೀವೇ ಮೊದಲು ಸಲಾಮ್ ಹೇಳಿರಿ. ಪ್ರವಾದಿ(ಸ) ಈ ರೀತಿ ಹೇಳಿರುವರು: "ಕಿರಿಯರು ಹಿರಿಯರಿಗೆ, ನಡೆಯುವವರು ಕುಳಿತವರಿಗೆ ಮತ್ತು ಸ್ವಲ್ಪ ಮಂದಿ ಹೆಚ್ಚು ಮಂದಿಗೆ ಸಲಾಮ್ ಮೊದಲು ಹೇಳಬೇಕು". (ಅಲ್ ಅದಬುಲ್ ಮುಫ್ರದ್)

12. ನೀವು ವಾಹನದಲ್ಲಿದ್ದರೆ ಕಾಲ್ನಡಿಗೆಯವರಿಗೆ ಮತ್ತು ಕುಳಿತವರಿಗೆ ಸಲಾಮ್ ಹೇಳಬೇಕು. ಪ್ರವಾದಿ(ಸ) ಈ ರೀತಿ ಹೇಳಿರುವರು: "ವಾಹನದಲ್ಲಿರುವವರು ಕಾಲ್ನಡಿಗೆಯವರಿಗೆ, ಕಾಲ್ನಡಿಗೆಯವರು ಕುಳಿತವರಿಗೆ ಮತ್ತು ಸ್ವಲ್ಪ ಮಂದಿ ಹೆಚ್ಚು ಮಂದಿಗೆ ಸಲಾಮ್ ಮೊದಲು ಹೇಳಬೇಕು". (ಅಲ್ ಅದಬುಲ್ ಮುಫ್ರದ್)

13. ಯಾರನ್ನಾದರೂ ಸಂದರ್ಶಿಸ ಹೋದಾಗ, ಅಧಿವೇಶನಗಳಿಗೆ ಹೋದಾಗ, ಒಂದು ಗುಂಪಿನ ಹತ್ತಿರದಿಂದ ಸಾಗಿದಾಗ ಅಥವಾ ಸಭೆ ಸಮಾರಂಭಗಳಿಗೆ ಹೋದಾಗ ಸಲಾಮ್ ಹೇಳಿರಿ ಮತ್ತು ಅಲ್ಲಿಂದ ಮರಳುವಾಗಲೂ ಸಲಾಮ್ ಹೇಳಿಯೇ ಮರಳಿರಿ.

ಪ್ರವಾದಿ(ಸ) ಹೀಗೆ ಹೇಳಿರುವರು: "ನೀವು ಒಂದು ಸಭೆಗೆ ತಲುಪಿದಾಗ ಸಲಾಮ್ ಹೇಳಿರಿ. ಅಲ್ಲಿಂದ ಮರಳುವಾಗ ಪುನಃ ಸಲಾಮ್ ಹೇಳಿರಿ. (ಸಭೆಗೆ ತಲುಪಿದಾಗ ಸಲಾಮ್ ಹೇಳಿ, ಬೀಳ್ಕೊಡುವಾಗ ಹೇಳದೆ ಹಾಗೂ ಬೀಳ್ಕೊಡುಗೆಯ ಸಲಾಮ್‌ಗೆ ಮಹತ್ವ ನೀಡದೆ) ಪ್ರಥಮ ಸಲಾಮ್ ದ್ವಿತೀಯ ಸಲಾಮ್‌ಗಿಂತ ಹೆಚ್ಚು ಪುಣ್ಯಕ್ಕೆ ಅರ್ಹವೆಂದು ಭಾವಿಸಬೇಡಿರಿ". (ತಿರ್ಮಿದಿ)

14. ಸಭೆಗೆ ಹೋಗುವಾಗ ಎಲ್ಲ ಸಭಿಕರಿಗೂ ಸಲಾಮ್ ಹೇಳಿರಿ. ವಿಶೇಷವಾಗಿ ಯಾರದೇ ಹೆಸರೆತ್ತಿ ಸಲಾಮ್ ಹೇಳದಿರಿ. ಒಮ್ಮೆ ಹ. ಅಬ್ದುಲ್ಲಾ(ರ) ಮಸೀದಿಯಲ್ಲಿದ್ದಾಗ

ಓರ್ವ ಯಾಚಕರು ಬಂದು ಅವರ ಹೆಸರೆತ್ತಿ ಸಲಾಮ್ ಹೇಳಿದರು. ಹ. ಅಬ್ದುಲ್ಲಾ(ರ) ಹೇಳಿದರು: ಅಲ್ಲಾಹನು ಸತ್ಯವನ್ನೇ ನುಡಿದನು. ಪ್ರವಾದಿ(ಸ) ಸತ್ಯಪ್ರಚಾರದ ಹಕ್ಕನ್ನು ತೀರಿಸಿದರು. ತರುವಾಯ ಅವರು ಮನೆಗೆ ತೆರಳಿದರು. ಅವರು ಹೇಳಿದುದರ ತಾತ್ಪರ್ಯ ವೇನೆಂದರಿಯದೆ ಜನರು ಮಸೀದಿಯಲ್ಲೇ ಅವರ ನಿರೀಕ್ಷೆಯಲ್ಲಿ ಕುಳಿತರು. ಅವರು ಮರಳಿ ಬಂದಾಗ ಹ. ತಾರಿಕ್(ರ) ಆ ವಿಷಯ ಕೇಳಿದರು. ಆಗ ಅವರು: ಪ್ರವಾದಿ(ಸ) ಹೇಳಿರುವರು: 'ಕಿಯಾಮತ್ ಸಮೀಪಿಸಿದಾಗ ಜನರು ಸಭೆಗಳಲ್ಲಿ ಕೆಲವು ಜನರಿಗೆ ವಿಶೇಷವಾಗಿ ಸಲಾಮ್ ಹೇಳುವರು' ಎಂದರು. (ಅಲ್ ಅದಬುಲ್ ಮುಫ್ರದ್)

15. ಯಾರಾದರೂ ಹಿರಿಯರಿಗೆ, ನೆಂಟರಿಗೆ ಅಥವಾ ಸ್ನೇಹಿತರಿಗೆ ಇತರರ ಬಳಿ ಸಲಾಮ್ ಹೇಳಿ ಕಳುಹಿಸುವ ಅವಕಾಶವಿದ್ದರೆ ಅಥವಾ ಇತರರ ಪತ್ರಗಳಲ್ಲಿ ಸಲಾಮ್ ಬರೆಸುವ ಅವಕಾಶವಿದ್ದರೆ ಅವುಗಳನ್ನು ಉಪಯೋಗಿಸಿರಿ ಮತ್ತು ಸಲಾಮ್ ಹೇಳಿ ಕಳುಹಿಸಿರಿ.

ಹ. ಆಯಿಶಾ(ರ) ಹೇಳುತ್ತಾರೆ: ಪ್ರವಾದಿ(ಸ) ನನಗೆ ಈ ರೀತಿ ಹೇಳಿದರು, ಜಿಬ್ರೀಲ್(ಅ) ನಿಮಗೆ ಸಲಾಮ್ ಹೇಳುತ್ತಾರೆ. ನಾನು 'ವ ಅಲೈಕುಮುಸ್ಸಲಾಮ್ ವರಹ್ಮತುಲ್ಲಾಹಿ ವ ಬರಕಾತುಹೂ' ಎಂದು ಹೇಳಿದೆ. (ಬುಖಾರಿ, ಮುಸ್ಲಿಮ್)

16. ಕೆಲವು ಮಂದಿ ಮಲಗಿರುವಲ್ಲಿಗೆ ನೀವು ಹೋದಾಗ ಎಚ್ಚರ ಇರುವವರು ಆಲಿಸು ವಂತೆಯೂ ಮಲಗಿದವರು ಎಚ್ಚರಗೊಳ್ಳದಂತೆಯೂ ಮೆಲುದನಿಯಲ್ಲಿ ಸಲಾಮ್ ಹೇಳಿರಿ.

ಹ. ಮಿಕ್ದಾದ್(ರ) ಹೇಳುತ್ತಾರೆ; "ನಾವು ಪ್ರವಾದಿವರ್ಯರಿಗೆ(ಸ) ಸ್ವಲ್ಪ ಹಾಲು ಇರಿಸುತ್ತಿದ್ದೆವು. ಪ್ರವಾದಿ(ಸ) ರಾತ್ರಿ ತಡವಾಗಿ ಬಂದಾಗ ಮಲಗಿದವರು ಎಚ್ಚರಾಗದ ರೀತಿಯಲ್ಲಿ ಹಾಗೂ ಎಚ್ಚರ ಇರುವವರು ಕೇಳುವಂತೆ ಸಲಾಮ್ ಹೇಳುತ್ತಿದ್ದರು. ಪ್ರವಾದಿ(ಸ) ಬಂದರು ಮತ್ತು ಎಂದಿನಂತೆ ಸಲಾಮ್ ಹೇಳಿದರು". (ಮುಸ್ಲಿಮ್)

17. ಪ್ರಸನ್ನ ವದನರಾಗಿ ಸಲಾಮ್‌ಗೆ ಉತ್ತರ ಹೇಳಿರಿ. ಇದು ಮುಸ್ಲಿಮ್ ಸಹೋದರನ ಹಕ್ಕಾಗಿದೆ. ಈ ಹಕ್ಕನ್ನು ತೀರಿಸುವಲ್ಲಿ ಎಂದೂ ಲೋಭ ತೋರದಿರಿ.

ಪ್ರವಾದಿ(ಸ) ಹೇಳಿರುವರು: ಮುಸ್ಲಿಮನ ಮೇಲೆ ಮುಸ್ಲಿಮನ ಐದು ಹಕ್ಕುಗಳಿವೆ, i) ಸಲಾಮ್‌ಗೆ ಉತ್ತರಿಸುವುದು. ii) ರೋಗಿಯನ್ನು ಸಂದರ್ಶಿಸುವುದು. iii) ಮರಣ ಯಾತ್ರೆಯಲ್ಲಿ ಪಾಲ್ಗೊಳ್ಳುವುದು. iv) ಆಮಂತ್ರಣ ಸ್ವೀಕರಿಸುವುದು. v) ಸೀನಿದಾಗ ಉತ್ತರಿಸುವುದು. (ಬುಖಾರಿ, ಮುಸ್ಲಿಮ್)

ಪ್ರವಾದಿ(ಸ) ಹೇಳಿದರು: 'ರಸ್ತೆಯ ಬದಿಯಲ್ಲಿ ಕುಳಿತಿರಬೇಡಿರಿ.' ಆಗ ಜನರೆಂದರು, 'ಓ ಪ್ರವಾದಿವರ್ಯರೇ! ನಮಗಂತೂ ರಸ್ತೆ ಬದಿ ಕುಳಿತುಕೊಳ್ಳುವುದು ಅನಿವಾರ್ಯವಾಗಿದೆ.' ಆಗ ಪ್ರವಾದಿ(ಸ) ಹೇಳಿದರು: 'ನಿಮಗೆ ರಸ್ತೆ ಬದಿಯಲ್ಲಿ ಕುಳಿತುಕೊಳ್ಳುವುದು ಅನಿವಾರ್ಯ ವಾದರೆ ಕುಳಿತುಕೊಳ್ಳಿರಿ. ಆದರೆ ರಸ್ತೆಯ ಹಕ್ಕುಗಳನ್ನು ಮಾತ್ರ ತಪ್ಪದೆ ತೀರಿಸಿರಿ.' ಆಗ ಜನರು ಕೇಳಿದರು: 'ಓ ಪ್ರವಾದಿವರ್ಯರೇ! ರಸ್ತೆಯ ಹಕ್ಕುಗಳಾವುವು?' ಪ್ರವಾದಿ(ಸ) ಹೇಳಿದರು: ದೃಷ್ಟಿಗಳನ್ನು ಕೆಳಗಿಡುವುದು, ಯಾರಿಗೂ ತೊಂದರೆ ಕೊಡದಿರುವುದು, ಸಲಾಮ್‌ಗೆ ಉತ್ತರ ನೀಡುವುದು,

ಒಳಿತನ್ನು ಉಪದೇಶಿಸುವುದು ಹಾಗೂ ಕೆಡುಕಿನಿಂದ ತಡೆಯುವುದು'. (ಬುಖಾರಿ, ಮುಸ್ಲಿಮ್)

18. ಸಲಾಮ್‌ಗೆ ಉತ್ತರವಾಗಿ 'ವ ಅಲೈಕುಮುಸ್ಸಲಾಮ್' ಎಂದು ಮಾತ್ರ ಹೇಳದೆ 'ವರಹ್ಮತುಲ್ಲಾಹಿ ವ ಬರಕಾತುಹೂ' ಎಂದು ಕೂಡ ಸೇರಿಸಿ ಹೇಳಿರಿ.

ಪವಿತ್ರ ಕುರ್‌ಆನ್ ಈ ರೀತಿ ಆದೇಶಿಸುತ್ತದೆ:

وَإِذَا حُيِّيتُم بِتَحِيَّةٍ فَحَيُّوا بِأَحْسَنَ مِنْهَا أَوْ رُدُّوهَا

**"ನಿಮಗೆ ಯಾರಾದರೂ ಸಾದರದಿಂದ ಸಲಾಮ್ ಹೇಳಿದರೆ ಅದಕ್ಕಿಂತಲೂ ಉತ್ತಮ ರೀತಿಯಿಂದ ಅಥವಾ ಕನಿಷ್ಠಪಕ್ಷ ಅದೇ ರೀತಿಯಲ್ಲಿ ಪ್ರತಿ ಸಲಾಮ್ ಹೇಳಿರಿ". (4:86)**

ಸಲಾಮ್‌ಗೆ ಉತ್ತರಿಸುವಾಗ ಜಿಪುಣತೆ ತೋರದಿರಿ. ಸಲಾಮ್‌ನ ಪದಗಳಲ್ಲಿ ಸ್ವಲ್ಪ ಹೆಚ್ಚು ಸೇರಿಸಿಯೇ ಉತ್ತರಿಸಿರಿ ಅಥವಾ ಕನಿಷ್ಠಪಕ್ಷ ಅದೇ ಪದಗಳನ್ನು ಪುನರಾವರ್ತಿಸಿ ಹೇಳಿರಿ. ಉತ್ತರವಂತೂ ನೀಡಲೇಬೇಕು. ಹ. ಇಮ್ರಾನ್ ಬಿನ್ ಹಸೀನ್(ರ) ಹೇಳುತ್ತಾರೆ: ಪ್ರವಾದಿ(ಸ) ಕುಳಿತಿದ್ದಾಗ ಒಬ್ಬರು ಬಂದು 'ಅಸ್ಸಲಾಮು ಅಲೈಕುಮ್' ಎಂದರು. ಪ್ರವಾದಿ(ಸ) ಅದಕ್ಕೆ ಉತ್ತರಿಸಿದ ಬಳಿಕ ಹತ್ತು ಪುಣ್ಯಗಳು ದೊರೆತವು ಎಂದರು. ಇನ್ನೊಬ್ಬರು ಬಂದು 'ಅಸ್ಸಲಾಮು ಅಲೈಕುಮ್ ವ ರಹ್ಮತುಲ್ಲಾಹ್' ಎಂದರು. ಪ್ರವಾದಿ(ಸ) ಅದಕ್ಕೆ ಉತ್ತರಿಸಿದರು. ತರುವಾಯ ಇಪ್ಪತ್ತು (ಪುಣ್ಯಗಳು ದೊರೆತುವು) ಎಂದರು. ಆ ಬಳಿಕ ಮೂರನೆಯವರೊಬ್ಬರು ಬಂದು 'ಅಸ್ಸಲಾಮು ಅಲೈಕುಮ್ ವರಹ್ಮತುಲ್ಲಾಹಿ ವಬರಕಾತುಹೂ' ಎಂದರು. ಪ್ರವಾದಿ(ಸ) ಅವರಿಗೆ ಉತ್ತರಿಸಿದರು. ಅನಂತರ ಮೂವತ್ತು (ಪುಣ್ಯಗಳು ದೊರೆತುವು) ಎಂದರು. (ತಿರ್ಮಿದಿ)

ಹ. ಉಮರ್(ರ) ಹೇಳುತ್ತಾರೆ: ಒಮ್ಮೆ ನಾನು ಹ. ಅಬೂಬಕರ್‌ರ(ರ) ಹಿಂದೆ ಸವಾರಿ ಮಾಡುತ್ತಿದ್ದೆ. ನಾವು ಎಲ್ಲೆಲ್ಲಾ ಸಾಗುತ್ತಿದ್ದೆವೋ ಅಲ್ಲಿರುವ ಎಲ್ಲರಿಗೂ ಹ. ಅಬೂಬಕರ್(ರ) 'ಅಸ್ಸಲಾಮು ಅಲೈಕುಮ್' ಹೇಳುತ್ತಿದ್ದರು. ಅವರು ಅದಕ್ಕೆ ಉತ್ತರವಾಗಿ 'ವ ಅಲೈಕುಮುಸ್ಸಲಾಮ್ ವ ರಹ್ಮತುಲ್ಲಾಹ್' ಎನ್ನುತ್ತಿದ್ದರು. ಹ. ಅಬೂಬಕರ್(ರ), 'ಅಸ್ಸಲಾಮು ಅಲೈಕುಮ್ ವ ರಹ್ಮತುಲ್ಲಾಹ್' ಎಂದಾಗ ಜನರು, 'ವಅಲೈಕುಮುಸ್ಸಲಾಮ್ ವರಹ್ಮತುಲ್ಲಾಹಿ ವಬರಕಾತುಹೂ' ಎಂದುತ್ತರಿಸಿದರು. ಅದಕ್ಕೆ ಹ. ಅಬೂಬಕರ್(ರ) ಹೇಳಿದರು, ಇಂದು ಜನರು ಪುಣ್ಯದಲ್ಲಿ ನಮ್ಮನ್ನು ಮೀರಿಸಿದರು. (ಅಲ್ ಅದಬುಲ್ ಮುಫ್ರದ್)

19. ಯಾರನ್ನಾದರೂ ಭೇಟಿಯಾದಾಗ ಮೊಟ್ಟ ಮೊದಲು 'ಅಸ್ಸಲಾಮು ಅಲೈಕುಮ್' ಎನ್ನಿರಿ. ಅದಕ್ಕಿಂತ ಮುಂಚೆ ಮಾತುಕತೆ ಆರಂಭಿಸಬೇಡಿರಿ. ಮಾತುಕತೆ ಏನಿದ್ದರೂ ಸಲಾಮ್‌ನ ನಂತರವೇ ಮಾಡಬೇಕು. ಪ್ರವಾದಿ(ಸ) ಈ ರೀತಿ ಆದೇಶಿಸಿರುವರು:

"ಯಾರಾದರೂ ಸಲಾಮ್ ಹೇಳುವುದಕ್ಕೆ ಮುಂಚೆಯೇ ಮಾತಿಗೆ ತೊಡಗಿದರೆ ಅದಕ್ಕೆ ಉತ್ತರಿಸಬೇಡಿರಿ".

20. ಈ ಕೆಳಗಿನ ಪರಿಸ್ಥಿತಿಗಳಲ್ಲಿ ಸಲಾಮ್ ಹೇಳಬೇಡಿರಿ:

i) ಜನರು ಕುರ್‌ಆನ್, ಹದೀಸ್ ಅಧ್ಯಯನದಲ್ಲಿ ತೊಡಗಿರುವಾಗ.

ii) ಖುತ್ಬಾ (ಪ್ರವಚನ) ಮಾಡುತ್ತಿರುವಾಗ ಅಥವಾ ಆಲಿಸುತ್ತಿರುವಾಗ.

iii) ಅದಾನ್ ಅಥವಾ ಇಕಾಮತ್ ಹೇಳುತ್ತಿರುವಾಗ.

iv) ಧಾರ್ಮಿಕ ಚರ್ಚೆ ನಡೆಯುತ್ತಿರುವಾಗ ಅಥವಾ ಧಾರ್ಮಿಕ ಬೋಧನೆ ಮಾಡುತ್ತಿರುವಾಗ.

v) ಶಿಷ್ಯರಿಗೆ ಗುರು ಕಲಿಸುತ್ತಿರುವಾಗ.

vi) ಮಲ-ಮೂತ್ರ ವಿಸರ್ಜನೆ ಮಾಡುತ್ತಿರುವಾಗ.

ಈ ಕೆಳಗಿನ ಸಂದರ್ಭಗಳಲ್ಲಿ ಸಲಾಮ್ ಹೇಳಬಾರದು. ಮಾತ್ರವಲ್ಲ ವಿವೇಕಪೂರ್ಣವಾಗಿ ನಿಮ್ಮ ಮಾನಸಿಕ ಅಸಂತೋಷ ಮತ್ತು ಬೇಸರವನ್ನು ವ್ಯಕ್ತಪಡಿಸಬೇಕು.

i) ಯಾರಾದರೂ ನಿಷೇಧ ಕಾರ್ಯಗಳಲ್ಲಿ ಹಾಗೂ ಸುಖಲೋಲುಪತೆಯಲ್ಲಿ ನಿರತರಾಗಿ ಧರ್ಮದ ಅವಹೇಳನ ಮಾಡುತ್ತಿರುವಾಗ.

ii) ಯಾರಾದರೂ ಅವಾಚ್ಯ, ಅಸಭ್ಯ, ಅಶ್ಲೀಲ ಮಾತುಕತೆ ಮತ್ತು ವ್ಯಂಗ್ಯ ನುಡಿಗಳ ಮೂಲಕ ಧರ್ಮಕ್ಕೆ ಅಪಕೀರ್ತಿ ಮಾಡುತ್ತಿರುವಾಗ.

iii) ಯಾರಾದರೂ ಧರ್ಮ ವಿರೋಧಿ ವಿಚಾರ-ಸಿದ್ಧಾಂತಗಳ ಪ್ರಚಾರ ಮಾಡುತ್ತಾ ಜನರನ್ನು ಧರ್ಮಭ್ರಷ್ಟಗೊಳಿಸಲು ಪ್ರಯತ್ನಿಸುತ್ತಿರುವಾಗ ಅಥವಾ ಕಂದಾಚಾರ, ನವೀನಾಚಾರಗಳ ಪ್ರಚಾರಗೈಯುತ್ತಿರುವಾಗ.

iv) ಧಾರ್ಮಿಕ ಶ್ರದ್ಧೆ ಮತ್ತು ಧಾರ್ಮಿಕ ಸಂಕೇತಗಳನ್ನು ಯಾರಾದರೂ ಅವಹೇಳನ ಮಾಡುತ್ತಿರುವಾಗ ಶರೀಅತ್ (ಧರ್ಮಶಾಸ್ತ್ರ) ಸಿದ್ಧಾಂತಗಳ ಮತ್ತು ಆಜ್ಞೆಗಳ ಲೇವಡಿ ಮಾಡಿ ತನ್ನ ಕಾಪಟ್ಯ ಹಾಗೂ ಆಷಾಢಭೂತಿತನವನ್ನು ಪ್ರದರ್ಶಿಸುತ್ತಿರುವಾಗ.

21. ಯಹೂದಿಗಳಿಗೆ ಮೊದಲು ಸಲಾಮ್ ಮಾಡಬೇಡಿರಿ. ಯಹೂದಿಯರು ಧರ್ಮಭ್ರಷ್ಟತೆ, ಸತ್ಯ ದ್ವೇಷ, ಅಕ್ರಮ, ರಾಕ್ಷಸೀಯತೆ, ವಂಚನೆ, ಕಾಪಟ್ಯ ಹಾಗೂ ನೀಚತೆಗೆ ಹೆಸರುವಾಸಿಯಾದವರು. ಪವಿತ್ರ ಕುರ್‌ಆನ್ ಅವರನ್ನು ಅತ್ಯಂತ ನೀಚ ಸಮುದಾಯವೆಂದು ವರ್ಣಿಸಿದೆ. ಅಲ್ಲಾಹನು ಅವರ ಮೇಲೆ ಅಗಣಿತ ಅನುಗ್ರಹಗಳನ್ನು ಮಾಡಿದ್ದನು. ಆದರೆ ಆ ಜನಾಂಗವು ಸದಾ ಅನೀತಿ ಮತ್ತು ಕೃತಘ್ನತೆಯನ್ನೇ ಪ್ರದರ್ಶಿಸಿತು. ದೇವನಿಯುಕ್ತರಾದ ಪ್ರವಾದಿಗಳನ್ನೂ(ಅ) ಕೊಲೆಗೈದ ಜನಾಂಗವದು. ಆದ್ದರಿಂದ ಅವರ ಗೌರವಾದರಕ್ಕೆ ಕಾರಣವಾಗುವ ಯಾವುದೇ ಕ್ರಿಯೆಯನ್ನೂ ಸತ್ಯವಿಶ್ವಾಸಿಯು ವರ್ಜಿಸಬೇಕು. ಸತ್ಯದ ವೈರ ಕಟ್ಟಿಕೊಂಡರೆ ಆಗುವ ಶಾಶ್ವತ ನಿಂದ್ಯತೆ ಮತ್ತು ಅವಹೇಳನವು ಅವರಿಗೆ ಮನವರಿಕೆಯಾಗುವಂತೆ ಅವರೊಂದಿಗೆ ವರ್ತಿಸಬೇಕು. ಪ್ರವಾದಿ(ಸ) ಹೇಳುತ್ತಾರೆ: "ಯಹೂದಿಗಳಿಗೆ ಮೊದಲು ಸಲಾಮ್ ಮಾಡಬೇಡಿರಿ. ಮಾರ್ಗದಲ್ಲಿ ನಡೆಯುವಾಗ ಸಿಕ್ಕಿದರೆ ಅವರು ಬದಿಗಾಗುವಂತೆ ನಡೆಯಿರಿ". (ಅಲ್ ಅದಬುಲ್ ಮುಫ್ರದ್)

ಅರ್ಥಾತ್ ಸ್ವಾಭಿಮಾನ ಮತ್ತು ಘನತೆಯೊಂದಿಗೆ ನಡೆಯಿರಿ. ನಿಮ್ಮನ್ನು ಕಂಡು ಅವರು ದಾರಿ ಬಿಟ್ಟುಕೊಡುವಂತೆ ನಡೆಯಿರಿ.

22. ಮುಸ್ಲಿಮರೂ ಮುಸ್ಲಿಮೇತರರೂ ಜೊತೆಗಿರುವ ಸಭೆಗೆ ಹೋದಾಗ ಸಲಾಮ್ ಹೇಳಿರಿ. ಒಮ್ಮೆ ಪ್ರವಾದಿವರ್ಯರು(ಸ) ಅಂತಹ ಕೂಟದ ಬಳಿಯಿಂದ ಹಾದು ಹೋದಾಗ ಅವರಿಗೆ ಸಲಾಮ್ ಹೇಳಿದರು. (ಅಲ್ ಅದಬುಲ್ ಮುಫ್ರದ್)

23. ಮುಸ್ಲಿಮೇತರರಿಗೆ ಸಲಾಮ್ ಹೇಳುವಾಗ ಅಸ್ಸಲಾಮು ಅಲೈಕುಮ್ ಎಂದು ಹೇಳದೆ ಕೇವಲ 'ಸಲಾಮ್' ಹೇಳಿರಿ. ಮುಸ್ಲಿಮೇತರರಂತೆ ಕೈ ಮುಗಿಯಬೇಡಿರಿ ಅಥವಾ ವಂದನೆಯ ಸಂಜ್ಞೆ ಮಾಡಬೇಡಿರಿ. ಅದು ಇಸ್ಲಾಮಿ ಶ್ರದ್ಧೆ ಮತ್ತು ಶಿಷ್ಟಾಚಾರಕ್ಕೆ ವಿರುದ್ಧವಾಗಿದೆ.

ಹರ್ಕುಲಿಸ್‌ನಿಗೆ ಪ್ರವಾದಿ(ಸ) ಬರೆದ ಪತ್ರದಲ್ಲಿ: 'ಸಲಾಮ್' ಈ ರೀತಿ ಬರೆಯಲಾಗಿತ್ತು

سَلَامٌ عَلٰى مَنِ اتَّبَعَ الْهُدٰى

"ಸಲಾಮುನ್ ಅಲಾ ಮನಿತ್ತಬಅಲ್ ಹುದಾ"

(ಸನ್ಮಾರ್ಗಗಾಮಿಯ ಮೇಲೆ ರಕ್ಷಣೆ ಇರಲಿ.)

24. ಪ್ರೇಮ, ಆದರ ಮತ್ತು ಸಂತೋಷದ ಪ್ರಕಟಣೆಗಾಗಿ ಸಲಾಮ್‌ನ ಜೊತೆಗೆ ಹಸ್ತಲಾಘವವನ್ನೂ ಮಾಡಿರಿ. ಪ್ರವಾದಿ(ಸ) ಹಾಗೂ ಸಹಾಬಿಗಳು(ರ) ಹಾಗೆ ಮಾಡು ತ್ತಿದ್ದರು. ಪ್ರವಾದಿ(ಸ) ತಮ್ಮ ಸಂಗಾತಿಗಳಿಗೆ ಪರಸ್ಪರ ಹಸ್ತಲಾಘವ ಮಾಡಬೇಕೆಂದು ಆಜ್ಞಾಪಿಸಿದರು. ವಿಭಿನ್ನ ರೀತಿಯಲ್ಲಿ ಅದರ ಮೇಲ್ಮೆ ಮತ್ತು ಮಹತ್ವವನ್ನು ವಿವರಿಸಿರುವರು.

ಹ. ಕತಾದಾರು(ರ) ಹ. ಅನಸ್‌ರಲ್ಲಿ(ರ) ವಿಚಾರಿಸಿದರು. ಸಹಾಬಿಗಳಲ್ಲಿ ಹಸ್ತಲಾಘವ ಮಾಡುವ ಪದ್ಧತಿ ಬಳಕೆಯಲ್ಲಿತ್ತೇ? ಹ. ಅನಸ್(ರ) 'ಹೌದೆ'ಂದರು. (ಬುಖಾರಿ)

ಹ. ಸಲ್ಮಾ ಬಿನ್ ವರ್ದಾನ್(ರ) ಹೇಳುತ್ತಾರೆ: ಹ. ಮಾಲಿಕ್ ಬಿನ್ ಅನಸ್(ರ) ಜನರೊಂದಿಗೆ ಹಸ್ತಲಾಘವ ಮಾಡುವುದನ್ನು ನಾನು ಕಂಡಿದ್ದೇನೆ. ನೀವು ಯಾರೆಂದು ಅವರು ನನ್ನಲ್ಲಿ ವಿಚಾರಿಸಿದಾಗ ನಾನು ಲೈಸ್ ಗೋತ್ರದ ಓರ್ವ ಗುಲಾಮನೆಂದೆ. ಅವರು ನನ್ನ ತಲೆಯನ್ನು ಮೂರು ಬಾರಿ ನೇವರಿಸಿದರು. 'ದೇವನು ನಿಮಗೆ ಒಳಿತು ಸಮೃದ್ಧಿಗಳನ್ನು ದಯಪಾಲಿಸಲಿ' ಎಂದು ಆಶೀರ್ವದಿಸಿದರು.

ಒಮ್ಮೆ ಕೆಲವು ಯಮನಿಗಳು ಬಂದಾಗ ಪ್ರವಾದಿ(ಸ) ಸಹಾಬಿಗಳಿಗೆ(ರ) ಈ ರೀತಿ ಆದೇಶಿಸಿದರು. ನಿಮ್ಮ ಬಳಿ ಕೆಲವು ಯಮನಿಗಳು ಬಂದಿದ್ದಾರೆ. ಬಂದವರ ಪೈಕಿ ಹಸ್ತ ಲಾಘವಕ್ಕೆ ಇವರು ಹೆಚ್ಚು ಅರ್ಹರು. (ಅಬೂದಾವೂದ್)

ಹ. ಹುದೈಫಾ ಬಿನ್ ಯಮಾನ್(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು: "ಇಬ್ಬರು ಸತ್ಯವಿಶ್ವಾಸಿಗಳು ಪರಸ್ಪರ ಭೇಟಿಯಾಗಿ ಸಲಾಮ್ ಹೇಳಿದ ಬಳಿಕ ಹಸ್ತಲಾಘವ ಮಾಡಿದಾಗ ಅವರಿಬ್ಬರ ಪಾಪಗಳು ತರಗೆಲೆಗಳು ಮರದಿಂದ ಉದುರುವಂತೆ ಉದುರುತ್ತವೆ". (ತಬ್ರಾನಿ)

'ಹಸ್ತಲಾಘವ ಮಾಡುವುದೇ ಪೂರ್ಣ ಸಲಾಮ್ ಆಗಿದೆ' ಎಂದು ಪ್ರವಾದಿ(ಸ) ಹೇಳಿರುವುದಾಗಿ ಹ. ಅಬ್ದುಲ್ಲಾ ಬಿನ್ ಮಸ್‌ಊದ್(ರ) ವರದಿ ಮಾಡಿರುತ್ತಾರೆ.

25. ನಿಮ್ಮ ಬಂಧುಗಳು, ಗೆಳೆಯರು ಅಥವಾ ಹಿರಿಯರು ಯಾತ್ರೆಯಿಂದ ಮರಳಿ ಬಂದಾಗ ಆಲಿಂಗನವನ್ನು ಮಾಡಿರಿ. ಹ. ಝೈದ್ ಬಿನ್ ಹಾರಿಸ್(ರ) ಮದೀನಾಕ್ಕೆ ಬಂದಾಗ ಪ್ರವಾದಿವರ್ಯರ(ಸ) ಮನೆಗೆ ಹೋಗಿ ಕದ ತಟ್ಟಿದರು. ಪ್ರವಾದಿವರ್ಯರು(ಸ) ತಮ್ಮ ಶಾಲನ್ನು ಎಳೆಯುತ್ತಾ ಬಂದು ಬಾಗಿಲು ತೆರೆದರು. ಅವರನ್ನು ಆಲಿಂಗಿಸಿದರು ಮತ್ತು ಹಣೆಯನ್ನು ಚುಂಬಿಸಿದರು. (ತಿರ್ಮಿದಿ)

ಹ. ಅನಸ್(ರ) ಹೇಳುತ್ತಾರೆ: ಸಹಾಬಿಗಳು(ರ) ಪರಸ್ಪರ ಭೇಟಿಯಾದಾಗ ಹಸ್ತಲಾಘವ ಮಾಡುತ್ತಿದ್ದರು. ಪ್ರಯಾಣದಿಂದ ಹಿಂದಿರುಗಿದಾಗ ಪರಸ್ಪರ ಆಲಿಂಗಿಸುತ್ತಿದ್ದರು. (ತಬ್ರಾನಿ)

❖ ❖ ❖ ❖

# ರೋಗಿಯ ಸಂದರ್ಶನ

1. ರೋಗಿಯನ್ನು ತಪ್ಪದೆ ಸಂದರ್ಶಿಸಿರಿ. ರೋಗಿಯ ಸಂದರ್ಶನ ಸಂಘಟಿತ ಜೀವನದ ಒಂದು ಅನಿವಾರ್ಯ ಅಗತ್ಯ. ಪರಸ್ಪರ ಅನುಕಂಪ, ಸಹಾನುಭೂತಿ ಮತ್ತು ಸಹಕಾರದ ಒಂದು ಉತ್ತಮ ಪ್ರೇರಕ. ಮಾತ್ರವಲ್ಲ ಅದು ಮುಸ್ಲಿಮನ ಮೇಲೆ ಇನ್ನೊಬ್ಬ ಮುಸ್ಲಿಮ್ ಸೋದರನ ಒಂದು ಅನುಲ್ಲಂಘನೀಯ ಧಾರ್ಮಿಕ ಹಕ್ಕು ಕೂಡಾ ಆಗಿದೆ. ಅದು ಅಲ್ಲಾಹನೊಂದಿಗೆ ನಮ್ಮ ಪ್ರೇಮದ ಒಂದು ಅನಿವಾರ್ಯ ಬೇಡಿಕೆಯೂ ಹೌದು. ಅಲ್ಲಾಹನೊಂದಿಗೆ ಸಂಪರ್ಕವಿರಿಸುವವನು ಆತನ ದಾಸರಿಂದ ನಿರ್ಲಿಪ್ತನಾಗಲು ಸಾಧ್ಯವಿಲ್ಲ. ರೋಗಿಯ ಬಗ್ಗೆ ಅನುಕಂಪ, ಸಹಾನುಭೂತಿ ಮತ್ತು ಸಹಕಾರ ವ್ಯಕ್ತಪಡಿಸದೆ ಇರುವುದು ಅಲ್ಲಾಹನೊಂದಿಗೆ ಅಲಕ್ಷ್ಯ ವ್ಯಕ್ತಪಡಿಸಿದಂತೆಯೇ ಸರಿ.

ಪ್ರವಾದಿ(ಸ) ಈ ರೀತಿ ಹೇಳಿರುವರು: ನಿರ್ಣಾಯಕ ದಿನದಂದು ಅಲ್ಲಾಹನು ಹೇಳುವನು: "ಓ ಆದಮನ ಪುತ್ರರೇ! ನಾನು ರೋಗಿಯಾಗಿದ್ದೆ. ನೀನು ನನ್ನನ್ನು ಸಂದರ್ಶಿಸಲಿಲ್ಲ". ಆತ ಹೇಳುವನು, "ನೀನಂತೂ ಅಖಿಲ ವಿಶ್ವದ ಪ್ರಭು. ನಾನು ನಿನ್ನ ರೋಗ ಸಂದರ್ಶನಕ್ಕೆ ಬರುವು ದೆಂತು?" ಅಲ್ಲಾಹನು ಹೇಳುವನು: "ನನ್ನ ಆ ದಾಸನು ರೋಗಿಯಾಗಿದ್ದ. ನೀನು ಅವನನ್ನು ಸಂದರ್ಶಿಸಲಿಲ್ಲ. ನೀನು ಆತನ ಸಂದರ್ಶನಕ್ಕೆ ಹೋಗುತ್ತಿದ್ದರೆ ನನ್ನನ್ನು ಅಲ್ಲಿ ದರ್ಶಿಸುತ್ತಿದ್ದೆ" (ಅರ್ಥಾತ್ ನೀನು ನನ್ನ ಸಂಪ್ರೀತಿ ಮತ್ತು ಕರುಣೆಗೆ ಪಾತ್ರನಾಗುತ್ತಿದ್ದೆ). (ಮುಸ್ಲಿಮ್)

ಪ್ರವಾದಿ(ಸ) ಹೇಳಿದರು: "ಒಬ್ಬ ಮುಸ್ಲಿಮ್‌ನ ಮೇಲೆ ಇನ್ನೊಬ್ಬ ಮುಸ್ಲಿಮ್ ಸಹೋದರನ ಆರು ಹಕ್ಕುಗಳಿವೆ." "ಓ ಪ್ರವಾದಿವರ್ಯರೇ! ಅವು ಯಾವುವು?" ಎಂದು ಕೇಳಲಾಯಿತು. ಪ್ರವಾದಿ(ಸ) ಹೇಳಿದರು:

i) ನೀವು ಮುಸ್ಲಿಮ್ ಸಹೋದರನೊಬ್ಬನನ್ನು ಸಂದರ್ಶಿಸಿದಾಗ ಆತನಿಗೆ ಸಲಾಮ್ ಹೇಳುವುದು.

ii) ಆತ ನಿಮ್ಮನ್ನು ಊಟಕ್ಕೆ ಆಮಂತ್ರಿಸಿದಾಗ ಅದನ್ನು ಸ್ವೀಕರಿಸುವುದು.

iii) ಆತ ನಿಮ್ಮಿಂದ ಸಲಹೆ ಕೇಳಿದಾಗ ಹಿತಾಕಾಂಕ್ಷೆಯೊಂದಿಗೆ ಉತ್ತಮ ಸಲಹೆ ನೀಡುವುದು.

iv) ಆತ ಸೀನಿದ ಬಳಿಕ "ಅಲ್‌ಹಮ್ದುಲಿಲ್ಲಾಹ್" (ಸರ್ವಸ್ತುತಿ-ಸ್ತೋತ್ರಗಳೂ ಅಲ್ಲಾಹನಿಗೆ ಮೀಸಲು) ಎಂದಾಗ ಅದಕ್ಕುತ್ತರವಾಗಿ 'ಯರ್ಹಮುಕಲ್ಲಾಹ್' (ನಿನ್ನ ಮೇಲೆ ಅಲ್ಲಾಹನ ಕರುಣೆ ಇರಲಿ) ಎನ್ನುವುದು.

v) ಆತ ರೋಗಿಯಾದರೆ ಆತನನ್ನು ಸಂದರ್ಶಿಸುವುದು. vi) ಆತ ಮರಣ ಹೊಂದಿದರೆ ಶವಯಾತ್ರೆಯೊಂದಿಗೆ ತೆರಳುವುದು. (ಮುಸ್ಲಿಮ್)

ಪ್ರವಾದಿ(ಸ) ಹೇಳಿರುವರು: "ಯಾವನು ತನ್ನ ಮುಸ್ಲಿಮ್ ಸಹೋದರನು ರೋಗಿಯಾದಾಗ ಸಂದರ್ಶಿಸುವನೋ ಅವನು ಸ್ವರ್ಗದ ಉನ್ನತ ಸ್ಥಾನದಲ್ಲಿರುವನು".

(ಅಲ್ ಅದಬುಲ್ ಮುಫ್ರದ್)

ಹ. ಅಬೂ ಹುರೈರಾ(ರ) ಹೇಳುತ್ತಾರೆ: ಪ್ರವಾದಿ(ಸ) ಈ ರೀತಿ ಹೇಳಿದರು: "ದಾಸನೊಬ್ಬನು ತನ್ನ ಮುಸ್ಲಿಮ್ ಸೋದರನ ಶುಶ್ರೂಷೆ ಮಾಡಿದರೆ ಅಥವಾ ಅವನನ್ನು ಸಂದರ್ಶಿಸಿದರೆ ಓರ್ವ ಉದ್ಘೋಷಕನು ಆಕಾಶದಿಂದ ಘೋಷಿಸುತ್ತಾನೆ: ನೀವೂ ಉತ್ತಮರು, ನಿಮ್ಮ ನಡಿಗೆಯೂ ಉತ್ತಮವಾಗಿತ್ತು. ನೀವು ನಿಮಗಾಗಿ ಸ್ವರ್ಗದಲ್ಲಿ ತಾಣ ಮಾಡಿದಿರಿ!" (ತಿರ್ಮಿದಿ)

2. ರೋಗಿಯ ಶಿರಭಾಗದಲ್ಲಿ ಕುಳಿತು ತಲೆ ಅಥವಾ ಮೈ ನೇವರಿಸಿರಿ. ನೆಮ್ಮದಿಯ ಮಾತು ಹೇಳಿರಿ. ಆತನ ದೃಷ್ಟಿಯನ್ನು ಪರಲೋಕದ ಪುಣ್ಯದ ಕಡೆಗೆ ತಿರುಗಿಸಿರಿ. ರೋಗದ ಬಗ್ಗೆ ಅಸಹನೆ ಮತ್ತು ಆಕ್ಷೇಪದ ಮಾತು ಅವನ ಬಾಯಿಯಿಂದ ಬಾರದಂತೆ ಜಾಗ್ರತೆ ವಹಿಸಿರಿ.

ಹ. ಆಯಿಶಾ ಬಿಂತು ಸಅದ್(ರ) ಹೇಳುತ್ತಾರೆ, ನನ್ನ ತಂದೆಯವರು ತಮ್ಮ ಒಂದು ವೃತ್ತಾಂತವನ್ನು ಈ ರೀತಿ ವಿವರಿಸಿರುವರು: ಒಮ್ಮೆ ನಾನು ಮಕ್ಕಾದಲ್ಲಿ ತೀವ್ರ ರೋಗಪೀಡಿತನಾದೆ. ಪ್ರವಾದಿ(ಸ) ನನ್ನನ್ನು ಸಂದರ್ಶಿಸಲು ಬಂದರು. ನಾನು ಅವರಲ್ಲಿ ಈ ರೀತಿ ಪ್ರಶ್ನಿಸಿದೆ: 'ಪ್ರವಾದಿವರ್ಯರೇ(ಸ)! ನಾನು ತುಂಬಾ ಸೊತ್ತು ಬಿಟ್ಟಗಲುತ್ತಿರುವೆನು. ನನಗಿರುವುದು ಓರ್ವ ಪುತ್ರಿ ಮಾತ್ರ. ನಾನು ನನ್ನ ಸೊತ್ತಿನ ಮೂರನೆ ಎರಡಂಶಕ್ಕೆ ಉಯಿಲು ಮಾಡಬಹುದೇ? ಉಳಿದ ಮೂರನೆಯ ಒಂದಂಶವನ್ನು ಮಗಳಿಗೆ ಕೊಟ್ಟರೆ ಸಾಲದೇ?' ಪ್ರವಾದಿ(ಸ), 'ಕೂಡದು' ಎಂದರು. 'ಅರ್ಧಾಂಶ ಸೊತ್ತಿಗೆ ಉಯಿಲು ಮಾಡಿ ಅರ್ಧಾಂಶವನ್ನು ಮಗಳಿಗೆ ಬಿಡಲೇ?' ಎಂದು ಪ್ರಶ್ನಿಸಿದಾಗ 'ಕೂಡದು' ಎಂದು ಉತ್ತರಿಸಿದರು. 'ಪ್ರವಾದಿವರ್ಯರೇ! ಮೂರನೆಯ ಒಂದಂಶಕ್ಕೆ ಉಯಿಲು ಮಾಡಬಹುದೇ?' ಎಂದು ನಾನು ಪುನಃ ಪ್ರಶ್ನಿಸಿದೆ. 'ಹೌದು, ಮೂರನೆಯ ಒಂದಂಶದ ಉಯಿಲು ಮಾಡಬಹುದು. ಅದುವೇ ಬಹಳವಾಯಿತು' ಎಂದು ಪ್ರವಾದಿ(ಸ) ಉತ್ತರಿಸಿದರು. ತರುವಾಯ ಪ್ರವಾದಿ(ಸ) ತಮ್ಮ ಕೈಯನ್ನು ನನ್ನ ಹಣೆಯ ಮೇಲಿಟ್ಟರು. ನನ್ನ ಮುಖವನ್ನೂ, ಬೆನ್ನನ್ನೂ ನೇವರಿಸಿದರು. ಬಳಿಕ ಈ ರೀತಿ ಪ್ರಾರ್ಥಿಸಿದರು:

"ಓ ಅಲ್ಲಾಹ್! ಸಅದ್‌ನನ್ನು ಗುಣಪಡಿಸು. ಆತನ ಹಿಜ್ರತನ್ನು ಪೂರ್ತಿಗೊಳಿಸು. ಆ ಬಳಿಕ ಇಂದಿನ ತನಕ ಆ ಘಟನೆ ನೆನಪಾದಾಗ ಪ್ರವಾದಿವರ್ಯರ(ಸ) ಸುಮಂಗಳ ಹಸ್ತಗಳ ತಂಪು ನನ್ನ ಹೃದಯದಾಳದಲ್ಲಿ ಭಾಸವಾಗುತ್ತದೆ". (ಅಲ್ ಅದಬುಲ್ ಮುಫ್ರದ್)

ಹ. ಝೈದ್ ಬಿನ್ ಅರ್ಕಮ್(ರ) ಹೇಳುತ್ತಾರೆ: "ಒಮ್ಮೆ ನನಗೆ ಕಣ್ಣು ಬೇನೆಯಾಯಿತು. ಪ್ರವಾದಿವರ್ಯರು(ಸ) ನನ್ನ ಸಂದರ್ಶನಕ್ಕೆ ಬಂದರು. ನಿಮ್ಮ ಕಣ್ಣಿನ ಬೇನೆಗೆ ನೀವೇನು ಮಾಡುತ್ತೀರಿ? ಎಂದು ಪ್ರಶ್ನಿಸಿದರು. ನಾನು ಸಹಿಸುತ್ತೇನೆ, ತಾಳ್ಮೆ ವಹಿಸುತ್ತೇನೆ

ಎಂದು ಉತ್ತರಿಸಿದೆ. ಆಗ ಪ್ರವಾದಿ(ಸ), ನೀವು ಕಣ್ಣಿನ ನೋವಿಗೆ ಸಹನೆ ಕೈಗೊಂಡರೆ ನಿಮಗೆ ನಿಮ್ಮ ಸಹನೆಗೆ ಪ್ರತಿಫಲವಾಗಿ ಸ್ವರ್ಗ ಲಭಿಸುವುದು" ಎಂದರು.

ಹ. ಇಬ್ನು ಅಬ್ಬಾಸ್(ರ) ಹೇಳಿದರು, ಪ್ರವಾದಿ(ಸ) ರೋಗಿಯ ಸಂದರ್ಶನಕ್ಕೆ ಹೋದಾಗಲೆಲ್ಲಾ ಅವರ ಶಿರಭಾಗದಲ್ಲಿ ಕುಳಿತು ಈ ರೀತಿ ಪ್ರಾರ್ಥಿಸುತ್ತಿದ್ದರು:

اَسْأَلُ اللّٰهَ الْعَظِيْمَ رَبَّ الْعَرْشِ الْعَظِيْمِ اَنْ يَّشْفِيَكَ

"ಅಸ್‌ಅಲುಲ್ಲಾಹಲ್ ಅಝೀಮ ರಬ್ಬಲ್ ಅರ್ಶಿಲ್ ಅಝೀಮಿ ಅನ್‌ಯಶ್‌ಫಿಯಕ".

(ನಾನು ಮಹಾ ವಿಶ್ವಸಿಂಹಾಸನದ ಒಡೆಯನೂ ಮಹಾನನೂ ಆದ ಅಲ್ಲಾಹನಲ್ಲಿ ಪ್ರಾರ್ಥಿಸುತ್ತೇನೆ. ಆತನು ನಿಮ್ಮನ್ನು ಗುಣಪಡಿಸಲಿ.)

ಪ್ರವಾದಿ(ಸ) ಹೇಳಿದರು: "ಈ ಪ್ರಾರ್ಥನೆಯನ್ನು ಏಳು ಸಲ ಪಠಿಸುವುದರಿಂದ ಆತನ ಮರಣವು ಸನ್ನಿಹಿತವಾಗಿರದಿದ್ದರೆ ಖಂಡಿತ ಅವನಿಗೆ ವಾಸಿಯಾಗುವುದು". (ಮಿಷ್ಕಾತ್)

ಹ. ಜಾಬಿರ್(ರ) ಹೇಳುತ್ತಾರೆ: ಪ್ರವಾದಿ(ಸ) ಉಮ್ಮು ಸಾಇಬ್ (ಓರ್ವ ಮುದುಕಿ) ಅವರ ಸಂದರ್ಶನಕ್ಕೆ ಬಂದರು. ಉಮ್ಮು ಸಾಇಬ್ ಜ್ವರದಲ್ಲಿ ನಡುಗುತ್ತಿದ್ದರು. 'ಹೇಗಿದ್ದೀರಿ' ಎಂದು ಪ್ರವಾದಿ(ಸ) ವಿಚಾರಿಸಿದರು. ಅವರು, 'ಅಲ್ಲಾಹನೇ ಈ ಕೆಟ್ಟ ಜ್ವರವನ್ನು ನೋಡಿ ಕೊಳ್ಳಲಿ. ಇದಂತೂ ನನ್ನನ್ನು ಆವರಿಸಿಕೊಂಡಿದೆ' ಎಂದರು. ಇದನ್ನು ಕೇಳಿ ಪ್ರವಾದಿ(ಸ) ಹೇಳಿದರು: 'ಜ್ವರವನ್ನು ಬೈಯಬೇಡಿರಿ. ಇದು ಕುಲುಮೆಯು ಕಬ್ಬಿಣದ ಕೊಳೆಯನ್ನು ದೂರೀಕರಿಸುವಂತೆ ಸತ್ಯವಿಶ್ವಾಸಿಯ ಪಾಪಗಳನ್ನು ನೀಗಿಸುತ್ತದೆ'. (ಅಲ್ ಅದಬುಲ್ ಮುಫ್ರದ್)

3. ರೋಗಿಯನ್ನು ಸಂದರ್ಶಿಸಿದಾಗ ಅವನ ಆರೋಗ್ಯದ ಸ್ಥಿತಿಯನ್ನು ವಿಚಾರಿಸಿರಿ. ಅವನಿಗಾಗಿ ಪ್ರಾರ್ಥಿಸಿರಿ. ಪ್ರವಾದಿ(ಸ) ಓರ್ವ ರೋಗಿಯನ್ನು ಸಂದರ್ಶಿಸಿದಾಗ-

'ಕೈಫ ತಜಿದುಕ' (ಅರ್ಥಾತ್ ಹೇಗಿದ್ದೀರಿ) ಎಂದು ವಿಚಾರಿಸುತ್ತಿದ್ದರು. ಬಳಿಕ ಅವರಿಗೆ ಈ ರೀತಿ ಸಾಂತ್ವನ ನೀಡುತ್ತಿದ್ದರು. لا باس طهورٌ ان شاء الله 'ಲಾ ಬಅ್‌ಸ ತಹೂರುನ್ ಇನ್‌ಶಾ ಅಲ್ಲಾಹ್' ಅರ್ಥಾತ್ ಗಾಬರಿ ಪಡಬೇಕಾಗಿಲ್ಲ. ದೇವನಿಚ್ಛಿಸಿದರೆ ಗುಣವಾದೀತು. ಈ ಕಾಯಿಲೆ ಪಾಪಗಳಿಂದ ಪಾವನನಾಗುವ ಹೇತುವಾದೀತು. ನೋವಿರುವ ಕಡೆ ತಮ್ಮ ಬಲ ಕೈಯಿಂದ ನೇವರಿಸುತ್ತಾ ಈ ರೀತಿ ಪ್ರಾರ್ಥಿಸುತ್ತಿದ್ದರು:

اَللّٰهُمَّ اَذْهِبِ الْبَأْسَ رَبَّ النَّاسِ اِشْفِهِ وَاَنْتَ الشَّافِىْ لَا شِفَاءَ اِلَّا شِفَائُكَ شِفَاءً لَا يُغَادِرُ سَقَمًا (بخاری، مسلم)

"ಅಲ್ಲಾಹುಮ್ಮ ಅದ್‌ಹಿಬಿಲ್ ಬಅ್‌ಸ ರಬ್ಬನ್ನಾಸಿ ಇಶ್‌ಫಿಹೀ ವ ಅಂತಶ್ಶಾಫೀ ಲಾ ಶಿಫಾಅ ಇಲ್ಲಾ ಶಿಫಾಉಕ ಶಿಫಾಉನ್ ಲಾ ಯುಗಾದಿರು ಸಕಮ".

(ಓ ಅಲ್ಲಾಹ್! ಈ ಸಂಕಷ್ಟವನ್ನು ನೀಗಿಸು. ಓ ಮನುಷ್ಯರ ಪ್ರಭೂ! ಇವನನ್ನು

ಗುಣಪಡಿಸು. ಗುಣಪಡಿಸುವವನು ನೀನು ಮಾತ್ರ. ನಿನ್ನ ಹೊರತು ಯಾರಿಂದಲೂ ಗುಣ ಪಡಿಸಲು ಸಾಧ್ಯವಿಲ್ಲ. ಕಾಯಿಲೆಯ ಕುರುಹು ಇಲ್ಲದಾಗುವಂತೆ ಗುಣಪಡಿಸು!)

(ಬುಖಾರಿ, ಮುಸ್ಲಿಮ್)

4. ರೋಗಿಯ ಬಳಿ ಹೆಚ್ಚು ಹೊತ್ತು ಕುಳಿತುಕೊಳ್ಳಬೇಡಿರಿ. ಗುಲ್ಲು-ಗದ್ದಲ ಮಾಡದಿರಿ. ರೋಗಿಯು ನಿಮ್ಮ ಆಪ್ತ ಮಿತ್ರ ಅಥವಾ ಸಂಬಂಧಿಯಾಗಿದ್ದು, ನಿಮ್ಮ ದೀರ್ಘ ಇರವನ್ನು ಆತನೇ ಬಯಸಿದರೆ ಕುಳಿತುಕೊಳ್ಳಬಹುದು.

ರೋಗಿಯ ಬಳಿ ಹೆಚ್ಚು ಹೊತ್ತು ಕುಳಿತುಕೊಳ್ಳದಿರುವುದು ಮತ್ತು ಗುಲ್ಲು-ಗದ್ದಲ ಮಾಡದಿರುವುದು ಪ್ರವಾದಿಚರ್ಯೆಯಾಗಿದೆ ಎಂದು ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಹೇಳಿರುತ್ತಾರೆ.

5. ರೋಗಿಯ ಸ್ಥಿತಿಯನ್ನು ಆತನ ಸಂಬಂಧಿಕರಲ್ಲೂ ವಿಚಾರಿಸುತ್ತಿರಿ. ಅವರೊಂದಿಗೆ ಸಹಾನುಭೂತಿ ಪ್ರಕಟಿಸಿ. ನಿಮ್ಮಿಂದ ಸಾಧ್ಯವಾದ ಸೇವೆ ಮತ್ತು ನೆರವನ್ನು ಮಾಡಿರಿ. ವೈದ್ಯರಿಗೆ ತೋರಿಸುವುದು, ರೋಗಿಯ ಸ್ಥಿತಿಯನ್ನು ವೈದ್ಯರಿಗೆ ತಿಳಿಸುವುದು, ಔಷಧಿ ಇತ್ಯಾದಿ ತಂದು ಕೊಡುವುದು ಹಾಗೂ ಅಗತ್ಯವಾದಾಗ ಆರ್ಥಿಕ ನೆರವು ನೀಡುವುದನ್ನೂ ಮರೆಯದಿರಿ.

ಹ. ಇಬ್ರಾಹೀಮ್ ಬಿನ್ ಅಬೀಹಬ್ಲ(ರ) ಹೇಳುತ್ತಾರೆ: ಒಮ್ಮೆ ನನ್ನ ಪತ್ನಿ ಕಾಯಿಲೆ ಬಿದ್ದರು. ಆಗ ನಾನು ಉಮ್ಮುದ್ದರ್ದಾರ(ರ) ಮನೆಗೆ ಆಗಾಗ ಭೇಟಿ ನೀಡುತ್ತಿದ್ದೆ. ನಾನು ಹೋದಾಗಲೆಲ್ಲಾ ಅವರು ನನ್ನ ಪತ್ನಿಯ ಕುಶಲ ವಿಚಾರಿಸುತ್ತಿದ್ದರು. ಅವರಿನ್ನೂ ಗುಣಮುಖ ರಾಗಿಲ್ಲವೆಂದಾಗ ನನಗೆ ಊಟ ತರಿಸಿ ಕೊಡುತ್ತಿದ್ದರು. ಅಲ್ಲಿಂದ ನಾನು ಊಟ ಮಾಡಿಯೇ ಹಿಂತೆರಳುತ್ತಿದ್ದೆ. ಒಮ್ಮೆ ನಾನು ಅವರಲ್ಲಿಗೆ ಹೋದಾಗ ಅವರು ವಾಡಿಕೆಯಂತೆ ನನ್ನಾಕೆಯ ಕ್ಷೇಮ ವಿಚಾರಿಸಿದರು. 'ಈಗ ಅಲ್ಲಾಹನ ದಯೆಯಿಂದ ಹೆಚ್ಚು ಕಡಿಮೆ ಗುಣ ಮುಖರಾಗಿದ್ದಾರೆ' ಎಂದು ನಾನು ಉತ್ತರಿಸಿದಾಗ 'ಈ ತನಕ ನಾನು ನಿಮಗೆ ಊಟದ ವ್ಯವಸ್ಥೆ ಮಾಡಿದ್ದೆ. ಈಗ ನಿಮ್ಮಾಕೆ ಗುಣಮುಖರಾಗಿರುವಾಗ ಅದರ ಅವಶ್ಯಕತೆ ಇಲ್ಲ ತಾನೇ' ಎಂದರು.

6. ಮುಸ್ಲಿಮೇತರ ರೋಗಿಗಳನ್ನೂ ಸಂದರ್ಶಿಸಿರಿ. ಸಂದರ್ಭೋಚಿತವಾಗಿ ಅವರಿಗೆ ಸತ್ಯ ಧರ್ಮದ ಪರಿಚಯವನ್ನೂ ಮಾಡಿಕೊಡಿರಿ. ಕಾಯಿಲೆಯಲ್ಲಿರುವಾಗ ಮನುಷ್ಯ ದೇವನಲ್ಲಿ ಹೆಚ್ಚು ಆಸಕ್ತನಾಗಿರುತ್ತಾನೆ. ಸತ್ಯ ಸ್ವೀಕಾರದ ಭಾವನೆಯೂ ಹೆಚ್ಚಿನಂಶ ಜಾಗೃತವಾಗಿರುತ್ತದೆ.

ಹ. ಅನಸ್(ರ) ಹೇಳುತ್ತಾರೆ: ಓರ್ವ ಯಹೂದಿ ಯುವಕ ಪ್ರವಾದಿವರ್ಯರ(ಸ) ಸೇವಕನಾಗಿದ್ದ. ಒಮ್ಮೆ ಆತ ರೋಗಿಯಾದಾಗ ಪ್ರವಾದಿ(ಸ) ಆತನ ಭೇಟಿಗೆ ಹೋದರು. ಆತನ ತಲೆಯ ಪಕ್ಕದಲ್ಲಿ ಕುಳಿತು ಇಸ್ಲಾಮಿನತ್ತ ಆಹ್ವಾನಿಸಿದರು. ಹುಡುಗ ತನ್ನ ಬಳಿಯೇ ಕುಳಿತಿದ್ದ ತಂದೆಯತ್ತ ಪ್ರಶ್ನಾರ್ಥಕ ದೃಷ್ಟಿ ಬೀರಿದ. ತಂದೆ ಹೇಳಿದರು, ಮಗೂ! ಅಬುಲ್ ಕಾಸಿಮ್[ಪ್ರವಾದಿ(ಸ)]ರ ಮಾತು ಕೇಳು. ಅಂತೆಯೇ ಹುಡುಗ ಮುಸ್ಲಿಮನಾದ. 'ಈ ಹುಡುಗ ನನ್ನು ನರಕಾಗ್ನಿಯಿಂದ ರಕ್ಷಿಸಿದ ಅಲ್ಲಾಹನಿಗೆ ವಂದನೆಗಳು' ಎನ್ನುತ್ತಾ ಪ್ರವಾದಿ(ಸ) ಅಲ್ಲಿಂದ ಬೀಳ್ಕೊಂಡರು. (ಬುಖಾರಿ)

7. ರೋಗಿಯ ಸಂದರ್ಶನಕ್ಕಾಗಿ ಆತನ ಮನೆಗೆ ಭೇಟಿ ನೀಡಿದಾಗ ಅತ್ತಿತ್ತ ಇಣುಕಿ ನೋಡದಿರಿ. ಮನೆಯ ಮಹಿಳೆಯರ ಮೇಲೆ ದೃಷ್ಟಿ ಬೀರದಂತೆ ಜಾಗ್ರತೆಯಿಂದ ಕುಳಿತು ಕೊಳ್ಳಿರಿ.

ಒಮ್ಮೆ ಹ. ಅಬ್ದುಲ್ಲಾ ಬಿನ್ ಮಸ್‌ಊದ್(ರ) ಓರ್ವ ರೋಗಿಯ ಸಂದರ್ಶನಕ್ಕೆ ಹೋದರು. ಅವರ ಜೊತೆ ಕೆಲವು ಮಿತ್ರರೂ ಇದ್ದರು. ಮನೆಯಲ್ಲೋರ್ವ ಮಹಿಳೆ ಇದ್ದಳು. ಹಠಾತ್ ಅಬ್ದುಲ್ಲಾರ ಮಿತ್ರರೊಬ್ಬರು ಆಕೆಯನ್ನು ದಿಟ್ಟಿಸತೊಡಗಿದರು. ಇದನ್ನು ಕಂಡಾಗ, 'ಇದಕ್ಕಿಂತ ನೀವು ನಿಮ್ಮ ಕಣ್ಣುಗಳನ್ನು ಕೀಳುವುದೇ ಲೇಸಾಗಿತ್ತು' ಎಂದು ಹೇಳಿದರು.

8. ದೇವಧಿಕ್ಕಾರಿಗಳು ದೇವಾಜ್ಞೋಲ್ಲಂಘಕರು ನಿರ್ಲಜ್ಜವಾಗಿಯೂ ಮತ್ತು ಬಹಿರಂಗ ವಾಗಿಯೂ ಅಪರಾಧ ಎಸಗುವವರು ಕಾಯಿಲೆ ಬಿದ್ದಾಗ ಸಂದರ್ಶನಕ್ಕೆ ಹೋಗದಿರಿ.

ಮದ್ಯಪಾನಿಗಳು ಕಾಯಿಲೆ ಬಿದ್ದಾಗ ಸಂದರ್ಶಿಸಬೇಡಿರಿ ಎಂದು ಹ. ಅಬ್ದುಲ್ಲಾ ಬಿನ್ ಅಮ್ರ್(ರ) ಹೇಳಿರುವರು.

9. ರೋಗಿಯ ಸಂದರ್ಶನಕ್ಕೆ ಹೋದಾಗ ಆತನಲ್ಲಿಯೂ ನಿಮಗಾಗಿ ಪ್ರಾರ್ಥಿಸುವಂತೆ ವಿನಂತಿಸಿರಿ.

ರೋಗಿಯ ಬಳಿ ಹೋದಾಗ ಆತನಲ್ಲಿ ನಿಮಗಾಗಿ ಪ್ರಾರ್ಥಿಸುವಂತೆ ವಿನಂತಿಸಿರಿ. ರೋಗಿಯ ಪ್ರಾರ್ಥನೆಯು ದೇವಚರರ ಪ್ರಾರ್ಥನೆಯಂತಿದೆ. (ಅರ್ಥಾತ್ ದೇವಚರರು ದೇವೇಚ್ಛೆಯಂತೆ ಪ್ರಾರ್ಥಿಸುತ್ತಾರೆ ಮತ್ತವರ ಪ್ರಾರ್ಥನೆಯು ಸ್ವೀಕೃತವಾಗುತ್ತದೆ)

(ಇಬ್ನುಮಾಜಃ)

# ಸೌಹಾರ್ದ ಭೇಟಿ

1. ಭೇಟಿಯ ವೇಳೆ ನಸುನಗುತ್ತಾ ಸ್ವಾಗತಿಸಿರಿ. ಸಂತೋಷ ಮತ್ತು ಪ್ರೀತಿಯನ್ನು ಪ್ರಕಟಿಸಿರಿ. ಸದಾ ನೀವೇ ಮೊದಲು 'ಸಲಾಮ್' ಹೇಳಿರಿ. ಇದರಿಂದ ಪ್ರೇಮ ಅಂಕುರಿಸುತ್ತದೆ, ಇದು ದೊಡ್ಡ ಪುಣ್ಯ ಕಾರ್ಯವೂ ಹೌದು.

2. ಸಲಾಮ್, ಅಭಿನಂದನೆ ಮತ್ತು ಶುಭ ಹಾರೈಕೆಗೆ ಅವರಿವರಿಂದ ಕಲಿತ ಪದಗಳನ್ನು ಬಳಸದಿರಿ. ಸದಾ 'ಅಸ್ಸಲಾಮು ಅಲೈಕುಮ್' ಎಂದೇ ಹೇಳಿರಿ. ಸಂದರ್ಭೋಚಿತವಾಗಿ ಹಸ್ತಲಾಘವವನ್ನೂ ಮಾಡಿರಿ. ಕ್ಷೇಮ ವಿಚಾರಿಸಿರಿ. ಸಂದರ್ಭೋಚಿತವಾಗಿ ಮನೆಯವರ ಕ್ಷೇಮದ ಕುರಿತೂ ವಿಚಾರಿಸಿರಿ. ಪ್ರವಾದಿ(ಸ) ಕಲಿಸಿದ 'ಅಸ್ಸಲಾಮು ಅಲೈಕುಮ್' ಬಹಳ ಅರ್ಥಗರ್ಭಿತವಾಗಿದೆ. ಅದರಲ್ಲಿ ಇಹ-ಪರಲೋಕಗಳ ಎಲ್ಲ ರೀತಿಯ ಸುರಕ್ಷಿತತೆ, ಕ್ಷೇಮ, ಒಳಿತು ಹಾಗೂ ಅಭ್ಯುದಯಗಳು ಸೇರಿವೆ. ಹಸ್ತಲಾಘವ ಮಾಡುವಾಗ ಮತ್ತೊಬ್ಬನು ಕೈ ಎಳೆಯುವ ತನಕ ಪ್ರವಾದಿ(ಸ) ಕೈ ಎಳೆಯುತ್ತಿರಲಿಲ್ಲ. ಇದನ್ನು ನೀವೂ ಪಾಲಿಸಿರಿ.

3. ಯಾರನ್ನಾದರೂ ಭೇಟಿಯಾಗಲು ಹೋಗುವಾಗ ಶುಭ್ರ ಬಟ್ಟೆ ಬರೆಗಳನ್ನು ಧರಿಸಿ ಹೋಗಿರಿ. ಮೈಲಿಗೆ ತೊಟ್ಟು ಹೋಗಬೇಡಿ. ನಿಮ್ಮ ಮಡಿಯಿಂದ ಆತನ ಮೇಲೆ ಪ್ರಭಾವ ಬೀರುವ ಉದ್ದೇಶವನ್ನು ಇಟ್ಟುಕೊಳ್ಳಬೇಡಿರಿ.

4. ಯಾರೊಂದಿಗಾದರೂ ಸಂದರ್ಶನ ನಡೆಸಬಯಸಿದಾಗ ಮೊದಲೇ ಸಮಯ ಗೊತ್ತುಪಡಿಸಿಕೊಳ್ಳಿರಿ. ಅವರ ವೇಳೆಯಲ್ಲಿ ಹೇಳದೆ ಕೇಳದೆ ಭೇಟಿಗೆ ಹೋಗದಿರಿ. ಇದರಿಂದ ಅವರ ಸಮಯ ಹಾಳಾಗುವುದು. ಸಂದರ್ಶಕನ ಮನದಲ್ಲಿ ನಿಮ್ಮ ಪ್ರಭಾವವೂ ಕುಂಠಿತವಾಗುವುದು.

5. ನಿಮ್ಮನ್ನು ಭೇಟಿಯಾಗಲು ಯಾರಾದರೂ ಬಂದರೆ ಪ್ರಸನ್ನವದನರಾಗಿ ಸ್ವಾಗತಿಸಿರಿ. ಆದರದಿಂದ ಕುಳ್ಳಿರಿಸಿರಿ. ಯಥೋಚಿತವಾಗಿ ಉಪಚರಿಸಿರಿ.

6. ಯಾರನ್ನಾದರೂ ಭೇಟಿಯಾದಾಗ ಕಾರ್ಯದ ಮಾತನ್ನೇ ಆಡಿರಿ. ವೃಥಾಲಾಪದಿಂದ ನಿಮ್ಮ ಮತ್ತು ಅವರ ಸಮಯ ಹಾಳು ಮಾಡದಿರಿ. ಅನ್ಯಥಾ ನಿಮ್ಮ ಭೇಟಿಯು ಅವರಲ್ಲಿ ಬೇಸರ ಹುಟ್ಟಿಸೀತು.

7. ಭೇಟಿಗೆ ಹೋದಾಗ ಬಾಗಿಲ ಬಳಿ ನಿಂತು ಅನುಮತಿ ಪಡೆಯಿರಿ. ಅನುಮತಿ ದೊರೆತಾಗ "ಅಸ್ಸಲಾಮು ಅಲೈಕುಮ್" ಎನ್ನುತ್ತಾ ಮನೆಗೆ ಪ್ರವೇಶಿಸಿರಿ. ಮೂರು ಬಾರಿ "ಅಸ್ಸಲಾಮು ಅಲೈಕುಮ್" ಹೇಳಿಯೂ ಉತ್ತರ ದೊರೆಯದೆ ಹೋದರೆ ಬೇಸರಿಸದೆ ಮರಳಿರಿ.

8. ಭೇಟಿಗೆ ಹೋಗುವಾಗ ಸಂದರ್ಭೋಚಿತವಾಗಿ ಉಡುಗೊರೆಯನ್ನೂ ಒಯ್ಯಿರಿ. ಉಡುಗೊರೆಯ ವಿನಿಮಯದಿಂದ ಪ್ರೇಮ ಕುದುರುತ್ತದೆ.

9. ಯಾರಾದರೂ ನಿಮ್ಮ ಬಳಿ ತಮ್ಮ ಅವಶ್ಯಕತೆಗಳ ಈಡೇರಿಕೆಗಾಗಿ ಬಂದರೆ ಸಾಧ್ಯವಿದ್ದಷ್ಟು ಅದನ್ನು ಈಡೇರಿಸಿರಿ. ಶಿಫಾರಸಿಗಾಗಿ ಕೇಳಿದರೆ ಅದನ್ನು ಮಾಡಿರಿ. ನೀವು ಅವರ ಬೇಡಿಕೆಯನ್ನು ಪೂರೈಸುವ ಸ್ಥಿತಿಯಲ್ಲಿಲ್ಲದಿದ್ದರೆ ಪ್ರೀತಿ ಪೂರ್ವಕವಾಗಿ ನಿರಾಕರಿಸಿರಿ. ಪೊಳ್ಳು ಆಶ್ವಾಸನೆಗಳನ್ನು ನೀಡಿ ಯಾರನ್ನೂ ನಿರಾಶೆಗೊಳಿಸಬೇಡಿರಿ.

10. ನೀವು ಏನಾದರೂ ಅಗತ್ಯಕ್ಕಾಗಿ ಯಾರನ್ನಾದರೂ ಭೇಟಿಯಾದಾಗ ಸಭ್ಯ ರೀತಿಯಲ್ಲಿ ನಿಮ್ಮ ಅವಶ್ಯಕತೆಯನ್ನು ಮುಂದಿರಿಸಿರಿ. ಈಡೇರಿದರೆ ಸಂತುಷ್ಟರಾಗಿರಿ. ಇಲ್ಲವಾದರೆ ಬೇಸರಿಸದೆ ಮರಳಿರಿ.

11. ಜನರು ಸದಾ ನಿಮ್ಮ ಬಳಿಗೇ ಬರಬೇಕೆಂದು ಹಾರೈಸದಿರಿ. ನೀವೂ ಅವರ ಭೇಟಿಗಾಗಿ ಹೋಗಿರಿ. ಪರಸ್ಪರ ಸೌಹಾರ್ದ ಭೇಟಿ ಮತ್ತು ಸಹಕಾರ ಅತ್ಯಂತ ಅಪೇಕ್ಷಿತ ವಿಷಯ. ಸತ್ಯವಿಶ್ವಾಸಿಗಳು ಪರಸ್ಪರ ಸದುದ್ದೇಶಗಳಿಗೆ ಹಾಗೂ ಸತ್ಕಾರ್ಯಗಳಿಗೆ ಮಾತ್ರ ಭೇಟಿಯಾಗುತ್ತಾರೆ ಮತ್ತು ಸಹಕರಿಸುತ್ತಾರೆ ಎಂಬುದನ್ನು ನೆನಪಿಡಿರಿ.

12. ಭೇಟಿಯ ವೇಳೆ ನಿಮ್ಮ ಸ್ನೇಹಿತನ ಮುಖ, ಗಡ್ಡ ಅಥವಾ ಬಟ್ಟೆಯ ಮೇಲೆ ಕಸಕಡ್ಡಿಗಳಿದ್ದರೆ ನೀಗಿಸಿರಿ. ನಿಮ್ಮೊಂದಿಗೆ ಸದ್ವರ್ತನೆ ತೋರಿದಾಗ ಕೃತಜ್ಞರಾಗಿರಿ. ಅವರಿಗಾಗಿ ಈ ರೀತಿ ಪ್ರಾರ್ಥಿಸಿರಿ:

"ಮಸ್ಸಹಲ್ಲಾಹು ಅಂಕ ಮಾ ತಕ್ರಹೂ".

(ಅಲ್ಲಾಹನು ನಿಮಗೆ ಅಪ್ರಿಯವಾದುದನ್ನು ನಿಮ್ಮಿಂದ ನೀಗಿಸಲಿ.)

13. ರಾತ್ರೆ ವೇಳೆ ಯಾರನ್ನಾದರೂ ಭೇಟಿಯಾಗುವ ಅಗತ್ಯ ಬಿದ್ದರೆ ಅವರ ವಿಶ್ರಾಂತಿಯ ಬಗ್ಗೆ ಜಾಗ್ರತೆ ವಹಿಸಿರಿ. ಹೆಚ್ಚು ಹೊತ್ತು ಕುಳಿತಿರಬೇಡಿರಿ. ಅವರು ಮಲಗಿದ್ದಾರೆಂದು ತಿಳಿದರೆ ಬೇಸರಿಸದೆ ಮರಳಿರಿ.

14. ಕೆಲವರು ಒಟ್ಟುಗೂಡಿ ಯಾರನ್ನಾದರೂ ಸಂದರ್ಶಿಸಿದರೆ ಮಾತನಾಡುವವನು ಎಲ್ಲರನ್ನೂ ಪ್ರತಿನಿಧಿಸಲಿ. ಮಾತುಕತೆಯಲ್ಲಿ ನಿಮ್ಮ ಮಹಿಮೆ ಮೇಲ್ಮೆಯನ್ನು ಪ್ರದರ್ಶಿಸದಿರಿ. ನಿಮ್ಮ ಸಂಗಾತಿಗಳನ್ನು ಕಡೆಗಣಿಸದಿರಿ. ಅಭಿಸಂಬೋಧಿತನ ಲಕ್ಷ್ಯವನ್ನು ನಿಮ್ಮೆಡೆಗೇ ತಿರುಗಿಸುವ ಪ್ರಯತ್ನ ಮಾಡದಿರಿ.

❖ ❖ ❖ ❖

# ಸಂಭಾಷಣೆ

1. ಸದಾ ಸತ್ಯವನ್ನೇ ನುಡಿಯಿರಿ. ಎಷ್ಟೇ ನಷ್ಟವಾಗುವ ಸಂದರ್ಭ ಬಂದರೂ ಸತ್ಯ ನುಡಿಯಲು ಹಿಂಜರಿಯದಿರಿ.

2. ಅಗತ್ಯವಿದ್ದಾಗ ಮಾತ್ರ ಮಾತನಾಡಿರಿ. ಮಾತನಾಡಿದಾಗಲೆಲ್ಲಾ ಕಾರ್ಯದ ಮಾತನ್ನೇ ಆಡಿರಿ. ಯಾವಾಗಲೂ ಮಾತನಾಡುತ್ತಿರುವುದು ಹಾಗೂ ಅನಗತ್ಯ ಮಾತುಗಾರಿಕೆಯು ಘನತೆ, ಗಾಂಭೀರ್ಯತೆಗಳಿಗೆ ಕುಂದು. ದೇವನ ಬಳಿ ಪ್ರತಿಯೊಂದು ಮಾತಿನ ಬಗ್ಗೆಯೂ ವಿಚಾರಣೆ ನಡೆಯಲಿದೆ. ನೀವು ಹೊರಡಿಸುವ ಪ್ರತಿಯೊಂದು ಮಾತನ್ನು ದೇವಚರರು ಉಲ್ಲೇಖಿಸುತ್ತಾರೆ:

مَا يَلْفِظُ مِنْ قَوْلٍ إِلَّا لَدَيْهِ رَقِيبٌ عَتِيدٌ ﴿١٨﴾

"ಅವನ ನಾಲಗೆಯಿಂದ ಬರುವ ಯಾವುದೇ ಮಾತಿನ ಬಗ್ಗೆ ಓರ್ವ ಮೇಲ್ವಿಚಾರಕ (ಅದನ್ನು ಉಲ್ಲೇಖಿಸಲು) ಸನ್ನದ್ಧನಾಗಿರುತ್ತಾನೆ". (ಪವಿತ್ರ ಕುರ್‌ಆನ್, **50:18**)

3. ಸದಾ ನಯವಾಗಿಯೇ ಮಾತನಾಡಿರಿ. ಮಂದಸ್ಮಿತರಾಗಿ ಸವಿ ಮಾತನ್ನೇ ಆಡಿರಿ. ಧ್ವನಿಯೂ ಸದಾ ಮಿತವಾಗಿಯೇ ಇರಲಿ. ಅದು ಅಭಿಸಂಬೋಧಿತನಿಗೆ ಕೇಳಿಸದಷ್ಟು ಮೆಲುವಾಗಿರಬಾರದು. ಪ್ರಭಾವ ಬೀರುವ ಉದ್ದೇಶದಿಂದ ಗಡುಸಾಗಿಯೂ ಇರಬಾರದು. ಪವಿತ್ರ ಕುರ್‌ಆನ್ ಈ ರೀತಿ ಹೇಳುತ್ತದೆ:

إِنَّ أَنكَرَ الْأَصْوَاتِ لَصَوْتُ الْحَمِيرِ ﴿١٩﴾

"ಎಲ್ಲ ಸ್ವರಗಳಿಗಿಂತ ಕೆಟ್ಟ ಸ್ವರವು ಕತ್ತೆಯ ಸ್ವರವಾಗಿರುತ್ತದೆ". (**31:19**)

4. ಎಂದೂ ಕೆಟ್ಟ ನುಡಿಯಿಂದ ನಿಮ್ಮ ನಾಲಗೆಯನ್ನು ಹೊಲಸು ಮಾಡದಿರಿ. ಪರನಿಂದೆ, ಪರದೂಷಣೆ ಮಾಡದಿರಿ. ಚಾಡಿ ಹೇಳದಿರಿ. ಇತರರ ಅನುಕರಣೆ ಮಾಡದಿರಿ, ಪೊಳ್ಳು ಆಶ್ವಾಸನೆಗಳನ್ನು ನೀಡದಿರಿ, ಗೇಲಿ ಮಾಡದಿರಿ. ಜಂಭ ಕೊಚ್ಚದಿರಿ. ಹಟಮಾರಿತನ ತೋರದಿರಿ. ಆತ್ಮಪ್ರಶಂಸೆ ಮಾಡದಿರಿ, ಮುಖಸ್ತುತಿಗೈಯದಿರಿ, ಕಟಕಿಯಾಡದಿರಿ, ವ್ಯಂಗ್ಯ ನುಡಿಯದಿರಿ, ಯಾರನ್ನೂ ನಿಂದನೆಯ ಹೆಸರಿನಿಂದ ಕೂಗದಿರಿ, ಮಾತು ಮಾತಿಗೂ ಆಣೆ ಹಾಕದಿರಿ.

5. ಸದಾ ನ್ಯಾಯದ ಮಾತನ್ನೇ ಆಡಿರಿ. ಅದರಿಂದ ನಿಮ್ಮ ಆಪ್ತ ಬಂಧುಗಳಿಗೆ ಮತ್ತು ಆತ್ಮೀಯ ಮಿತ್ರರಿಗೆ ನಷ್ಟವಾದರೂ ಲೆಕ್ಕಿಸದಿರಿ.

وَإِذَا قُلْتُمْ فَاعْدِلُوا وَلَوْ كَانَ ذَا قُرْبَىٰ

"ಮಾತನಾಡಿದರೆ ನ್ಯಾಯದ ಮಾತನ್ನೇ ಆಡಬೇಕು. ಅವರು ನಿಮ್ಮ ಆಪ್ತ ಬಂಧು ಗಳಾದರೂ ಸರಿಯೆ". (ಪವಿತ್ರ ಕುರ್‌ಆನ್, 6:152)

6. ಮೃದುವಾದ ವಿಚಾರಶೀಲ ಮತ್ತು ಮನ ಮುಟ್ಟುವ ಮಾತನ್ನೇ ಆಡಿರಿ. ಒರಟಾದ, ಅಸಭ್ಯ ಮತ್ತು ನೋವುಂಟು ಮಾಡುವ ಮಾತನ್ನಾಡಬೇಡಿ.

7. ಸ್ತ್ರೀಯರು ಪರ ಪುರುಷರೊಂದಿಗೆ ಮಾತನಾಡುವ ಸಂದರ್ಭ ಬಂದಾಗ ನೇರವಾಗಿ, ಗಡುಸಾಗಿ ಮಾತಾಡಬೇಕು. ಮಾತಿನಲ್ಲಿ ನಯ, ನಾಜೂಕು ಹಾಗೂ ಒನಪು-ವಯ್ಯಾರ ಲವಲೇಶವೂ ಇರಕೂಡದು. ಅನ್ಯಥಾ ಸಂಬೋಧಿತನ ಮನದಲ್ಲಿ ದುರ್ವಿಚಾರ ಹುಟ್ಟೀತು.

8. ಅವಿವೇಕಿಯೊಬ್ಬನು ನಿಮ್ಮನ್ನು ಮಾತಿನಲ್ಲಿ ಸಿಲುಕಿಸ ಹೊರಟಾಗ ಸಂದರ್ಭೋಚಿತ ವಾಗಿ 'ಸಲಾಮ್' ಹೇಳಿ ಅಲ್ಲಿಂದ ನಿರ್ಗಮಿಸಿರಿ. ಅನಗತ್ಯ ಮಾತುಕತೆಯಲ್ಲಿ ಕಾಲಹರಣ ಮಾಡುವವರು ಮತ್ತು ಹರಟೆ ಕೊಚ್ಚುವವರು ಸಮುದಾಯದ ಅತ್ಯಂತ ನಿಕೃಷ್ಟ ಜನರು.

9. ಅಭಿಸಂಬೋಧಿತನಿಗೆ ಅರ್ಥವಾಗುವ ಶೈಲಿಯಲ್ಲಿ ಮಾತನಾಡಿರಿ. ನಿಮ್ಮ ಮಾತನ್ನು ಮನದಟ್ಟು ಮಾಡಲು ಆತನ ಮಾನಸಿಕ ಸ್ಥಿತಿಗನುಸಾರವಾದ ಭಾಷೆ ಮತ್ತು ಶೈಲಿಯನ್ನನು ಸರಿಸಿರಿ. ಯಾವುದೇ ವಿಷಯ ಅರ್ಥವಾಗದಿದ್ದರೆ ಬೇಸರಿಸದೆ ಪುನರಾವರ್ತಿಸಿರಿ.

10. ಸದಾ ಸಂಕ್ಷಿಪ್ತವಾಗಿ, ಚುಟುಕಾಗಿ ಮತ್ತು ನೇರವಾಗಿ ಮಾತನಾಡಿರಿ. ಅನಾವಶ್ಯಕ ವಾಗಿ ಮಾತು ಬೆಳೆಸುವುದು ಸರಿಯಲ್ಲ.

11. ಧಾರ್ಮಿಕ ವಿಷಯದ ಬಗ್ಗೆ ಬೋಧಿಸುವುದಿದ್ದರೆ ಅಥವಾ ಭಾಷಣ ಮಾಡುವುದಿದ್ದರೆ ಅತ್ಯಂತ ಸರಳ ಶೈಲಿಯಲ್ಲಿ ಮನಮುಟ್ಟುವಂತೆ ಮಾತಾಡಿರಿ.

ಭಾಷಣದ ಮೂಲಕ ಖ್ಯಾತಿ ಗಳಿಸಲಿಚ್ಛಿಸುವುದು, ತನ್ನ ವಾಕ್ಚಾತುರ್ಯದಿಂದ ಜನರನ್ನು ಮಂಕುಗೊಳಿಸುವುದು, ಜನರನ್ನು ತನ್ನ ಚೇಲಾಗಳಾಗಿ ಮಾರ್ಪಡಿಸುವುದು, ಜಂಭ ಕೊಚ್ಚಿಕೊಳ್ಳುವುದು, ದರ್ಪ ತೋರಿಸುವುದು, ಕೇವಲ ಹಾಸ್ಯ, ವಿನೋದಕ್ಕಾಗಿ ಭಾಷಣ ಮಾಡುವುದು ಇತ್ಯಾದಿಗಳು ಮನಸ್ಸನ್ನು ಕಪ್ಪಾಗಿಸುತ್ತವೆ.

12. ಮುಖಸ್ತುತಿ ಮತ್ತು ಪುಸಲಾಯಿಸುವ ಮಾತನ್ನು ಆಡದಿರಿ. ಸದಾ ನಿಮ್ಮ ಸ್ವಾಭಿಮಾನ ಮತ್ತು ಘನತೆಯನ್ನು ರಕ್ಷಿಸಿರಿ.

13. ಇಬ್ಬರು ಮಾತನಾಡುತ್ತಿರುವಾಗ ಅನುಮತಿ ಇಲ್ಲದೆ ಮಧ್ಯೆ ಪ್ರವೇಶಿಸಬೇಡಿರಿ. ಇತರರ ಮಾತನ್ನು ತಡೆದು ಮಾತನಾಡದಿರಿ. ಮಧ್ಯೆ ಮಾತನಾಡುವುದು ಅಗತ್ಯವೆಂದು ಕಂಡು ಬಂದರೆ ಅನುಮತಿ ಪಡೆದೇ ಮಾತನಾಡಿರಿ.

14. ಗಂಭೀರವಾಗಿ ತಡೆದು ತಡೆದು ಮಾತನಾಡಿರಿ. ಆತುರದಿಂದ ಬೇಗ ಬೇಗ ಮಾತನಾಡದಿರಿ. ಸದಾ ಹಾಸ್ಯ, ತಮಾಷೆಯ ಮಾತಿನಲ್ಲಿ ನಿರತರಾಗದಿರಿ. ಇದು ನಿಮ್ಮ ಗೌರವಕ್ಕೆ ಕುಂದು.

15. ಯಾರಾದರೂ, ಏನಾದರೂ ವಿಚಾರಿಸಿದಾಗ ಮೊದಲು ಅವರ ಮಾತನ್ನು ತಾಳ್ಮೆ ಯಿಂದ ಆಲಿಸಿರಿ. ಚೆನ್ನಾಗಿ ಯೋಚಿಸಿಯೇ ಉತ್ತರಿಸಿರಿ. ಹಿಂದು ಮುಂದು ಯೋಚಿಸದೆ ಉತ್ತರ ನೀಡುವುದು ಅವಿವೇಕತನ. ಬೇರೆಯವರನ್ನು ಪ್ರಶ್ನಿಸುತ್ತಿರುವಾಗ ನೀವು ಉತ್ತರಿಸಲು ಮುಂದಾಗದಿರಿ.

16. ಯಾರಾದರೂ ಏನಾದರೂ ಹೇಳುವಾಗ ಮೊದಲೇ 'ನನಗೆ ಗೊತ್ತಿದೆ ಬಿಡಿ' ಎಂದು ಹೇಳಬೇಡಿರಿ. ಅವನಿಂದ ಯಾವುದಾದರೂ ಹೊಸ ವಿಷಯ ತಿಳಿಯಲೂಬಹುದು ಅಥವಾ ಆತನ ಯಾವುದಾದರೂ ಮಾತು ನಿಮ್ಮ ಮನಸ್ಸಿನ ಮೇಲೆ ಪ್ರಭಾವ ಬೀರಲೂಬಹುದು. ಏಕೆಂದರೆ ಕೇವಲ ಮಾತಲ್ಲ, ಅದರೊಂದಿಗೆ ಮಾತನಾಡುವವನ ನಿರ್ವಂಚನೆ, ನಿಸ್ವಾರ್ಥತೆ ಹಾಗೂ ಸಚ್ಚಾರಿತ್ರ್ಯವೂ ಪ್ರಭಾವ ಬೀರುತ್ತದೆ.

17. ಯಾರೊಡನೆ ಮಾತನಾಡುವುದಿದ್ದರೂ ಅವರೊಂದಿಗೆ ನಿಮ್ಮ ಸಂಬಂಧ ಅವರ ವಯಸ್ಸು, ಸ್ಥಾನಮಾನ ಇತ್ಯಾದಿಗಳನ್ನು ಗಮನಿಸಿರಿ. ತಂದೆ-ತಾಯಿ ಹಾಗೂ ಗುರು-ಹಿರಿಯರ ಜೊತೆ ಗೆಳೆಯರಂತೆ ಮಾತನಾಡದಿರಿ. ಅಂತೆಯೇ ಎಳೆಯರೊಂದಿಗೆ ಮಾತನಾಡುವಾಗ ವಾತ್ಸಲ್ಯ ಪೂರ್ಣವಾಗಿ ನಿಮ್ಮ ಘನತೆಗೆ ತಕ್ಕಂತೆ ಮಾತನಾಡಿರಿ.

18. ಮಾತನಾಡುವಾಗ ಯಾರ ಕಡೆಗೂ ಕೈ ಸಂಜ್ಞೆ ಮಾಡದಿರಿ. ಇದರಿಂದ ಅವರ ಮನದಲ್ಲಿ ಸಂಶಯ, ಅಪನಂಬಿಕೆ ಹುಟ್ಟೀತು. ಇತರರ ಸಂಭಾಷಣೆಯನ್ನು ಕದ್ದಾಲಿಸದಿರಿ.

19. ಇತರರ ಮಾತನ್ನು ಹೆಚ್ಚು ಕೇಳಿರಿ. ಸ್ವಯಂ ಕಡಿಮೆ ಮಾತನಾಡಿರಿ. ರಹಸ್ಯದ ವಿಷಯಗಳನ್ನು ಯಾರಲ್ಲಿಯೂ ಹೇಳದಿರಿ. ತಮ್ಮ ರಹಸ್ಯಗಳನ್ನು ಇತರರಿಗೆ ಹೇಳಿ ಅವರಿಂದ ರಹಸ್ಯ ಪಾಲನೆಯನ್ನು ನಿರೀಕ್ಷಿಸುವುದು ತೀರಾ ಅವಿವೇಕತನ.

# ಪತ್ರ ವ್ಯವಹಾರ

1. ಪತ್ರವನ್ನು ಸದಾ بِسۡمِ اللّٰهِ الرَّحۡمٰنِ الرَّحِیۡمِ "ಬಿಸ್ಮಿಲ್ಲಾ ಹಿರ್ರಹ್ಮಾನಿರ್ರಹೀಮ್" (ಪರಮ ದಯಾಮಯನೂ, ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ) ಎಂದೇ ಆರಂಭಿಸಿರಿ. ಸಂಕ್ಷಿಪ್ತಗೊಳಿಸ ಬಯಸಿದರೆ 'ಬಿಸ್ಮಿಲ್ಲಾಹ್' (ಅಲ್ಲಾಹನ ನಾಮದಿಂದ) ಎಂದು ಬರೆಯಿರಿ. ಯಾವ ಕಾರ್ಯದ ಆರಂಭದಲ್ಲಿ 'ಬಿಸ್ಮಿಲ್ಲಾಹ್' ಎಂದು ಹೇಳಲಾಗುವುದಿಲ್ಲವೋ ಅದು ಅಪೂರ್ಣವೂ, ಅಮಂಗಳವೂ ಆಗಿರುತ್ತದೆ. ಕೆಲವರು ಈ ಪದಗಳನ್ನು ಬರೆಯುವ ಬದಲು 786 ಎಂದು ಬರೆಯುತ್ತಾರೆ. ಹಾಗೆಂದೂ ಬರೆಯದಿರಿ. ಏಕೆಂದರೆ ದೇವನ ವಚನವಾದ ಈ ಪದಗಳು ಬಹಳ ಮಂಗಳದಾಯಕವಾಗಿವೆ.

2. ಪ್ರತಿ ಪತ್ರದಲ್ಲೂ ನಿಮ್ಮ ವಿಳಾಸವನ್ನು ತಪ್ಪದೆ ಬರೆಯಿರಿ. ಪತ್ರ ಬರೆಯುವವರಿಗೆ ವಿಳಾಸ ತಿಳಿದಿದೆ ಅಥವಾ ಈ ಹಿಂದೆ ಬರೆದಿರುವಿರೆಂಬ ಕಾರಣದಿಂದ ನಿಮ್ಮ ವಿಳಾಸ ಬರೆಯದಿರಬೇಡಿರಿ. ನಿಮ್ಮ ವಿಳಾಸವು ಆತನ ಬಳಿ ಇರಲಾರದು ಅಥವಾ ಆತನಿಗೆ ನೆನಪಿರಲಾರದು.

3. ನಿಮ್ಮ ವಿಳಾಸವನ್ನು ಎಡಗಡೆ ಸ್ವಲ್ಪ ಮಾರ್ಜಿನ್ ಬಿಟ್ಟು ಬರೆಯಿರಿ. ವಿಳಾಸ ಯಾವಾಗಲೂ ಸ್ಪಷ್ಟವಾಗಿ, ತಪ್ಪಿಲ್ಲದೆ ಬರೆಯಿರಿ.

4. ನಿಮ್ಮ ವಿಳಾಸದ ಕೆಳಗೆ ಅಥವಾ ಬಲಬದಿಯಲ್ಲಿ ತಾರೀಕನ್ನು ಬರೆಯಿರಿ.

5. ಯಾರಿಗೆ ಪತ್ರ ಬರೆಯುತ್ತೀರೋ ಅವರನ್ನು ಸಂಕ್ಷಿಪ್ತವಾಗಿಯೂ, ಗೌರವಯುತವಾಗಿಯೂ ಸಂಬೋಧಿಸಿರಿ. ಅಭಿಸಂಬೋಧನಾ ಶೈಲಿ ಸದಾ ಸಂಕ್ಷಿಪ್ತವೂ, ಸರಳವೂ ಆಗಿರಲಿ. ನಿಮ್ಮ ಆತ್ಮೀಯತೆ ಪ್ರಕಟವಾಗುವಂತಿರಲಿ. ಕೃತಕ ಮತ್ತು ಆಡಂಬರದ ಅಭಿಸಂಬೋಧನಾ ಶೈಲಿಗಳನ್ನು ವರ್ಜಿಸಿರಿ. ಅಭಿಸಂಬೋಧನೆಯ ಜೊತೆಗೇ ಅಥವಾ ಅದರ ಕೆಳಗಿನ ಗೆರೆಯಲ್ಲಿ 'ಅಸ್ಸಲಾಮು ಅಲೈಕುಮ್' ಎಂದು ಬರೆಯಿರಿ. ಸಲಾಮ್‌ಗೆ ಬದಲು ಇತರ ಯಾವುದೇ ಪದಗಳನ್ನು ಬಳಸದಿರಿ.

6. ಮುಸ್ಲಿಮೇತರರಿಗೆ ಪತ್ರ ಬರೆಯುವಾಗ ಅಭಿನಂದನೆಗಳು ಅಥವಾ ಶುಭಾಶಯಗಳು ಎಂದು ಬರೆಯಿರಿ.

7. ಸಲಾಮ್‌ನ ನಂತರ ನೀವು ಬರೆಯುವ ವಿಷಯಗಳನ್ನೆಲ್ಲಾ ಬರೆಯಿರಿ. ಪತ್ರ ಕೊನೆಗೊಳಿಸುವಾಗ ಮತ್ತೊಮ್ಮೆ ಯಾರಿಗೆ ಪತ್ರ ಬರೆಯುತ್ತಿರುವಿರೋ ಅವರೊಂದಿಗೆ ನಿಮ್ಮ ಸಂಬಂಧವನ್ನು ಸೂಚಿಸುವ ಪದಗಳನ್ನು ಬರೆದು ನಿಮ್ಮ ಹಸ್ತಾಕ್ಷರ ಅಥವಾ ಹೆಸರು ಹಾಕಿರಿ.

ಉದಾ: ನಿಮ್ಮ ಸೇವಕ, ನಿಮ್ಮ ಹಿತೈಷಿ, ಪ್ರಾರ್ಥನೆಗಳ ಅಪೇಕ್ಷಕ ಅಥವಾ ಪ್ರಾರ್ಥನೆಗಳೊಂದಿಗೆ ಇತ್ಯಾದಿ.

8. ಪತ್ರವನ್ನು ಸ್ಪಷ್ಟ, ಸರಳ ಹಾಗೂ ಚಂದವಾಗಿ ಬರೆಯಿರಿ. ಅದು ಸುಲಭದಿಂದ ಓದಿ ಅರ್ಥ ಮಾಡಿಕೊಳ್ಳುವಂತಿರಬೇಕು. ಯಾರಿಗೆ ಪತ್ರ ಬರೆಯುತ್ತಿರುವಿರೋ ಅವರ ಮನಮುಟ್ಟುವಂತಿರಬೇಕು.

9. ಪತ್ರದ ಭಾಷೆಯು ಸ್ಪಷ್ಟ, ಸರಳ ಹಾಗೂ ನೇರವಾಗಿರಬೇಕು.

10. ಪತ್ರ ಸಂಕ್ಷಿಪ್ತವಾಗಿರಲಿ. ಆದರೆ ಪ್ರತಿಯೊಂದು ಮಾತನ್ನು ನೇರವಾಗಿ, ಸ್ಪಷ್ಟವಾಗಿ ಬರೆಯಿರಿ. ಕೇವಲ ಸೂಚನೆಗಳನ್ನು ಬಳಸದಿರಿ.

11. ಪತ್ರದ ಉದ್ದಕ್ಕೂ ಯಾರಿಗೆ ಪತ್ರ ಬರೆಯುತ್ತಿರುವಿರೋ ಅವರ ಸ್ಥಾನಮಾನಗಳ ಬಗ್ಗೆ ಗಮನವಿರಿಸಿರಿ.

12. ಹೊಸ ಪಾರಾ ಆರಂಭಿಸುವಾಗ ಸ್ವಲ್ಪ ಸ್ಥಳ ಬಿಡಿರಿ.

13. ಪತ್ರವು ಸದಾ ಗಂಭೀರವಾಗಿರಲಿ. ಗಾಂಭೀರ್ಯಕ್ಕೆ ವಿರುದ್ಧವಾದ ಯಾವ ಮಾತನ್ನೂ ಬರೆಯದಿರಿ.

14. ಸಿಟ್ಟು ಬಂದಾಗ ಪತ್ರ ಬರೆಯದಿರಿ. ಪತ್ರದಲ್ಲಿ ಯಾರನ್ನೂ ಜರೆಯದಿರಿ. ಸದಾ ಮೃದು ಶೈಲಿಯಲ್ಲೇ ಬರೆಯಿರಿ.

15. ಸಾಮಾನ್ಯ ಪತ್ರದಲ್ಲಿ ಯಾವುದೇ ಗುಟ್ಟಿನ ವಿಷಯ ಬರೆಯದಿರಿ.

16. ವಾಕ್ಯ ಪೂರ್ಣಗೊಂಡಾಗ ಪೂರ್ಣ ವಿರಾಮ ಹಾಕಿರಿ.

17. ಇತರರ ಪತ್ರವನ್ನು ಅನುಮತಿ ಇಲ್ಲದೆ ಓದದಿರಿ. ಇದು ನೀಚ ಕೃತ್ಯ. ಆದರೆ ಮನೆಯ ಮಕ್ಕಳ ತರಬೇತಿಗಾಗಿ ಅವರ ಪತ್ರಗಳನ್ನು ಹೆತ್ತವರು ಅಥವಾ ರಕ್ಷಕರು ಓದಿ ಅವರಿಗೆ ಸೂಕ್ತ ಸಲಹೆಗಳನ್ನು ನೀಡಬಹುದು. ಹುಡುಗಿಯರ ಪತ್ರಗಳ ಬಗ್ಗೆ ವಿಶೇಷ ಗಮನವಿರಿಸಬೇಕು.

18. ಸಂಬಂಧಿಕರಿಗೆ ಮತ್ತು ಸ್ನೇಹಿತರಿಗೆ ಕ್ಷೇಮ ಸಮಾಚಾರ ತಿಳಿಸುವ ಪತ್ರಗಳನ್ನು ಬರೆಯುತ್ತಿರಬೇಕು.

19. ಯಾರಾದರೂ ರೋಗಗ್ರಸ್ತರಾದರೆ, ಯಾವುದಾದರೂ ಅಪಘಾತ ಸಂಭವಿಸಿದರೆ ಅಥವಾ ಇನ್ನೇನಾದರೂ ಅನಿಷ್ಟ ಸಂಭವಿಸಿದರೆ ಸಹಾನುಭೂತಿ ಪ್ರಕಟಿಸಿ ಪತ್ರ ಬರೆಯಿರಿ.

20. ನಿಮ್ಮ ಆತ್ಮೀಯರಲ್ಲಿ ಎಲ್ಲಾದರೂ ಯಾವುದೇ ಸಮಾರಂಭವಿದ್ದರೆ ನೆಂಟರಿಷ್ಟರು ಆಗಮಿಸಿದಾಗ ಅಥವಾ ಇನ್ನಾವುದೇ ಶುಭ ಸಂದರ್ಭವಿದ್ದಾಗ ಶುಭಾಶಯ ಪತ್ರ ಬರೆಯಿರಿ.

21. ಪತ್ರವನ್ನು ಸದಾ ನೀಲಿ ಅಥವಾ ಕಪ್ಪು ಶಾಯಿಯಿಂದಲೇ ಬರೆಯಿರಿ. ಪೆನ್ಸಿಲ್ ಅಥವಾ ಕೆಂಪು ಮಸಿಯಿಂದ ಬರೆಯದಿರಿ.

22. ಅಂಚೆಗೆ ಹಾಕಲಿಕ್ಕಾಗಿ ಯಾರಾದರೂ ಪತ್ರ ನೀಡಿದರೆ ಹೊಣೆಗಾರಿಕೆಯೊಂದಿಗೆ

ಸಮಯಕ್ಕೆ ಸರಿಯಾಗಿ ಹಾಕಿರಿ. ಈ ಬಗ್ಗೆ ಅಶ್ರದ್ಧೆ ಮತ್ತು ವಿಳಂಬ ಮಾಡದಿರಿ.

23. ಅಪರಿಚಿತ ವ್ಯಕ್ತಿಗಳಿಗೆ ಪತ್ರ ಬರೆಯುವಾಗ ಉತ್ತರ ನಿರೀಕ್ಷಿಸುವಿರಾದರೆ ಉತ್ತರಕ್ಕೆ ಬೇಕಾದ ಅಂಚೆ ಚೀಟಿ ಅಥವಾ ಉತ್ತರ ಪತ್ರಿಕೆಯನ್ನು ಲಗತ್ತೀಕರಿಸಿರಿ.

24. ಬರೆದುದನ್ನು ಹೊಡೆಯುವುದಿದ್ದರೆ ಅದರ ಮೇಲೆ ಒಂದು ಗೆರೆ ಎಳೆದುಬಿಡಿರಿ.

25. ಪತ್ರದಲ್ಲಿ ಕೇವಲ ನಿಮ್ಮ ಅಭಿರುಚಿ ಮತ್ತು ನಿಮ್ಮ ಉದ್ದೇಶದ ವಿಷಯಗಳನ್ನೇ ಬರೆಯದೆ ಸಂಬೋಧಿತನ ಭಾವನೆ, ಅಭಿರುಚಿಗಳನ್ನೂ ಪರಿಗಣಿಸಿರಿ. ನಿಮ್ಮ ಸಂಬಂಧಿಕರ ಕ್ಷೇಮ ಸಮಾಚಾರ ತಿಳಿಸುವುದರ ಜೊತೆಗೆ ಅವರ ಸಂಬಂಧಿಕರ ಕ್ಷೇಮವನ್ನೂ ವಿಚಾರಿಸಿರಿ. ಪತ್ರಗಳಲ್ಲಿ ಹೆಚ್ಚು ಬೇಡಿಕೆಗಳನ್ನು ಮುಂದಿರಿಸಬೇಡಿರಿ. ಹೆಚ್ಚು ಬೇಡಿಕೆಗಳನ್ನಿರಿಸುವುದರಿಂದ ನಿಮ್ಮ ಘನತೆ ಕುಗ್ಗುತ್ತದೆ.

# ವ್ಯಾಪಾರ

1. ಆಸಕ್ತಿ ಮತ್ತು ಪರಿಶ್ರಮದೊಂದಿಗೆ ವ್ಯಾಪಾರ ಮಾಡಿರಿ. ನಿಮ್ಮ ಜೀವನಾಂಶವನ್ನು ನೀವೇ ಗಳಿಸಿರಿ. ಇತರರಿಗೆ ಹೊರೆಯಾಗಬೇಡಿ. ಒಮ್ಮೆ ಓರ್ವ ಅನ್ಸಾರಿಯವರು ಪ್ರವಾದಿ ವರ್ಯರ(ಸ) ಬಳಿಗೆ ಬಂದು ಸಹಾಯ ಯಾಚಿಸಿದರು. ಪ್ರವಾದಿ(ಸ) 'ನಿಮ್ಮ ಮನೆಯಲ್ಲೇನಿದೆ?' ಎಂದು ಪ್ರಶ್ನಿಸಿದರು. ನಾನು ಮತ್ತು ಮನೆಯವರು ಹೊದ್ದುಕೊಳ್ಳುವ ಒಂದು ಕಂಬಳಿ ಮತ್ತು ನೀರು ಕುಡಿಯುವ ಒಂದು ಲೋಟೆ ಈ ಎರಡೇ ವಸ್ತುಗಳು ನಮ್ಮ ಮನೆಯಲ್ಲಿವೆ ಎಂದು ಅವರು ಉತ್ತರಿಸಿದರು. ಆ ಎರಡೂ ವಸ್ತುಗಳನ್ನು ತರುವಂತೆ ಪ್ರವಾದಿ(ಸ) ಆಜ್ಞಾಪಿಸಿದರು. ಆ ಸಹಾಬಿ ಎರಡು ವಸ್ತುಗಳನ್ನು ತಂದರು. ಅವುಗಳನ್ನು ಎರಡು ದಿರ್ಹಮ್‌ಗಳಿಗೆ ಹರಾಜು ಹಾಕಿ ಅದನ್ನು ಅವರ ಕೈಗೆ ನೀಡುತ್ತಾ ಈ ರೀತಿ ಆಜ್ಞಾಪಿಸಿದರು: 'ಹೋಗಿ ಒಂದು ದಿರ್ಹಮ್‌ಗೆ ಮನೆ ಮಂದಿಯ ಊಟದ ಪದಾರ್ಥಗಳನ್ನು ಖರೀದಿಸಿರಿ. ಇನ್ನೊಂದು ದಿರ್ಹಮ್‌ನಿಂದ ಒಂದು ಕೊಡಲಿ ಖರೀದಿಸಿ ತನ್ನಿ.'

ಅವರು ಕೊಡಲಿ ಖರೀದಿಸಿ ತಂದಾಗ ಪ್ರವಾದಿ(ಸ) ಅದಕ್ಕೆ ತಮ್ಮ ಕೈಯಿಂದಲೇ ಒಂದು ಹಿಡಿಯನ್ನು ಮಾಡಿ ಹಾಕಿದರು. 'ಇದರಿಂದ ಕಾಡಿನ ಕಟ್ಟಿಗೆ ಕಡಿದು ತಂದು ಪೇಟೆಯಲ್ಲಿ ಮಾರಾಟ ಮಾಡಿರಿ. ಹದಿನೈದು ದಿನ ಬಿಟ್ಟು ಬಂದು ನನಗೆ ವಿಷಯ ತಿಳಿಸಬೇಕು.' ಎಂದು ಹೇಳಿ ಅವರನ್ನು ಕಳಿಸಿದರು. ಹದಿನೈದು ದಿನ ಕಳೆದು ಬಂದಾಗ ಆ ಸಹಾಬಿಯ ಬಳಿ ಹತ್ತು ದಿರ್ಹಮ್‌ಗಳ ಮಿಗತೆ ಇದ್ದುವು. ಜನರಿಂದ ಯಾಚಿಸುವುದಕ್ಕಿಂತ ಈ ಕಷ್ಟದ ದುಡಿಮೆಯೇ ನಿಮಗೆ ಉತ್ತಮವಾದುದು. ಇದು ನಿರ್ಣಾಯಕ ದಿನದಂದು ನಿಮ್ಮ ಮುಖವನ್ನು ಭಿಕ್ಷೆಯ ಕಳಂಕದಿಂದ ರಕ್ಷಿಸುತ್ತದೆ ಎಂದು ಪ್ರವಾದಿ(ಸ) ಹೇಳಿದರು.

2. ಶ್ರಮಪಟ್ಟು ವ್ಯಾಪಾರ ಮಾಡಿರಿ. ಒಳ್ಳೆಯ ಸಂಪಾದನೆ ಮಾಡಿರಿ. ಅನ್ಯರ ಆಶ್ರಿತರಾಗಬೇಡಿರಿ. ಒಮ್ಮೆ ಪ್ರವಾದಿವರ್ಯರಲ್ಲಿ(ಸ) ಜನರು ಈ ರೀತಿ ವಿಚಾರಿಸಿದರು. 'ಓ ಪ್ರವಾದಿವರ್ಯರೇ! ಅತ್ಯುತ್ತಮ ಸಂಪಾದನೆ ಯಾವುದು?' ಪ್ರವಾದಿ(ಸ) ಹೇಳಿದರು, 'ತನ್ನ ಕೈಯ ದುಡಿಮೆ ಮತ್ತು ಸುಳ್ಳು ವಂಚನೆಗಳಿಲ್ಲದ ವ್ಯಾಪಾರ.' ಹ. ಅಬೂಕಿಲಾಬರವರು(ರ) ಈ ರೀತಿ ಹೇಳುತ್ತಿದ್ದರು: ಪೇಟೆಯಲ್ಲಿ ಚೆನ್ನಾಗಿ ವ್ಯಾಪಾರ ಮಾಡಿರಿ. ತನ್ಮೂಲಕ ನೀವು ಧರ್ಮದಲ್ಲಿ ಸ್ಥಿರವಾಗಿರಬಲ್ಲಿರಿ ಮತ್ತು ಜನರಿಂದ ನಿರಪೇಕ್ಷರಾಗುವಿರಿ.

3. ವ್ಯಾಪಾರದ ಅಭಿವೃದ್ಧಿಗೆ ಸದಾ ಸತ್ಯವನ್ನೇ ಅವಲಂಬಿಸಿರಿ. ಸುಳ್ಳು ಪ್ರಮಾಣಗಳನ್ನು ಪೂರ್ಣವಾಗಿ ವರ್ಜಿಸಿರಿ. ಪ್ರವಾದಿ(ಸ) ಈ ರೀತಿ ಹೇಳಿರುವರು: "ಸುಳ್ಳು ಪ್ರಮಾಣಗಳನ್ನು

ಹಾಕಿ ತನ್ನ ವ್ಯಾಪಾರವನ್ನು ವೃದ್ಧಿಗೊಳಿಸಲು ಪ್ರಯತ್ನಿಸಿ ದವನೊಂದಿಗೆ ನಿರ್ಣಾಯಕ ದಿನದಂದು ಅಲ್ಲಾಹನು ಮಾತನಾಡಲಾರನು. ಅವನತ್ತ ನೋಡಲಾರನು ಮತ್ತು ಅವನನ್ನು ಪರಿಶುದ್ಧಗೊಳಿಸಿ ಸ್ವರ್ಗ ಪ್ರವೇಶವನ್ನೂ ಕೊಡಲಾರನು." (ಮುಸ್ಲಿಮ್)

ಪ್ರವಾದಿ(ಸ) ಹೇಳಿರುವರು: "ನಿಮ್ಮ ಸರಕು ಮಾರಾಟ ಮಾಡುವ ಸಲುವಾಗಿ ಹೆಚ್ಚು ಸುಳ್ಳು ಪ್ರಮಾಣಗಳನ್ನು ಹಾಕಬೇಡಿರಿ. ಇದು ಕ್ಷಣಿಕವಾಗಿ ಅಭಿವೃದ್ಧಿದಾಯಕವೆಂದು ಭಾಸವಾದರೂ ಕಟ್ಟ ಕಡೆಗೆ ಅದು ವ್ಯಾಪಾರದ ಸಮೃದ್ಧಿಯನ್ನೇ ಅಳಿಸಿ ಹಾಕುತ್ತದೆ." (ಮುಸ್ಲಿಮ್)

4. ವ್ಯಾಪಾರದಲ್ಲಿ ಸದಾ ಸತ್ಯ ಮತ್ತು ಪ್ರಾಮಾಣಿಕತೆಗಳನ್ನು ಪಾಲಿಸಿರಿ. ಗ್ರಾಹಕರಿಗೆ ಕೆಟ್ಟ ಸರಕು ನೀಡಿ ಅಥವಾ ವಾಡಿಕೆಗಿಂತ ಹೆಚ್ಚು ಲಾಭ ಪಡೆದು ನಿಮ್ಮ ಧರ್ಮಸಮ್ಮತ ಸಂಪಾದನೆಯನ್ನು ಧರ್ಮನಿಷಿದ್ಧ ಸಂಪಾದನೆಯಾಗಿ ಮಾರ್ಪಡಿಸಬೇಡಿರಿ. ಪ್ರವಾದಿ(ಸ) ಈ ರೀತಿ ಹೇಳಿರುವರು: "ಸತ್ಯಸಂಧನೂ ಪ್ರಾಮಾಣಿಕನೂ ಆದ ವ್ಯಾಪಾರಿಯು ನಿರ್ಣಾಯಕ ದಿನದಂದು ಪ್ರವಾದಿಗಳ, ಸತ್ಯಸಂಧರ ಮತ್ತು ಹುತಾತ್ಮರ ಜೊತೆಗಾರನಾಗಿರುವನು." (ತಿರ್ಮಿದಿ)

5. ಗ್ರಾಹಕರಿಗೆ ಅತ್ಯುತ್ತಮ ಸರಕನ್ನು ಒದಗಿಸಲು ಪ್ರಯತ್ನಿಸಿರಿ. ನಿಮಗೆ ತೃಪ್ತಿ ಇಲ್ಲದ ಸರಕನ್ನು ಗ್ರಾಹಕನಿಗೆ ಎಂದೂ ನೀಡದಿರಿ. ಗ್ರಾಹಕನು ನಿಮ್ಮ ಸಲಹೆ ಕೇಳಿದಾಗ ಆತನಿಗೆ ಉತ್ತಮ ಸಲಹೆ ನೀಡಿರಿ.

6. ಗ್ರಾಹಕರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಲು ಪ್ರಯತ್ನಿಸಿರಿ. ನಿಮ್ಮನ್ನು ತಮ್ಮ ಹಿತಚಿಂತಕರೆಂದು ಅವರು ಭಾವಿಸುವಂತಾಗಬೇಕು. ನಿಮ್ಮ ಮೇಲೆ ಭರವಸೆಯಿಡುವಂತಾಗಬೇಕು. ನಿಮ್ಮಲ್ಲಿ ಎಂದೂ ಮೋಸ ಹೋಗಲಾರೆವೆಂದು ಅವರಿಗೆ ಖಾತ್ರಿಯಾಗಬೇಕು. ಪ್ರವಾದಿ(ಸ) ಹೀಗೆ ಹೇಳಿರುವರು: "ಯಾರು ಪರಿಶುದ್ಧ ಸಂಪಾದನೆಯಲ್ಲೇ ದಿನಕಳೆದನೋ ಅವನು ನನ್ನ ಚರ್ಯೆಯನ್ನು ಪಾಲಿಸಿದನು. ಜನರನ್ನು ತನ್ನ ಕೇಡಿನಿಂದ ಸುರಕ್ಷಿತವಾಗಿರಿಸಿದವನು ಸ್ವರ್ಗ ಪ್ರವೇಶಿಸುವನು". ಆಗ ಜನರು 'ಈಗಂತೂ ಅಂಥವರು ಅನೇಕರಿದ್ದಾರೆ' ಎಂದು ಹೇಳಿದಾಗ, ಪ್ರವಾದಿ(ಸ) 'ನನ್ನ ಬಳಿಕವೂ ಅಂತಹ ಜನರು ಇರುವರು' ಎಂದು ಹೇಳಿದರು. (ತಿರ್ಮಿದಿ)

7. ಸಮಯ ಪಾಲನೆ ಮಾಡಿರಿ. ಸಮಯಕ್ಕೆ ಸರಿಯಾಗಿ ಅಂಗಡಿಗೆ ಹೋಗಿರಿ. ತಾಳ್ಮೆ ಮತ್ತು ಸ್ಥೈರ್ಯದಿಂದ ವ್ಯಾಪಾರ ಮಾಡಿರಿ. ಪ್ರವಾದಿ(ಸ) ಈ ರೀತಿ ಹೇಳಿರುವರು: "ಜೀವನೋಪಾಯವನ್ನು ಅರಸುತ್ತಾ ಧರ್ಮಬದ್ಧ ಸಂಪಾದನೆಗಾಗಿ ಮುಂಜಾನೆ ಬೇಗನೇ ಮನೆಯಿಂದ ಹೊರಡಿರಿ. ಏಕೆಂದರೆ ಬೆಳಗ್ಗಿನ ಕೆಲಸಗಳಲ್ಲಿ ಸಮೃದ್ಧಿ ಮತ್ತು ವೈಶಾಲ್ಯತೆ ಇರುತ್ತದೆ".

8. ನೀವು ಪರಿಶ್ರಮ ಮಾಡಿರಿ. ನಿಮ್ಮ ನೌಕರರಿಗೂ ಪರಿಶ್ರಮದ ಅಭ್ಯಾಸ ಮಾಡಿಸಿರಿ. ಆದರೆ ನೌಕರರ ಹಕ್ಕುಗಳನ್ನು ವಿಶಾಲ ಹೃದಯತೆ ಮತ್ತು ತ್ಯಾಗ ಮನೋಭಾವದೊಂದಿಗೆ ನೀಡಿರಿ. ಸದಾ ಅವರೊಂದಿಗೆ ಮೃದುವಾಗಿ ಹಾಗೂ ಔದಾರ್ಯದಿಂದ ವರ್ತಿಸಿರಿ. ಮಾತು ಮಾತಿಗೂ ಕೋಪಗೊಳ್ಳದಿರಿ, ಸಂಶಯ ತಾಳದಿರಿ. ಪ್ರವಾದಿ(ಸ) ಈ ರೀತಿ ಹೇಳಿರುವರು: "ಯಾವ ಸಮುದಾಯದ ಪರಿಸರದಲ್ಲಿರುವ ದುರ್ಬಲರ ಹಕ್ಕುಗಳು ನೀಡಲ್ಪಡುವುದಿಲ್ಲವೋ ಅಲ್ಲಾಹನು ಆ ಸಮುದಾಯಕ್ಕೆ ಪಾವಿತ್ರ್ಯವನ್ನು ದಯಪಾಲಿಸುವುದಿಲ್ಲ."

9. ಗ್ರಾಹಕರೊಂದಿಗೆ ಸದಾ ಮೃದುವಾಗಿ ವರ್ತಿಸಿರಿ. ಸಾಲ ಕೇಳುವವರೊಂದಿಗೆ ಒರಟಾಗಿ ವರ್ತಿಸದಿರಿ. ಅವರನ್ನು ನಿರಾಶೆಗೊಳಿಸದಿರಿ. ಅವರಿಂದ ಸಾಲ ವಸೂಲಿ ಮಾಡುವಾಗ ಕಠಿಣ ಧೋರಣೆ ಅನುಸರಿಸದಿರಿ. ಪ್ರವಾದಿ(ಸ) ಈ ರೀತಿ ಹೇಳಿರುವರು: "ವ್ಯವಹಾರದಲ್ಲಿ ಹಾಗೂ ಸಾಲ ವಸೂಲಿಯಲ್ಲಿ ಮೃದು ಸ್ವಭಾವ ಮತ್ತು ಸದಾಚಾರದೊಂದಿಗೆ ವರ್ತಿಸುವವನ ಮೇಲೆ ಅಲ್ಲಾಹನು ಕರುಣೆ ತೋರಲಿ." (ಬುಖಾರಿ)

ಪ್ರವಾದಿ(ಸ) ಹೇಳಿರುವರು: "ಅಲ್ಲಾಹನು ತನ್ನನ್ನು ನಿರ್ಣಾಯಕ ದಿನದಂದು ದುಃಖ ಮತ್ತು ಬೇಸರದಿಂದ ರಕ್ಷಿಸಬೇಕೆಂದು ಯಾರು ಬಯಸುವರೋ, ಅವರು ಸಂಕಷ್ಟದಲ್ಲಿರುವ ಸಾಲಗಾರನಿಗೆ ಅವಧಿ ನೀಡಲಿ ಅಥವಾ ಸಾಲದ ಹೊರೆಯಿಂದ ಅವನನ್ನು ಮುಕ್ತಗೊಳಿಸಲಿ." (ಮುಸ್ಲಿಮ್)

10. ಸರಕಿನ ಕುಂದುಕೊರತೆಯನ್ನು ಬಚ್ಚಿಟ್ಟು ಗ್ರಾಹಕರನ್ನು ವಂಚಿಸದಿರಿ. ಸರಕಿನ ಕುಂದುಕೊರತೆಯನ್ನು ಗ್ರಾಹಕನಿಗೆ ತಿಳಿಸಿರಿ. ಒಮ್ಮೆ ಪ್ರವಾದಿ(ಸ) ಧಾನ್ಯದ ರಾಶಿಯೊಂದರ ಬಳಿಯಿಂದ ಸಾಗುತ್ತಿದ್ದರು. ಅವರು ಆ ರಾಶಿಯೊಳಗೆ ಕೈಹಾಕಿದಾಗ ಒಳಗೆ ಒದ್ದೆಯಾಗಿರುವುದು ಕಂಡು ಬಂತು. 'ಇದೇನೆಂದು ಪ್ರವಾದಿ(ಸ) ವ್ಯಾಪಾರಿಯನ್ನು ಪ್ರಶ್ನಿಸಿದರು.' 'ಈ ರಾಶಿಯ ಮೇಲೆ ಮಳೆ ಬಿದ್ದಿತ್ತು' ಎಂದು ಅವರು ಉತ್ತರಿಸಿದಾಗ 'ಹಾಗಾದರೆ ನೀವು ಒದ್ದೆಯಾದ ಧಾನ್ಯವನ್ನು ಜನರಿಗೆ ಕಾಣುವಂತೆ ಮೇಲೆ ಯಾಕೆ ಇಡಲಿಲ್ಲ? ವಂಚನೆ ಮಾಡುವವನಿಗೂ ನನಗೂ ಯಾವ ಸಂಬಂಧವೂ ಇಲ್ಲ' ಎಂದು ಪ್ರವಾದಿ(ಸ) ಹೇಳಿದರು.

11. ಬೆಲೆ ಏರುವ ನಿರೀಕ್ಷೆಯಲ್ಲಿ ಆಹಾರ ಪದಾರ್ಥಗಳನ್ನು ದಾಸ್ತಾನು ಮಾಡಿ ಜನರನ್ನು ಸಂಕಷ್ಟಕ್ಕೊಳಪಡಿಸದಿರಿ. ಪ್ರವಾದಿ(ಸ) ಹೇಳಿರುವರು: "ದಾಸ್ತಾನು ಮಾಡುವವನು ಅಪರಾಧಿ" ಇನ್ನೊಂದು ಸಂದರ್ಭದಲ್ಲಿ ಪ್ರವಾದಿ(ಸ) ಹೀಗೆ ಹೇಳಿದ್ದರು: "ದಾಸ್ತಾನು ಮಾಡುವವನು ಎಷ್ಟು ಕೆಟ್ಟ ಮನುಷ್ಯ. ಅಲ್ಲಾಹನು ವಸ್ತುಗಳನ್ನು ಅಗ್ಗಗೊಳಿಸಿದಾಗ ಅವನು ದುಃಖದಲ್ಲಿ ಕೊರಗುತ್ತಾನೆ ಮತ್ತು ವಸ್ತುಗಳು ತುಟ್ಟಿಯಾದಾಗ ಅವನಿಗೆ ಎಲ್ಲಿಲ್ಲದ ಆನಂದವಾಗುತ್ತದೆ". (ಮಿಷ್ಕಾತ್)

12. ಗ್ರಾಹಕನಿಗೆ ಅವನ ಹಕ್ಕನ್ನು ಪೂರ್ಣವಾಗಿ ನೀಡಿರಿ. ತೂಕ ಅಳತೆಗಳಲ್ಲಿ ಪ್ರಾಮಾಣಿಕತೆಯನ್ನು ಪಾಲಿಸಿರಿ. ಕೊಡುವ ಹಾಗೂ ಪಡೆಯುವ ಮಾನಗಳು ಒಂದೇ ಇರಲಿ. ಪ್ರವಾದಿ(ಸ) ಒಮ್ಮೆ ತೂಕ ಅಳತೆ ಮಾಡುವ ವ್ಯಾಪಾರಿಗಳನ್ನುದ್ದೇಶಿಸಿ ಈ ರೀತಿ ಎಚ್ಚರಿಸಿರುವರು: "ನಿಮಗಿಂತ ಮುಂಚಿನ ಸಮುದಾಯಗಳ ನಾಶಕ್ಕೆ ಕಾರಣವಾದಂತಹ ಎರಡು ಕಾರ್ಯಗಳ ಹೊಣೆ ನಿಮ್ಮ ಮೇಲಿದೆ".

ಪವಿತ್ರ ಕುರ್‌ಆನಿನಲ್ಲಿ ಹೀಗಿದೆ:

وَيْلٌ لِّلْمُطَفِّفِينَ ① الَّذِينَ إِذَا اكْتَالُوا عَلَى النَّاسِ يَسْتَوْفُونَ ②
وَإِذَا كَالُوهُمْ أَو وَّزَنُوهُمْ يُخْسِرُونَ ③ أَلَا يَظُنُّ أُولَٰئِكَ أَنَّهُم مَّبْعُوثُونَ ④
لِيَوْمٍ عَظِيمٍ ⑤ يَوْمَ يَقُومُ النَّاسُ لِرَبِّ الْعَالَمِينَ ⑥

"ತೂಕ-ಅಳತೆಗಳಲ್ಲಿ ಕಡಿತಗೊಳಿಸುವವರಿಗೆ ನಾಶವಿದೆ. ಅವರು ಜನರಿಂದ ಪಡೆಯುವಾಗ ಪೂರ್ಣ ಪ್ರಮಾಣದಲ್ಲಿ ಪಡೆಯುತ್ತಾರೆ. ತೂಕ-ಅಳತೆ ಮಾಡಿ ಕೊಡುವಾಗ ಮಾತ್ರ ಕಡಿತಗೊಳಿಸುತ್ತಾರೆ. ಒಂದು ಮಹಾ ಕಠಿಣ ದಿನದಂದು ಇವರು ಪುನರುತ್ಥಾನಗೊಂಡು ಎಬ್ಬಿಸಲ್ಪಡುವರೆಂಬುದನ್ನು ಇವರು ಅರಿತಿಲ್ಲವೇ? ಆ ದಿನ ಎಲ್ಲ ಮನುಷ್ಯರೂ ಸರ್ವಲೋಕ ಪರಿಪಾಲಕನ ಸನ್ನಿಧಿಯಲ್ಲಿ ನಿಂತಿರುವರು". **(83:1-6)**

13. ವ್ಯವಹಾರದ ಕುಂದುಕೊರತೆಗಳ ಬಗ್ಗೆ ದೇವಮಾರ್ಗದಲ್ಲಿ ಪರಿಹಾರಧನ ನೀಡುತ್ತಲಿರಿ. ದೇವಮಾರ್ಗದಲ್ಲಿ ಮನಬಿಚ್ಚಿ ದಾನ ಧರ್ಮಗಳನ್ನೂ ಮಾಡುತ್ತಿರಿ. ಪ್ರವಾದಿ(ಸ) ವ್ಯಾಪಾರಿಗಳಿಗೆ ಈ ರೀತಿ ಆದೇಶಿಸಿರುವರು: "ವ್ಯಾಪಾರಿಗಳೇ! ಸರಕು ಮಾರಾಟದಲ್ಲಿ ಅವಾಚ್ಯ ನುಡಿ ಮತ್ತು ಸುಳ್ಳು ಪ್ರಮಾಣ ಗಳ ಸಾಧ್ಯತೆಗಳಿರುವುದು ಹೆಚ್ಚು. ಆದ್ದರಿಂದ ನೀವು ನಿಮ್ಮ ಸೊತ್ತಿನಿಂದ ದಾನ ಧರ್ಮ ಗಳನ್ನು ತಪ್ಪದೆ ಮಾಡುತ್ತಿರಿ". (ಅಬೂದಾವೂದ್)

14. ನಿಮ್ಮನ್ನು ವೇದನಾಜನಕ ಶಿಕ್ಷೆಯಿಂದ ರಕ್ಷಿಸಬಲ್ಲಂತಹ ಹಾಗೂ ಕ್ಷಣಿಕ ಸಂಪತ್ತಿನ ಬದಲು ಶಾಶ್ವತ ಯಶಸ್ಸು ಮತ್ತು ಅನಂತ ಸುಖವನ್ನು ನೀಡುವ ಆ ಯಥಾರ್ಥ ವ್ಯಾಪಾರವನ್ನು ಎಂದೂ ಮರೆಯದಿರಿ. ಪವಿತ್ರ ಕುರ್‌ಆನ್ ಈ ರೀತಿ ಹೇಳಿದೆ:

يَٰٓأَيُّهَا ٱلَّذِينَ ءَامَنُوا۟ هَلْ أَدُلُّكُمْ عَلَىٰ تِجَٰرَةٍ تُنجِيكُم مِّنْ عَذَابٍ أَلِيمٍ ۝١٠
تُؤْمِنُونَ بِٱللَّهِ وَرَسُولِهِۦ وَتُجَٰهِدُونَ فِى سَبِيلِ ٱللَّهِ بِأَمْوَٰلِكُمْ وَأَنفُسِكُمْ ۚ
ذَٰلِكُمْ خَيْرٌ لَّكُمْ إِن كُنتُمْ تَعْلَمُونَ ۝١١

"ಓ ಸತ್ಯವಿಶ್ವಾಸಿಗಳೇ! ನಾನು ನಿಮಗೆ ವೇದನಾಜನಕ ಶಿಕ್ಷೆಯಿಂದ ರಕ್ಷಣೆ ನೀಡಬಲ್ಲಂತಹ ಒಂದು ವ್ಯಾಪಾರವನ್ನು ಹೇಳಿಕೊಡಲೇ? ನೀವು ಅಲ್ಲಾಹನ ಮತ್ತು ಅವನ ಪ್ರವಾದಿಯ ಮೇಲೆ ವಿಶ್ವಾಸವಿರಿಸಿರಿ ಮತ್ತು ನಿಮ್ಮ ಧನ ಹಾಗೂ ಪ್ರಾಣಗಳಿಂದ ಅಲ್ಲಾಹನ ಮಾರ್ಗದಲ್ಲಿ ಹೋರಾಡಿರಿ. ನೀವು ಅರಿಯುವವರಾಗಿದ್ದರೆ ಇದುವೇ ನಿಮಗೆ ಉತ್ತಮವಾದುದು".

**(61:10-11)**

❖ ❖ ❖ ❖

ಅಧ್ಯಾಯ - ನಾಲ್ಕು

# ಧರ್ಮ ಸಂದೇಶ

## ಸತ್ಯಪ್ರಚಾರಕನ ಚಾರಿತ್ರ್ಯ

1. ನಿಮ್ಮ ಸ್ಥಾನಮಾನಗಳ ಬಗ್ಗೆ ಸರಿಯಾದ ಜ್ಞಾನವನ್ನು ಗಳಿಸಿರಿ. ನೀವು ಪ್ರವಾದಿವರ್ಯರ(ಸ) ಉತ್ತರಾಧಿಕಾರಿಗಳು. ಪ್ರವಾದಿವರ್ಯರು(ಸ) ನಿರ್ವಹಿಸಿದ ಧರ್ಮಾಹ್ವಾನ, ಸತ್ಯ ಸಾಕ್ಷ್ಯ ಮತ್ತು ಸತ್ಯಪ್ರಚಾರದ ಹೊಣೆಯನ್ನೇ ನಿಮಗೂ ನಿರ್ವಹಿಸಬೇಕಾಗಿದೆ. ಆದ್ದರಿಂದ ಪ್ರವಾದಿವರ್ಯರಲ್ಲಿದ್ದಂತಹ ಸತ್ಯಪ್ರಚಾರದ ಕಳಕಳಿಯನ್ನೇ ನಿಮ್ಮಲ್ಲಿ ಉಂಟು ಮಾಡಲು ಪ್ರಯತ್ನಿಸಿರಿ. ಪವಿತ್ರ ಕುರ್‌ಆನ್ ಈ ರೀತಿ ಆದೇಶಿಸಿದೆ:

هُوَ اجْتَبٰىكُمْ وَمَا جَعَلَ عَلَيْكُمْ فِي الدِّيْنِ مِنْ حَرَجٍ ۭ مِلَّةَ اَبِيْكُمْ
اِبْرٰهِيْمَ ۭ هُوَ سَمّٰىكُمُ الْمُسْلِمِيْنَ ڏ مِنْ قَبْلُ وَفِيْ هٰذَا لِيَكُوْنَ الرَّسُوْلُ شَهِيْدًا
عَلَيْكُمْ وَتَكُوْنُوْا شُهَدَاۗءَ عَلَي النَّاسِ ښ

"ಅವನು ನಿಮ್ಮನ್ನು ಚುನಾಯಿಸಿರುವನು. ಧರ್ಮದ ವಿಷಯದಲ್ಲಿ ನಿಮಗೆ ಯಾವುದೇ ಕ್ಲಿಷ್ಟತೆಯನ್ನು ಇರಿಸಿಲ್ಲ. ನಿಮ್ಮ ಪಿತಾಮಹರಾದ ಇಬ್ರಾಹೀಮ್‌ರ ಸಮುದಾಯದಲ್ಲಿ ಸ್ಥಿರವಾಗಿರಿ. ಅಲ್ಲಾಹನು ಈ ಹಿಂದೆಯೂ 'ಮುಸ್ಲಿಮ್' ಎಂದೇ ನಿಮಗೆ ನಾಮಕರಣ ಮಾಡಿದ್ದನು ಮತ್ತು ಇದರಲ್ಲಿ(ಕುರ್‌ಆನಿನಲ್ಲಿ)ಯೂ (ನಿಮ್ಮ ಹೆಸರು ಅದುವೇ ಆಗಿದೆ.) ನಿಮಗೆ ಸಂದೇಶ ವಾಹಕರು ಸಾಕ್ಷಿಯಾಗಲು ಮತ್ತು ನೀವು ಜನರಿಗೆ ಸಾಕ್ಷಿಗಳಾಗಲು". (22:78)

ಅರ್ಥಾತ್ ಮುಸ್ಲಿಮ್ ಸಮುದಾಯವು ಪ್ರವಾದಿವರ್ಯರ(ಸ) ಉತ್ತರಾಧಿಕಾರಿಯಾಗಿದೆ. ಪ್ರವಾದಿ(ಸ) ನಿರ್ವಹಿಸಿದ ಕಾರ್ಯವನ್ನೇ ಆ ಸಮುದಾಯವೂ ನಿರ್ವಹಿಸಬೇಕಾಗಿದೆ. ಯಾವ ರೀತಿ ಅಂತಿಮ ಪ್ರವಾದಿ(ಸ) ತಮ್ಮ ನಡೆ-ನುಡಿಗಳಿಂದ ಹಾಗೂ ಹಗಲಿರುಳಿನ ಪರಿಶ್ರಮದಿಂದ ದೇವ ಧರ್ಮವನ್ನು ಅತ್ಯಂತ ಸ್ಪಷ್ಟವಾಗಿ ಜಗತ್ತಿನ ಮುಂದೆ ಇರಿಸಿದರೋ, ಅದೇ ರೀತಿ ಈ ಸಮುದಾಯವು ಲೋಕದ ಎಲ್ಲ ಜನರ ಮುಂದೆ ದೇವ ಧರ್ಮವನ್ನು ಸ್ಪಷ್ಟ

ಪಡಿಸಬೇಕಾಗಿದೆ. ಅದೇ ಕರ್ತವ್ಯ ಪ್ರಜ್ಞೆಯೊಂದಿಗೆ ಹಾಗೂ ಸತ್ಯಪ್ರಚಾರ ಕಳಕಳಿಯೊಂದಿಗೆ ಸತ್ಯ ಧರ್ಮದ ಜೀವಂತ ಸಾಕ್ಷಿಗಳಾಗಿ ಜೀವಿಸಬೇಕಾಗಿದೆ.

2. ನಿಮ್ಮ ನೈಜ ನೆಲೆ ಸದಾ ನಿಮ್ಮ ದೃಷ್ಟಿಯ ಮುಂದಿರಲಿ. ಅದಕ್ಕೆ ತಕ್ಕ ರೀತಿಯಲ್ಲಿ ನಿಮ್ಮ ಜೀವನವನ್ನು ರೂಪಿಸುವ ಮತ್ತು ಸಾಗಿಸುವ ನಿರಂತರ ಪರಿಶ್ರಮದಲ್ಲಿ ನಿರತರಾಗಿರಿ. ನೀವು ಜಗತ್ತಿನ ಇತರ ಸಮುದಾಯಗಳಂತಹ ಒಂದು ಸಮುದಾಯವಲ್ಲ. ನಿಮಗೆ ಅಲ್ಲಾಹನು ಪ್ರತ್ಯೇಕ ಸ್ಥಾನಮಾನವನ್ನು ದಯಪಾಲಿಸಿದ್ದಾನೆ. ಜಗತ್ತಿನ ಎಲ್ಲ ಸಮುದಾಯ ಗಳ ನಾಯಕತ್ವ ವಹಿಸಿ ಅವುಗಳ ಮಾರ್ಗದರ್ಶನ ಮಾಡುವ ಹೊಣೆಯು ನಿಮ್ಮ ಮೇಲಿದೆ. ನೀವು ಎಲ್ಲ ತೀವ್ರವಾದಗಳಿಂದಲೂ ದೂರ ನಿಂತು ದೇವನ ಸನ್ಮಾರ್ಗದಲ್ಲಿ ನ್ಯಾಯಬದ್ಧ ವಾಗಿ ನೆಲೆಗೊಳ್ಳಬೇಕು.

ಪವಿತ್ರ ಕುರ್‌ಆನ್ ಈ ರೀತಿ ಹೇಳಿದೆ:

وَكَذٰلِكَ جَعَلْنٰكُمْ اُمَّةً وَّسَطًا لِّتَكُوْنُوْا شُهَدَآءَ عَلَى النَّاسِ وَيَكُوْنَ الرَّسُوْلُ عَلَيْكُمْ شَهِيْدًا

"ಮತ್ತು ಇದೇ ರೀತಿ ನಿಮ್ಮನ್ನು ನಾವು ಒಂದು ಸುಮಧ್ಯ ಸಮುದಾಯವಾಗಿ ಮಾಡಿದ್ದೇವೆ. ನೀವು ಜನರಿಗೆ ಸತ್ಯಧರ್ಮದ ಸಾಕ್ಷಿಗಳಾಗಲು ಮತ್ತು ಪ್ರವಾದಿವರ್ಯರು ನಿಮಗೆ ಸಾಕ್ಷಿಗಳಾಗಲು". **(2:143)**

3. ನಿಮ್ಮ ಧ್ಯೇಯದ ನೈಜ ಜ್ಞಾನ ಗಳಿಸಲು ಪ್ರಯತ್ನಿಸಿರಿ. ಪೂರ್ಣ ನಿಷ್ಠೆಯೊಂದಿಗೆ ಅದನ್ನು ಜೀವನದಲ್ಲಿ ಅಳವಡಿಸಲು ಪ್ರಯತ್ನಿಸಿರಿ. ಪ್ರವಾದಿ ಮುಹಮ್ಮದ್(ಸ) ಬೋಧಿಸಿದ ಸಂಪೂರ್ಣ ಧರ್ಮವನ್ನು ಪೂರ್ಣನಿಷ್ಠೆ ಮತ್ತು ಏಕಾಗ್ರತೆಯಿಂದ ಸಂಸ್ಥಾಪಿಸಲು ಪ್ರಯತ್ನಿಸು ವುದೇ ಅಲ್ಲಾಹನ ದೃಷ್ಟಿಯಲ್ಲಿ ಮುಸ್ಲಿಮ್ ಸಮುದಾಯದ ಧ್ಯೇಯ. ಆ ಧರ್ಮವು ವಿಶ್ವಾಸ, ಆರಾಧನೆ, ನೀತಿ-ನಡವಳಿಕೆ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯವೇ ಮೊದಲಾದ ಮನುಷ್ಯ ಜೀವನದ ಎಲ್ಲ ರಂಗಗಳ ಬಗ್ಗೆ ದೈವಿಕ ಮಾರ್ಗದರ್ಶನದಲ್ಲಿ ನೆಲೆ ನಿಂತಿದೆ. ಪ್ರವಾದಿ(ಸ) ತಮ್ಮ ಪವಿತ್ರ ಜೀವನ ಕಾಲದಲ್ಲಿ ಈ ಧರ್ಮವನ್ನು ಅದರ ಪರಿಪೂರ್ಣ ರೂಪದಲ್ಲಿ ಸಂಸ್ಥಾಪಿಸಿದರು. ಪ್ರವಾದಿ(ಸ) ಸದ್ವಿಶ್ವಾಸ ಮತ್ತು ಸದಾಚಾರದ ಶಿಕ್ಷಣವನ್ನು ನೀಡಿದರು. ಆರಾಧನೆಯ ವಿಧಿ, ವಿಧಾನಗಳನ್ನು ಕಲಿಸಿದರು. ಧರ್ಮದ ಆಧಾರದಲ್ಲಿ ಸಮಾಜದ ನಿರ್ಮಾಣ ಮಾಡಿದರು. ಮನುಷ್ಯ ಜೀವನವನ್ನು ಸುವ್ಯವಸ್ಥಿತಗೊಳಿಸುವ ಮತ್ತು ಒಳಿತು ಸಮೃದ್ಧಿಗಳಿಂದ ತುಂಬುವ ಒಂದು ಕಲ್ಯಾಣ ರಾಷ್ಟ್ರವನ್ನೂ ಸ್ಥಾಪಿಸಿದರು. ಅಲ್ಲಾಹನು ಹೀಗೆ ಹೇಳಿರುವನು:

شَرَعَ لَكُمْ مِّنَ الدِّيْنِ مَا وَصّٰى بِهٖ نُوْحًا وَّالَّذِيْٓ اَوْحَيْنَآ اِلَيْكَ وَمَا

وَصَّيْنَا بِهٖٓ اِبْرٰهِيْمَ وَمُوْسٰى وَعِيْسٰٓى اَنْ اَقِيْمُوا الدِّيْنَ وَلَا تَتَفَرَّقُوْا فِيْهِ

"ಅಲ್ಲಾಹನು ನೂಹರಿಗೆ ಆದೇಶಿಸಿದ ಧರ್ಮವನ್ನೇ ನಿಮಗೆ ನಿಶ್ಚಯಿಸಿರುವನು. ಓ ಪ್ರವಾದಿವರ್ಯರೇ! ಅದನ್ನೇ ನಾವು ನಿಮಗೆ ಅವತೀರ್ಣಗೊಳಿಸಿದ್ದೇವೆ. ಅದನ್ನೇ ನಾವು

ಇಬ್ರಾಹೀಮ್, ಮೂಸಾ ಮತ್ತು ಈಸಾರಿಗೆ ಆದೇಶಿಸಿದ್ದೆವು. ಈ ಧರ್ಮವನ್ನು ಸಂಸ್ಥಾಪಿಸಿರಿ ಮತ್ತು ಇದರಲ್ಲಿ ಭಿನ್ನರಾಗದಿರಿ". (ಪವಿತ್ರ ಕುರ್‌ಆನ್, 42:13)

4. ಕೆಡುಕನ್ನು ಉಚ್ಚಾಟಿಸುವ ಮತ್ತು ಒಳಿತನ್ನು ಸಂಸ್ಥಾಪಿಸುವ ಕಾರ್ಯದಲ್ಲಿ ಸದಾ ನಿರತರಾಗಿರಿ. ಇದುವೇ ನಿಮ್ಮ ವಿಶ್ವಾಸದ ಬೇಡಿಕೆ. ಇದುವೇ ನಿಮ್ಮ ಸಮುದಾಯದ ಅಸ್ತಿತ್ವದ ಉದ್ದೇಶ. ಈ ಉದ್ದೇಶಕ್ಕಾಗಿಯೇ ಜೀವಿಸಿರಿ. ಇದಕ್ಕಾಗಿಯೇ ಪ್ರಾಣಾರ್ಪಣೆ ಮಾಡಿರಿ. ಈ ಕಾರ್ಯವನ್ನೆಸಗುವ ಸಲುವಾಗಿಯೇ ಅಲ್ಲಾಹನು ನಿಮಗೆ 'ಖೈರು ಉಮ್ಮತ್' ಅರ್ಥಾತ್' ಅತ್ಯುತ್ತಮ ಸಮುದಾಯ'ವೆಂಬ ಮಹಾ ಬಿರುದನ್ನು ನೀಡಿರುವನು.

كُنْتُمْ خَيْرَ أُمَّةٍ أُخْرِجَتْ لِلنَّاسِ تَأْمُرُونَ بِالْمَعْرُوفِ وَتَنْهَوْنَ عَنِ الْمُنْكَرِ وَتُؤْمِنُونَ بِاللَّهِ

"ನೀವು ಸಮಸ್ತ ಮನುಷ್ಯರಿಗಾಗಿ ನಿಯೋಗಿಸಲ್ಪಟ್ಟ ಅತ್ಯುತ್ತಮ ಸಮುದಾಯ ದವರು. ನೀವು ಒಳಿತನ್ನು ಆಜ್ಞಾಪಿಸುತ್ತೀರಿ. ಕೆಡುಕನ್ನು ತಡೆಯುತ್ತೀರಿ ಹಾಗೂ ಅಲ್ಲಾಹನಲ್ಲಿ ಪೂರ್ಣ ವಿಶ್ವಾಸವಿಡುತ್ತೀರಿ". (ಪವಿತ್ರ ಕುರ್‌ಆನ್, 3:110)

ಪ್ರವಾದಿ(ಸ) ಈ ರೀತಿ ಹೇಳಿರುವರು: "ನನ್ನ ಪ್ರಾಣ ಯಾರ ವಶವಿದೆಯೋ ಆತನಾಣೆ! ನೀವು ತಪ್ಪದೆ ಒಳಿತನ್ನು ಆಜ್ಞಾಪಿಸುತ್ತಿರಬೇಕು ಮತ್ತು ಕೆಡುಕನ್ನು ತಡೆಯುತ್ತಿರಬೇಕು. ಅನ್ಯಥಾ ದೇವನು ನಿಮ್ಮ ಮೇಲೆ ಒಂದು ಯಾತನೆ ಎರಗಿಸುವನು. ಆ ಬಳಿಕ ನೀವು ಮೊರೆಯಿಡುತ್ತಲಿ ರುವಿರಿ. ಆದರೆ ಆ ಮೊರೆಯನ್ನು ಕೇಳಲಾಗದು". (ತಿರ್ಮಿದಿ)

5. ದೇವ ಸಂದೇಶವನ್ನು ತಲುಪಿಸಲು ಮತ್ತು ದೇವದಾಸರನ್ನು ನರಕಾಗ್ನಿಯಿಂದ ರಕ್ಷಿಸಲು ಅತ್ಯುನ್ನತ ಮಟ್ಟದ ಕಳಕಳಿಯನ್ನು ನಿಮ್ಮಲ್ಲಿ ಉಂಟು ಮಾಡಿರಿ. ಪ್ರವಾದಿ ವರ್ಯರ(ಸ) ಅಪ್ರತಿಮ ಕಳಕಳಿಯನ್ನು ಪವಿತ್ರ ಕುರ್‌ಆನ್ ಈ ಮಾತುಗಳಲ್ಲಿ ಗುರುತಿಸಿದೆ:

فَلَعَلَّكَ بَاخِعٌ نَّفْسَكَ عَلَىٰ آثَارِهِمْ إِن لَّمْ يُؤْمِنُوا بِهَٰذَا الْحَدِيثِ أَسَفًا ⑥

"ಇವರು ವಿಶ್ವಾಸ ತಾರದೆ ಹೋದರೆ ಪ್ರಾಯಶಃ ನೀವು ಇವರ ಹಿಂದೆ ನಿಮ್ಮ ಪ್ರಾಣವನ್ನೇ ನಾಶ ಮಾಡುವಿರಿ". (18:6)

ಪ್ರವಾದಿ(ಸ) ತಮ್ಮ ಈ ಪರಿಸ್ಥಿತಿಯನ್ನು ಈ ಕೆಳಗಿನ ಶಬ್ದಗಳಲ್ಲಿ ವಿವರಿಸಿರುವರು: "ನನ್ನ ಉಪಮೆಯು ಬೆಂಕಿ ಹೊತ್ತಿಸಿದವನಂತಿದೆ. ಬೆಂಕಿಯ ಪ್ರಕಾಶದಿಂದ ಪರಿಸರವು ಬೆಳಗಿದಾಗ ಕೀಟಗಳು ಮತ್ತು ಹಾತೆಗಳು ಅದರ ಮೇಲೆ ಮುಗಿ ಬೀಳಲಾರಂಭಿಸಿದುವು. ಆ ವ್ಯಕ್ತಿ ತನ್ನ ಶಕ್ತ್ಯಾನುಸಾರ ಆ ಕೀಟ ಮತ್ತು ಹಾತೆಗಳನ್ನು ತಡೆಯುತ್ತಿದ್ದ. ಆದರೆ ಹಾತೆ ಗಳು ಆತನ ಪ್ರಯತ್ನಗಳನ್ನು ವಿಫಲಗೊಳಿಸುತ್ತಿದ್ದುವು. ಅವು ಬೆಂಕಿಗೆ ಧುಮುಕುತ್ತಿದ್ದುವು. ಇದೇ

ರೀತಿ ನಾನು ನಿಮ್ಮನ್ನು ಹಿಡಿದು ನರಕದಿಂದ ರಕ್ಷಿಸುತ್ತಿರುವೆನು. ಆದರೆ ನೀವಂತೂ ಅದರೊಳಗೆ ಬೀಳುತ್ತಿರುವಿರಿ." (ಮಿಷ್ಕಾತ್)

ಒಮ್ಮೆ ಹ. ಆಯಿಶಾ(ರ) ಪ್ರವಾದಿವರ್ಯರಲ್ಲಿ(ಸ) ಹೀಗೆ ವಿಚಾರಿಸಿದರು: ಓ ಪ್ರವಾದಿ ವರ್ಯರೇ! ಉಹುದ್ ಯುದ್ಧದ ದಿವಸಕ್ಕಿಂತ ಕಠಿಣ ದಿವಸ ನಿಮ್ಮ ಮೇಲೆ ಕಳೆದಿದೆಯೇ? ಪ್ರವಾದಿ(ಸ) ಹೇಳಿದರು, ಹೌದು ಆಯಿಶಾ! ನನ್ನ ಮೇಲೆ ಕಳೆದ ಅತ್ಯಂತ ಕಠಿಣ ದಿನ ಉಕ್ಬಾದ ದಿನವಾಗಿತ್ತು. ಇದು ಪ್ರವಾದಿ(ಸ) ಮಕ್ಕಾದ ಜನರಿಂದ ನಿರಾಶರಾಗಿ ತಾಯಿಫ್ ಜನತೆಗೆ ದೇವ ಸಂದೇಶವನ್ನು ತಲುಪಿಸುವ ಸಲುವಾಗಿ ಅಲ್ಲಿಗೆ ಹೋದ ದಿವಸವಾಗಿತ್ತು. ಅಲ್ಲಿನ ಸರದಾರನಾದ ಅಬ್ದು ಯಾಲೀಲನು ಪ್ರವಾದಿವರ್ಯರ(ಸ) ಹಿಂದೆ ಗೂಂಡಾಗಳನ್ನು ಛೂ ಬಿಟ್ಟನು. ಆ ಗೂಂಡಾಗಳು ಪ್ರವಾದಿವರ್ಯರ(ಸ) ಕರುಣೆಯ ಸಂದೇಶಕ್ಕೆ ಪ್ರತಿಯಾಗಿ ಅವರ ಮೇಲೆ ಕಲ್ಲಿನ ಮಳೆಗರೆದರು. ಪ್ರವಾದಿವರ್ಯರ(ಸ) ಮೈಯೆಲ್ಲಾ ರಕ್ತಸಿಕ್ತವಾಯಿತು ಹಾಗೂ ಅವರು ಮೂರ್ಛೆ ಹೋಗಿ ಬಿದ್ದು ಬಿಟ್ಟರು. ತರುವಾಯ ಪ್ರವಾದಿ(ಸ) ಅತ್ಯಂತ ವ್ಯಾಕುಲಚಿತ್ತರೂ, ಖಿನ್ನರೂ ಆಗಿ ಅಲ್ಲಿಂದ ಹೊರಟರು. 'ಕರ್ನುಸ್ಸಆಲಿಬ್' ಎಂಬಲ್ಲಿಗೆ ತಲುಪಿದಾಗ ಸ್ವಲ್ಪ ಸುಧಾರಿಸಿದರು. ಅಲ್ಲಾಹನು ಯಾತನೆಯ ದೇವಚರರನ್ನು ಪ್ರವಾದಿವರ್ಯರ(ಸ) ಬಳಿಗೆ ರವಾನಿಸಿದನು. ಆ ದೇವಚರ ಹೀಗೆಂದಿತು: ಓ ಪ್ರವಾದಿವರ್ಯರೇ! ತಾವು ಅನುಮತಿಸಿದರೆ ನಾನು ಅಬೂ ಕುಬೈಸ್ ಮತ್ತು ಅಹ್ಮರ್ ಪರ್ವತಗಳನ್ನು ಪರಸ್ಪರ ಢಿಕ್ಕಿ ಹೊಡೆಸುವೆನು. ಈ ಎರಡು ಪರ್ವತಗಳ ಮಧ್ಯೆ ಆ ದುಷ್ಟ ಜನರು ಪುಡಿ ಪುಡಿಯಾಗಿ ತಮ್ಮ ಅವಸಾನ ಕಾಣಲಿ. ಆಗ ಲೋಕಾನುಗ್ರಹಿಯಾದ ಪ್ರವಾದಿ(ಸ), "ಬೇಡ ಬೇಡ. ದೇವ ಯಾತನೆಯ ಬಗ್ಗೆ ನನ್ನ ಸಮುದಾಯವನ್ನು ಎಚ್ಚರಿಸು ತ್ತಿರಲು ನನ್ನನ್ನು ಬಿಟ್ಟು ಬಿಡಿ. ದೇವನು ಇವರ ಹೃದಯವನ್ನೇ ಸನ್ಮಾರ್ಗ ದರ್ಶನಕ್ಕೆ ತೆರೆಯಬಹುದು ಅಥವಾ ಇವರ ಸಂತತಿಯಲ್ಲಾದರೂ ಸನ್ಮಾರ್ಗ ಕೈಗೊಳ್ಳುವವರು ಹುಟ್ಟಿಬರುವರು." (ಬುಖಾರಿ, ಮುಸ್ಲಿಮ್)

ಪ್ರವಾದಿ(ಸ) ಮಕ್ಕಾದಲ್ಲಿರುವಾಗಲೇ ಮಕ್ಕಾದ ಜನರು ಅವರ ವಿರುದ್ಧ ಸಂಚು ಹೂಡುತ್ತಾರೆ. ಓರ್ವನು ಅವರನ್ನು ಗಡಿಪಾರು ಮಾಡುವಂತೆ ಸೂಚಿಸುತ್ತಾನೆ. ಇನ್ನೋರ್ವನು ಕೊಲೆ ಮಾಡುವಂತೆ ಸಲಹೆ ನೀಡುತ್ತಾನೆ. ಅದೇ ಸಂದರ್ಭದಲ್ಲಿ ಮಕ್ಕಾದಲ್ಲಿ ಅನಿರೀಕ್ಷಿತ ಬರಗಾಲ ತಲೆದೋರುತ್ತದೆ. ಕುರೈಶರು ಎಲೆ ಮತ್ತು ತೊಗಟೆಗಳನ್ನು ತಿನ್ನಲು ನಿರ್ಬಂಧಿತ ರಾದರು. ಹಸುಗೂಸುಗಳು ಹಸಿವೆಯಿಂದ ಒದ್ದಾಡುತ್ತಿದ್ದುವು. ಹಿರಿಯರು ಅವರ ನರಳಾಟ ಕಂಡು ಮರುಗುತ್ತಿದ್ದರು.

ಅವರ ಈ ದಾರುಣ ಅವಸ್ಥೆಯನ್ನು ಕಂಡು ಪ್ರವಾದಿ(ಸ) ಮಮ್ಮಲ ಮರುಗಿದರು. ಪ್ರವಾದಿವರ್ಯರ(ಸ) ನಿಷ್ಠಾವಂತ ಸಂಗಾತಿಗಳೂ ಅವರ ದುಃಖವನ್ನು ಕಂಡು ಖಿನ್ನರಾದರು. ಪ್ರವಾದಿ(ಸ) ತಮ್ಮ ಪ್ರಾಣ ಶತ್ರುಗಳಿಗೂ ಅವರು ನೀಡಿದ ಕಿರುಕುಳಗಳ ವೇದನೆ ಇನ್ನೂ ಮಾಸದಿದ್ದಾಗ್ಯೂ ತಮ್ಮ ಹಾರ್ದಿಕ ಸಹಾನುಭೂತಿ ವ್ಯಕ್ತಪಡಿಸಿದರು. ಅಬೂ ಸುಫ್ಯಾನ್

ಮತ್ತು ಸಫ್‌ವಾನ್‌ರಿಗೆ ಐನೂರು ದೀನಾರ್‌ಗಳನ್ನು ಕಳುಹಿಸಿ ಅದನ್ನು ಬರಪೀಡಿತರಿಗೆ ವಿತರಿಸುವಂತೆ ವಿನಂತಿಸಿದರು.

ವಾಸ್ತವದಲ್ಲಿ ಸನ್ಮಾರ್ಗ ಭ್ರಷ್ಟರಾದ ಜನರ ಬಗ್ಗೆ ಕಳವಳ ಪಡುವುದು, ಅವರ ಪಥ ಭ್ರಷ್ಟತೆ ಮತ್ತು ಸಂಕಷ್ಟಗಳಿಗೆ ಮರುಗುವುದು, ಅವರನ್ನು ದೇವ ಕ್ರೋಧದಿಂದ ರಕ್ಷಿಸುವ ಕಳಕಳಿ ಹೊಂದಿರುವುದು, ಅವರ ಸಂಕಷ್ಟಗಳನ್ನು ಕಂಡು ದುಃಖಿಸುವುದು ಮತ್ತು ಅವರ ಸನ್ಮಾರ್ಗದರ್ಶನಕ್ಕಾಗಿ ಅಸಾಮಾನ್ಯ ಕಾಳಜಿ ಹೊಂದಿರುವುದು, ಇವು ಸತ್ಯ ಪ್ರಚಾರಕನ ವೈಶಿಷ್ಟ್ಯಗಳಾಗಿವೆ. ಇವುಗಳಿಂದಲೇ ಆತನ ಜೀವನವು ಅತ್ಯಂತ ಆಕರ್ಷಕ ಮತ್ತು ಅಪ್ರತಿಮ ಪ್ರಭಾವಪೂರ್ಣವಾಗಿ ಮಾರ್ಪಡುತ್ತದೆ.

6. ಸಮುದಾಯದ ನಿಸ್ವಾರ್ಥ ಸೇವೆ ಮಾಡಿರಿ. ಜನರಿಂದ ನಿಮ್ಮ ಯಾವುದೇ ಸೇವೆಯ ಪ್ರತಿಫಲವನ್ನು ಬಯಸದಿರಿ. ಎಲ್ಲವನ್ನೂ ದೇವ ಸಂಪ್ರೀತಿಗಾಗಿಯೇ ಮಾಡಿರಿ. ಆತನಿಂದಲೇ ಪ್ರತಿಫಲವನ್ನು ನಿರೀಕ್ಷಿಸಿರಿ. ದೇವಸಂಪ್ರೀತಿ ಮತ್ತು ದೇವನಿಂದ ಪ್ರತಿಫಲಾಪೇಕ್ಷೆಯು ವ್ಯಕ್ತಿಯ ಮಾತಿನಲ್ಲಿ ಪ್ರಭಾವವನ್ನುಂಟು ಮಾಡುವ ಶಕ್ತಿಯಾಗಿದೆ. ಅದು ಮನುಷ್ಯನನ್ನು ನಿರಂತರ ಸಕ್ರಿಯವಾಗಿರಿಸುತ್ತದೆ. ದೇವನು ಅನಾದಿಯೂ ಅನಂತನೂ ಆಗಿರುವನು. ಅವನಿಗೆ ನಿದ್ರೆಯಾಗಲೀ ತೂಕಡಿಕೆಯಾಗಲೀ ಬಾಧಿಸುವುದಿಲ್ಲ. ಜನರ ಯಾವ ಕರ್ಮವೂ ಅವನಿಗೆ ಗೋಪ್ಯವಲ್ಲ. ಅವನು ತನ್ನ ನಿಷ್ಠಾವಂತರ ಕರ್ಮಗಳನ್ನೆಂದೂ ನಿರರ್ಥಕಗೊಳಿಸುವುದಿಲ್ಲ. ಅವನು ಮನುಷ್ಯನಿಗೆ ಆತನ ಶ್ರಮಕ್ಕಿಂತ ಹೆಚ್ಚಿನದನ್ನು ನೀಡುತ್ತಾನೆ. ಅವನು ಯಾರನ್ನೂ ವಂಚಿಸುವುದಿಲ್ಲ. ಪ್ರವಾದಿಗಳು ಆಗಾಗ ತಮ್ಮ ಸಮುದಾಯದ ಜನರಿಗೆ ಹೀಗೆ ಹೇಳುತ್ತಿದ್ದರು.

"ನಾನು ನಿಮ್ಮಿಂದ ಯಾವುದೇ ಪ್ರತಿಫಲವನ್ನು ಅಪೇಕ್ಷಿಸುವುದಿಲ್ಲ. ನನ್ನ ಪ್ರತಿಫಲ ವಂತೂ ನನ್ನ ಪ್ರಭುವಿನ ಬಳಿ ಇದೆ".

7. ಇಸ್ಲಾಮ್ ಧರ್ಮದ ಗಾಢ ಅಧ್ಯಯನ ಮಾಡಿರಿ. ದೇವನ ಬಳಿ ಅಂಗೀಕಾರಾರ್ಹ ಧರ್ಮವು ಇಸ್ಲಾಮ್ ಮಾತ್ರವಾಗಿದೆ ಎಂಬುದನ್ನು ದೃಢವಾಗಿ ನಂಬಿರಿ. ಈ ಸತ್ಯಧರ್ಮ ವನ್ನು ಬಿಟ್ಟು ಯಾವ ಜೀವನ ಕ್ರಮವನ್ನು ಅನುಸರಿಸಿದರೂ ಅದಕ್ಕೆ ಅಲ್ಲಾಹನ ಬಳಿ ಯಾವ ಸ್ಥಾನಮಾನವೂ ಇರಲಾರದು. ಕುರ್‌ಆನ್ ಸಮರ್ಪಿಸುವ ಆ ಧರ್ಮ ಮಾತ್ರ ಅಲ್ಲಾಹನ ಬಳಿ ಸ್ವೀಕಾರಾರ್ಹವಾಗಿದೆ. ಅದನ್ನು ಪ್ರವಾದಿ ಮುಹಮ್ಮದ್(ಸ) ತಮ್ಮ ಪಾವನ ಜೀವನ ದಲ್ಲಿ ಕಾರ್ಯರೂಪಕ್ಕೆ ತಂದಿರುವರು. 'ನಾನು ಅನುಸರಿಸಿರುವ ಮಾರ್ಗವನ್ನು ಚೆನ್ನಾಗಿ ಯೋಚಿಸಿ, ಪೂರ್ಣ ಜ್ಞಾನದೊಂದಿಗೆ ಅನುಸರಿಸುವೆನು' ಎಂದು ಜನರಿಗೆ ಸ್ಪಷ್ಟವಾಗಿ ತಿಳಿಸುವಂತೆ ಪವಿತ್ರ ಕುರ್‌ಆನ್ ಪ್ರವಾದಿವರ್ಯರಿಗೆ(ಸ) ಆದೇಶಿಸುತ್ತದೆ:

قُلْ هٰذِهٖ سَبِيْلِيْٓ اَدْعُوْٓا اِلَى اللّٰهِ ۣعَلٰى بَصِيْرَةٍ اَنَا وَمَنِ اتَّبَعَنِيْ ۭوَسُبْحٰنَ اللّٰهِ وَمَآ اَنَا مِنَ الْمُشْرِكِيْنَ ﴿١٠٨﴾

"(ಓ ಪ್ರವಾದಿವರ್ಯರೇ!) ನನ್ನ ಮಾರ್ಗವು ಇದಾಗಿದೆ. ನಾನೂ, ನನ್ನ ಅನುಯಾಯಿ

ಗಳೂ ಪೂರ್ಣ ಜ್ಞಾನದೊಂದಿಗೆ ಅಲ್ಲಾಹನ ಕಡೆಗೆ ಆಹ್ವಾನ ನೀಡುತ್ತಿದ್ದೇವೆ. ಅಲ್ಲಾಹನು ಎಲ್ಲ ಕುಂದು ಕೊರತೆಗಳಿಂದಲೂ ಪಾವನನು. ದೇವನೊಂದಿಗೆ ಸಹಭಾಗಿತ್ವ ಮಾಡುವವರ ಜೊತೆ ನನಗೆ ಯಾವ ಸಂಬಂಧವೂ ಇಲ್ಲ ಎಂದು ಸ್ಪಷ್ಟವಾಗಿ ಸಾರಿ ಹೇಳಿರಿ". **(12:108)**

ಅಲ್ಲಾಹನು ಸ್ಪಷ್ಟವಾಗಿ ಹೇಳಿರುವನು:

وَمَنْ يَبْتَغِ غَيْرَ الْإِسْلَامِ دِينًا فَلَنْ يُقْبَلَ مِنْهُ وَهُوَ فِي الْآخِرَةِ مِنَ الْخَاسِرِينَ ﴿٨٥﴾

"ಯಾವನಾದರೂ ಇಸ್ಲಾಮಿನ ಹೊರತು ಅನ್ಯ ಧರ್ಮವನ್ನು ಅವಲಂಬಿಸಿದರೆ ಅದು ಖಂಡಿತ ಅವನಿಂದ ಸ್ವೀಕರಿಸಲಾಗದು. ಪರಲೋಕದಲ್ಲಿ ಅವನು ನಷ್ಟಕ್ಕೊಳಗಾಗುವನು".

**(ಪವಿತ್ರ ಕುರ್‌ಆನ್, 3:85)**

إِنَّ الدِّينَ عِنْدَ اللَّهِ الْإِسْلَامُ

"ಅಲ್ಲಾಹನ ಬಳಿ ಧರ್ಮವಂತೂ ಇಸ್ಲಾಮ್ ಮಾತ್ರವಾಗಿದೆ".

**(ಪವಿತ್ರ ಕುರ್‌ಆನ್, 3:19)**

8. ನಿಮ್ಮ ಉದ್ದೇಶದ ಮಹಾನತೆಯನ್ನೂ ಪ್ರಾಮುಖ್ಯತೆಯನ್ನೂ ಸದಾ ದೃಷ್ಟಿಯಲ್ಲಿಡಿರಿ. ಎಲ್ಲ ಕಾಲಗಳಲ್ಲಿಯೂ ದೇವನು ತನ್ನ ಪ್ರವಾದಿಗಳನ್ನು ಕಳುಹಿಸಿ ಮಾಡಿಸಿದ ಕೆಲಸವಿದು. ನಿಮಗೆ ಅಲ್ಲಾಹನು ಕರುಣಿಸಿದ ಈ ಧರ್ಮದ ಸೌಭಾಗ್ಯವೇ ಇಹಪರಗಳ ಮೇಲ್ಮೆ ಮತ್ತು ವಿಜಯದ ಹೇತುವಾಗಿದೆ ಎಂದು ದೃಢವಾಗಿ ನಂಬಿರಿ. ಇದರೆದುರಿಗೆ ನಶ್ವರವಾದ ಇಹಲೋಕದ ಸಿರಿ-ಸಂಪತ್ತು ಮತ್ತು ವೈಭವ ಆಡಂಬರಗಳಿಗೆ ಯಾವ ಬೆಲೆಯೂ ಇಲ್ಲ.

ಪವಿತ್ರ ಕುರ್‌ಆನ್ ಈ ರೀತಿ ಹೇಳಿದೆ:

"ನಾವು ನಿಮಗೆ ಪುನರಾವರ್ತಿಸಲ್ಪಡುವ ಸಪ್ತ ಸೂಕ್ತಗಳನ್ನೂ ಕುರ್‌ಆನನ್ನೂ ದಯಪಾಲಿಸಿರುವೆವು. ಆದ್ದರಿಂದ ನಾವು ಅವರ ವಿವಿಧ ವರ್ಗ ಗಳಿಗೆ ನೀಡಿರುವ ಈ ನಶ್ವರ ಸಾಧನಗಳೆಡೆಗೆ ನೀವು ಕಣ್ಣೆತ್ತಿಯೂ ನೋಡದಿರಿ". **(15:87-88)**

ಈ ಮೊದಲು ಗ್ರಂಥ ನೀಡಲ್ಪಟ್ಟವರನ್ನು ಅಭಿಸಂಬೋಧಿಸುತ್ತಾ, ಅದು ಈ ರೀತಿ ಹೇಳಿದೆ:

يَا أَهْلَ الْكِتَابِ لَسْتُمْ عَلَىٰ شَيْءٍ حَتَّىٰ تُقِيمُوا التَّوْرَاةَ وَالْإِنْجِيلَ وَمَا أُنْزِلَ إِلَيْكُمْ مِنْ رَبِّكُمْ

"ಓ ಗ್ರಂಥದವರೇ! ನಿಮ್ಮೊಡೆಯನು ಅವತೀರ್ಣಗೊಳಿಸಿದ ತೌರಾತ್, ಇಂಜೀಲ್ ಮತ್ತಿತರ ಗ್ರಂಥಗಳನ್ನು ಸಂಸ್ಥಾಪಿಸುವ ತನಕ ನೀವು ಸನ್ಮಾರ್ಗಗಾಮಿಗಳಾಗಲಾರಿರಿ".

**(ಪವಿತ್ರ ಕುರ್‌ಆನ್, 5:68)**

9. ಧರ್ಮದ ಸರಿಯಾದ ಜ್ಞಾನ ಮತ್ತು ಅದರ ಯುಕ್ತಿಗಳನ್ನು ಗ್ರಹಿಸಲು ನಿರಂತರ ಶ್ರಮಿಸಿರಿ. ಪ್ರವಾದಿ(ಸ) ಈ ರೀತಿ ಹೇಳಿರುವರು: "ದೇವನು ಯಾವ ವ್ಯಕ್ತಿಗೆ ಒಳಿತು ದಯ ಪಾಲಿಸಬಯಸುತ್ತಾನೋ, ಆತನಿಗೆ ತನ್ನ ಧರ್ಮದ ಸರಿಯಾದ ಜ್ಞಾನ ಮತ್ತು ಆಳವಾದ ವಿವೇಕ ವನ್ನು ದಯಪಾಲಿಸುತ್ತಾನೆ". (ಬುಖಾರಿ, ಮುಸ್ಲಿಮ್)

ಯಥಾರ್ಥದಲ್ಲಿ ಧರ್ಮದ ಸರಿಯಾದ ಪರಿಜ್ಞಾನ ಮತ್ತು ವಿವೇಕವೇ ಎಲ್ಲ ಒಳಿತು ಗಳ ಮೂಲವಾಗಿದೆ. ಈ ಒಳಿತಿನಿಂದ ವಂಚಿತನಾದವನು ಇಹಪರಗಳ ಸೌಭಾಗ್ಯಗಳಿಂದ ವಂಚಿತನಾದನು. ಅವನ ಜೀವನದಲ್ಲಿ ಸಮತೋಲನ ಮತ್ತು ಏಕರೂಪತೆ ಕಾಣಲಾರದು. ಜೀವನದ ಎಲ್ಲ ರಂಗಗಳಲ್ಲಿ ಧರ್ಮದ ನೈಜ ಪ್ರಾತಿನಿಧ್ಯ ವಹಿಸಲೂ ಅವನಿಂದ ಸಾಧ್ಯವಾಗದು.

10. ಲೋಕಕ್ಕೆ ಹೇಳುವಾಗ ಅದರ ಪ್ರಥಮ ಅಭಿಸಂಬೋಧಿತನು ಸ್ವತಃ ನೀವೇ ಆಗಿರುವಿರೆಂದು ಬಗೆಯಿರಿ. ಜನರಿಗೆ ತಿಳಿಸುವುದಕ್ಕಿಂತ ಮೊದಲು ನಿಮ್ಮ ಆತ್ಮಕ್ಕೆ ತಿಳಿಸಿರಿ. ಇತರರಿಂದ ಬಯಸುವುದನ್ನು ಮೊದಲು ನೀವೇ ಮಾಡಿ ತೋರಿಸಿರಿ. ಸತ್ಯ ಪ್ರಚಾರಕನು ತನ್ನ ಪ್ರಚಾರದ ನೈಜ ಮಾದರಿ ತಾನೇ ಆಗಿರುವುದು ಆತನ ವೈಶಿಷ್ಟ್ಯವಾಗಿದೆ. ಅವನು ಹೇಳುವ ಪ್ರತಿಯೊಂದು ಮಾತಿಗೂ ತನ್ನ ಕೆಲಸಗಳನ್ನೂ ತನ್ನ ಚಾರಿತ್ರ್ಯವನ್ನೂ ಸಾಕ್ಷಿಯಾಗಿರಿಸುತ್ತಾನೆ. ಯಾವ ವಾಸ್ತವಿಕತೆಗಳನ್ನು ಒಪ್ಪುವುದರಿಂದ ಜಗತ್ತಿಗೆ ಒಳಿತಿದೆ ಎಂದು ಅವನು ಪ್ರತಿಪಾದಿಸುತ್ತಾನೋ ಆ ಒಳಿತುಗಳ ಬಗ್ಗೆ ಅವನು ಸ್ವತಃ ಹೆಚ್ಚು ಆಶೆ ಪಡುತ್ತಾನೆ. ಪ್ರವಾದಿಗಳು ತಂತಮ್ಮ ಜನಾಂಗಗಳನ್ನು ಸತ್ಯದೆಡೆಗೆ ಆಹ್ವಾನಿಸಲು ಎದ್ದು ನಿಂತಾಗಲೆಲ್ಲಾ, ಮೊಟ್ಟ ಮೊದಲ ವಿಧೇಯನು (ಮುಸ್ಲಿಮನು) ನಾನು ಎಂದು ಸಾರಿ ಹೇಳಿದರು.

ನಿಮ್ಮ ಮಾತು ಮತ್ತು ಬರಹಗಳ ಮೂಲಕವೂ ನೀವು ಪ್ರತಿಪಾದಿಸುತ್ತಿರುವುದೇ ಸತ್ಯ ವಾದುದು ಎಂದು ಸಾಕ್ಷಿ ಹೇಳಿರಿ. (ಸತ್ಯಧರ್ಮವನ್ನು ಅವಲಂಬಿಸುವುದರಿಂದಲೇ) ಸುಸ್ಥಿರ ಕುಟುಂಬದ ರಚನೆಯಾಗುವುದು. ಉತ್ತಮ ಸಮಾಜದ ನಿರ್ಮಾಣವಾಗುವುದು ಮತ್ತು ನ್ಯಾಯ-ನೀತಿಗಳಲ್ಲಿ ಅಧಿಷ್ಟಿತವಾದ ಒಂದು ನಾಗರಿಕ ವ್ಯವಸ್ಥೆ ಅಸ್ತಿತ್ವಕ್ಕೆ ಬರುವುದು ಎಂಬುದನ್ನು ನಿಮ್ಮ ವೈಯಕ್ತಿಕ ಗುಣನಡತೆ, ಖಾಸಗೀ ಸಂಪರ್ಕ, ಸಾಮಾಜಿಕ ವ್ಯವಹಾರ ಗಳು ಹಾಗೂ ರಾಜಕೀಯ ಮತ್ತು ರಾಷ್ಟ್ರೀಯ ಚಟುವಟಿಕೆಗಳಿಂದ ಸಾಬೀತುಪಡಿಸಿರಿ. ತಮ್ಮ ತರಬೇತಿ ಮತ್ತು ಸುಧಾರಣೆಯನ್ನು ಮರೆತು ಇತರರ ತರಬೇತಿ-ಸುಧಾರಣೆಯ ಬಗ್ಗೆ ಮಾತನಾಡುವವರು ತೀರಾ ಅವಿವೇಕಿಗಳು. ಅವರ ಪರಿಸ್ಥಿತಿಯು ಹೊತ್ತಿ ಉರಿಯುತ್ತಿರುವ ತನ್ನ ಮನೆಯನ್ನು ಬಿಟ್ಟು ಇತರರ ಮನೆ ಎಲ್ಲಿ ಉರಿಯುತ್ತಿದೆಯೋ ಎಂದು ನೀರು ಹಿಡಿದು ಶೋಧಿಸ ಹೊರಟವನಂತಿದೆ. ಇಂಥವರು ಇಹಲೋಕದಲ್ಲೂ ವಿಫಲರಾಗುವರು ಪರಲೋಕದಲ್ಲೂ ವಿಫಲರಾಗುವರು. ಇಲ್ಲಿ ಅವರ ಕರ್ಮ ವಿಮುಖತೆಯು ಅವರ ಉಪದೇಶಗಳನ್ನು ಪ್ರಭಾವ ಶೂನ್ಯ ಮತ್ತು ಮೌಲ್ಯಹೀನಗೊಳಿಸುತ್ತದೆ. ಪರಲೋಕದಲ್ಲಿ ಅವರು ಅತ್ಯಂತ ವೇದನಾಯುಕ್ತ ಶಿಕ್ಷೆಗೆ ಪಾತ್ರರಾಗುವರು.

ಇತರರಿಗೆ ಉಪದೇಶ ಮಾಡುವವರು ಸ್ವಯಂ ಕರ್ಮ ವಿಮುಖರಾಗುವುದು ಮತ್ತು

ತಾವು ಮಾಡದೆ ಇರುವುದನ್ನು ಇತರರಿಗೆ ಉಪದೇಶಿಸುವುದು ಅಲ್ಲಾಹನಿಗೆ ಅತ್ಯಂತ ಅಪ್ರಿಯ ವಾದ ಮಾತಾಗಿದೆ. ಪ್ರವಾದಿ(ಸ) ಇಂತಹ ಕರ್ಮ ವಿಮುಖರಾದ ಪ್ರಚಾರಕರಿಗೆ ಅತ್ಯಂತ ಘೋರ ಶಿಕ್ಷೆಯ ಬಗ್ಗೆ ಎಚ್ಚರಿಕೆ ನೀಡಿರುವರು. ಪ್ರವಾದಿ(ಸ) ಈ ರೀತಿ ಹೇಳಿರುವರು:

ಕಿಯಾಮತ್ ದಿನದಂದು ಓರ್ವ ವ್ಯಕ್ತಿಯನ್ನು ತಂದು ಬೆಂಕಿಗೆ ಎಸೆಯಲಾಗುವುದು. ಆ ಬೆಂಕಿಯಲ್ಲಿ ಅವನ ಕರುಳು ಹೊರ ಬರುವುದು. ತರುವಾಯ ಅವನು ಗಾಣದ ಸುತ್ತಲೂ ಕತ್ತೆ ತಿರುಗುವಂತೆ ತನ್ನ ಕರುಳನ್ನು ಹಿಡಿದು ತಿರುಗುವನು. ಇದನ್ನು ಕಂಡು ಇತರ ನರಕವಾಸಿಗಳು ಅವನ ಸುತ್ತ ಸೇರುವರು. 'ನೀವು ನಮಗೆ ಲೋಕದಲ್ಲಿ ಒಳಿತನ್ನು ಉಪದೇಶಿ ಸುತ್ತಿದ್ದಿರಲ್ಲವೇ? ಕೆಡುಕಿನಿಂದ ನಮ್ಮನ್ನು ತಡೆಯುತ್ತಿದ್ದಿರಲ್ಲವೇ? (ಮತ್ತೆ ನಿಮ್ಮ ಅವಸ್ಥೆ ಹೀಗೇಕಾಯಿತು?)' ಎಂದು ಕೇಳುವರು. ಆಗ ಆ ವ್ಯಕ್ತಿ ಹೇಳುವನು, 'ನಾನು ನಿಮಗಂತೂ ಒಳಿತಿನ ಪಾಠ ಹೇಳುತ್ತಿದ್ದೆ. ಆದರೆ ನಾನು ಸ್ವಯಂ ಅದನ್ನು ಮಾಡುತ್ತಿರಲಿಲ್ಲ, ನಿಮ್ಮ ನ್ನಂತೂ ನಾನು ಕೆಡುಕಿನಿಂದ ತಡೆಯುತ್ತಿದ್ದೆ. ಆದರೆ ಆ ಕೆಡುಕುಗಳನ್ನು ನಾನು ಸ್ವಯಂ ಮಾಡುತ್ತಿದ್ದೆ'. (ಬುಖಾರಿ, ಮುಸ್ಲಿಮ್)

ಮಿಅ್‌ರಾಜ್ (ಗಗನಾರೋಹಣ) ರಾತ್ರಿಯ ಭಯಾನಕ ದೃಶ್ಯಗಳನ್ನು ಪ್ರವಾದಿ ವರ್ಯರು(ಸ) ಜನರ ಮುಂದಿರಿಸಿದ ಒಂದು ಮುಖ್ಯ ಉದ್ದೇಶವು ತಪ್ಪಿತಸ್ಥ ಜನರಿಗೆ ಎಚ್ಚರಿಕೆ ನೀಡಿ ಅವರನ್ನು ಸ್ವಸುಧಾರಣೆಯ ಬಗ್ಗೆ ಚಿಂತನೆಗೆ ತೊಡಗಿಸುವುದಾಗಿದೆ. ಪ್ರವಾದಿ(ಸ) ಈ ರೀತಿ ಹೇಳಿರುವರು: "ಮಿಅ್‌ರಾಜ್ ರಾತ್ರೆಯಂದು ಕೆಲವರನ್ನು ಕಂಡೆ. ಅವರ ನಾಲಗೆಗಳನ್ನು ಕತ್ತರಿಯಿಂದ ತುಂಡರಿಸಲಾಗುತ್ತಿತ್ತು. ಇವರು ಯಾರೆಂದು ನಾನು ಜಿಬ್ರೀಲ್‌ರಲ್ಲಿ(ಅ) ವಿಚಾರಿಸಿದಾಗ 'ಇದು ನಿಮ್ಮ ಸಮುದಾಯದ ವಾಗ್ಮಿಗಳು. ಇವರು ಜನರಿಗೆ ಒಳಿತು ಮತ್ತು ಧರ್ಮನಿಷ್ಠೆಯ ಉಪದೇಶ ಮಾಡುತ್ತಿದ್ದರು. ಆದರೆ ತಮ್ಮನ್ನು ತಾವೇ ಮರೆತಿದ್ದರು' ಎಂದು ಜಿಬ್ರೀಲ್(ಅ) ಹೇಳಿದರು". (ಮಿಷ್ಕಾತ್)

ಇಂತಹ ಕರ್ಮ ವಿಮುಖರನ್ನೂ ತಪ್ಪಿತಸ್ಥರನ್ನೂ ಸಹಾಬಿವರ್ಯರು ಕೂಡ ಕಟುವಾಗಿ ಎಚ್ಚರಿಸುತ್ತಿದ್ದರು. ಒಮ್ಮೆ ಓರ್ವರು ಹ. ಅಬ್ದುಲ್ಲಾ ಬಿನ್ ಅಬ್ಬಾಸ್‌ರಲ್ಲಿ(ರ) 'ನಾನು ಜನರಿಗೆ ಒಳಿತನ್ನು ಆಜ್ಞಾಪಿಸಬಯಸುತ್ತೇನೆ, ಕೆಡುಕಿನಿಂದ ತಡೆಯಬಯಸುತ್ತೇನೆ ಮತ್ತು ಧರ್ಮಪ್ರಚಾರ ಕಾರ್ಯ ಮಾಡಬಯಸುತ್ತೇನೆ' ಎಂದು ಹೇಳಿದರು. ಆಗ ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ), 'ನೀವು ಸತ್ಯಪ್ರಚಾರ ಮಾಡುವ ಮಟ್ಟಕ್ಕೆ ತಲುಪಿದ್ದೀರಾ' ಎಂದು ವಿಚಾರಿಸಿದರು. ಆಗ ಅವರು 'ಹೌದು ಹಾಗೆಂದೇ ನಾನು ಭಾವಿಸುತ್ತೇನೆ' ಎಂದರು. ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಹೇಳಿದರು: ಪವಿತ್ರ ಕುರ್‌ಆನಿನ ಮೂರು ಸೂಕ್ತಗಳು ನಿಮ್ಮನ್ನು ಅಪಮಾನಗೊಳಿಸದೆಂದು ನಿಮಗೆ ಭರವಸೆ ಇದ್ದರೆ ನೀವು ಧಾರಾಳವಾಗಿ ಧರ್ಮ ಪ್ರಚಾರ ಕಾರ್ಯ ಮಾಡಬಹುದು. ಈ ಮೂರು ಸೂಕ್ತಗಳು ಯಾವುವು ಎಂದು ಆ ವ್ಯಕ್ತಿ ಕೇಳಿದಾಗ ಹ. ಅಬ್ದುಲ್ಲಾ ಬಿನ್ ಅಬ್ಬಾಸ್ ಹೇಳಿದರು: ಪ್ರಥಮ ಸೂಕ್ತ ಈ ರೀತಿ ಇದೆ:

أَتَأْمُرُونَ النَّاسَ بِالْبِرِّ وَتَنْسَوْنَ أَنْفُسَكُمْ

"ನೀವು ಜನರಿಗೆ ಒಳಿತನ್ನು ಉಪದೇಶಿಸಿ ನಿಮ್ಮನ್ನು ನೀವು ಮರೆತು ಬಿಡುತ್ತೀರಾ?"
(ಪವಿತ್ರ ಕುರ್‌ಆನ್, 2:44)

ಇಬ್ನು ಅಬ್ಬಾಸ್(ರ) ಕೇಳಿದರು: ನೀವು ಈ ಸೂಕ್ತವನ್ನು ಸರಿಯಾಗಿ ಪಾಲಿಸಿದ್ದೀರಾ? 'ಇಲ್ಲ' ಎಂದು ಆ ವ್ಯಕ್ತಿ ಉತ್ತರಿಸಿದರು. ಎರಡನೆಯ ಸೂಕ್ತ ಈ ರೀತಿ ಇದೆ:

لِمَ تَقُوْلُوْنَ مَا لَا تَفْعَلُوْنَ ۝٢

"ನೀವು ಮಾಡದೇ ಇರುವುದನ್ನು ಏಕೆ ಹೇಳುತ್ತೀರಿ?" (ಪವಿತ್ರ ಕುರ್‌ಆನ್, 61:2)

ನೀವು ಈ ಸೂಕ್ತವನ್ನು ಸರಿಯಾಗಿ ಪಾಲಿಸಿದ್ದೀರಾ? ಆ ವ್ಯಕ್ತಿ 'ಇಲ್ಲ'ವೆಂದು ಉತ್ತರಿಸಿದರು. ಮೂರನೆಯ ಸೂಕ್ತ ಈ ರೀತಿ ಇದೆ:

(ಹ. ಶುಐಬ್(ಅ) ತಮ್ಮ ಜನಾಂಗದ ಜನರಿಗೆ ಹೇಳಿದರು:)

مَآ اُرِيْدُ اَنْ اُخَالِفَكُمْ اِلٰى مَآ اَنْهٰكُمْ عَنْهُ ؕ

"ನಿಮ್ಮನ್ನು ನಾನು ತಡೆಯುತ್ತಿರುವ ಕೆಡುಕುಗಳನ್ನು ನಾನು ಮಾಡಬಯಸುವುದಿಲ್ಲ (ನಾನಂತೂ ಸ್ವಯಂ ಅವುಗಳಿಂದ ದೂರವಿರುವೆನು)". (ಪವಿತ್ರ ಕುರ್‌ಆನ್, 11:88)

ನೀವು ಈ ಸೂಕ್ತವನ್ನು ಸರಿಯಾಗಿ ಪಾಲಿಸಿದ್ದೀರಾ ಎಂದು ಕೇಳಿದಾಗ ಆ ವ್ಯಕ್ತಿ 'ಇಲ್ಲ'ವೆಂದರು. ಆಗ ಹ. ಇಬ್ನು ಅಬ್ಬಾಸ್(ರ) ಹೇಳಿದರು, ಹಾಗಿದ್ದರೆ ಹೋಗಿ ಮೊದಲು ನಿಮಗೇ ಒಳಿತನ್ನು ಆಜ್ಞಾಪಿಸಿರಿ ಮತ್ತು ಕೆಡುಕಿನಿಂದ ನಿಮ್ಮನ್ನೇ ತಡೆಯಿರಿ.

11. ನಮಾಝನ್ನು ಅದರ ಪೂರ್ಣ ಶಿಷ್ಟಾಚಾರ ಮತ್ತು ವಿಧಿಗಳೊಂದಿಗೆ ಉತ್ಸಾಹದಿಂದ ನಿರ್ವಹಿಸಿರಿ. ಐಚ್ಛಿಕ ನಮಾಝ್‌ಗಳನ್ನೂ ನಿರ್ವಹಿಸಿರಿ. ದೇವನೊಂದಿಗಿನ ಸಂಬಂಧವನ್ನು ಸುದೃಢಗೊಳಿಸದೆ ಆತನ ಧರ್ಮದ ಪ್ರಚಾರ ಕಾರ್ಯ ಮಾಡುವುದು ಸಾಧ್ಯವಲ್ಲ. ದೇವನೊಂದಿಗೆ ಸಂಬಂಧ ಹೆಚ್ಚಿಸುವ ಖಚಿತ ಉಪಾಧಿ ನಮಾಝ್ ಆಗಿದೆ. ಇದನ್ನು ಅಲ್ಲಾಹನೇ ಮನುಷ್ಯರಿಗೆ ತಿಳಿಸಿದ್ದಾನೆ. ಪ್ರವಾದಿವರ್ಯರನ್ನು(ಸ) ಅಭಿಸಂಬೋಧಿಸಿ ಪವಿತ್ರ ಕುರ್‌ಆನಿನಲ್ಲಿ ಹೀಗೆ ಹೇಳಲಾಗಿದೆ:

يٰۤاَيُّهَا الْمُزَّمِّلُ ۝١ قُمِ الَّيْلَ اِلَّا قَلِيْلًا ۝٢ نِّصْفَهٗۤ اَوِ انْقُصْ مِنْهُ قَلِيْلًا ۝٣ اَوْ زِدْ عَلَيْهِ وَرَتِّلِ الْقُرْاٰنَ تَرْتِيْلًا ۝٤ اِنَّا سَنُلْقِيْ عَلَيْكَ قَوْلًا ثَقِيْلًا ۝٥

"ಓ ಹೊದ್ದು ಮಲಗಿದವರೇ! ರಾತ್ರಿಯಲ್ಲಿ (ನಮಾಝ್‌ಗಾಗಿ) ನಿಲ್ಲಿರಿ. ಆದರೆ ಸ್ವಲ್ಪ ಹೊತ್ತು ಹೊರತು. ರಾತ್ರಿಯ ಅರ್ಧಾಂಶ, ಅದಕ್ಕಿಂತ ಸ್ವಲ್ಪ ಹೆಚ್ಚು ಅಥವಾ ಸ್ವಲ್ಪ ಕಡಿಮೆ;

ಮತ್ತು ಕುರ್‌ಆನನ್ನು ನಿಲ್ಲಿಸಿ ನಿಲ್ಲಿಸಿ ಪಠಿಸಿರಿ. ನಾವು ಸದ್ಯವೇ ನಿಮ್ಮ ಮೇಲೆ ಒಂದು ಮಹಾ ಆಜ್ಞೆ(ಹೊಣೆಗಾರಿಕೆ)ಯನ್ನು ಹೊರಿಸಲಿದ್ದೇವೆ". (73:1-5)

ಮಹಾ ಆಜ್ಞೆಯ ಹೊಣೆಗಾರಿಕೆಯೆಂದರೆ ಸತ್ಯಧರ್ಮದ ಪ್ರಚಾರ ಕಾರ್ಯ. ವಾಸ್ತವದಲ್ಲಿ ಇದು ಲೋಕದ ಎಲ್ಲ ಹೊಣೆಗಾರಿಕೆಗಳಿಗಿಂತಲೂ ಭಾರವಾದ ಹೊಣೆಗಾರಿಕೆಯಾಗಿದೆ. ಈ ಮಹಾ ಹೊಣೆಗಾರಿಕೆಯ ನಿರ್ವಹಣೆಗಾಗಿ ನೀವು ನಮಾಝ್‌ನ ಮೂಲಕ ಶಕ್ತಿ ಗಳಿಸಬೇಕಾದುದು ಮತ್ತು ದೇವನೊಂದಿಗೆ ಸಂಬಂಧ ಸುದೃಢಗೊಳಿಸಬೇಕಾದುದು ಅತ್ಯಗತ್ಯ.

12. ಪವಿತ್ರ ಕುರ್‌ಆನನ್ನು ಮನಸ್ಸಿಟ್ಟು ಉತ್ಸಾಹದಿಂದ ಪಠಿಸುವ ಪರಿಪಾಠ ಇಟ್ಟುಕೊಳ್ಳಿರಿ. ನಮಾಝ್‌ನಲ್ಲೂ ಗಮನವಿಟ್ಟು ಕುರ್‌ಆನ್ ಪಠಿಸಿರಿ. ನಮಾಝ್‌ನ ಹೊರತು ಇತರ ಸಂದರ್ಭಗಳಲ್ಲಿ ಪವಿತ್ರ ಕುರ್‌ಆನನ್ನು ಪಠಿಸುವಾಗಲೂ ಬಹಳ ಉತ್ಸಾಹದಿಂದ ನಿಲ್ಲಿಸಿ ನಿಲ್ಲಿಸಿ ಪಠಿಸಿರಿ. ಮನಸಾರೆ ಗಮನವಿಟ್ಟು ಕುರ್‌ಆನ್ ಪಠಿಸಿದರೆ ಅದರಿಂದ ಪವಿತ್ರ ಕುರ್‌ಆನನ್ನು ಅರಿಯಲು ಮತ್ತು ಅದರ ಬಗ್ಗೆ ಚಿಂತನೆ ಮಾಡಲು ಅನುಕೂಲವಾಗುತ್ತದೆ. ಇದರಿಂದ ಕುರ್‌ಆನಿನೊಂದಿಗಿನ ಸಂಬಂಧವೂ ಬೆಳೆಯುತ್ತದೆ. ಪವಿತ್ರ ಕುರ್‌ಆನ್ ಸನ್ಮಾರ್ಗ ದರ್ಶನ ಮತ್ತು ಸದುಪದೇಶದ ಏಕೈಕ ಚಿಲುಮೆಯಾಗಿದೆ. ಕುರ್‌ಆನಿನ ಸೂಕ್ತಗಳ ಬಗ್ಗೆ ಚಿಂತನೆ ನಡೆಸಬೇಕು ಮತ್ತು ಅದರ ಉಪದೇಶ-ಬೋಧನೆಗಳಿಂದ ಪ್ರಯೋಜನ ಪಡೆಯಬೇಕೆಂದೇ ಅದು ಅವತೀರ್ಣಗೊಂಡಿದೆ. ಆದ್ದರಿಂದ ಕುರ್‌ಆನಿನ ಬಗ್ಗೆ ಚಿಂತನೆ ನಡೆಸುವ ಅಭ್ಯಾಸ ಬೆಳೆಸಿರಿ. ಅದರ ಮಾರ್ಗದರ್ಶನದಂತೆ ಜೀವನದ ನಿರ್ಮಾಣ ಮಾಡುವೆನು ಹಾಗೂ ಸಮಾಜವನ್ನು ಅದರ ಆದೇಶದಂತೆ ಬದಲಾಯಿಸು ವೆನೆಂಬ ನಿರ್ಧಾರದೊಂದಿಗೆ ಅದನ್ನು ಪಠಿಸಿರಿ. ಪವಿತ್ರ ಕುರ್‌ಆನನ್ನು ತಮ್ಮ ಚಿಂತನೆಗಳ ಮತ್ತು ಅಭಿರುಚಿ ಗಳ ಕೇಂದ್ರ ಬಿಂದುವಾಗಿರಿಸಿದವರು ಮಾತ್ರ ಅಲ್ಲಾಹನ ಧರ್ಮದ ಸಂಸ್ಥಾಪನೆಯ ಕಾರ್ಯ ಮಾಡಬಲ್ಲರು. ಇದನ್ನು ಅಲಕ್ಷಿಸಿದರೆ ಸ್ವಯಂ ಧರ್ಮದಲ್ಲಿರಲಿಕ್ಕೂ ಧರ್ಮ ಸಂಸ್ಥಾಪನೆಯ ಚಟುವಟಿಕೆಗಳಲ್ಲಿ ಭಾಗವಹಿಸಲಿಕ್ಕೂ ಸಾಧ್ಯವಿಲ್ಲ. ಪವಿತ್ರ ಕುರ್‌ಆನನ್ನು ಪಠಿಸುವವರಿಗೆ ಅದು ಈ ರೀತಿ ಆದೇಶಿಸುತ್ತದೆ:

كِتَٰبٌ أَنزَلْنَٰهُ إِلَيْكَ مُبَٰرَكٌ لِّيَدَّبَّرُوٓا۟ ءَايَٰتِهِۦ وَلِيَتَذَكَّرَ أُو۟لُوا۟ ٱلْأَلْبَٰبِ ﴿٢٩﴾

"ನಿಮ್ಮ ಕಡೆ ಅವತೀರ್ಣಗೊಳಿಸಿದ ಗ್ರಂಥವು ಸಾದ್ಯಂತ ಮಂಗಳಮಯವಾಗಿದೆ. ಜನರು ಅದರ ಸೂಕ್ತಗಳ ಬಗ್ಗೆ ಚಿಂತನೆ ಮಾಡಲೆಂದು ಹಾಗೂ ಸದ್ವಿವೇಕ ಹೊಂದಿದವರು ಅದರಿಂದ ಪಾಠ ಕಲಿಯಲೆಂದು". (38:29)

ಪವಿತ್ರ ಕುರ್‌ಆನ್ ಹೀಗೂ ಆದೇಶಿಸಿದೆ:

وَرَتِّلِ ٱلْقُرْءَانَ تَرْتِيلًا ﴿٤﴾

"ಕುರ್‌ಆನನ್ನು ನಿಲ್ಲಿಸಿ ನಿಲ್ಲಿಸಿ ಪಠಿಸಿರಿ". (73:4)

ಪ್ರವಾದಿ(ಸ) ಈ ರೀತಿ ಆದೇಶಿಸಿರುವರು: "ಕಬ್ಬಿಣಕ್ಕೆ ನೀರು ತಾಗಿದಾಗ ಅದಕ್ಕೆ ತುಕ್ಕು ಹಿಡಿಯುವಂತೆ ಹೃದಯಗಳಿಗೂ ತುಕ್ಕು ಹಿಡಿಯುತ್ತದೆ". ಜನರು ಕೇಳಿದರು - "ಓ ಪ್ರವಾದಿ ವರ್ಯರೇ! ಆಗ ಹೃದಯಗಳ ತುಕ್ಕನ್ನು ನೀಗಿಸುವ ಸಾಧನ ಯಾವುದು? ಪ್ರವಾದಿ(ಸ) ಹೇಳಿ ದರು, "ಮನುಷ್ಯ ಮರಣವನ್ನು ಹೆಚ್ಚೆಚ್ಚು ಸ್ಮರಿಸುತ್ತಿದ್ದರೆ ಮತ್ತು ಪವಿತ್ರ ಕುರ್‌ಆನನ್ನು ಪಠಿಸು ತ್ತಿದ್ದರೆ ಹೃದಯದ ತುಕ್ಕು ದೂರ ವಾಗುತ್ತದೆ". (ಮಿಷ್ಕಾತ್)

13. ಎಲ್ಲ ಪರಿಸ್ಥಿತಿಗಳಲ್ಲೂ ದೇವನಿಗೆ ಕೃತಜ್ಞರಾಗಿರಿ. ಲೌಕಿಕ ಸಂಪತ್ತು ಮತ್ತು ಆಡಂಬರದಲ್ಲಿ ನಿಮಗಿಂತ ಕೆಳಗಿರುವವನನ್ನು ದೃಷ್ಟಿಯಲ್ಲಿಟ್ಟರೆ ನಿಮ್ಮಲ್ಲಿ ದೇವನ ಬಗ್ಗೆ ಕೃತಜ್ಞತಾ ಭಾವವು ಹುಟ್ಟುತ್ತದೆ.

ಪ್ರವಾದಿ(ಸ) ಹೀಗೆ ಹೇಳಿರುವರು: "ಲೌಕಿಕ ಸಿರಿ ಸಂಪತ್ತು ಹಾಗೂ ಅಧಿಕಾರ-ಅಂತಸ್ತು ಗಳಲ್ಲಿ ನಿಮಗಿಂತ ಕಡಿಮೆಯಿರು ವವರನ್ನು ನೋಡುತ್ತಿರಿ". (ಆಗ ನಿಮ್ಮಲ್ಲಿ ಕೃತಜ್ಞತಾಭಾವ ಉಂಟಾದೀತು.) ಲೌಕಿಕ ಸೊತ್ತು ಸಂಪತ್ತುಗಳಲ್ಲಿ ಹಾಗೂ ಅಧಿಕಾರ-ಅಂತಸ್ತುಗಳಲ್ಲಿ ಮುಂದುವರಿದವರತ್ತ ಎಂದೂ ನೋಡದಿರಿ ಅನ್ಯಥಾ ನಿಮಗೆ ಸಿಕ್ಕಿರುವ ಅನುಗ್ರಹಗಳು ನಿಮ್ಮ ದೃಷ್ಟಿಯಲ್ಲಿ ಅಲ್ಪವೆಂದಾಗಬಹುದು (ಮತ್ತು ನಿಮ್ಮಲ್ಲಿ ದೇವನ ಕೃತಘ್ನತಾಭಾವ ಬೆಳೆದೀತು).

14. ಐಶಾರಾಮದಿಂದ ದೂರವಿರಿ. ಸದಾ ಸನ್ನದ್ಧರಾಗಿರುವ ಮತ್ತು ಸೇವಾ ನಿರತ ನಾಗಿರುವ ಸತ್ಯದ ಸೈನಿಕನಾಗಿರಿ.

ಪ್ರವಾದಿ(ಸ) ಈ ರೀತಿ ಹೇಳಿರುವರು: "ಇಸ್ರಾಫೀಲ್(ಅ) ಸೂರ್(ಪ್ರಳಯ ಕಹಳೆ) ಬಾಯಲ್ಲಿಟ್ಟು ಯಾವಾಗ ಊದಲು ದೇವಾಜ್ಞೆಯಾಗುತ್ತದೆಂದು ಕಿವಿ ನಿಮಿರಿಸಿ ತಲೆಬಾಗಿ ನಿಂತಿರುವಾಗ ನಾನು ಸುಖಾಡಂಬರದ ಜೀವನ ವ್ಯಯಿಸುವುದಾದರೂ ಹೇಗೆ?"

ಪವಿತ್ರ ಕುರ್‌ಆನಿನಲ್ಲಿ ಸತ್ಯವಿಶ್ವಾಸಿಗಳನ್ನುದ್ದೇಶಿಸಿ ಅಲ್ಲಾಹನು ಈ ರೀತಿ ಆದೇಶಿಸಿದ್ದಾನೆ:

وَأَعِدُّوا لَهُم مَّا اسْتَطَعْتُم مِّن قُوَّةٍ وَمِن رِّبَاطِ الْخَيْلِ تُرْهِبُونَ بِهِ عَدُوَّ
اللَّهِ وَعَدُوَّكُمْ وَآخَرِينَ مِن دُونِهِمْ لَا تَعْلَمُونَهُمُ اللَّهُ يَعْلَمُهُمْ ۚ وَمَا تُنفِقُوا
مِن شَيْءٍ فِي سَبِيلِ اللَّهِ يُوَفَّ إِلَيْكُمْ وَأَنتُمْ لَا تُظْلَمُونَ ﴿٦٠﴾

"ನೀವು ನಿಮ್ಮಿಂದ ಸಾಧ್ಯವಾದಷ್ಟು ಹೆಚ್ಚು ಶಕ್ತಿಯನ್ನು ಹಾಗೂ ಸಾಕಿ ಸಿದ್ಧಗೊಳಿಸಿದ ಕುದುರೆಗಳನ್ನು ಅವರೊಡನೆ ಹೋರಾಟ ನಡೆಸಲಿಕ್ಕಾಗಿ ಅಣಿಗೊಳಿಸಿಕೊಳ್ಳಿರಿ. ಇದರ ಮೂಲಕ ಅಲ್ಲಾಹನ ಶತ್ರು, ನಿಮ್ಮ ಶತ್ರು ಮತ್ತು ನಿಮಗೆ ಅರಿವಿಲ್ಲದ ಹಾಗೂ ಅಲ್ಲಾಹನಿಗೆ ಅರಿವಿರುವ ಇತರ ಶತ್ರುಗಳನ್ನು ಭೀತಿಗೊಳಿಸಲಿಕ್ಕಾಗಿ. ಅಲ್ಲಾಹನ ಮಾರ್ಗದಲ್ಲಿ ನೀವು ಏನೆಲ್ಲಾ ಖರ್ಚು ಮಾಡುವಿರೋ ಅದರ ಸರ್ವ ಸಂಪೂರ್ಣ ಪ್ರತಿಫಲವನ್ನು ನಿಮಗೆ ಮರಳಿಸಲಾಗುವುದು ಮತ್ತು ನಿಮ್ಮೊಂದಿಗೆ ಎಷ್ಟು ಮಾತ್ರಕ್ಕೂ ಅನ್ಯಾಯ ಮಾಡಲಾಗದು". **(8:60)**

15. ಧರ್ಮಕ್ಕಾಗಿ ಸರ್ವ ತ್ಯಾಗಕ್ಕೂ ಸದಾ ಸಿದ್ಧರಾಗಿರಿ. ಅವಶ್ಯ ಬಿದ್ದಾಗ ನಿಮ್ಮ

ಪ್ರೀತಿಯ ಸ್ವದೇಶ ತ್ಯಾಗಕ್ಕೂ ಸನ್ನದ್ಧರಾಗಿರಿ. ನಿಮ್ಮಲ್ಲಿ ಈ ತ್ಯಾಗ ಮನೋಭಾವ ಎಷ್ಟರ ಮಟ್ಟಿಗೆ ಬೇರೂರಿದೆ ಎಂಬುದನ್ನು ಸದಾ ಪರೀಕ್ಷಿಸುತ್ತಲಿರಿ. ಪವಿತ್ರ ಕುರ್‌ಆನಿನಲ್ಲಿ ಹ. ಇಬ್ರಾಹೀಮ್‌ರಿಗೆ(ಅ) ಹಿಜ್ರತ್ (ಧರ್ಮಕ್ಕಾಗಿ ದೇಶ ತ್ಯಾಗ)ನ ಆದೇಶ ಹಾಗೂ ಸರ್ವ ರೀತಿಯ ತ್ಯಾಗಕ್ಕೆ ಸಿದ್ಧರಾಗಿರಲು ಈ ವಾಕ್ಯಗಳ ಮೂಲಕ ಆದೇಶಿಸಲಾಗಿದೆ:

وَاذْكُرْ فِى الْكِتٰبِ اِبْرٰهِيْمَ ۬ؕ اِنَّهٗ كَانَ صِدِّيْقًا نَّبِيًّا ﴿۴۱﴾
اِذْ قَالَ لِاَبِيْهِ يٰۤاَبَتِ لِمَ تَعْبُدُ مَا لَا يَسْمَعُ وَلَا يُبْصِرُ وَلَا يُغْنِىْ عَنْكَ شَيْـًٔا ﴿۴۲﴾
يٰۤاَبَتِ اِنِّىْ قَدْ جَآءَنِىْ مِنَ الْعِلْمِ مَا لَمْ يَاْتِكَ فَاتَّبِعْنِىْۤ اَهْدِكَ صِرَاطًا سَوِيًّا ﴿۴۳﴾
يٰۤاَبَتِ لَا تَعْبُدِ الشَّيْطٰنَ ؕ اِنَّ الشَّيْطٰنَ كَانَ لِلرَّحْمٰنِ عَصِيًّا ﴿۴۴﴾ يٰۤاَبَتِ
اِنِّىْۤ اَخَافُ اَنْ يَّمَسَّكَ عَذَابٌ مِّنَ الرَّحْمٰنِ فَتَكُوْنَ لِلشَّيْطٰنِ وَلِيًّا ﴿۴۵﴾ قَالَ
اَرَاغِبٌ اَنْتَ عَنْ اٰلِهَتِىْ يٰۤاِبْرٰهِيْمُ ۚ لَئِنْ لَّمْ تَنْتَهِ لَاَرْجُمَنَّكَ وَاهْجُرْنِىْ مَلِيًّا ﴿۴۶﴾
قَالَ سَلٰمٌ عَلَيْكَ ۚ سَاَسْتَغْفِرُ لَكَ رَبِّىْ ؕ اِنَّهٗ كَانَ بِىْ حَفِيًّا ﴿۴۷﴾ وَاَعْتَزِ
لُكُمْ وَمَا تَدْعُوْنَ مِنْ دُوْنِ اللّٰهِ وَاَدْعُوْا رَبِّىْ ۖ عَسٰٓى اَلَّاۤ اَكُوْنَ بِدُعَآءِ رَبِّىْ
شَقِيًّا ﴿۴۸﴾

"ಮತ್ತು ಈ ಗ್ರಂಥದಲ್ಲಿ ಇಬ್ರಾಹೀಮರ ವೃತ್ತಾಂತದಿಂದ ಪಾಠ ಕಲಿಯಿರಿ. ನಿಸ್ಸಂದೇಹವಾಗಿಯೂ ಅವರೋರ್ವ ಸತ್ಯಸಂಧ ಪ್ರವಾದಿಯಾಗಿದ್ದರು. (ಜನರಿಗೆ ಆ ಸಂದರ್ಭದ ವಿಷಯವನ್ನು ತಿಳಿಸಿ) ಅವರು ತಮ್ಮ ತಂದೆಗೆ ಹೇಳಿದರು: ಅಪ್ಪಾ! ಆಲಿಸ ಲಾರದ, ನೋಡಲಾರದ ಮತ್ತು ತಮ್ಮ ಯಾವೊಂದು ಕೆಲಸಕ್ಕೂ ಬಾರದವುಗಳನ್ನು ತಾವೇಕೆ ಆರಾಧಿಸುತ್ತೀರಿ? ಅಪ್ಪಾ! ತಮಗೆ ಲಭಿಸದ ಒಂದು ಜ್ಞಾನ ನನಗೆ ಲಭಿಸಿದೆ.ಆದ್ದರಿಂದ ನನ್ನನ್ನು ಅನುಸರಿಸಿರಿ. ನಾನು ತಮ್ಮನ್ನು ಸನ್ಮಾರ್ಗದಲ್ಲಿ ನಡೆಸುವೆನು. ಅಪ್ಪಾ! ತಾವು ಶೈತಾನನ ದಾಸ್ಯಾನುಸರಣೆ ಮಾಡದಿರಿ. ಶೈತಾನನಾದರೋ ಪರಮ ದಯಾಮಯ(ನಾದ ಅಲ್ಲಾಹ್)ನ ಮಹಾ ವಿದ್ರೋಹಿ. ಅಪ್ಪಾ! (ತಾವು ಇದೇ ರೀತಿ ವರ್ತಿಸಿದರೆ) ಪರಮ ದಯಾಮಯನ ಯಾತನೆಯು ತಮಗೆ ಬಾಧಿಸುವುದು ಮತ್ತು ತಾವು ಶೈತಾನನ ಸಂಗಾತಿ ಯಾಗಿ ಪರಿಣಮಿಸುವಿರೆಂದು ನಾನು ಭಯಪಡುತ್ತೇನೆ".

ತಂದೆಯವರು ಹೇಳಿದರು- "ಓ ಇಬ್ರಾಹೀಮ್! ನನ್ನ ಆರಾಧ್ಯರನ್ನು ನೀನು ಧಿಕ್ಕರಿಸು ತ್ತೀಯಾ? ನೀನಿದನ್ನು ತೊರೆಯದಿದ್ದರೆ ನಿನ್ನನ್ನು ನಾನು ಕಲ್ಲೆಸೆದು ಕೊಲ್ಲುವೆನು. ನನ್ನ ಬಳಿಯಿಂದ ಶಾಶ್ವತವಾಗಿ ತೊಲಗಿಬಿಡು". ಇಬ್ರಾಹೀಮ್ ಹೇಳಿದರು: "ತಮ್ಮ ಮೇಲೆ ಶಾಂತಿ

ಇರಲಿ! ತಮ್ಮನ್ನು ಕ್ಷಮಿಸಲಿಕ್ಕಾಗಿ ನಾನು ನನ್ನ ಪ್ರಭುವನ್ನು ಪ್ರಾರ್ಥಿಸುವೆನು. ಖಂಡಿತವಾಗಿಯೂ ನನ್ನ ಪ್ರಭು ನನ್ನ ಮೇಲೆ ತುಂಬಾ ಕೃಪೆಯುಳ್ಳವನು. ತಮ್ಮಿಂದಲೂ ತಾವು ಅಲ್ಲಾಹನ ಹೊರತು ಕರೆದು ಪ್ರಾರ್ಥಿಸುವವುಗಳಿಂದಲೂ ನಾನು ವಿಮುಖನಾಗು ತ್ತೇನೆ. ನಾನಂತೂ ನನ್ನ ಪ್ರಭುವನ್ನೇ ಕರೆದು ಪ್ರಾರ್ಥಿಸುವೆನು. ನನ್ನ ಪ್ರಭುವನ್ನು ಕರೆದು ಪ್ರಾರ್ಥಿಸಿದರೆ ನಾನು ನಿರಾಶನಾಗಲಾರೆನೆಂದು ನನಗೆ ನಂಬಿಕೆ ಇದೆ". **(19: 41-48)**

16. ದೇವ ಮಾರ್ಗದಲ್ಲಿ ಹೊರಡುವ ಹಂಬಲ, ತನು ಧನಗಳಿಂದ ಅವನ ಧರ್ಮಕ್ಕಾಗಿ ಹೋರಾಡುವ ಆಸಕ್ತಿ ಮತ್ತು ಆತನ ಮಾರ್ಗದಲ್ಲಿ ಹುತಾತ್ಮನಾಗುವ ಮಹತ್ವಾಕಾಂಕ್ಷೆಯನ್ನು ಬೆಳೆಸಿರಿ. ಧರ್ಮಕ್ಕಾಗಿ ಹೋರಾಡುವುದು ಸತ್ಯವಿಶ್ವಾಸದ ಮಾನದಂಡವಾಗಿದೆ. ಯಾವ ಮನ ದಲ್ಲಿ ಅವರ ಹಂಬಲವಿಲ್ಲವೋ ಅದು ಸತ್ಯವಿಶ್ವಾಸ ಮತ್ತು ಸನ್ಮಾರ್ಗದಿಂದ ವಂಚಿತವಾಗಿ ನಿಸ್ತೇಜವಾದ ಒಂದು ಪಾಳು ಬೀಡಾಗುವುದು. ಧರ್ಮಯುದ್ಧದ ರಂಗಕ್ಕೆ ಪ್ರವೇಶಿಸುವ ಮತ್ತು ದೇವ ಮಾರ್ಗದಲ್ಲಿ ತನು-ಧನಗಳನ್ನು ತ್ಯಾಗ ಮಾಡುವ ಅವಕಾಶ ಲಭಿಸುವುದು ನಿಜಕ್ಕೂ ಒಂದು ದೊಡ್ಡ ಸೌಭಾಗ್ಯ. ಆದರೆ ನಿಮಗೆ ಈ ಅವಕಾಶ ಲಭಿಸುವ ಸಂದರ್ಭ ದೊರೆಯದೆ ಹೋದರೆ ಅಥವಾ ಧರ್ಮಯುದ್ಧಕ್ಕೆ ಹೋಗಿ ನಿಮ್ಮ ವಿಶ್ವಾಸ ದಾರ್ಢ್ಯವನ್ನು ಪ್ರದರ್ಶಿಸುವ ಸಾಧನ ಸಲಕರಣೆಗಳು ಲಭಿಸದೆ ಹೋದರೆ ನಿಮ್ಮ ಮನದಲ್ಲಿ ಯಾರಾದರೂ ದೇವ ಮಾರ್ಗದಲ್ಲಿ ಹೋರಾಡಿ ವೀರ ಮರಣವನ್ನಪ್ಪುವ ಹಂಬಲವಿದ್ದರೆ ಹುತಾತ್ಮರ ಅಥವಾ ಧರ್ಮಯೋಧರ ಕೂಟದಲ್ಲೇ ನಿಮ್ಮನ್ನೂ ಪರಿಗಣಿಸಲಾಗುವುದು. ಏಕೆಂದರೆ ಅಲ್ಲಾಹನು ನೋಡುವುದು ಧರ್ಮಯುದ್ಧಕ್ಕೆ ಹುರಿದುಂಬಿಸುವ ನಿಮ್ಮ ಮನದಿಂಗಿತವನ್ನು. ತಬೂಕ್ ಯುದ್ಧದಿಂದ ಪ್ರವಾದಿ(ಸ) ಮರಳುತ್ತಿರುವಾಗ ಮಾರ್ಗದಲ್ಲೇ ತಮ್ಮ ಸಂಗಾತಿಗಳನ್ನುದ್ದೇಶಿಸಿ ಈ ರೀತಿ ಹೇಳಿದರು: 'ನೀವು ಹೋದ ಕಣಿವೆ ಪರ್ವತಗಳಲ್ಲೆಲ್ಲಾ ನಿಮ್ಮ ಜೊತೆಗಿದ್ದವರು ಕೆಲವರು ಮದೀನಾ ದಲ್ಲಿದ್ದಾರೆ' ಪ್ರವಾದಿವರ್ಯರ(ಸ) ಸಂಗಾತಿಗಳು ಅಚ್ಚರಿಯಿಂದ ವಿಚಾರಿಸಿದರು: ಮದೀನಾ ದಲ್ಲಿದ್ದುಕೊಂಡೆ?' ಪ್ರವಾದಿ(ಸ) ಹೇಳಿದರು: 'ಹೌದು, ಮದೀನಾದಲ್ಲಿದ್ದುಕೊಂಡೇ ಅವರು ನಿಮ್ಮ ಜೊತೆಗಿದ್ದರು. ಏಕೆಂದರೆ ಕೆಲವು ಅನಿವಾರ್ಯ ಅಡಚಣೆಗಳು ಅವರನ್ನು ತಡೆದಿರಿಸಿತ್ತು. ಅನ್ಯಥಾ ಅವರು ಹಿಂದುಳಿಯುವವರಾಗಿರಲಿಲ್ಲ'.

ಈ ಅಭಿಲಾಷೆ ಇದ್ದೂ ಧರ್ಮಯುದ್ಧದಲ್ಲಿ ಭಾಗವಹಿಸಲಾರದ ಮತ್ತು ತಮ್ಮ ಅಸಹಾಯಕತೆಗಾಗಿ ಕಣ್ಣೀರಿಡುತ್ತಿದ್ದ ಜನರನ್ನು ಅಲ್ಲಾಹನು ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಶ್ಲಾಘಿಸಿರುವನು:

وَّلَا عَلَى الَّذِيْنَ اِذَا مَآ اَتَوْكَ لِتَحْمِلَهُمْ قُلْتَ لَآ اَجِدُ مَآ اَحْمِلُكُمْ عَلَيْهِ تَوَلَّوْا وَّاَعْيُنُهُمْ تَفِيْضُ مِنَ الدَّمْعِ حَزَنًا اَلَّا يَجِدُوْا مَا يُنْفِقُوْنَ ﴿٩٢﴾

"(ಸಮರಕ್ಕೆ ಹೊರಡಲು) ಸವಾರಿಯನ್ನು ಕೇಳುತ್ತ ನಿಮ್ಮ ಬಳಿ ಬಂದಾಗ 'ನಿಮಗಾಗಿ ಸವಾರಿಯ ವ್ಯವಸ್ಥೆ ಮಾಡಲು ನಾನು ಅಶಕ್ತನು' ಎಂದು ನೀವು ಉತ್ತರಿಸಿ ಹಿಂತಿರುಗಿಸಿದವರ

ಮೇಲೂ ಏನೂ ಅಪವಾದವಿಲ್ಲ. ಅವರು ಹಿಂತೆರಳುವಾಗ ಧರ್ಮಯುದ್ಧಕ್ಕಾಗಿ ಅವರ ಬಳಿ ಖರ್ಚು ಮಾಡಲು ಏನೂ ಇಲ್ಲವೆಂಬ ದುಃಖದಿಂದ ಕಣ್ಣೀರು ಸುರಿಸುತ್ತಿದ್ದರು". **(9:92)**

ಪ್ರವಾದಿ(ಸ) ಹೀಗೆ ಹೇಳಿರುವರು: "ದೇವ ಮಾರ್ಗದಲ್ಲಿ ಹೋರಾಟ ಮಾಡದೆ ಮತ್ತು ಆ ಬಗ್ಗೆ ಮನದಲ್ಲೂ ಅಭಿಲಾಷೆ ಇರಿಸದೆ ಮಡಿದವನು ಕಪಟವಿಶ್ವಾಸದ ಒಂದು ಸ್ಥಿತಿಯಲ್ಲಿ ಸತ್ತನು". **(ಮುಸ್ಲಿಮ್)**

ವಾಸ್ತವಿಕತೆಯೂ ಇದುವೇ. ದೇವಮಾರ್ಗದಲ್ಲಿ ಹೋರಾಡುವ ಮತ್ತು ತನುಧನಗಳ ಬಲಿದಾನ ನೀಡುವ ಅಭಿಲಾಷೆಯಿಂದ ಮುಕ್ತವಾದ ಹೃದಯ ಓರ್ವ ಸತ್ಯವಿಶ್ವಾಸಿಯ ಹೃದಯವಾಗಿರಲು ಸಾಧ್ಯವೇ ಇಲ್ಲ.

# ಧರ್ಮ ಪ್ರಚಾರದ ಯುಕ್ತಿ

1. ಧರ್ಮ ಪ್ರಚಾರ ಕಾರ್ಯದಲ್ಲಿ ಯುಕ್ತಿ ಮತ್ತು ಅಚ್ಚುಕಟ್ಟನ್ನು ಸದಾ ಗಮನದಲ್ಲಿಡಿರಿ. ಎಲ್ಲ ರೀತಿಯಿಂದಲೂ ಅತ್ಯುತ್ತಮವಾದ ವಿಧಾನವನ್ನೇ ಅನುಸರಿಸಿರಿ. ನಿಮ್ಮ ಕಾರ್ಯ ವಿಧಾನವು ಧ್ಯೇಯಕ್ಕೆ ತಕ್ಕುದಾದ ಮತ್ತು ಅಭಿಸಂಬೋಧಿತನಲ್ಲಿ ಆಸಕ್ತಿ ಮತ್ತು ಲವಲವಿಕೆಯನ್ನುಂಟು ಮಾಡುವಂತಹದ್ದಾಗಿರಬೇಕು.

ಪವಿತ್ರ ಕುರ್‌ಆನ್ ಈ ರೀತಿ ಬೋಧಿಸುತ್ತದೆ:

ٱدْعُ إِلَىٰ سَبِيلِ رَبِّكَ بِٱلْحِكْمَةِ وَٱلْمَوْعِظَةِ ٱلْحَسَنَةِ وَجَٰدِلْهُم بِٱلَّتِى هِىَ أَحْسَنُ

"ನಿನ್ನ ಪ್ರಭುವಿನ ಮಾರ್ಗದತ್ತ ಜನರನ್ನು ಯುಕ್ತಿ ಮತ್ತು ಸದುಪದೇಶದ ಮೂಲಕ ಆಹ್ವಾನಿಸಿರಿ. ಅತ್ಯುತ್ತಮ ವಿಧಾನದಲ್ಲೇ ಅವರೊಂದಿಗೆ ಚರ್ಚೆ ನಡೆಸಿರಿ". (16: 125)

ಪವಿತ್ರ ಕುರ್‌ಆನಿನ ಈ ಸಾರವತ್ತಾದ ಬೋಧನೆಯಿಂದ ಮೂರು ಮೂಲ ಮಾರ್ಗದರ್ಶನಗಳು ಲಭಿಸುತ್ತವೆ:

i) ಧರ್ಮ ಪ್ರಚಾರವು ಯುಕ್ತಿಯುಕ್ತವಾಗಿರಬೇಕು.

ii) ಉಪದೇಶ ಮತ್ತು ಆದೇಶಗಳನ್ನು ಅತ್ಯುತ್ತಮ ರೀತಿಯಲ್ಲಿ ನೀಡಬೇಕು.

iii) ಅತ್ಯುತ್ತಮ ವಿಧಾನದಲ್ಲಿ ಚರ್ಚೆ ನಡೆಸಬೇಕು.

ಧರ್ಮಪ್ರಚಾರ ಕಾರ್ಯವನ್ನು ಯುಕ್ತಿಯುಕ್ತವಾಗಿ ಮಾಡಬೇಕೆಂಬುದರ ತಾತ್ಪರ್ಯವೇನೆಂದರೆ ನಿಮಗೆ ನಾವು ಪ್ರಚಾರ ಮಾಡುವ ಧರ್ಮದ ಪಾವಿತ್ರ್ಯ ಮತ್ತು ಮೇಲ್ಮೆಯ ಪೂರ್ಣ ಪರಿಜ್ಞಾನವಿರಬೇಕು. ಇಷ್ಟು ಅಮೂಲ್ಯವಾದ ಸಂಪತ್ತನ್ನು ನೀವು ಕಂಡ ಕಂಡಲ್ಲಿ ಎಸೆದು ಬಿಡಬಾರದು. ಸಂದರ್ಭ ಮತ್ತು ಪರಿಸ್ಥಿತಿ ಹಾಗೂ ಅಭಿಸಂಬೋಧಿತನನ್ನು ಚೆನ್ನಾಗಿ ಗಮನದಲ್ಲಿಡಬೇಕು. ಅಭಿಸಂಬೋಧಿತನ ವೈಚಾರಿಕ ಸ್ಥಿತಿ, ಸಾಮರ್ಥ್ಯ, ಮಾನಸಿಕ ಪರಿಸ್ಥಿತಿ ಮತ್ತು ಸಾಮಾಜಿಕ ಸ್ಥಾನಮಾನವನ್ನು ಮುಂದಿಟ್ಟುಕೊಂಡೇ ಮಾತಾಡಬೇಕು. ಪರಸ್ಪರ ಐಕಮತ್ಯವಿರುವ ಹಾಗೂ ಪರಸ್ಪರ ಹತ್ತಿರ ತರಬಲ್ಲ ಚಿರಂತನ ಮೌಲ್ಯಗಳ ಬಗ್ಗೆಯೇ ಮೊದಲು ಪ್ರಸ್ತಾಪಿಸಬೇಕು.

ಸದುಪದೇಶವೆಂದರೆ ಕಳಕಳಿ, ಹಿತಚಿಂತನೆ ಮತ್ತು ಪ್ರಾಮಾಣಿಕತೆಯೊಂದಿಗೆ ಉಪದೇಶಿಸುವುದು. ಆತನಲ್ಲಿರುವ ಸದ್ಭಾವನೆಗಳನ್ನು ಬಡಿದೆಬ್ಬಿಸುವುದು, ಆಸಕ್ತಿ ಕೆರಳಿಸುವುದು, ಧರ್ಮವು ಕೇವಲ ಮಾನಸಿಕ ಶಾಂತಿಗೆ ಹೇತುವಾಗದೆ ಆತನ ಹೃದಯದ ಮಿಡಿತ, ಆತ್ಮದ ಆಹಾರ ಮತ್ತು ಭಾವನೆಗಳ ತೃಪ್ತಿಯ ಮಾಧ್ಯಮವಾಗಿ ಮಾರ್ಪಡುವಂತಾಗಬೇಕು.

ವಿಮರ್ಶೆ ಮತ್ತು ಚರ್ಚೆಯಲ್ಲಿ ಅತ್ಯುತ್ತಮ ವಿಧಾನ ಅನುಸರಿಸುವುದೆಂದರೆ ನಿಮ್ಮ ವಿಮರ್ಶೆಯು ಸದಾ ರಚನಾತ್ಮಕವಾಗಿರಬೇಕು. ಅದರಲ್ಲಿ ಕಳಕಳಿ ಮತ್ತು ಪ್ರಾಮಾಣಿಕತೆ ತುಂಬಿ ತುಳುಕಬೇಕು. ಅಭಿಸಂಬೋಧಿತನಲ್ಲಿ ಹಟ, ದ್ವೇಷ, ಮತ್ತು ಅಜ್ಞಾನಜನ್ಯ ಪಕ್ಷಪಾತ ಉಂಟಾ ಗಲು ಅವಕಾಶ ಮಾಡಿಕೊಡಬೇಡಿರಿ. ಸರಳ ಶೈಲಿಯಲ್ಲಿ ಮನಮುಟ್ಟುವಂತೆ ಮಾತಾಡಿರಿ. ಆತ ನನ್ನು ಚಿಂತನೆಗೆ ನಿರ್ಬಂಧಿಸುವ ಹಾಗೂ ಸತ್ಯಾನ್ವೇಷಣೆಯ ವಾಂಛೆ ಹುಟ್ಟಿಸುವ ಶೈಲಿಯನ್ನೇ ಚರ್ಚೆ ಮತ್ತು ವಿಮರ್ಶೆಯ ವೇಳೆ ಅನುಸರಿಸಬೇಕು. ಇದಕ್ಕಿಂತ ಭಿನ್ನವಾದ ಪರಿಸ್ಥಿತಿ ಉಂಟಾ ದಾಗ ನಿಮ್ಮ ನಾಲಗೆಯನ್ನು ಬಿಗಿ ಹಿಡಿದು ಅಲ್ಲಿಂದ ನಿರ್ಗಮಿಸುವುದೇ ಉತ್ತಮ.

2. ಎಲ್ಲ ಸಂದರ್ಭಗಳಲ್ಲೂ ಸಂಪೂರ್ಣ ಧರ್ಮದ ಆಹ್ವಾನ ನೀಡಿರಿ. ನಿಮಗನಿಸಿದಂತೆ ಅದರಲ್ಲಿ ಹೆಚ್ಚು ಕಡಿಮೆ ಮಾಡದಿರಿ. ತನಗನಿಸಿದಂತೆ ಧರ್ಮದ ಕೆಲವು ಭಾಗಗಳನ್ನು ಮಾತ್ರ ಮುಂದಿಟ್ಟು ಉಳಿದವುಗಳನ್ನು ಬಚ್ಚಿಡುವ ಹಕ್ಕು ಇಸ್ಲಾಮೀ ಪ್ರಚಾರಕನಿಗೆ ಖಂಡಿತ ಇಲ್ಲ.

وَإِذَا تُتْلَىٰ عَلَيْهِمْ آيَاتُنَا بَيِّنَاتٍ ۙ قَالَ الَّذِينَ لَا يَرْجُونَ لِقَاءَنَا ائْتِ بِقُرْآنٍ غَيْرِ هَٰذَا أَوْ بَدِّلْهُ ۚ قُلْ مَا يَكُونُ لِي أَنْ أُبَدِّلَهُ مِنْ تِلْقَاءِ نَفْسِي ۖ إِنْ أَتَّبِعُ إِلَّا مَا يُوحَىٰ إِلَيَّ ۖ إِنِّي أَخَافُ إِنْ عَصَيْتُ رَبِّي عَذَابَ يَوْمٍ عَظِيمٍ ﴿١٥﴾ قُلْ لَوْ شَاءَ اللَّهُ مَا تَلَوْتُهُ عَلَيْكُمْ وَلَا أَدْرَاكُمْ بِهِ ۖ فَقَدْ لَبِثْتُ فِيكُمْ عُمُرًا مِنْ قَبْلِهِ ۚ أَفَلَا تَعْقِلُونَ ﴿١٦﴾ فَمَنْ أَظْلَمُ مِمَّنِ افْتَرَىٰ عَلَى اللَّهِ كَذِبًا أَوْ كَذَّبَ بِآيَاتِهِ ۚ إِنَّهُ لَا يُفْلِحُ الْمُجْرِمُونَ ﴿١٧﴾

"ನಮ್ಮ ಸುವ್ಯಕ್ತ ವಚನಗಳನ್ನು ಅವರಿಗೆ ತಿಳಿಯ ಹೇಳಿದಾಗ ನಮ್ಮನ್ನು ಭೇಟಿ ಯಾಗುವ ಪ್ರತೀಕ್ಷೆಯನ್ನಿರಿಸದವರು, 'ಇದರ ಬದಲಿಗೆ ಇನ್ನೊಂದು ಕುರ್‌ಆನನ್ನು ತನ್ನಿರಿ, ಇಲ್ಲವೆ ಇದರಲ್ಲಿ ಸ್ವಲ್ಪ ತಿದ್ದುಪಡಿ ಮಾಡಿರಿ' ಎಂದು ಹೇಳುತ್ತಾರೆ, ಓ ಪೈಗಂಬರರೇ, ಅವರೊಡನೆ (ಹೀಗೆ) ಹೇಳಿರಿ- 'ನನ್ನ ಕಡೆಯಿಂದ ಇದರಲ್ಲೇನಾದರೂ ಮಾರ್ಪಾಟು ಮಾಡುವುದು ನನ್ನ ಕೆಲಸವಲ್ಲ. ನಾನಂತು ನನಗೆ ಕಳುಹಿಸಲ್ಪಡುವ 'ದಿವ್ಯವಾಣಿ'ಯನ್ನು ಅನುಸರಿಸುವವನಾಗಿರುತ್ತೇನೆ. ನಾನು ನನ್ನ ಪ್ರಭುವಿನ ಆಜ್ಞೋಲ್ಲಂಘನೆ ಮಾಡಿದರೆ ನನಗೆ ಒಂದು ಭಯಾನಕ ಯಾತನೆಯ ಭಯವಿದೆ' ಮತ್ತು ಹೇಳಿರಿ- 'ಅಲ್ಲಾಹನ ವಿಧಿ ನಿಯಮವು ಇದೇ ಆಗಿರುತ್ತಿದ್ದರೆ ನಾನು ನಿಮಗೆ ಈ ಕುರ್‌ಆನನ್ನು ಎಂದಿಗೂ ತಿಳಿಯ ಹೇಳುತ್ತಿರಲಿಲ್ಲ ಮತ್ತು ಅಲ್ಲಾಹ್ ನಿಮಗೆ ಇದರ

ವರ್ತಮಾನವನ್ನೂ ಕೊಡುತ್ತಿರಲಿಲ್ಲ. ನಾನು ಇದಕ್ಕೆ ಮುಂಚೆ ನಿಮ್ಮ ನಡುವೆ ಕೆಲವು ಕಾಲ ಕಳೆದಿರುವೆನಷ್ಟೆ. ನೀವೇನು ವಿವೇಚಿಸುವುದಿಲ್ಲವೇ? ಸುಳ್ಳೊಂದನ್ನು ಸೃಷ್ಟಿಸಿ ಅಲ್ಲಾಹನ ಮೇಲೆ ಹೊರಿಸುವವನಿಗಿಂತ ಅಥವಾ ನಿಜವಾದ ವಚನ ಗಳನ್ನು ಸುಳ್ಳೆಂದು ಹೇಳುವವನಿಗಿಂತ ದೊಡ್ಡ ಅಕ್ರಮಿ ಇನ್ನಾರಿರಬಹುದು? ನಿಶ್ಚಯವಾಗಿಯೂ ಅಪರಾಧಿಗಳು ಎಂದೂ ವಿಜಯಿ ಗಳಾಗಲಾರರು". **(10:15-17)**

ಪರಿಸ್ಥಿತಿ ಎಷ್ಟೇ ಪ್ರತಿಕೂಲವಾಗಿದ್ದರೂ ಸತ್ಯ ಪ್ರಚಾರಕನು ಧರ್ಮವನ್ನು ಅದರ ನೈಜ ಮತ್ತು ಪರಿಪೂರ್ಣ ರೂಪದಲ್ಲಿ ಪ್ರಸ್ತುತ ಪಡಿಸಬೇಕು. ಧರ್ಮದಲ್ಲಿ ಯಾವುದೇ ಮಾರ್ಪಾಟು ಮಾಡಬಾರದು. ಪರಿಸ್ಥಿತಿಗೆ ತಕ್ಕಂತೆ ತನ್ನ ಅನಿಸಿಕೆ ಪ್ರಕಾರ ಅದರಲ್ಲಿ ತಿದ್ದುಪಡಿ ಮಾಡ ಬಾರದು. ಇದು ಅತಿದೊಡ್ಡ ಅಕ್ರಮವಾಗಿದೆ. ಇಂಥವರ ಇಹ-ಪರಗಳೆರಡೂ ನಾಶವಾಗುತ್ತದೆ. ಅನಾದಿಯಿಂದ ಅನಂತದ ತನಕ ಸರ್ವ ವಿಷಯಗಳ ನಿಖರ ಜ್ಞಾನವುಳ್ಳ ಮತ್ತು ಸಂಪೂರ್ಣ ವಿಶ್ವದ ಸರ್ವಜ್ಞನಾದ ಅಲ್ಲಾಹನಿಂದ ಅವತೀರ್ಣಗೊಂಡ ಧರ್ಮವೇ ಇಸ್ಲಾಮ್. ಅವನ ದೃಷ್ಟಿಯು ಎಲ್ಲ ಕುಂದು ಕೊರತೆಗಳಿಂದಲೂ ಪಾವನವಾಗಿದೆ. ಮನುಷ್ಯ ಜೀವನದ ಆದಿ ಮತ್ತು ಅಂತ್ಯವನ್ನು ಆತನು ಚೆನ್ನಾಗಿ ಬಲ್ಲನು. ಆತನ ಅಭೀಷ್ಟದಂತೆಯೇ ಮನುಷ್ಯ ಜ್ಞಾನ ದಲ್ಲಿ ದೈನಂದಿನ ಅತ್ಯದ್ಭುತ ಪ್ರಗತಿ ಆಗುತ್ತಿದೆ. ಮನುಷ್ಯ ಜೀವನದಲ್ಲಿ ಅಸಾಮಾನ್ಯ ಪುರೋ ಗಮನ ಆಗುತ್ತಿದೆ. ಪ್ರವಾದಿ ಮುಹಮ್ಮದ್(ಸ) ಓರ್ವ ಆದರ್ಶ ಅನುಸರಣಶೀಲ ರಂತೆ ಈ ಧರ್ಮದ ಆದೇಶವನ್ನು ಪಾಲಿಸುತ್ತಿದ್ದರು ಮತ್ತು ಅದಕ್ಕೆ ವ್ಯತಿರಿಕ್ತವಾಗಿ ನಡೆಯು ವುದರ ಬಗ್ಗೆ ಯೋಚಿಸುವಾಗಲೇ ಕಂಪಿಸುತ್ತಿದ್ದರು. ಹೀಗಿರುತ್ತಾ ಇನ್ನಾವನೂ ಆ ಧರ್ಮ ದಲ್ಲಿ ಹೆಚ್ಚು ಕಡಿಮೆ ಮಾಡುವ ಆಸ್ಪದವೇ ಉಳಿದಿರುವುದೆಲ್ಲಿ?

3. ಅಸಹಜವಾದ ಭಾರವೆಂದು ಭಾಸವಾಗದಂತೆ ಜನರಿಗೆ ಧರ್ಮವನ್ನು ಯುಕ್ತಿಯುತವಾದ ಸಹಜ ಶೈಲಿಯಲ್ಲೇ ಬೋಧಿಸಿರಿ. ತಿರಸ್ಕರಿಸುವ ಅಥವಾ ದ್ವೇಷಿಸುವ ಬದಲು ಸ್ವೀಕರಿಸುವುದರಲ್ಲೇ ತಮ್ಮ ಶಾಂತಿ ನೆಮ್ಮದಿ ಅಡಕವಾಗಿದೆ ಎಂದು ಜನರಿಗೆ ಭಾಸವಾಗು ವಂತೆ ಬೋಧಿಸಿರಿ. ನಿಮ್ಮ ಮೃದುವಾದ, ಸಿಹಿಯಾದ, ಯುಕ್ತಿಯುಕ್ತವಾದ ಪ್ರಚಾರ ಶೈಲಿ ಯಿಂದ ಜನರು ಧರ್ಮ ದತ್ತ ಆಕರ್ಷಿತರಾಗುವಂತೆ ಮಾಡಿರಿ. ಹ. ಮುಆವಿಯಾ ಬಿನ್ ಹಕಮ್(ರ) ಹೇಳುತ್ತಾರೆ: "ಒಮ್ಮೆ ನಾನು ಪ್ರವಾದಿವರ್ಯರ(ಸ) ಜೊತೆ ನಮಾಝ್ ಮಾಡುತ್ತಿದ್ದೆ. ಒಬ್ಬನಿಗೆ ಸೀನು ಬಂತು. ನಾನು ನಮಾಝ್‌ನಲ್ಲಿದ್ದುಕೊಂಡೇ 'ಯರ್ಹಮುಕಲ್ಲಾಹ್' (ಅಲ್ಲಾಹನು ನಿನ್ನ ಮೇಲೆ ಕರುಣೆ ತೋರಲಿ) ಎಂದು ಹೇಳಿದೆ. ಜನರು ನನ್ನನ್ನು ದಿಟ್ಟಿಸ ತೊಡಗಿದರು. 'ನನ್ನನ್ನು ಏಕೆ ಈ ರೀತಿ ದಿಟ್ಟಿಸುತ್ತೀರಿ?' ಎಂದು ನಾನು ಕೇಳಿದೆ. ಜನರು ನನಗೆ ಸುಮ್ಮನಿರುವಂತೆ ಸಂಜ್ಞೆ ಮಾಡಿದರು. ನಾನು ಸುಮ್ಮನಾದೆ. ನಮಾಝ್ ಮುಗಿಸಿದ ಮೇಲೆ ಪ್ರವಾದಿ(ಸ) ನನ್ನನ್ನು ಹೊಡೆಯಲೂ ಇಲ್ಲ. ಜರೆಯಲೂ ಇಲ್ಲ. ಕೇವಲ 'ನೋಡು, ನಮಾಝ್‌ನಲ್ಲಿ ಮಾತಾಡುವುದು ಸರಿಯಲ್ಲ. ದೇವನ ಸ್ತುತಿಸ್ತೋತ್ರ ಗಳನ್ನು ಮಾಡುವುದು. ಅವನ ಮೇಲ್ಮೆಯನ್ನು ವಿವರಿಸುವುದು ಮತ್ತು ಕುರ್‌ಆನ್ ಪಠಿಸುವುದೇ

ನಮಾರ್ಝ್ ಆಗಿದೆ' ಎಂದು ಹೇಳಿದರು. ಪ್ರವಾದಿವರ್ಯರಷ್ಟು(ಸ) ಉತ್ತಮವಾಗಿ ತರಬೇತಿ ಮಾಡುವವರನ್ನು ನಾನೆಂದೂ ಕಂಡಿಲ್ಲ".

4. ನಿಮ್ಮ ಬರಹ, ಭಾಷಣ ಮತ್ತು ಸಂಭಾಷಣೆಗಳಲ್ಲಿ ಓದುಗರು ಅಥವಾ ಕೇಳುಗರಲ್ಲಿ ಆಶೆ ಮತ್ತು ಭಯ ಎರಡೂ ಭಾವನೆಗಳು ಹುಟ್ಟುವಂತೆ ಸಮತೋಲನವನ್ನು ಕಾಪಾಡಿರಿ. ಜನರು ದೇವನ ದಯೆಯಿಂದ ನಿರಾಶರಾಗುವಷ್ಟು ಹಾಗೂ ಅವರು ತಮ್ಮ ಸುಧಾರಣೆ ಮತ್ತು ಮೋಕ್ಷ ಅಸಾಧ್ಯವೆಂದು ಭಾವಿಸುವಷ್ಟು ದೇವಭಯವನ್ನು ಅತಿಶಯ ರೂಪದಲ್ಲಿ ಹುಟ್ಟಿಸದಿರಿ. ಅಂತೆಯೇ ಜನರು ಸರ್ವತಂತ್ರ ಸ್ವತಂತ್ರರೂ ಸ್ವಚ್ಛಂದರೂ ಆಗಿ ಬಿಡುವಷ್ಟು ದೇವನ ದಯೆ ಮತ್ತು ಕರುಣೆಯ ಆಶೆಯನ್ನು ಅವರಲ್ಲಿ ಹುಟ್ಟಿಸದಿರಿ. ಅನ್ಯಥಾ ಅವರು ದೇವನ ಅಪಾರ ಕರುಣೆಯ ರಕ್ಷೆ ಪಡೆದು ಆತನ ಆಜ್ಞೋಲ್ಲಂಘನೆಗೆ ಇಳಿಯುವರು.

ಹ. ಅಲೀ(ರ) ಹೇಳುತ್ತಾರೆ: 'ದೇವನ ಬಗ್ಗೆ ಜನರನ್ನು ನಿರಾಶೆಗೊಳಿಸದ, ದೇವಾಜ್ಞೋಲ್ಲಂಘನೆಗೆ ಅವರನ್ನು ಪ್ರೇರೇಪಿಸದ ಹಾಗೂ ದೇವ ಶಿಕ್ಷೆಯಿಂದ ಅವರನ್ನು ನಿರ್ಭೀತಗೊಳಿಸದವನೇ ಅತ್ಯುತ್ತಮ ವಿದ್ವಾಂಸ'.

5. ಧರ್ಮ ಪ್ರಚಾರ ಕಾರ್ಯವನ್ನು ನಿತ್ಯವೂ ನಿರಂತರವೂ ಮಾಡುತ್ತಿರಿ. ಹಾಕಿಕೊಂಡ ಕಾರ್ಯಕ್ರಮವನ್ನು ದೃಢಚಿತ್ತತೆ ಮತ್ತು ಜವಾಬ್ದಾರಿಕೆಯೊಂದಿಗೆ ಕಾರ್ಯರೂಪಕ್ಕೆ ತರಲು ಪ್ರಯತ್ನಿಸಿರಿ. ಹಾಕಿಕೊಂಡ ಕಾರ್ಯಕ್ರಮವನ್ನು ಅರ್ಧದಲ್ಲೇ ಬಿಟ್ಟು ಹೊಸ ಹೊಸ ಕಾರ್ಯಕ್ರಮವನ್ನು ಹಾಕಿಕೊಳ್ಳುವ ಹವ್ಯಾಸ ಬೆಳೆಸದಿರಿ. ಕೆಲಸ ಸ್ವಲ್ಪವೇ ಆದರೂ ನಿರಂತರ ಮಾಡುತ್ತಲಿರಿ. ಪ್ರವಾದಿ(ಸ) ಈ ರೀತಿ ಹೇಳಿರುವರು: 'ನಿರಂತರ ಮಾಡುತ್ತಿರುವಂತಹದ್ದೇ ಅತ್ಯುತ್ತಮ ಕಾರ್ಯ, ಅದೆಷ್ಟೇ ಕಡಿಮೆಯಾದರೂ ಸರಿಯೇ'.

6. ಧರ್ಮ ಪ್ರಚಾರ ಮಾರ್ಗದಲ್ಲಿ ಬರಬಹುದಾದ ಅಡ್ಡಿ-ಆತಂಕ, ಕಷ್ಟ-ಕಾರ್ಪಣ್ಯ ಮತ್ತು ಪರೀಕ್ಷೆಗಳನ್ನು ಸಸಂತೋಷ ಸ್ವೀಕರಿಸಿರಿ. ಸದಾ ಸಂಯಮ ಮತ್ತು ದೃಢಚಿತ್ತತೆಯನ್ನು ಪ್ರದರ್ಶಿಸಿರಿ. ಪವಿತ್ರ ಕುರ್‌ಆನ್ ಆ ರೀತಿ ಆದೇಶಿಸಿದೆ:

وَأْمُرْ بِالْمَعْرُوفِ وَانْهَ عَنِ الْمُنْكَرِ وَاصْبِرْ عَلَىٰ مَا أَصَابَكَ

"ಒಳಿತನ್ನು ಆಜ್ಞಾಪಿಸು, ಕೆಡುಕಿನಿಂದ ತಡೆ ಹಾಗೂ ಈ ಮಾರ್ಗದಲ್ಲಿ ಬರುವ ಸಂಕಷ್ಟಗಳನ್ನು ದೃಢಚಿತ್ತತೆಯಿಂದ ಸಹಿಸುತ್ತಿರು". **(31:17)**

ಸತ್ಯಮಾರ್ಗದಲ್ಲಿ ಸಂಕಷ್ಟಗಳು ಬರುವುದು ಸಹಜ. ಪರೀಕ್ಷಾ ಘಟ್ಟಗಳ ಮೂಲಕ ಸಾಗಿಯೇ ಸತ್ಯವಿಶ್ವಾಸದಲ್ಲಿ ದೃಢಚಿತ್ತತೆ ಬರುತ್ತದೆ. ನೀತಿ ನಡವಳಿಕೆಗಳಲ್ಲಿ ದೃಢತೆ ಬರುತ್ತದೆ. ಆದ್ದರಿಂದಲೇ ಸತ್ಯವಿಶ್ವಾಸದ ಘೋಷಣೆ ಮಾಡುವವರನ್ನು ಅಲ್ಲಾಹನು ಪರೀಕ್ಷಿಸುತ್ತಾನೆ. ಯಾರು ಸತ್ಯವಿಶ್ವಾಸದಲ್ಲಿ ಎಷ್ಟು ದೃಢಚಿತ್ತನಾಗಿರುವನೋ ಅವನಿಗೆ ಅಷ್ಟೇ ಕಠಿಣವಾದ ಪರೀಕ್ಷೆಯೂ ಬರುತ್ತದೆ. ಅಲ್ಲಾಹನು ಈ ರೀತಿ ಹೇಳಿರುವನು:

وَلَنَبْلُوَنَّكُمْ بِشَيْءٍ مِّنَ الْخَوْفِ وَالْجُوعِ وَنَقْصٍ مِّنَ الْأَمْوَالِ وَالْأَنفُسِ وَالثَّمَرَاتِ ۗ

وَبَشِّرِ الصَّابِرِينَ ﴿١٥٥﴾ الَّذِينَ إِذَا أَصَابَتْهُم مُّصِيبَةٌ قَالُوا إِنَّا لِلَّهِ وَإِنَّا إِلَيْهِ رَاجِعُونَ ﴿١٥٦﴾

أُولَٰئِكَ عَلَيْهِمْ صَلَوَاتٌ مِّن رَّبِّهِمْ وَرَحْمَةٌ ۖ وَأُولَٰئِكَ هُمُ الْمُهْتَدُونَ ﴿١٥٧﴾

"ಖಂಡಿತವಾಗಿಯೂ ನಾವು ನಿಮ್ಮನ್ನು ಭಯ, ಹಸಿವು, ಸೊತ್ತು ಪ್ರಾಣಗಳ ನಷ್ಟ ಮತ್ತು ಸಂಪಾದನೆಯ ನಷ್ಟಗಳಿಗೊಳಪಡಿಸಿ ಪರೀಕ್ಷಿಸುವೆವು. ಈ ಪರಿಸ್ಥಿತಿಗಳಲ್ಲಿ ಯಾರು ಸಹನೆ ಕೈಗೊಳ್ಳುವರೋ ಮತ್ತು ಸಂಕಷ್ಟ ಬಂದಾಗ 'ನಾವು ಅಲ್ಲಾಹನವರು ಮತ್ತು ಆತನೆಡೆಗೇ ಮರಳುವವರು' ಎಂದು ಹೇಳುವರೋ ಅವರಿಗೆ ಸುವಾರ್ತೆ ಕೊಡಿರಿ. ಅವರ ಮೇಲೆ ಅವರ ಪ್ರಭುವಿನ ವತಿಯಿಂದ ಅನುಗ್ರಹಗಳಿವೆ ಮತ್ತು ಅವನ ಕರುಣೆ (ಅವರಿಗೆ ನೆರವಾಗುವುದು.) ಇಂಥವರೇ ಸನ್ಮಾರ್ಗಗಾಮಿಗಳು". (ಪವಿತ್ರ ಕುರ್‌ಆನ್, 2:155-157)

ಒಮ್ಮೆ ಹ. ಸಅದ್(ರ) ಪ್ರವಾದಿವರ್ಯರಲ್ಲಿ(ಸ) ಅತ್ಯಂತ ಕಠಿಣ ಪರೀಕ್ಷೆ ಯಾರಿಗೆ ಬರುವುದು ಎಂದು ವಿಚಾರಿಸಿದರು: ಪ್ರವಾದಿ(ಸ) ಹೇಳಿದರು. "ಅಲ್ಲಾಹನ ಪ್ರವಾದಿಗಳಿಗೆ ಹಾಗೂ ಧರ್ಮ ಮತ್ತು ವಿಶ್ವಾಸದಲ್ಲಿ ಅವರಿಗೆ ಅತ್ಯಂತ ನಿಕಟವಿರುವವರಿಗೆ, ತರುವಾಯ ಅವರಿಗೆ ನಿಕಟವಿರುವವರಿಗೆ. ಮನುಷ್ಯನ ಪರೀಕ್ಷೆಯು ಅವನ ಧರ್ಮಕ್ಕನುಸಾರವಾಗಿರುತ್ತದೆ. ಆದ್ದರಿಂದ ಯಾವನು ಧರ್ಮದಲ್ಲಿ ಎಷ್ಟು ದೃಢಚಿತ್ತನಾಗಿರುವನೋ ಅವನ ಪರೀಕ್ಷೆಯೂ ಅಷ್ಟೇ ಕಠಿಣವಾಗಿರುವುದು. ಧರ್ಮದಲ್ಲಿ ಬಲಹೀನನಾದವನ ಪರೀಕ್ಷೆಯು ಸಾಮಾನ್ಯವಾಗಿರುತ್ತದೆ. ಪರೀಕ್ಷೆಯು ಅವನು ನಿರ್ದೋಷಿಯಾಗಿ ಭೂಮಿಯ ಮೇಲೆ ಸಂಚರಿಸುವ ತನಕ ನಡೆಯುತ್ತಲೇ ಇರುತ್ತದೆ". (ಮಿಷ್ಕಾತ್)

ಪ್ರವಾದಿ(ಸ) ತಮ್ಮ ಪರಿಸ್ಥಿತಿಯನ್ನು ವಿವರಿಸುತ್ತಾ ಈ ರೀತಿ ಹೇಳಿರುವರು: ಈ ತನಕ ಯಾವ ಮನುಷ್ಯನೂ ಪೀಡಿಸಲ್ಪಡದಷ್ಟು ನಾನು ದೇವಮಾರ್ಗದಲ್ಲಿ ಪೀಡಿಸಲ್ಪಟ್ಟಿರುವೆನು. ಈ ತನಕ ಯಾವ ಮನುಷ್ಯನೂ ಬೆದರಿಸಲ್ಪಡದಷ್ಟು ನಾನು ದೇವ ಮಾರ್ಗದಲ್ಲಿ ಬೆದರಿಸಲ್ಪಟ್ಟಿರುವೆನು. ಮೂವತ್ತು ದಿನ ರಾತ್ರೆಗಳನ್ನು ನಾನು ಬಹಳ ಸಂಕಷ್ಟದಲ್ಲಿ ಕಳೆದಿರುವೆನು. ಎಷ್ಟರವರೆಗೆಂದರೆ ಬಿಲಾಲ್‌ರ(ರ) ಬಳಿ ಇದ್ದ ಸಂಕ್ಷಿಪ್ತ ಬುತ್ತಿಯ ಹೊರತು ಜೀವಿಗಳು ತಿನ್ನುವ ಯಾವ ವಸ್ತುವೂ ನನ್ನ ಮತ್ತು ಬಿಲಾಲರ(ರ) ಬಳಿ ಇರಲಿಲ್ಲ". (ತಿರ್ಮಿದಿ)

ಪ್ರವಾದಿ(ಸ) ಹೀಗೂ ಹೇಳಿರುವರು: "ಯಾವನು ಸಹನೆ ಕೈಗೊಳ್ಳುವ ಪ್ರಯತ್ನ ಮಾಡುವನೋ ದೇವನು ಅವನಿಗೆ ಸಹನಾ ಶಕ್ತಿಯನ್ನು ದಯಪಾಲಿಸುವನು. ಸಹನೆಗಿಂತ ಮಿಗಿಲಾದ ಮತ್ತು ಅನೇಕ ಒಳಿತುಗಳ ಸಾರ ಸಂಗ್ರಹವಾದ ಕೊಡುಗೆ ಬೇರೊಂದಿಲ್ಲ". (ಬುಖಾರಿ, ಮುಸ್ಲಿಮ್)

ವಾಸ್ತವದಲ್ಲಿ ಪರೀಕ್ಷಾ ಘಟ್ಟಗಳು ಆಂದೋಲನವನ್ನು ಶಕ್ತಿಯುತಗೊಳಿಸುವ ಮತ್ತು ಮುನ್ನಡೆಸುವ ಅನಿವಾರ್ಯ ಪ್ರೇರಕಗಳಾಗಿವೆ. ಯಾವ ಆಂದೋಲನವೂ ಪರೀಕ್ಷಾ ಘಟ್ಟ

ಗಳನ್ನು ದಾಟದೆ ಜಯಶೀಲವಾಗಲಾರದು. ಮಾನವಕುಲದಲ್ಲಿ ಒಂದು ಸಮಗ್ರ ಕ್ರಾಂತಿ ಮತ್ತು ಸಂಪೂರ್ಣ ಮಾನವ ಜೀವನವನ್ನು ಹೊಸ ಬುನಾದಿಗಳ ಮೇಲೆ ನಿರ್ಮಾಣ ಮಾಡುವ ಯೋಜನೆ ಇಟ್ಟುಕೊಂಡಿರುವ ಒಂದು ಆಂದೋಲನಕ್ಕೆ ಇದು ವಿಶೇಷವಾಗಿ ಅನ್ವಯವಾಗುತ್ತದೆ.

ಮಕ್ಕಾದ ಕಠಿಣ ಹೃದಯಿಗಳಾದ ನಿವಾಸಿಗಳು ಪ್ರವಾದಿ(ಸ) ಮತ್ತವರ ಅನುಯಾಯಿಗಳ ಮೇಲೆ ಅನನ್ಯ ದೌರ್ಜನ್ಯಗಳನ್ನೆಸಗುತ್ತಿದ್ದಾಗ ನಡೆದ ಒಂದು ಘಟನೆಯನ್ನು ಖಬ್ಬಾಬ್ ಬಿನ್ ಅರತ್(ರ) ಈ ರೀತಿ ವಿವರಿಸಿದ್ದಾರೆ:

"ಪ್ರವಾದಿ(ಸ) ಕಅಬಾದ ನೆರಳಲ್ಲಿ ಚದ್ದರವನ್ನು ತಲೆದಿಂಬು ಮಾಡಿಟ್ಟು ವಿಶ್ರಮಿಸುತ್ತಿದ್ದರು. ನಾವು ಅವರ ಬಳಿ ಒಂದು ದೂರು ಒಯ್ದೆವು. 'ಓ ಪ್ರವಾದಿವರ್ಯರೇ! ತಾವು ನಮಗಾಗಿ ದೇವನಿಂದ ಸಹಾಯ ಯಾಚಿಸುವುದಿಲ್ಲವೇ? ಈ ದೌರ್ಜನ್ಯಗಳ ಅಂತ್ಯಕ್ಕಾಗಿ ಪ್ರಾರ್ಥಿಸುವುದಿಲ್ಲವೇ? (ಅದೆಷ್ಟು ಕಾಲ ಇದು ಮುಂದುವರಿದೀತು ಮತ್ತು ಎಂದು ಇದು ಕೊನೆಗೊಂಡೀತು) ಇದನ್ನು ಕೇಳಿ ಪ್ರವಾದಿ(ಸ) ಹೀಗೆಂದರು: 'ನಿಮಗಿಂತ ಮುಂಚೆ ಗತಿಸಿ ಹೋದ ಜನರ ಪೈಕಿ ಕೆಲವರಿಗೆ ಹೊಂಡ ಹುಗಿಯಲಾಗುತ್ತಿತ್ತು. ತರುವಾಯ ಅವರನ್ನು ಆ ಹೊಂಡದಲ್ಲಿ ನಿಲ್ಲಿಸಿ ಗರಗಸದಿಂದ ಅವರ ದೇಹವನ್ನು ಸೀಳಲಾಗುತ್ತಿತ್ತು. ಈ ರೀತಿ ಅವರ ದೇಹವನ್ನು ಎರಡು ತುಂಡಾಗಿಸಲಾಗುತ್ತಿತ್ತು. ಆದರೂ ಅವರು ತಮ್ಮ ಧರ್ಮದಿಂದ ವಿಮುಖರಾಗುತ್ತಿರಲಿಲ್ಲ. ಅವರ ದೇಹಕ್ಕೆ ಕಬ್ಬಿಣದ ಬಾಚಣಿಗೆಯನ್ನು ಚುಚ್ಚಲಾಗುತ್ತಿತ್ತು. ಅದು ಮಾಂಸವನ್ನು ಪರಚಿ ಎಲುಬುಗಳನ್ನೂ ನಾರುಗಳನ್ನೂ ತಲುಪುತ್ತಿತ್ತು. ಆದರೂ ಆ ದೇವಭಕ್ತದಾಸರು ಸತ್ಯದಿಂದ ವಿಮುಖರಾಗುತ್ತಿರಲಿಲ್ಲ. ಅಲ್ಲಾಹನಾಣೆ! ಈ ಧರ್ಮವು ಉತ್ತುಂಗವಾಗಿಯೇ ತೀರುವುದು. ಎಷ್ಟರವರೆಗೆಂದರೆ ಒಬ್ಬ ಯಾತ್ರಿಕ ಸನ್‌ಅ(ಯಮನ್‌ನ ರಾಜಧಾನಿ)ದಿಂದ ಹರ್ಝುರ್‌ಮೌತ್‌ವರೆಗಿನ ದಾರಿಯನ್ನು ದೇವನ ಹೊರತು ಯಾರ ಭಯವೂ ಇಲ್ಲದೆ ದಾಟುವನು. ಮೇಕೆಯವನಿಗೆ ತೋಳದ ಭಯ ಮಾತ್ರವಿದ್ದೀತು. ಆದರೆ ನೀವು ಅದಕ್ಕಾಗಿ ಅವಸರ ಪಡುತ್ತಿರುವುದು ವಿಷಾದನೀಯವಾಗಿದೆ". (ಬುಖಾರಿ)

ಹ. ಮುಆವಿಯಾ(ರ) ಹೇಳುತ್ತಾರೆ, ಪ್ರವಾದಿ(ಸ) ಈ ರೀತಿ ಹೇಳಿರುವರು: "ನನ್ನ ಸಮುದಾಯದಲ್ಲಿ ದೇವ ಧರ್ಮವನ್ನು ರಕ್ಷಿಸುವಂತಹ ಒಂದು ತಂಡ ಸದಾ ಇದ್ದೇ ಇರುವುದು. ಯಾರು ಅವರನ್ನು ಬೆಂಬಲಿಸುವುದಿಲ್ಲವೋ ಅಥವಾ ಅವರನ್ನು ವಿರೋಧಿಸು ವರೋ ಅವರು ಅವರನ್ನು(ಆ ತಂಡದವರನ್ನು) ನಾಶಪಡಿಸಲಾರರು. ಕೊನೆಗೆ ಅಲ್ಲಾಹನ ತೀರ್ಮಾನ ಬಂದೇ ತೀರುವುದು. ಈ ಧರ್ಮರಕ್ಷಕ ಜನರು ತಮ್ಮ ಅದೇ ಸ್ಥಿತಿಯಲ್ಲಿ ಸ್ಥಿರವಾಗಿರುವರು". (ಬುಖಾರಿ, ಮುಸ್ಲಿಮ್)

7. ಅತಿ ಸಹನೆ ಮತ್ತು ಭಟ್ಟಂಗಿತನ ಹಾಗೂ ತತ್ವಹೀನತೆಯನ್ನು ಪೂರ್ಣವಾಗಿ ವರ್ಜಿಸಿರಿ. ಪವಿತ್ರ ಕುರ್‌ಆನ್ ಸತ್ಯವಿಶ್ವಾಸಿಗಳ ಗುಣಗಾನ ಮಾಡುತ್ತಾ ಈ ರೀತಿ ಹೇಳಿದೆ:

أَشِدَّآءُ عَلَى الْكُفَّارِ

"ಅವರು ಸತ್ಯನಿಷೇಧಿಗಳ ಮಟ್ಟಿಗೆ ಕಠಿಣರಾಗಿರುತ್ತಾರೆ". (48:29)

ಅರ್ಥಾತ್ ಅವರು ತಮ್ಮ ಧರ್ಮ ಮತ್ತು ತತ್ವಗಳ ಬಗ್ಗೆ ಅತ್ಯಂತ ಕಠಿಣರಾಗಿರುತ್ತಾರೆ. ಯಾವ ಪರಿಸ್ಥಿತಿಯಲ್ಲೂ ಅವರು ತಮ್ಮ ತತ್ವಗಳ ಬಗ್ಗೆ ಯಾವುದೇ ಒಪ್ಪಂದ ಅಥವಾ ಭಟ್ಟಂಗಿತನ ಮಾಡಲಾರರು. ಅವರು ಯಾವುದನ್ನು ಸಹಿಸಿದರೂ ಧರ್ಮ ಮತ್ತು ತತ್ವಗಳ ಬಲಿದಾನವನ್ನು ಸಹಿಸಲಾರರು. ಅಲ್ಲಾಹನು ಸತ್ಯವಿಶ್ವಾಸಿಗಳಿಗೆ ಈ ರೀತಿ ಆದೇಶಿಸಿದ್ದಾನೆ.

فَلِذَٰلِكَ فَادْعُ ۖ وَاسْتَقِمْ كَمَا أُمِرْتَ ۖ وَلَا تَتَّبِعْ أَهْوَاءَهُمْ ۖ

"ತಾವು ಇದೇ ಧರ್ಮದತ್ತ ಆಹ್ವಾನಿಸಿರಿ. ನಿಮಗೆ ಆಜ್ಞಾಪಿಸಿರುವುದರ ಮೇಲೆ ದೃಢವಾಗಿ ನಿಲ್ಲಿರಿ. ಜನರ ಬಯಕೆಗಳನ್ನು ಹಿಂಬಾಲಿಸಬೇಡಿರಿ". (ಪವಿತ್ರ ಕುರ್‌ಆನ್, 42:15)

ಧರ್ಮದ ಬಗ್ಗೆ ಅತಿಸಹನೆ, ಭಟ್ಟಂಗಿತನ ಹಾಗೂ ಅಸತ್ಯದೊಂದಿಗೆ ಒಪ್ಪಂದ ಧರ್ಮ ಮತ್ತು ವಿಶ್ವಾಸವನ್ನು ನಾಶಪಡಿಸುವ ಅಪಾಯಕಾರಿ ದೌರ್ಬಲ್ಯಗಳಾಗಿವೆ.

ಪ್ರವಾದಿ(ಸ) ಈ ರೀತಿ ಆದೇಶಿಸಿರುವರು:

"ಇಸ್ರಾಈಲ್ ಸಂತತಿಗಳು ದೇವಧಿಕ್ಕಾರದ ಕಾರ್ಯವೆಸಗತೊಡಗಿದಾಗ ಅವರ ವಿದ್ವಾಂಸರು ಅವರನ್ನು ಅದರಿಂದ ತಡೆಯಲೆತ್ನಿಸಿದರು. ಆದರೆ ಅವರು ಅದನ್ನು ಬಿಡಲಿಲ್ಲ. (ಆಗ ಅವರ ವಿದ್ವಾಂಸರು ಅವರನ್ನು ಬಹಿಷ್ಕರಿಸುವ ಬದಲು) ಅವರ ಸಭೆಗಳಿಗೆ ಹೋಗತೊಡಗಿದರು. ಅವರೊಂದಿಗೆ ಸಹಭೋಜನ ನಡೆಸಿದರು. ಆಗ ಅಲ್ಲಾಹನು ಅವರೆಲ್ಲರ ಹೃದಯಗಳನ್ನು ಒಂದೇ ರೀತಿ ಮಾಡಿ ಬಿಟ್ಟನು. ತರುವಾಯ ಹ. ದಾವೂದ್ ಮತ್ತು ಹ. ಈಸಾ ಬಿನ್ ಮರ್ಯಮ್‌ರ(ಅ) ಬಾಯಿಯಿಂದ ಅಲ್ಲಾಹನು ಅವರನ್ನು ಶಪಿಸಿದನು. ಇದು ಅವರ ಆಜ್ಞೋಲ್ಲಂಘನೆಯಿಂದ ಮತ್ತು ಅದರಲ್ಲಿಯೇ ಮುಂದುವರಿದ ಕಾರಣದಿಂದಾಗಿತ್ತು. ಈ ಪ್ರವಾದಿ ವಚನವನ್ನು ವರದಿ ಮಾಡಿದ ಹ. ಅಬ್ದುಲ್ಲಾ ಬಿನ್ ಮಸ್‌ಊದ್(ರ) ಹೇಳುತ್ತಾರೆ, ಪ್ರವಾದಿ(ಸ) ಒರಗಿ ಕುಳಿತವರು ನೇರವಾಗಿ ಕುಳಿತರು. ತರುವಾಯ ಹೇಳಿದರು: 'ಇಲ್ಲ, ನನ್ನ ಪ್ರಾಣ ಯಾರ ಕೈಯಲ್ಲಿದೆಯೋ ಆ ಅಲ್ಲಾಹನಾಣೆ! ನೀವು ಜನರಿಗೆ ಒಳಿತನ್ನು ಆಜ್ಞಾಪಿಸುತ್ತಿರಬೇಕು ಮತ್ತು ಕೆಡುಕಿನಿಂದ ತಡೆಯುತ್ತಿರಬೇಕು. ಅಕ್ರಮಿಯ ಕೈ ಹಿಡಿಯಬೇಕು. ಅಕ್ರಮಿಯನ್ನು ಸತ್ಯಕ್ಕೆ ಮಣಿಸಬೇಕು. ನೀವು ಹೀಗೆ ಮಾಡದೆ ಹೋದರೆ ನಿಮ್ಮೆಲ್ಲರ ಮನಸ್ಸು ಒಂದೇ ರೀತಿಯಾಗಿ ಬಿಡುವುದು. ತರುವಾಯ ಅಲ್ಲಾಹನು ತನ್ನ ಕರುಣೆ ಮತ್ತು ಮಾರ್ಗದರ್ಶನದಿಂದ ಇಸ್ರಾಈಲ್ ಸಂತತಿಗಳನ್ನು ವಂಚಿತಗೊಳಿಸಿದಂತೆ ನಿಮ್ಮನ್ನು ದೂರ ಎಸೆಯುವನು".

8. ನಿಮ್ಮ ಮಕ್ಕಳ ತರಬೇತಿ ಮತ್ತು ಸುಧಾರಣೆ ನಿಮ್ಮ ಹೊಣೆ. ಅವರನ್ನು ಧರ್ಮ ಸಂಸ್ಥಾಪನೆಯ ಕರ್ತವ್ಯ ನಿರ್ವಹಣೆಗೆ ಸಜ್ಜುಗೊಳಿಸಬೇಕಾದುದು ನಿಮ್ಮ ಕರ್ತವ್ಯ. ನಿಮ್ಮ ಚಟುವಟಿಕೆಗಳ ಸಹಜ ರಂಗವಿದು. ಈ ರಂಗವನ್ನು ಬಿಟ್ಟು ನಿಮ್ಮ ಧರ್ಮ ಪ್ರಚಾರ ಮತ್ತು ಸುಧಾರಣಾ ಕಾರ್ಯಗಳಿಗೆ ಕೇವಲ ಬಾಹ್ಯರಂಗಗಳನ್ನು ಹುಡುಕುವುದು ಹುಂಬತನ. ಇದೊಂದು

ಅಸ್ವಾಭಾವಿಕ ಶ್ರಮ, ಕರ್ತವ್ಯಚ್ಯುತಿ ಮತ್ತು ಪಲಾಯನವಾದವಾಗಿದೆ. ಬರಗಾಲ ದಲ್ಲಿ ತನ್ನ ಮಡದಿ ಮಕ್ಕಳನ್ನು ಹಸಿವೆ ತೃಷೆಯಲ್ಲಿ ಬಳಲಿ ಬೆಂಡಾಗಿ ಸಾಯಲು ಬಿಟ್ಟು ಹೊರಗೆ ಸಹಾಯಾರ್ಥಿಗಳನ್ನು ಹುಡುಕಿ ಧಾನ್ಯ ವಿತರಣೆ ಮಾಡುವವನಂತಿದೆ ನಿಮ್ಮ ಈ ಅವಸ್ಥೆ. ನಿಮಗೆ ಹಸಿವೆ, ತೃಷೆಯ ಅರಿವೂ ಇಲ್ಲ. ಬಂಧುತ್ವ ಮತ್ತು ವಾತ್ಸಲ್ಯದ ಭಾವನೆಯೂ ಇಲ್ಲ. ಧಾನ್ಯ ವಿತರಣೆಯ ವಿವೇಕಯುತ ವಿಧಾನವೂ ನಿಮಗೆ ತಿಳಿದಿಲ್ಲ. ಪವಿತ್ರ ಕುರ್‌ಆನ್ ಸತ್ಯವಿಶ್ವಾಸಿಗಳಿಗೆ ಈ ರೀತಿ ಆದೇಶಿಸಿದೆ:

يَا أَيُّهَا الَّذِينَ آمَنُوا قُوا أَنفُسَكُمْ وَأَهْلِيكُمْ نَارًا

"ಓ ಸತ್ಯವಿಶ್ವಾಸಿಗಳೇ! ನಿಮ್ಮನ್ನೂ ನಿಮ್ಮ ಮನೆ ಮಂದಿಯನ್ನೂ ನರಕಾಗ್ನಿಯಿಂದ ರಕ್ಷಿಸಿರಿ". (66: 6)

ಪ್ರವಾದಿ(ಸ) ಈ ಸೂಕ್ತವನ್ನು ಹೀಗೆ ವ್ಯಾಖ್ಯಾನಿಸಿರುವರು: "ನಿಮ್ಮಲ್ಲಿ ಪ್ರತಿಯೊಬ್ಬನೂ ಹೊಣೆಗಾರನು. ನಿಮ್ಮಲ್ಲಿ ಪ್ರತಿಯೊಬ್ಬನನ್ನೂ ಆತನ ಅಧೀನದಲ್ಲಿರುವವರ ಬಗ್ಗೆ ವಿಚಾರಿಸಲಾಗುವುದು. ಅಧಿಪತಿಯು ಹೊಣೆಗಾರನು. ಅವನಲ್ಲಿ ಅವನ ಪ್ರಜೆಗಳ ಬಗ್ಗೆ ವಿಚಾರಿಸಲಾಗುವುದು. ಪತಿಯು ತನ್ನ ಮನೆ ಮಂದಿಯ ಹೊಣೆಗಾರನು. ಪತ್ನಿಯು ತನ್ನ ಪತಿಯ ಮನೆ ಮತ್ತು ಮಕ್ಕಳ ಹೊಣೆಗಾರ್ತಿ. ಒಟ್ಟಿನಲ್ಲಿ ನಿಮ್ಮ ಪೈಕಿ ಪ್ರತಿಯೊಬ್ಬನೂ ಹೊಣೆಗಾರನು. ಅವರವರ ಹೊಣೆಯಲ್ಲಿರುವ ವ್ಯಕ್ತಿಗಳ ಮತ್ತು ವಸ್ತುಗಳ ಬಗ್ಗೆ ನಿಮ್ಮಲ್ಲಿ ಪ್ರತಿಯೊಬ್ಬನನ್ನೂ ಪ್ರಶ್ನಿಸಲಾಗುವುದು". (ಬುಖಾರಿ, ಮುಸ್ಲಿಮ್)

9. ನಿಮ್ಮ ನೆರೆಯವರ ಮತ್ತು ಪರಿಸರ ವಾಸಿಗಳ ಶಿಕ್ಷಣ ತರಬೇತಿ ಮತ್ತು ಸುಧಾರಣೆಯ ಬಗ್ಗೆ ಚಿಂತಿಸಿರಿ. ಅದನ್ನು ನಿಮ್ಮ ಕರ್ತವ್ಯವೆಂದು ಪರಿಗಣಿಸಿರಿ.

ಒಮ್ಮೆ ಪ್ರವಾದಿ(ಸ) ಒಂದು ಭಾಷಣ ಮಾಡಿದರು. ಅದರಲ್ಲಿ ಕೆಲವು ಮುಸ್ಲಿಮರನ್ನು ಹೊಗಳಿದರು. ತರುವಾಯ ಹೀಗೆಂದರು:

"ನಿಮ್ಮಲ್ಲಿ ಕೆಲವರು ತಮ್ಮ ನೆರೆಯವರಲ್ಲಿ ಧರ್ಮದ ತಿಳುವಳಿಕೆ ಮೂಡಿಸುವುದಿಲ್ಲವೇಕೆ? ಧರ್ಮದ ಬಗ್ಗೆ ಅಜ್ಞಾನದಿಂದಾಗುವ ಭೀಕರ ಪರಿಣಾಮದ ಬಗ್ಗೆ ಅವರನ್ನು ಎಚ್ಚರಿಸುವುದಿಲ್ಲವೇಕೆ? ಅವರನ್ನು ಕೆಡುಕುಗಳಿಂದ ತಡೆಯುವುದಿಲ್ಲ ಏಕೆ? ಮತ್ತು ನಿಮ್ಮಲ್ಲಿ ಕೆಲವರು ತಮ್ಮ ನೆರೆಯವರಿಂದ ಧರ್ಮಜ್ಞಾನ ಗಳಿಸುವುದಿಲ್ಲವೇಕೆ? ಧರ್ಮದ ಬಗ್ಗೆ ಅಜ್ಞರಾಗಿರುವುದರ ಭೀಕರ ಪರಿಣಾಮಗಳ ಬಗ್ಗೆ ಎಚ್ಚರಗೊಳ್ಳುವುದಿಲ್ಲವೇಕೆ? ಅಲ್ಲಾಹನಾಣೆ! ಜನರು ತಮ್ಮ ನೆರೆಯವರಿಗೆ ಧರ್ಮದ ಶಿಕ್ಷಣ ವನ್ನು ಕಡ್ಡಾಯವಾಗಿ ನೀಡಬೇಕು. ಅವರಲ್ಲಿ ಧರ್ಮದ ಬಗ್ಗೆ ಉತ್ತಮ ತಿಳುವಳಿಕೆ ಮೂಡಿಸಬೇಕು. ಅವರಿಗೆ ಉಪದೇಶಿಸಬೇಕು. ಅವರಿಗೆ ಒಳಿತನ್ನು ಬೋಧಿಸಬೇಕು. ಕೆಡುಕಿನಿಂದ ಅವರನ್ನು ತಡೆಯಬೇಕು. ಅಂತೆಯೇ ಜನರು ತಮ್ಮ ನೆರೆಯವರಿಂದ ಧರ್ಮದ ಶಿಕ್ಷಣವನ್ನು ಪಡೆಯಬೇಕು. ಧರ್ಮದ ತಿಳುವಳಿಕೆ ಗಳಿಸಬೇಕು.

ಅವರ ಉಪದೇಶಗಳನ್ನು ಪಾಲಿಸಬೇಕು. ಅನ್ಯಥಾ ನಾನು ಶೀಘ್ರವೇ ಅಂಥವರನ್ನು ಶಿಕ್ಷಿಸುವೆನು." ತರುವಾಯ ಪ್ರವಾದಿ(ಸ) ಮಿಂಬರ್ (ವೇದಿಕೆ)ನಿಂದ ಕೆಳಗಿಳಿದರು. ಭಾಷಣ ಕೊನೆಗೊಳಿಸಿದರು.

ಶ್ರೋತೃಗಳಲ್ಲಿ ಕೆಲವರು ಇತರರನ್ನು ಈ ರೀತಿ ವಿಚಾರಿಸಿದರು: ಇದು ಪ್ರವಾದಿ(ಸ) ಯಾವ ಜನರ ಬಗ್ಗೆ ಭಾಷಣ ಮಾಡಿದ್ದು? ಅವರು ಹೇಳಿದರು: ಪ್ರವಾದಿ(ಸ) ಅಶ್‌ಅರ್ ಗೋತ್ರದವರ ಕಡೆಗೆ ಸಂಕೇತ ಮಾಡುತ್ತಿದ್ದರು. ಅವರು ಧರ್ಮಜ್ಞಾನ ಹೊಂದಿದವರು. ಅವರ ನೆರೆಯಲ್ಲಿರುವವರು ಚಿಲುಮೆಗಳ ಬಳಿ ವಾಸಿಸುವ ಗಮಾರರು. ಈ ಭಾಷಣದ ಬಗ್ಗೆ ಅಶ್‌ಅರ್ ಗೋತ್ರದ ಜನರಿಗೆ ತಿಳಿದಾಗ ಅವರು ಪ್ರವಾದಿವರ್ಯರ(ಸ) ಬಳಿಗೆ ಬಂದು ಈ ರೀತಿ ನಿವೇದಿಸಿಕೊಂಡರು. 'ಓ ದೇವ ಸಂದೇಶವಾಹಕರೇ! ತಾವು ತಮ್ಮ ಭಾಷಣದಲ್ಲಿ ಕೆಲವು ಮುಸ್ಲಿಮರ ಬಗ್ಗೆ ಹೊಗಳಿಕೆಯ ಮಾತುಗಳನ್ನಾಡಿ ನಮ್ಮ ಬಗ್ಗೆ ಕೋಪ ವ್ಯಕ್ತ ಪಡಿಸಿರುವಿರಿ. ನಮ್ಮಿಂದ ಯಾವ ತಪ್ಪಾಯಿತೆಂದು ಹೇಳಿರಿ.'

ಪ್ರವಾದಿ(ಸ) ಈ ರೀತಿ ಉತ್ತರಿಸಿದರು: 'ತಮ್ಮ ನೆರೆಯವರಿಗೆ ಧರ್ಮ ವಿದ್ಯೆ ಕಲಿಸುವುದು ಜನರ ಕರ್ತವ್ಯ. ಅವರಿಗೆ ಉಪದೇಶಿಸುವುದು, ಒಳಿತನ್ನು ಆದೇಶಿಸುವುದು, ಕೆಡುಕಿನಿಂದ ತಡೆಯುವುದು ಅವರ ಹೊಣೆಗಾರಿಕೆ. ಅಂತೆಯೇ ತಮ್ಮ ನೆರೆಯವರಿಂದ ಧರ್ಮಜ್ಞಾನ ಗಳಿಸುವುದು. ಅವರ ಸದುಪದೇಶಗಳನ್ನು ಪಾಲಿಸುವುದು. ಧರ್ಮದ ತಿಳುವಳಿಕೆಯನ್ನು ಹೆಚ್ಚಿಸಿಕೊಳ್ಳುವುದು ಕೂಡ ಜನರ ಕರ್ತವ್ಯವಾಗಿದೆ. ಹಾಗೆ ಮಾಡದಿದ್ದರೆ ಶೀಘ್ರವೇ ನಾನು ಅವರನ್ನು ಲೋಕದಲ್ಲೇ ಶಿಕ್ಷಿಸುವೆನು'. ಇದನ್ನು ಕೇಳಿ ಅಶ್‌ಅರ್ ಗೋತ್ರದ ಜನರು ಹೇಳಿದರು: 'ಓ ಪ್ರವಾದಿವರ್ಯರೇ! ನಾವು ಇತರರಲ್ಲಿ ತಿಳುವಳಿಕೆ ಮೂಡಿಸಬೇಕೆ?' ಪ್ರವಾದಿ(ಸ) 'ಹೌದು, ಇದು ನಿಮ್ಮ ಹೊಣೆ' ಎಂದರು. ಆಗ ಆ ಜನರು 'ನಮಗೆ ಒಂದು ವರ್ಷ ಅವಧಿ ನೀಡಿರಿ' ಎಂದು ಯಾಚಿಸಿದರು. ಪ್ರವಾದಿವರ್ಯರು(ಸ), ಅವರಿಗೆ ಅವರ ನೆರೆಯವರಿಗೆ ಶಿಕ್ಷಣ ತರಬೇತಿ ನೀಡುವುದಕ್ಕಾಗಿ ಒಂದು ವರ್ಷದ ಅವಧಿಯನ್ನು ದಯಪಾಲಿಸಿದರು. ತರುವಾಯ ಪ್ರವಾದಿ(ಸ) ಈ ಕೆಳಗಿನ ಕುರ್‌ಆನ್ ಸೂಕ್ತಗಳನ್ನು ಪಠಿಸಿದರು:

لُعِنَ الَّذِيْنَ كَفَرُوْا مِنْۢ بَنِيْٓ اِسْرَآءِيْلَ عَلٰى لِسَانِ دَاوٗدَ وَعِيْسَى ابْنِ مَرْيَمَ ۭ
ذٰلِكَ بِمَا عَصَوْا وَّكَانُوْا يَعْتَدُوْنَ ۝٧٨ كَانُوْا لَا يَتَنَاهَوْنَ عَنْ مُّنْكَرٍ فَعَلُوْهُ ۭ
لَبِئْسَ مَا كَانُوْا يَفْعَلُوْنَ ۝٧٩

"ದಾವೂದರ ಮತ್ತು ಈಸಾ ಬಿನ್ ಮರ್ಯಮರ ಮೂಲಕ ಬನೀ ಇಸ್ರಾಈಲರ ಸತ್ಯ ನಿಷೇಧಿಗಳ ಮೇಲೆ ಶಾಪ ಹಾಕಲಾಯಿತು. ಈ ಶಾಪವು ಅವರು ಆಜ್ಞೋಲ್ಲಂಘನೆಯ ಪಥ ಸ್ವೀಕರಿಸಿದ್ದರಿಂದ ಮತ್ತು ದೇವಧಿಕ್ಕಾರ ಕೈಗೊಂಡುದರಿಂದ ಹಾಕಲಾಗಿತ್ತು. ಅವರು ಪರಸ್ಪರರನ್ನು

ಕೆಡುಕು ಮಾಡುವುದರಿಂದ ತಡೆಯುತ್ತಿರಲಿಲ್ಲ. ನಿಸ್ಸಂದೇಹವಾಗಿಯೂ ಅವರ ಈ ಕೃತ್ಯವು ಅತ್ಯಂತ ನೀಚವಾಗಿತ್ತು". (5: 78-79)

10. ಯಾವ ಜನರ ಮಧ್ಯೆ ನೀವು ಸತ್ಯಧರ್ಮ ಪ್ರಚಾರದ ಘನ ಕರ್ತವ್ಯವನ್ನು ನೆರವೇರಿಸುತ್ತಿರುವಿರೋ ಅವರ ಧಾರ್ಮಿಕ ವಿಶ್ವಾಸ ಶ್ರದ್ಧೆಗಳನ್ನು ಗೌರವಿಸಿರಿ. ಅವರ ಹಿರಿಯರನ್ನೂ ಧರ್ಮ ನೇತಾರರನ್ನೂ ಕೆಟ್ಟ ಹೆಸರಿನಿಂದ ಕರೆಯದಿರಿ. ಅವರ ವಿಶ್ವಾಸ ಶ್ರದ್ಧೆಗಳನ್ನು ಟೀಕಿಸದಿರಿ. ಅವರ ಧಾರ್ಮಿಕ ಶ್ರದ್ಧೆಗಳನ್ನು ಹೀಯಾಳಿಸದಿರಿ. ಸಕಾರಾತ್ಮಕ ವಾಗಿ ಯುಕ್ತಿ ವಿವೇಕಗಳೊಂದಿಗೆ ನಿಮ್ಮ ಸಂದೇಶವನ್ನು ತಲುಪಿಸಿರಿ. ವಿಮರ್ಶೆಯ ಮೂಲಕ ಅಭಿಸಂಬೋಧಿತರನ್ನು ಕೆರಳಿಸುವ ಬದಲು ಅತ್ಯಂತ ಕಳಕಳಿಯಿಂದ ನಿಮ್ಮ ಮಾತನ್ನು ಅವರ ಮನದಲ್ಲಿ ಇಳಿಸಲು ಪ್ರಯತ್ನಿಸಿರಿ. ಭಾವನಾತ್ಮಕ ವಿಮರ್ಶೆ ಮತ್ತು ಹೀಯಾಳಿಸುವ ಮಾತುಕತೆಯ ಮೂಲಕ ನಿಮ್ಮ ಅಭಿಸಂಬೋಧಿತನನ್ನು ಕೆರಳಿಸಬಹುದೇ ವಿನಾ ಅವನಲ್ಲಿ ಯಾವುದೇ ರೀತಿಯ ಉತ್ತಮ ಬದಲಾವಣೆ ತರಲು ಸಾಧ್ಯವಿಲ್ಲ. ಇದರಿಂದ ಅವನಲ್ಲಿ ರೋಷ ಮತ್ತು ಪಕ್ಷಪಾತ ಮನೋಭಾವ ಬೆಳೆದೀತು. ಈ ಭಾವ ವಿಕಾರದಲ್ಲಿ ಮುಳುಗಿ ಅವನು ದೇವ ಮತ್ತು ಧರ್ಮದ ಬಗ್ಗೆ ತಾತ್ಸಾರ ಭಾವನೆ ಪ್ರಕಟಿಸಬಹುದು. ಸತ್ಯ ಧರ್ಮದ ಹತ್ತಿರ ಬರುವ ಬದಲು ಇನ್ನಷ್ಟು ದೂರ ಸರಿಯಬಹುದು.

ಪವಿತ್ರ ಕುರ್‌ಆನ್ ಈ ರೀತಿ ಆದೇಶಿಸಿದೆ.

وَلَا تَسُبُّوا الَّذِينَ يَدْعُونَ مِن دُونِ اللَّهِ فَيَسُبُّوا اللَّهَ عَدْوًا بِغَيْرِ عِلْمٍ

"(ಓ ಸತ್ಯವಿಶ್ವಾಸಿಗಳೇ,) ಅವರು ಅಲ್ಲಾಹನ ಹೊರತು ಯಾರನ್ನು ಕರೆದು ಪ್ರಾರ್ಥಿಸುವರೋ ಅವರನ್ನು ಬೈಯಬೇಡಿರಿ. ಅನ್ಯಥಾ ಅವರು ಬಹುದೇವಾರಾಧನೆಗಿಂತಲೂ ಮುಂದುವರಿದು ಅಜ್ಞಾನದಿಂದಾಗಿ ಅಲ್ಲಾಹನನ್ನೇ ಬೈಯತೊಡಗುವರು". (6: 108)

11. ಅಲ್ಲಾಹನತ್ತ ಕರೆಯುವವರಾಗಿ ಮಾರ್ಪಟ್ಟು ಸಂದೇಶ ಪ್ರಚಾರದ ಕಾರ್ಯ ನಿರ್ವಹಿಸಿರಿ. ಅರ್ಥಾತ್ ಕೇವಲ ಅಲ್ಲಾಹನತ್ತ ಜನರನ್ನು ಆಹ್ವಾನಿಸಿರಿ. ಅಲ್ಲಾಹನ ದಾಸರನ್ನು ಆತನ ಹೊರತು ಇತರ ಯಾವುದರ ಕಡೆಗೂ ಆಹ್ವಾನಿಸದಿರಿ. ಜನರನ್ನು ಯಾವುದೇ ದೇಶ, ಜನಾಂಗ, ಗೋತ್ರ ಅಥವಾ ಭಾಷೆಯ ಕಡೆಗೆ ಕರೆಯದಿರಿ. ಯಾವುದೇ ಸಂಘಟನೆಯ ಕಡೆಗೂ ಆಹ್ವಾನಿಸದಿರಿ. ದೇವ ಸಂಪ್ರೀತಿಯೇ ಸತ್ಯವಿಶ್ವಾಸಿಯ ಲಕ್ಷ್ಯ. ಆ ಲಕ್ಷ್ಯದ ಕಡೆಗೇ ಜನರನ್ನು ಆಹ್ವಾನಿಸಿರಿ. ಮನುಷ್ಯರ ಸೃಷ್ಟಿಕರ್ತನೂ ಒಡೆಯನೂ ಆದ ಅಲ್ಲಾಹನ ದಾಸ್ಯಾರಾಧನೆಯೇ ಅವರ ಕರ್ತವ್ಯ. ಆತನ ದಾಸ್ಯಾರಾಧನೆ ಮತ್ತು ಅನುಸರಣೆ ಜೀವನದ ಎಲ್ಲ ರಂಗಗಳಲ್ಲೂ ಮಾಡಬೇಕು. ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ, ರಾಷ್ಟ್ರೀಯ ಜೀವನದಲ್ಲೂ ಜೀವನದ ಇತರ ಎಲ್ಲ ರಂಗಗಳಲ್ಲೂ ಜಗತ್ತಿನ ಪ್ರಭುವೂ ಪರಿಪಾಲಕನೂ ಆದ ಅಲ್ಲಾಹನ ಆಜ್ಞೆಗಳನ್ನು ಪಾಲಿಸಬೇಕು. ಆತನ ಕಾನೂನನ್ನು ಚಾಚೂ ತಪ್ಪದೆ ನಿಷ್ಠೆಯಿಂದ ಪಾಲಿಸಬೇಕು. ಇದಲ್ಲದೆ ಮುಸ್ಲಿಮರ ಜೀವನಕ್ಕೆ ಬೇರೆ ಧ್ಯೇಯವೇ ಇಲ್ಲ. ಇದರ ಹೊರತು ಇನ್ನಾವುದರ ಕಡೆಗೂ

ಜನರನ್ನು ಕರೆಯಕೂಡದು. ಸತ್ಯವಿಶ್ವಾಸಿಯು ದೇವಾದೇಶಗಳನ್ನು ಕಡೆಗಣಿಸಿ ದೇವ ಸಂಪ್ರೀತಿಯ ಹೊರತು ಇತರ ವಿಷಯಗಳನ್ನು ತನ್ನ ಜೀವನದ ಉದ್ದೇಶವಾಗಿಟ್ಟಾಗ ಇಹಪರಗಳೆರಡರಲ್ಲೂ ಪರಾಜಿತನಾಗುವನು.

وَمَنْ أَحْسَنُ قَوْلًا مِّمَّن دَعَا إِلَى اللَّهِ وَعَمِلَ صَالِحًا وَقَالَ إِنَّنِي مِنَ الْمُسْلِمِينَ ﴿٣٣﴾

"ಅಲ್ಲಾಹನತ್ತ ಆಹ್ವಾನಿಸಿದ, ಸತ್ಕರ್ಮಗಳನ್ನು ಕೈಗೊಂಡ ಮತ್ತು ನಾನು ಅಲ್ಲಾಹನ ಅಜ್ಞಾನುವರ್ತಿಯಾದ ಮುಸ್ಲಿಮನಾಗಿರುವೆನೆಂದು ಘೋಷಿಸಿದವನಿಗಿಂತ ಉತ್ತಮ ಮಾತು ಇನ್ನಾರದಿರಬಹುದು". (ಪವಿತ್ರ ಕುರ್‌ಆನ್, 41:33)

❖ ❖ ❖ ❖

# ಸಂಘಟಿತ ಜೀವನ

1. ಧರ್ಮ ಪ್ರಚಾರ ಕಾರ್ಯಕ್ಕಾಗಿ ಬಲಿಷ್ಠ ಸಂಘಟನೆಯನ್ನು ರೂಪಿಸಿರಿ. ಧರ್ಮ ಸಂಸ್ಥಾಪನಾ ಕಾರ್ಯಕ್ಕಾಗಿ ಸಾಮೂಹಿಕ ಹೋರಾಟ ನಡೆಸಿರಿ.

وَلْتَكُنْ مِّنْكُمْ أُمَّةٌ يَّدْعُوْنَ إِلَى الْخَيْرِ وَيَأْمُرُوْنَ بِالْمَعْرُوْفِ وَيَنْهَوْنَ عَنِ الْمُنْكَرِ ۚ وَأُولٰٓئِكَ هُمُ الْمُفْلِحُوْنَ ﴿١٠٤﴾

**"ನಿಮ್ಮಲ್ಲಿ ಒಳಿತಿನ ಕಡೆಗೆ ಆಹ್ವಾನಿಸುವ ಸತ್ಕಾರ್ಯಗಳನ್ನು ಆಜ್ಞಾಪಿಸುವ ಮತ್ತು ಕೆಡುಕಿನಿಂದ ತಡೆಯುವ ಒಂದು ಸಂಘಟನೆ ಇರಲೇಬೇಕು". (ಪವಿತ್ರ ಕುರ್‌ಆನ್, 3:104)**

'ಅಲ್ ಖೈರ್' ಎಂದರೆ ಮಾನವ ಪ್ರಕೃತಿಯು ಸದಾ ಒಳಿತೆಂದು ಭಾವಿಸುವ ದೈವಿಕ ಗ್ರಂಥಗಳು ಸಾಕ್ಷ್ಯ ನೀಡಿದ ಸಹಜ ಒಳಿತುಗಳು. ಈ ರೀತಿಯ ಎಲ್ಲ ಒಳಿತುಗಳ ಒಂದು ಸಮಗ್ರ ರೂಪವೇ ದೈವಿಕ ಧರ್ಮ. ಅದನ್ನು ಎಲ್ಲ ಕಾಲಗಳಲ್ಲಿ ದೇವ ಪ್ರವಾದಿಗಳು ಜಗತ್ತಿಗೆ ಸಮರ್ಪಿಸುತ್ತಿದ್ದರು. ಅಂತಿಮ ಪ್ರವಾದಿ ಹ. ಮುಹಮ್ಮದ್‌ರು(ಸ) ತಮ್ಮ ಸಮುದಾಯಕ್ಕೆ ನೀಡಿರುವ ಪವಿತ್ರ ಕುರ್‌ಆನ್ ಮತ್ತು ಹದೀಸ್‌ಗಳು ಅದರ ಅಂತಿಮ, ಸಮಗ್ರ, ಪ್ರಾಮಾಣಿಕ ಹಾಗೂ ಸುರಕ್ಷಿತ ರೂಪವಾಗಿದೆ. ಆ ಒಳಿತಿನೆಡೆಗೆ ಕರೆ ನೀಡಲು, ಲೋಕವನ್ನು ಒಳಿತಿನಿಂದ ತುಂಬಲು ಮುಸ್ಲಿಮರು ಸಂಘಟಿತರಾಗಿ ಈ ಕಾರ್ಯವನ್ನು ನಿರ್ವಹಿಸಬೇಕು. ಜೀವನದ ಸಕಲ ರಂಗಗಳಲ್ಲಿ ಅಸತ್ಯವನ್ನು ಅತಿಜಯಿಸುವ ಸಲುವಾಗಿ ಬಲಿಷ್ಠ ಸಂಘಟನೆಯನ್ನು ಅಸ್ತಿತ್ವಕ್ಕೆ ತಂದು ಅತ್ಯಂತ ಶಿಸ್ತುಬದ್ಧವಾದ ಸಂಘಟಿತ ಶ್ರಮ ನಡೆಸಬೇಕು. ಅಲ್ಲಾಹನು ಸತ್ಯವಿಶ್ವಾಸಿಗಳ ಈ ಬಲಿಷ್ಠ ಸಂಘಟನೆ ಮತ್ತು ಸಂಘಟಿತ ಶ್ರಮದ ಬಗ್ಗೆ ಪ್ರಸ್ತಾಪಿಸುತ್ತಾ ಅವರ ಮಾದರೀ ಸಂಘಟನೆಯನ್ನು ಶ್ಲಾಘಿಸಿರುವನು ಮತ್ತು ಅವರನ್ನು ತನ್ನ ಪ್ರೀತಿ ಪಾತ್ರರೆಂದು ಸಾರಿರುವನು:

إِنَّ اللّٰهَ يُحِبُّ الَّذِيْنَ يُقَاتِلُوْنَ فِيْ سَبِيْلِهٖ صَفًّا كَأَنَّهُمْ بُنْيَانٌ مَّرْصُوْصٌ ﴿٤﴾

**"ಅಲ್ಲಾಹನ ಮಾರ್ಗದಲ್ಲಿ ಸೀಸದ ಎರಕ ಹೊಯ್ದ ಗೋಡೆಯಂತೆ ದೃಢವಾಗಿ ಅಣಿಗೊಂಡು ಹೋರಾಡುವವರನ್ನು ಆತನು ನಿಸ್ಸಂದೇಹವಾಗಿಯೂ ಪ್ರೀತಿಸುತ್ತಾನೆ".**

**(ಪವಿತ್ರ ಕುರ್‌ಆನ್, 61:4)**

ಸಂಘಟಿತ ಜೀವನದ ಮಹತ್ವವನ್ನು ತಿಳಿಸಿ ಸಂಘಟಿತರಾಗಿ ಜೀವನ ನಡೆಸಲು ಪ್ರವಾದಿ(ಸ) ಈ ರೀತಿ ಉಪದೇಶಿಸಿರುವರು: "ಒಂದು ಕಾಡಿನಲ್ಲಿ ಮೂವರು ವಾಸವಾಗಿದ್ದರೆ

ತಮ್ಮ ಪೈಕಿ ಓರ್ವನನ್ನು ತಮ್ಮ ಅಮೀರ್(ನಾಯಕ) ಆಗಿ ಮಾಡದಿರುವುದು ಅವರಿಗೆ ಧರ್ಮಸಮ್ಮತವಲ್ಲ". (ಮುನ್ತಕಾ)

ಪ್ರವಾದಿ(ಸ) ಹೀಗೂ ಹೇಳಿರುವರು: "ಯಾವನು ಸ್ವರ್ಗದ ಮಧ್ಯಭಾಗದಲ್ಲಿ ತನ್ನ ನಿವಾಸ ಬಯಸುವನೋ ಅವನು 'ಅಲ್ ಜಮಾಅತ್'ನೊಂದಿಗೆ ಸೇರಿರಬೇಕು. ಏಕೆಂದರೆ ಶೈತಾನನು ಒಂಟಿ ವ್ಯಕ್ತಿಯ ಜೊತೆಗಿರುತ್ತಾನೆ. ಅವರು ಇಬ್ಬರಾದಾಗ ಆತ ಓಡಿ ಹೋಗುತ್ತಾನೆ".

'ಅಲ್ ಜಮಾಅತ್' ಎಂದರೆ ಅಧಿಕಾರ ಇಸ್ಲಾಮಿನ ಕೈಯಲ್ಲಿದ್ದು, ಮುಸ್ಲಿಮ್ ಖಲೀಫ(ಆಡಳಿತಾಧಿಕಾರಿ) ಇಸ್ಲಾಮೀ ಕಾನೂನುಗಳನ್ನು ಜಾರಿಗೊಳಿಸುತ್ತಿದ್ದು ಎಲ್ಲ ಮುಸ್ಲಿಮರೂ ಆತನ ನಾಯಕತ್ವವನ್ನು ಅಂಗೀಕರಿಸಿರುವಾಗ ಅಸ್ತಿತ್ವದಲ್ಲಿರುವ ಮುಸ್ಲಿಮರ ಬಲಿಷ್ಠ ಸಂಘಟನೆ. ಇಂತಹ ಸಂದರ್ಭದಲ್ಲಿ ಸಂಘಟನೆಯಿಂದ ಬೇರ್ಪಟ್ಟು ಜೀವಿಸುವುದು ಯಾವನೇ ಮುಸ್ಲಿಮನಿಗೆ ಧರ್ಮಸಮ್ಮತವಲ್ಲ. ಇಂತಹ ಅಲ್ ಜಮಾಅತ್ ಅಸ್ತಿತ್ವದಲ್ಲಿ ಲ್ಲದಾಗ ಸಂಘಟಿತರಾಗಿ ಇಂತಹ ಅಲ್ ಜಮಾಅತ್ ರೂಪಿಸಲಿಕ್ಕಾಗಿ ಪ್ರಯತ್ನಿಸುವುದು ಮುಸ್ಲಿಮ್ ಸಮುದಾಯದ ಕಡ್ಡಾಯ ಕರ್ತವ್ಯವಾಗಿದೆ.

2. ಐಕ್ಯ ಮತ್ತು ಸಂಘಟನೆಗೆ ಧರ್ಮವನ್ನೇ ಬುನಾದಿಯಾಗಿ ಮಾಡಿರಿ. ಅಲ್ಲಾಹನ ಧರ್ಮದ ಆಧಾರದಲ್ಲಿರುವ ಸಂಘಟನೆ ಮಾತ್ರ ಇಸ್ಲಾಮೀ ಸಂಘಟನೆಯಾಗಬಲ್ಲುದು. ಅಲ್ಲಾಹನ ಧರ್ಮವನ್ನು ಬಿಟ್ಟು ಇನ್ನಿತರ ಆಧಾರದಲ್ಲಿ ಮುಸ್ಲಿಮರ ಏಕತೆ ಸಾಧಿಸಿದರೆ ಅದು ಇಸ್ಲಾಮ್ ಆಜ್ಞಾಪಿಸಿದ ಏಕತೆ ಆಗಲಾರದು. ಅಂತಹ ಸಂಘಟನೆಯು ವಾಸ್ತವದಲ್ಲಿ ಇಸ್ಲಾಮೀ ಸಂಘಟನೆಯೇ ಅಲ್ಲ. ಮುಸ್ಲಿಮರ ಬಂಧುತ್ವ ಮತ್ತು ಐಕ್ಯದ ನೈಜ ಬುನಾದಿ ಕೇವಲ ಧರ್ಮವೇ ಆಗಿದೆ. ಧರ್ಮವನ್ನು ಬಿಟ್ಟು ಇನ್ನಾವುದನ್ನಾದರೂ ತಮ್ಮ ಐಕ್ಯದ ಬುನಾದಿಯಾಗಿ ಮಾಡಿದರೆ ಮುಸ್ಲಿಮರು ಒಗ್ಗಟ್ಟಾಗುವ ಬದಲು ಛಿನ್ನ ಭಿನ್ನವಾಗುವರು. 'ಅಲ್ ಜಮಾಅತ್' ಆಗುವ ಬದಲು ಗುಂಪು ಗುಂಪಾಗಿ ಪಂಗಡಗಳಾಗಿ ಹರಿ ಹಂಚಾಗುವರು.

ನೀವು ಸಂಘಟನೆ ರೂಪಿಸುವುದಾದರೆ ಅದರ ಉದ್ದೇಶವು ಕೇವಲ ಅಲ್ಲಾಹನ ಧರ್ಮದ ಸಂಸ್ಥಾಪನೆಯಾಗಿರಬೇಕು. ನಿಮ್ಮ ಎಲ್ಲ ಪ್ರಯತ್ನಗಳೂ ಅದಕ್ಕಾಗಿಯೇ ಇರಬೇಕು.

ಕುರ್‌ಆನ್ ಈ ರೀತಿ ಆದೇಶಿಸಿದೆ:

وَاعْتَصِمُوا بِحَبْلِ اللَّهِ جَمِيعًا وَلَا تَفَرَّقُوا ۚ وَاذْكُرُوا نِعْمَتَ اللَّهِ عَلَيْكُمْ إِذْ كُنتُمْ أَعْدَاءً فَأَلَّفَ بَيْنَ قُلُوبِكُمْ فَأَصْبَحْتُم بِنِعْمَتِهِ إِخْوَانًا

"ನೀವೆಲ್ಲರೂ ಸೇರಿ ಅಲ್ಲಾಹನ ಪಾಶವನ್ನು ಬಿಗಿಯಾಗಿ ಹಿಡಿಯಿರಿ ಮತ್ತು ಭಿನ್ನಭಿನ್ನ ವಾಗದಿರಿ. ಅಲ್ಲಾಹನು ನಿಮ್ಮ ಮೇಲೆ ಮಾಡಿರುವ ಅನುಗ್ರಹವನ್ನು ಸ್ಮರಿಸಿರಿ. ನೀವು ಪರಸ್ಪರ ಶತ್ರುಗಳಾಗಿದ್ದಿರಿ. ಅವನು ನಿಮ್ಮ ಹೃದಯಗಳನ್ನು ಬೆಸೆದನು. ಅವನ ಅನುಗ್ರಹದಿಂದ ನೀವು ಪರಸ್ಪರ ಸಹೋದರರಾದಿರಿ". **(3:103)**

ಅಲ್ಲಾಹನ ಪಾಶವೆಂದರೆ ಅಲ್ಲಾಹನ ಧರ್ಮವಾದ ಇಸ್ಲಾಮ್. ಪವಿತ್ರ ಕುರ್‌ಆನಿನ

ಮೇರೆಗೆ ಮುಸ್ಲಿಮರ ಐಕ್ಯ ಮತ್ತು ಸಂಘಟನೆಯ ಬುನಾದಿ ಇದೇ ಧರ್ಮವಾಗಿದೆ. ಇದರ ಹೊರತು ಇತರ ಯಾವುದೇ ಬುನಾದಿ ಮುಸ್ಲಿಮರನ್ನು ಒಗ್ಗೂಡಿಸದು. ಅವರನ್ನು ಹರಿಹಂಚಾಗಿಸೀತು.

3. ಸತ್ಯಧರ್ಮದ ಕಾರ್ಯಕರ್ತರನ್ನು ಹೃತ್ಪೂರ್ವಕವಾಗಿ ಪ್ರೀತಿಸಿರಿ. ಈ ಸಂಬಂಧವನ್ನು ಇತರೆಲ್ಲಾ ಸಂಬಂಧಗಳಿಗಿಂತ ಹೆಚ್ಚು ಮಹತ್ವಪೂರ್ಣ ಮತ್ತು ಗೌರವಾರ್ಹವೆಂದು ಪರಿಗಣಿಸಿರಿ. ಪವಿತ್ರ ಕುರ್‌ಆನ್ ಸತ್ಯವಿಶ್ವಾಸಿಗಳ ಗುಣಗಾನ ಈ ರೀತಿ ಮಾಡಿದೆ:

لَا تَجِدُ قَوْمًا يُّؤْمِنُوْنَ بِاللّٰهِ وَالْيَوْمِ الْاٰخِرِ يُوَآدُّوْنَ مَنْ حَآدَّ اللّٰهَ وَرَسُوْلَهٗ
وَلَوْ كَانُوْٓا اٰبَآءَهُمْ اَوْ اَبْنَآءَهُمْ اَوْ اِخْوَانَهُمْ اَوْ عَشِيْرَتَهُمْ ؕ

"ಅಲ್ಲಾಹ್ ಮತ್ತು ಪರಲೋಕದ ಮೇಲೆ ವಿಶ್ವಾಸವಿಡುವ ಸಮೂಹವು ಅಲ್ಲಾಹ್ ಮತ್ತು ಆತನ ಪ್ರವಾದಿಯ ಶತ್ರುಗಳೊಂದಿಗೆ ಪ್ರೀತಿ, ವಾತ್ಸಲ್ಯ ಮಾಡುವುದನ್ನು ನೀವು ಕಾಣಲಾರಿರಿ. ಅದು ಅವರ ತಂದೆಯಾಗಿದ್ದರೂ, ಮಕ್ಕಳಾಗಿದ್ದರೂ, ಸೋದರರಾಗಿದ್ದರೂ ಅಥವಾ ಸಂಬಂಧಿಕರಾಗಿದ್ದರೂ ಸರಿಯೇ". **(58:22)**

4. ಸಂಘಟನೆಯ ಸಂಗಾತಿಗಳಿಗೆ ಉಪದೇಶಿಸಿರಿ, ಅವರ ಹಿತಚಿಂತನೆ ಮಾಡಿರಿ. ಪರಸ್ಪರ ಉಪದೇಶಿಸುವ ಪರಿಪಾಠವನ್ನು ಜಾಗೃತವಾಗಿರಿಸಿರಿ. ಏಕೆಂದರೆ ಇದುವೇ ವಿಜಯದ ಹಾದಿ.

وَالْعَصْرِ ۝١ اِنَّ الْاِنْسَانَ لَفِيْ خُسْرٍ ۝٢ اِلَّا الَّذِيْنَ اٰمَنُوْا وَعَمِلُوا
الصّٰلِحٰتِ وَتَوَاصَوْا بِالْحَقِّ ۙ وَتَوَاصَوْا بِالصَّبْرِ ۝٣

**"ಕಾಲದಾಣೆ! ನಿಶ್ಚಯವಾಗಿಯೂ ಮನುಷ್ಯನು ನಷ್ಟದಲ್ಲಿದ್ದಾನೆ. ಸತ್ಯವಿಶ್ವಾಸ ಕೈಗೊಂಡು ಸತ್ಕರ್ಮಗಳನ್ನು ಮಾಡಿದ ಪರಸ್ಪರ ಸತ್ಯಧರ್ಮದ ಉಪದೇಶ ಮತ್ತು ಪರಸ್ಪರ ಸಹನೆಯ ಉಪದೇಶ ಮಾಡಿದವರ ಹೊರತು". (ಪವಿತ್ರ ಕುರ್‌ಆನ್: 103)**

5. ಸಂಘಟನೆಯ ಶಿಸ್ತನ್ನು ಪೂರ್ಣವಾಗಿ ಪಾಲಿಸಿರಿ. ಅದನ್ನು ಕೇವಲ ಸಂಘಟನೆಯ ಸ್ಥಿರತೆಗೆ ಪೂರಕವೆಂದು ಭಾವಿಸದಿರಿ. ಅದನ್ನೊಂದು ಧಾರ್ಮಿಕ ಕರ್ತವ್ಯವೆಂದೇ ಬಗೆಯಿರಿ.

ಅಲ್ಲಾಹನು ಈ ರೀತಿ ಆದೇಶಿಸಿರುವನು:

اِنَّمَا الْمُؤْمِنُوْنَ الَّذِيْنَ اٰمَنُوْا بِاللّٰهِ وَرَسُوْلِهٖ وَاِذَا كَانُوْا مَعَهٗ عَلٰٓى اَمْرٍ
جَامِعٍ لَّمْ يَذْهَبُوْا حَتّٰى يَسْتَاْذِنُوْهُ ؕ اِنَّ الَّذِيْنَ يَسْتَاْذِنُوْنَكَ اُولٰٓئِكَ الَّذِيْنَ
يُؤْمِنُوْنَ بِاللّٰهِ وَرَسُوْلِهٖ ۚ

"ಅಲ್ಲಾಹನನ್ನೂ ಆತನ ಪ್ರವಾದಿಯನ್ನೂ ಹೃತ್ಪೂರ್ವಕವಾಗಿ ನಂಬಿದವರೇ ನೈಜ ಸತ್ಯ ವಿಶ್ವಾಸಿಗಳು. ಏನಾದರೂ ಸಾಮೂಹಿಕ ಕಾರ್ಯದ ಸಂದರ್ಭ ಬಂದಾಗ ಅವರು ಪ್ರವಾದಿಯ ಜೊತೆಗಿದ್ದರೆ ಅವರ ಅನುಮತಿ ಇಲ್ಲದೆ ಹೋಗುವುದಿಲ್ಲ. ವಾಸ್ತವದಲ್ಲಿ ಪ್ರವಾದಿಯ ಅನುಮತಿ ಪಡೆಯುವವರೇ ನಿಜವಾಗಿಯೂ ಅಲ್ಲಾಹನನ್ನೂ ಅವನ ಪ್ರವಾದಿಯನ್ನೂ ನಂಬುವವರು". (ಪವಿತ್ರ ಕುರ್‌ಆನ್, 24:62)

ಸಂಘಟನೆಯ ಶಿಸ್ತುಪಾಲನೆ ಮತ್ತು ನಾಯಕನ ಅನುಸರಣೆ ಕೇವಲ ಒಂದು ಕಾಯಿದೆಯ ವಿಷಯವಲ್ಲ. ಅದೊಂದು ಪ್ರಮುಖ ಧಾರ್ಮಿಕ ವಿಷಯವೂ ಹೌದು. ಸಂಘಟನೆಯ ಶಿಸ್ತು ಪಾಲಿಸುವವರ ಮತ್ತು ಸಂಘಟನೆಯ ಹೊಣೆಗಾರಿಕೆಯಿಂದ ನಾಯಕನ ಅನುಮತಿ ಇಲ್ಲದೆ ವಿಮುಕ್ತರಾಗದವರ ಸತ್ಯವಿಶ್ವಾಸಕ್ಕೆ ಪವಿತ್ರ ಕುರ್‌ಆನ್ ಸಾಕ್ಷ್ಯವಹಿಸಿದೆ.

6. ಸಂಘಟಿತ ಜೀವನದಲ್ಲಿ ಆಗುವ ಯಾವುದೇ ಒಳಿತಿನ ಕಾರ್ಯದಲ್ಲಿ ಹೃತ್ಪೂರ್ವಕವಾಗಿ ಸಹಕರಿಸಿರಿ. ನಿಮಗೆ ಸಾಧ್ಯವಿದ್ದದ್ದನ್ನೆಲ್ಲಾ ಮಾಡುವಲ್ಲಿ ಯಾವುದೇ ಲೋಪ ತೋರದಿರಿ. ಸ್ವಾರ್ಥ, ಸ್ವಹಿತಾಸಕ್ತಿ ಮತ್ತು ಅಹಂಭಾವದಂತಹ ದುಷ್ಟ ಭಾವನೆಗಳಿಂದ ನಿಮ್ಮ ಚಾರಿತ್ರ್ಯವನ್ನು ಪಾವನಗೊಳಿಸಿರಿ. ಪವಿತ್ರ ಕುರ್‌ಆನ್ ಈ ರೀತಿ ಆದೇಶಿಸಿದೆ:

وَتَعَاوَنُوا عَلَى الْبِرِّ وَالتَّقْوٰى

"ಒಳಿತು ಮತ್ತು ಧರ್ಮನಿಷ್ಠೆಯ ಕಾರ್ಯಗಳಲ್ಲಿ ಪರಸ್ಪರ ಸಹಕರಿಸಿರಿ". (5:2)

7. ಸಂಗಾತಿಗಳೊಂದಿಗೆ ಉತ್ತಮ ಸಂಬಂಧವನ್ನು ಬೆಳೆಸಿರಿ. ಎಂದಾದರೂ ಯಾರೊಂದಿಗೂ ಭಿನ್ನಾಭಿಪ್ರಾಯವಾದರೆ ಕೂಡಲೇ ಅದನ್ನು ನಿವಾರಿಸಿ ಸುಧಾರಣೆ ಮಾಡಿರಿ. ಮನಸ್ಸನ್ನು ದ್ವೇಷ ಭಾವನೆಯಿಂದ ಮುಕ್ತವಾಗಿಡಿರಿ.

فَاتَّقُوا اللّٰهَ وَاَصْلِحُوْا ذَاتَ بَيْنِكُمْ

"ಅಲ್ಲಾಹನನ್ನು ಭಯಪಡಿರಿ ಮತ್ತು ಪರಸ್ಪರ ಸಂಬಂಧಗಳನ್ನು ಉತ್ತಮವಾಗಿರಿಸಿ". (ಪವಿತ್ರ ಕುರ್‌ಆನ್, 8:1)

8. ಇಸ್ಲಾಮೀ ಸಂಘಟನೆಯ ನಾಯಕನನ್ನು ಸಸಂತೋಷ ಅನುಸರಿಸಿರಿ. ಆತನ ಹಿತಚಿಂತಕರೂ, ನಿಷ್ಠಾವಂತರೂ ಆಗಿರಿ.

ಪ್ರವಾದಿ(ಸ) ಈ ರೀತಿ ಹೇಳಿರುವರು: "ಮುಸ್ಲಿಮರು ತಮಗೆ ಮೆಚ್ಚುಗೆಯಾದರೂ, ಆಗದಿದ್ದರೂ ತಮ್ಮ ನಾಯಕನ ಮಾತನ್ನು ತಪ್ಪದೆ ಆಲಿಸಬೇಕು ಮತ್ತು ಅನುಸರಿಸಬೇಕು. ಆದರೆ ಅದು ದೇವಾಜ್ಞೋಲ್ಲಂಘನೆಯ ಮಾತು ಆಗಿರದಿದ್ದರೆ ಮಾತ್ರ. ಒಂದು ವೇಳೆ ಆತನು ದೇವಾಜ್ಞೋಲ್ಲಂಘನೆಯ ಆದೇಶ ನೀಡಿದರೆ ಅದನ್ನು ಆಲಿಸಲೂ ಬಾರದು, ಪಾಲಿಸಲೂ ಬಾರದು". (ಬುಖಾರಿ, ಮುಸ್ಲಿಮ್)

ಹ. ತಮೀಮ್ ದಾರೀ(ರ) ಹೇಳುತ್ತಾರೆ, ಪ್ರವಾದಿ(ಸ) ಹೇಳಿದರು: "ಧರ್ಮವೆಂದರೆ

ಹಿತಚಿಂತನೆ ಮತ್ತು ನಿಷ್ಠೆಯಾಗಿದೆ. ಪ್ರವಾದಿವರ್ಯರು(ಸ) ಮೂರು ಸಲ ಈ ಮಾತನ್ನು ಆವರ್ತಿಸಿದರು. 'ಯಾರ ಹಿತಚಿಂತನೆ ಮತ್ತು ನಿಷ್ಠೆ' ಎಂದು ನಾವು ಕೇಳಿದೆವು. ಆಗ ಪ್ರವಾದಿ(ಸ) ಹೇಳಿದರು: ಅಲ್ಲಾಹನ, ಆತನ ಪ್ರವಾದಿಯ, ಆತನ ಗ್ರಂಥದ, ಮುಸ್ಲಿಮರ ನಾಯಕರ ಮತ್ತು ಮುಸ್ಲಿಮ್ ಜನ ಸಾಮಾನ್ಯರ ಹಿತಚಿಂತನೆ ಮತ್ತು ನಿಷ್ಠೆ". (ಮುಸ್ಲಿಮ್)

9. ಸ್ವಸಂಘಟನೆಯ ಪಕ್ಷಪಾತ, ಸಂಕುಚಿತತೆ ಮತ್ತು ಗುಂಪುಗಾರಿಕೆಯಿಂದ ದೂರವಿರಿ. ವಿಶಾಲ ಮನಸ್ಸು ಮತ್ತು ಉತ್ತಮ ವ್ಯವಹಾರದಿಂದ ಎಲ್ಲರೊಂದಿಗೂ ಸಹಕರಿಸಿರಿ. ಧರ್ಮದ ಸೇವೆ ಮಾಡುವವರನ್ನೆಲ್ಲಾ ಗೌರವಿಸಿರಿ. ಅವರೊಡನೆ ಹಿತಚಿಂತನೆ ಮತ್ತು ನಿಸ್ವಾರ್ಥತೆಯೊಂದಿಗೆ ವರ್ತಿಸಿರಿ. ಅವರನ್ನು ನಿಮ್ಮ ಸಂಗಾತಿ ಮತ್ತು ಸಹಕಾರಿ ಎಂದೇ ಬಗೆಯಿರಿ. ಧರ್ಮದ ಸೇವೆ ಮಾಡುವವರೆಲ್ಲಾ ವಾಸ್ತವದಲ್ಲಿ ಪರಸ್ಪರ ಸಹಕಾರಿಗಳು ಮತ್ತು ಸಂಗಾತಿಗಳು. ಎಲ್ಲರೂ ಧರ್ಮದ ಸೇವೆಯನ್ನೇ ಉದ್ದೇಶಿಸುವವರು. ಎಲ್ಲರೂ ತಂತಮ್ಮ ತಿಳುವಳಿಕೆಗನುಸಾರ ಧರ್ಮದ ಸೇವೆಯನ್ನೇ ಮಾಡುತ್ತಿರುವವರು. ನಿಸ್ವಾರ್ಥತೆಯಿಂದ ಪರಸ್ಪರ ವಿಚಾರ ವಿನಿಮಯದ ಮೂಲಕ, ಪರಸ್ಪರರ ತಪ್ಪುಗಳನ್ನು ಬೊಟ್ಟು ಮಾಡುವುದು ಹಾಗೂ ಸರಿಯಾದ ವಿಚಾರ ಕೋನವನ್ನು ಸ್ಪಷ್ಟಪಡಿಸುವುದು ಒಂದು ಉತ್ತಮ ಕಾರ್ಯ. ಇದು ಆಗಲೇ ಬೇಕು. ಆದರೆ ಪರಸ್ಪರ ದ್ವೇಷ, ಅಸೂಯೆ, ಸಂಘರ್ಷ, ಒಬ್ಬರನ್ನೊಬ್ಬರು ಕೀಳಾಗಿ ಕಾಣುವುದು, ಪರಸ್ಪರ ಅಪಪ್ರಚಾರ ಮಾಡುವುದು ಇತ್ಯಾದಿಗಳು ಅತ್ಯಂತ ನೀಚ ಕಾರ್ಯ ಗಳಾಗಿವೆ. ಇದು ಧರ್ಮ ಪ್ರಚಾರಕರ ಘನತೆಗೆ ತಕ್ಕುದಲ್ಲ. ಜೀವನದಲ್ಲಿ ಧರ್ಮದ ಸೇವೆ ಮಾಡಬೇಕೆಂದೂ ತಮ್ಮ ಶಕ್ತಿ ಸಾಮರ್ಥ್ಯಗಳನ್ನು ದೇವಮಾರ್ಗದಲ್ಲಿ ವ್ಯಯಿಸಬೇಕೆಂದೂ ಅಂತರಾಳದಿಂದ ಬಯಸುವವರು ಇಂತಹ ನೀಚ ಭಾವನೆಗಳಿಂದ ಮುಕ್ತರಾಗಬೇಕು.

# ನಾಯಕತ್ವ

1. ಇಸ್ಲಾಮೀ ಸಂಘಟನೆಯ ನಾಯಕತ್ವಕ್ಕೆ ದೇವನಿಷ್ಠೆ ಮತ್ತು ದೇವಭಕ್ತಿಯಲ್ಲಿ ಎಲ್ಲರಿಗಿಂತಲೂ ಮುಂದಿರುವವರನ್ನೇ ಆರಿಸಿರಿ. ಧರ್ಮದಲ್ಲಿ ಸೊತ್ತುವಿತ್ತಗಳು ಮತ್ತು ಕುಲ ಗೋತ್ರಗಳು ಉಚ್ಚತೆಯ ಮಾನದಂಡವಲ್ಲ. ಎಲ್ಲರಿಗಿಂತಲೂ ಹೆಚ್ಚಾಗಿ ದೇವನನ್ನು ಭಯಪಡುವವನೇ ಧರ್ಮದ ದೃಷ್ಟಿಯಲ್ಲಿ ಅತ್ಯುತ್ತಮನು.

ಪವಿತ್ರ ಕುರ್‌ಆನ್ ಈ ರೀತಿ ಹೇಳುತ್ತದೆ:

يَاَيُّهَا النَّاسُ اِنَّا خَلَقْنٰكُمْ مِّنْ ذَكَرٍ وَّ اُنْثٰى وَجَعَلْنٰكُمْ شُعُوْبًا وَّ قَبَآئِلَ
لِتَعَارَفُوْا ؕ اِنَّ اَكْرَمَكُمْ عِنْدَ اللّٰهِ اَتْقٰكُمْ

**"ಓ ಮನುಷ್ಯರೇ! ನಾವು ನಿಮ್ಮನ್ನು ಓರ್ವ ಗಂಡು ಮತ್ತು ಹೆಣ್ಣಿನಿಂದ ಸೃಷ್ಟಿಸಿದೆವು. ನೀವು ಪರಸ್ಪರ ಪರಿಚಯ ಪಡಲಿಕ್ಕಾಗಿ ನಿಮ್ಮನ್ನು ಕುಲಗೋತ್ರಗಳಾಗಿ ವಿಂಗಡಿಸಿದೆವು. ನಿಮ್ಮ ಪೈಕಿ ಅತ್ಯಧಿಕ ಧರ್ಮನಿಷ್ಠನೇ ನಿಮ್ಮಲ್ಲಿ ಅತ್ಯುತ್ತಮನು". (49:13)**

2. ನಾಯಕತ್ವದ ಆಯ್ಕೆಯನ್ನು ಒಂದು ಧಾರ್ಮಿಕ ಕರ್ತವ್ಯವೆಂದು ಬಗೆಯಿರಿ. ನಿಮ್ಮ ಮತವನ್ನು ಒಂದು ವಿಶ್ವಸ್ಥ ನಿಧಿಯೆಂದು ಪರಿಗಣಿಸಿ ನಾಯಕತ್ವದ ಭಾರವನ್ನು ಹೊರಲು ಶಕ್ತನಾದವನ ಹಾಗೂ ಅದರ ಹೊಣೆಗಾರಿಕೆಗಳನ್ನು ಚೆನ್ನಾಗಿ ನಿರ್ವಹಿಸಬಲ್ಲವನ ಪರ ವಾಗಿಯೇ ಉಪಯೋಗಿಸಿರಿ.

ಅಲ್ಲಾಹನು ಈ ರೀತಿ ಆದೇಶಿಸಿರುವನು:

اِنَّ اللّٰهَ يَاْمُرُكُمْ اَنْ تُؤَدُّوا الْاَمٰنٰتِ اِلٰۤى اَهْلِهَا

**"ನಿಶ್ಚಯವಾಗಿಯೂ ಅಲ್ಲಾಹನು ನಿಮ್ಮ ವಿಶ್ವಸ್ಥ ನಿಧಿಗಳನ್ನು ಅದಕ್ಕೆ ಅರ್ಹರಾ ದವರಿಗೆ ವಹಿಸಿಕೊಡಲು ಆಜ್ಞಾಪಿಸುತ್ತಾನೆ". (ಪವಿತ್ರ ಕುರ್‌ಆನ್, 4:58)**

ಇದೊಂದು ಮೂಲಭೂತ ಮತ್ತು ಸಮಗ್ರ ಆದೇಶ. ಇದು ಎಲ್ಲ ರೀತಿಯ ವಿಶ್ವಸ್ಥ ನಿಧಿಗಳನ್ನೂ ಒಳಗೊಂಡಿದೆ. ಈ ಸೂಕ್ತ ಇರುವ ಅಧ್ಯಾಯದ ವಿಷಯಗಳನ್ನು ಗಮನಿ ಸಿದರೆ ಈ ಆದೇಶದಲ್ಲಿ ವಿಶ್ವಸ್ಥ ನಿಧಿಯ ಉದ್ದೇಶವು ಇಸ್ಲಾಮೀ ಸಂಘಟನೆಯ ನಾಯಕತ್ವವಾಗಿದೆ. ಅರ್ಥಾತ್ ಇಸ್ಲಾಮೀ ಸಂಘಟನೆಯ ನಾಯಕತ್ವದ ಭಾರ ವಹಿಸುವ ಅರ್ಹತೆ ಮತ್ತು

ಸಾಮರ್ಥ್ಯ ಇರುವವನಿಗೇ ವಹಿಸಿಕೊಡಿರಿ. ಈ ಬಗ್ಗೆ ಪಕ್ಷಪಾತ, ಮುಲಾಜು ಮತ್ತಿತರ ವಿಷಯಗಳಿಂದ ಪ್ರೇರಿತರಾಗಿ ಮತ ನೀಡುವುದು ವಿಶ್ವಸ್ಥ ನಿಧಿಯಲ್ಲಿ ವಂಚನೆ ಯಾಗಿದೆ. ಇದರಿಂದ ಸತ್ಯವಿಶ್ವಾಸಿಯು ದೂರವಿರಬೇಕು.

3. ನೀವು ಮುಸ್ಲಿಮರ ಸಂಘಟನೆಯ ನಾಯಕರಾದರೆ ನಿಮ್ಮ ಹೊಣೆಗಾರಿಕೆಗಳನ್ನು ಚೆನ್ನಾಗಿ ಅರಿತು ಪೂರ್ಣ ನಿಷ್ಠೆ, ಪರಿಶ್ರಮ, ಹೊಣೆಗಾರಿಕೆಯ ಪ್ರಜ್ಞೆ ಮತ್ತು ತತ್ಪರತೆಯಿಂದ ನಿಮ್ಮ ಕರ್ತವ್ಯಗಳನ್ನು ನೆರವೇರಿಸಿರಿ.

ಪ್ರವಾದಿ(ಸ) ಈ ರೀತಿ ಹೇಳಿರುವರು: "ಓರ್ವನು ಮುಸ್ಲಿಮರ ಸಾಮೂಹಿಕ ಕಾರ್ಯಗಳ ಹೊಣೆಗಾರನಾಗಿದ್ದು ತನ್ನ ಕರ್ತವ್ಯದಲ್ಲಿ ಚ್ಯುತಿ ಮಾಡಿದರೆ ಅಲ್ಲಾಹನು ಅವನ ಮೇಲೆ ಸ್ವರ್ಗವನ್ನು ನಿಷಿದ್ಧಗೊಳಿ ಸುವನು". (ಬುಖಾರಿ, ಮುಸ್ಲಿಮ್)

ಪ್ರವಾದಿ(ಸ) ಹೀಗೂ ಹೇಳಿರುವರು: "ಓರ್ವನು ಮುಸ್ಲಿಮರ ಸಾಮೂಹಿಕ ಕಾರ್ಯಗಳ ಹೊಣೆವಹಿಸಿ ಅವರ ಹಿತಚಿಂತನೆ ಮಾಡದಿದ್ದರೆ ಹಾಗೂ ತನ್ನ ಖಾಸಗೀ ಕಾರ್ಯಗಳಲ್ಲಿ ತನ್ನನ್ನು ದಣಿಸುವಂತೆ ಅವರ ಸಾಮೂಹಿಕ ಕಾರ್ಯಗಳಲ್ಲಿ ತನ್ನನ್ನು ದಣಿಸದಿದ್ದರೆ ಅಲ್ಲಾಹನು ಅವನನ್ನು ಅಧೋಮುಖ ವಾಗಿ ನರಕಕ್ಕೆ ತಳ್ಳುವನು". (ತಬ್ರಾನಿ)

4. ನಿಮ್ಮ ಅನುಯಾಯಿಗಳೊಂದಿಗೆ ನಯ-ವಿನಯ, ವಾತ್ಸಲ್ಯ, ನ್ಯಾಯ ಮತ್ತು ಕರುಣೆಯಿಂದ ವರ್ತಿಸಿರಿ. ಹಾಗಾದರೆ ಅವರು ಬಿಚ್ಚು ಮನಸ್ಸಿನಿಂದ ನಿಮ್ಮೊಂದಿಗೆ ಸಹಕರಿಸುವರು ಮತ್ತು ಅಲ್ಲಾಹನು ನಿಮ್ಮ ಸಂಘಟನೆಗೆ ತನ್ನ ಧರ್ಮದ ಸೇವೆಯ ಸೌಭಾಗ್ಯವನ್ನು ದಯಪಾಲಿಸುವನು. ಪವಿತ್ರ ಕುರ್‌ಆನಿನಲ್ಲಿ ಪ್ರವಾದಿವರ್ಯರ(ಸ) ಗುಣಗಾನ ಈ ರೀತಿ ಮಾಡಲಾಗಿದೆ:

فَبِمَا رَحْمَةٍ مِّنَ اللَّهِ لِنتَ لَهُمْ ۖ وَلَوْ كُنتَ فَظًّا غَلِيظَ الْقَلْبِ لَانفَضُّوا مِنْ حَوْلِكَ

"ತಾವು ಅವರ ಮಟ್ಟಿಗೆ ಅತ್ಯಂತ ಮೃದು ಹೃದಯಿಯಾಗಿರುವುದು ಅಲ್ಲಾಹನ ಕರುಣೆಯೇ ಆಗಿದೆ. ಅನ್ಯಥಾ ತಾವು ಕಠಿಣ ಹೃದಯಿಯಾಗಿರುತ್ತಿದ್ದರೆ ಇವರೆಲ್ಲರೂ ನಿಮ್ಮ ಬಳಿಯಿಂದ ಸರಿದು ಹೋಗುತ್ತಿದ್ದರು". **(3:159)**

ಪವಿತ್ರ ಕುರ್‌ಆನ್ ಪ್ರವಾದಿವರ್ಯರಿಗೆ(ಸ) ಹೀಗೆ ಆದೇಶಿಸಿದೆ:

وَاخْفِضْ جَنَاحَكَ لِمَنِ اتَّبَعَكَ مِنَ الْمُؤْمِنِينَ ﴿٢١٥﴾

"ತಮ್ಮನ್ನು ಅನುಸರಿಸುವ ಸತ್ಯವಿಶ್ವಾಸಿಗಳಿಗಾಗಿ ತಮ್ಮ ವಾತ್ಸಲ್ಯದ ಭುಜವನ್ನು ಬಗ್ಗಿಸಿರಿ". **(26:215)**

ಒಮ್ಮೆ ಹ. ಉಮರ್ ಬಿನ್ ಖತ್ತಾಬ್(ರ) ಭಾಷಣ ಮಾಡುತ್ತಾ ಈ ರೀತಿ ಹೇಳಿದರು:

"ಓ ಜನರೇ! ನಮ್ಮ ಬೆನ್ನ ಹಿಂದೆ ನಮ್ಮ ಹಿತಚಿಂತನೆ ಮಾಡುವುದು ಮತ್ತು ಒಳಿತಿನ ಕಾರ್ಯಗಳಲ್ಲಿ ನಮ್ಮೊಂದಿಗೆ ಸಹಕರಿಸುವುದು ನಿಮ್ಮ ಕರ್ತವ್ಯವಾಗಿದೆ".

ತರುವಾಯ ಹೀಗೆ ಹೇಳಿದರು: "ಓ ಸರಕಾರಿ ಅಧಿಕಾರಿಗಳೇ! ನಾಯಕನ ಕರುಣೆ ಮತ್ತು ನಮ್ರತೆಗಿಂತ ಹೆಚ್ಚು ಲಾಭದಾಯಕ ಮತ್ತು ದೇವನ ಬಳಿ ಹೆಚ್ಚು ಪ್ರಿಯಕರವಾದ ನಮ್ರತೆ ಬೇರೊಂದಿಲ್ಲ. ಅಂತೆಯೇ ನಾಯಕನ ತಿಳಿಗೇಡಿತನ, ಭಾವುಕತೆ ಮತ್ತು ಹಿಂದು ಮುಂದು ನೋಡದೆ ಕಾರ್ಯವೆಸಗುವುದಕ್ಕಿಂತ ಹೆಚ್ಚು ಹಾನಿಕರ ಮತ್ತು ಅಪ್ರಿಯ, ಅವಿವೇಕತನ ಮತ್ತು ಅಶಿಸ್ತು ಬೇರೊಂದಿಲ್ಲ".

5. ನಿಮ್ಮ ಸಂಗಾತಿಗಳ ಮಹತ್ವವನ್ನು ಮನಗಾಣಿರಿ. ಅವರ ಭಾವನೆಗಳನ್ನು ಗೌರವಿಸಿರಿ. ಅವರ ಆವಶ್ಯಕತೆಗಳನ್ನು ಅರಿಯಿರಿ. ಅವರು ನಿಮ್ಮನ್ನು ತಮ್ಮ ಅತಿದೊಡ್ಡ ಹಿತಚಿಂತಕನೆಂದು ಭಾವಿಸುವ ರೀತಿಯಲ್ಲಿ ಅವರೊಂದಿಗೆ ಸೋದರ ಭಾವದಿಂದ ವರ್ತಿಸಿರಿ.

ಹ. ಮಾಲಿಕ್ ಬಿನ್ ಹುವೈರಿಸ್(ರ) ಹೇಳುತ್ತಾರೆ: ನಾವು ಕೆಲವು ಮಂದಿ ಸಮವಯಸ್ಕ ಯುವಕರು ಪ್ರವಾದಿವರ್ಯರ(ಸ) ಸನ್ನಿಧಿಯಲ್ಲಿ ಇರಲಿಕ್ಕಾಗಿ ಹೋದೆವು. ಅವರ ಸನ್ನಿಧಿ ಯಲ್ಲಿ ನಾವು ಇಪ್ಪತ್ತು ರಾತ್ರಿಗಳನ್ನು ಕಳೆದೆವು. ನಿಜಕ್ಕೂ ಪ್ರವಾದಿ(ಸ) ಅತ್ಯಂತ ಮೃದು ಹೃದಯಿ ಮತ್ತು ಕರುಣಾಳು ಆಗಿದ್ದರು. ನಮಗೆ ಮನೆಯ ನೆನಪು ಕಾಡುತ್ತಿದೆಯೆಂದು ಪ್ರವಾದಿವರ್ಯರಿಗೆ(ಸ) ಭಾಸವಾದಾಗ ನೀವು ಮನೆಯಲ್ಲಿ ಯಾರನ್ನೆಲ್ಲ ಬಿಟ್ಟು ಬಂದಿರುವಿರಿ ಎಂದು ನಮ್ಮನ್ನು ಕೇಳಿದರು. ನಾವು ವಿವರವಾಗಿ ಹೇಳಿದಾಗ ಪ್ರವಾದಿ(ಸ) ಹೇಳಿದರು, ನೀವಿನ್ನು ನಿಮ್ಮ ಮನೆಗಳಿಗೆ ಮರಳಿರಿ. ಅವರ ಜೊತೆಯೇ ವಾಸಿಸಿರಿ. ನೀವು ಕಲಿತಿರುವುದನ್ನೆಲ್ಲ ಅವರಿಗೂ ಕಲಿಸಿರಿ. ಅವರಿಗೆ ಒಳಿತನ್ನು ಉಪದೇಶಿಸಿರಿ. ನಮಾಝ್ ಗಳನ್ನು ಅದರ ವೇಳೆಗಳಲ್ಲಿ ನಿರ್ವಹಿಸಿರಿ. ನಮಾಝ್‌ನ ವೇಳೆಯಾದಾಗ ನಿಮ್ಮಲ್ಲೊಬ್ಬ ಅದಾನ್ ಹೇಳಲಿ ಮತ್ತು ನಿಮ್ಮ ಪೈಕಿ ಜ್ಞಾನ ಮತ್ತು ಗುಣದಲ್ಲಿ ಅತ್ಯುತ್ತಮನು ನಮಾಝ್ ಮಾಡಿಸಲಿ.

6. ನಿಮ್ಮ ಸಂಗಾತಿಗಳನ್ನು ಗೌರವಿಸಿರಿ. ಅವರನ್ನೇ ನಿಮ್ಮ ನೈಜ ಬಂಡವಾಳವೆಂದು ಬಗೆದು ಪೂರ್ಣ ತತ್ಪರತೆ ಮತ್ತು ಪ್ರಾಮಾಣಿಕತೆಯಿಂದ ಅವರನ್ನು ತರಬೇತುಗೊಳಿಸಲು ಪ್ರಯತ್ನಿಸಿರಿ. ಅವರನ್ನು ಬಡವರು ಮತ್ತು ನಿರ್ಗತಿಕರೆಂದು ಪರಿಗಣಿಸಿ ದೇವನು ಲೌಕಿಕ ಐಶ್ವರ್ಯ ಮತ್ತು ಆಡಂಬರವನ್ನು ದಯಪಾಲಿಸಿದವರ ಕಡೆಗೆ ವಾಲಬೇಡಿರಿ:

وَاصْبِرْ نَفْسَكَ مَعَ الَّذِينَ يَدْعُونَ رَبَّهُمْ بِالْغَدَاةِ وَالْعَشِيِّ يُرِيدُونَ وَجْهَهُ وَلَا تَعْدُ عَيْنَاكَ عَنْهُمْ تُرِيدُ زِينَةَ الْحَيَاةِ الدُّنْيَا

**"ಆತನ ಸಂತುಷ್ಟಿಯನ್ನೇ ಉದ್ದೇಶಿಸಿಕೊಂಡು ಸಂಜೆ, ಮುಂಜಾನೆಗಳಲ್ಲಿ ತಮ್ಮ ಪ್ರಭುವನ್ನು ಕರೆದು ಪ್ರಾರ್ಥಿಸುವ ಜನರ ಜೊತೆಯಲ್ಲೇ ನಿಮ್ಮನ್ನು ನೀವು ಸಹಿಸಿಕೊಂಡಿರಿ. ಲೌಕಿಕ ಸೊಬಗನ್ನು ಬಯಸಿ ಅಂಥವರಿಂದ ಮುಖ ತಿರುಗಿಸದಿರಿ."**

**(ಪವಿತ್ರ ಕುರ್‌ಆನ್, 18:28)**

ತನು-ಮನ-ಧನಗಳಿಂದ ಧರ್ಮ ಪ್ರಚಾರ ಕಾರ್ಯದಲ್ಲಿ ತೊಡಗಿರುವ ಜನರೇ

ವಾಸ್ತವದಲ್ಲಿ ಒಂದು ಧಾರ್ಮಿಕ ಸಂಘಟನೆಯ ಬಂಡವಾಳವಾಗಿರುತ್ತಾರೆ. ಅವರ ಮಹತ್ವ ವನ್ನು ಮನಗಂಡು ತನ್ನ ಪೂರ್ಣ ಗಮನವನ್ನು ಅವರ ತರಬೇತಿ ಸುಧಾರಣೆಗಳಲ್ಲಿ ಕೇಂದ್ರೀ ಕರಿಸುವುದೇ ಸಂಘಟನೆಯ ನಾಯಕನ ಕರ್ತವ್ಯವಾಗಿದೆ.

7. ಸಂಘಟನೆಯ ಸಕಲ ಕಾರ್ಯ ಕಲಾಪಗಳನ್ನು ಸಂಗಾತಿಗಳೊಂದಿಗೆ ಸಮಾಲೋಚನೆ ನಡೆಸಿಯೇ ಮಾಡಿರಿ. ಸಂಗಾತಿಗಳ ಉಪಯುಕ್ತ ಸಲಹೆಗಳನ್ನು ಸ್ವೀಕರಿಸಿ ಸಂಘಟನಾ ಕಾರ್ಯಗಳಲ್ಲಿ ಅವರ ಅಭಿರುಚಿಯನ್ನೂ ಕಾಳಜಿಯನ್ನೂ ಇನ್ನಷ್ಟು ವರ್ಧಿಸಿರಿ. ಸತ್ಯ ವಿಶ್ವಾಸಿಗಳ ವ್ಯವಹಾರಗಳು ಪರಸ್ಪರ ಸಮಾಲೋಚನೆಯಿಂದಲೇ ಜರಗುತ್ತವೆಯೆಂದು ಪವಿತ್ರ ಕುರ್‌ಆನ್ ವರ್ಣಿಸಿದೆ.

وَأَمْرُهُمْ شُورَىٰ بَيْنَهُمْ

"ಅವರ ವ್ಯವಹಾರಗಳು ಪರಸ್ಪರ ಸಮಾಲೋಚನೆಯಿಂದಲೇ ನೆರವೇರುತ್ತವೆ".

**(42:38)**

ಪ್ರಮುಖ ವಿಷಯಗಳಲ್ಲಿ ತಮ್ಮ ಸಂಗಾತಿಗಳೊಂದಿಗೆ ಸಮಾಲೋಚನೆ ನಡೆಸಿರೆಂದು ಪ್ರವಾದಿವರ್ಯರಿಗೆ(ಸ) ಆದೇಶಿಸಲಾಯಿತು.

وَشَاوِرْهُمْ فِي الْأَمْرِ

"ಧರ್ಮದ ಕೆಲಸಗಳಲ್ಲಿ ಇವರೊಡನೆ ಸಮಾಲೋಚನೆ ನಡೆಸಿರಿ". **(3:159)**

8. ಸಂಘಟನಾ ಕಾರ್ಯಗಳಲ್ಲಿ ಸದಾ ವಿಶಾಲ ಮನಸ್ಸು ಮತ್ತು ತ್ಯಾಗ ಮನೋಭಾವ ದಿಂದ ವರ್ತಿಸಿರಿ. ಯಾವ ವಿಷಯದಲ್ಲೂ ನಿಮಗಾಗಲೀ ನಿಮ್ಮ ಮನೆಯವರಿಗಾಗಲೀ ಪ್ರಾಶಸ್ತ್ಯ ನೀಡದಿರಿ. ತನ್ಮೂಲಕ ನಿಮ್ಮ ಸಂಗಾತಿಗಳಿಗೂ ಎಲ್ಲ ರೀತಿಯ ತ್ಯಾಗಕ್ಕೆ ಸಸಂತೋಷ ಸಿದ್ಧವಾಗಿರುವಂತೆ ಪ್ರೇರೇಪಿಸಿರಿ. ಅವರಲ್ಲಿ ಸಂಘಟನೆಯ ಬಗ್ಗೆ ಜಿಗುಪ್ಸೆ ಮತ್ತು ಅನಾಸ್ಥೆ ಉಂಟಾಗದಿರಲಿ. ಅವರಲ್ಲಿ ಸ್ವಾರ್ಥ ಸಾಧನೆಯ ಪ್ರವೃತ್ತಿ ಬೆಳೆಯದಿರಲಿ. ಒಮ್ಮೆ ಹ. ಅಬೂಬಕರ್(ರ) ಹ. ಉಮರ್‌ರಿಗೆ(ರ) ಈ ರೀತಿ ಹೇಳಿದರು:

"ಓ ಖತ್ತಾಬರ ಪುತ್ರರೇ! ನಾನು ನಿಮ್ಮನ್ನು ಮುಸ್ಲಿಮರ ನಾಯಕನಾಗಿ ಆಯ್ಕೆ ಮಾಡಿರುವುದು ನೀವು ಅವರೊಂದಿಗೆ ವಾತ್ಸಲ್ಯದಿಂದ ವರ್ತಿಸುವುದಕ್ಕಾಗಿದೆ. ನೀವು ಪ್ರವಾದಿ ವರ್ಯರ(ಸ) ಸಹವಾಸದಲ್ಲಿದ್ದವರು. ಪ್ರವಾದಿವರ್ಯರು(ಸ) ನಮಗೆ ತಮ್ಮ ಸ್ವಂತಕ್ಕಿಂತ ಹಾಗೂ ನಮ್ಮ ಮನೆಯವರಿಗೆ ತಮ್ಮ ಸ್ವಂತ ಮನೆಯವರಿಗಿಂತ ಯಾವ ರೀತಿ ಪ್ರಾಶಸ್ತ್ಯ ನೀಡುತ್ತಿದ್ದರೆಂಬುದು ನಿಮಗೆ ತಿಳಿದೇ ಇದೆ. ಎಷ್ಟರವರೆಗೆಂದರೆ ಪ್ರವಾದಿವರ್ಯರಿಂದ ನಮಗೆ ಲಭಿಸಿದುದರಲ್ಲಿ ಉಳಿದದ್ದನ್ನು ನಾವು ಪ್ರವಾದಿವರ್ಯರಿಂದ(ಸ) ಮನೆಯವರಿಗೆ ಉಡುಗೊರೆಯಾಗಿ ಕಳುಹಿಸುತ್ತಿದ್ದೆವು". **(ಕಿತಾಬುಲ್ ಖಿರಾಜ್)**

9. ಪಕ್ಷಪಾತ ಮತ್ತು ಸ್ವಜನಾನುರಾಗದಿಂದ ಸದಾ ಮುಕ್ತರಾಗಿರಿ. ಅನಗತ್ಯ ಔದಾರ್ಯ ಮತ್ತು ದಾಕ್ಷಿಣ್ಯವನ್ನು ತೋರದಿರಿ. ಹ. ಯಝೀದ್ ಬಿನ್ ಸುಫ್ಯಾನ್(ರ) ಹೇಳುತ್ತಾರೆ: ಹ. ಅಬೂಬಕರ್(ರ) ನನ್ನನ್ನು ದಂಡನಾಯಕನಾಗಿ ಮಾಡಿ ಸಿರಿಯಾಗೆ ರವಾನಿಸುವಾಗ ಈ ರೀತಿ ಉಪದೇಶಿಸಿದರು.

"ಓ ಯಝೀದ್! ನಿಮ್ಮ ಕೆಲವು ಆಪ್ತರೂ ಸಂಬಂಧಿಕರೂ ಇರುವರು. ನೀವು ಕೆಲವು ಹುದ್ದೆಗಳನ್ನು ನೀಡುವಾಗ ಅವರಿಗೆ ಪ್ರಾಶಸ್ತ್ಯ ನೀಡಬಹುದು. ನಿಮ್ಮ ಮಟ್ಟಿಗೆ ನನಗೆ ಅತ್ಯಂತ ಕಳವಳ ಮತ್ತು ಭಯದ ವಿಷಯ ಇದುವೇ ಆಗಿದೆ".

ಪ್ರವಾದಿ(ಸ) ಹೇಳುತ್ತಾರೆ: ಯಾವನು ಮುಸ್ಲಿಮರ ಸಾಮೂಹಿಕ ಕಾರ್ಯಗಳ ಹೊಣೆಗಾರನಾಗಿದ್ದು ಕೇವಲ ಸಂಬಂಧದ ಕಾರಣ ಅಥವಾ ಕೇವಲ ಗೆಳೆತನದ ಕಾರಣ ಯಾರನ್ನಾದರೂ ಮುಸ್ಲಿಮರ ಅಧಿಕಾರಿಯಾಗಿ ಮಾಡಿದರೆ, ಅಲ್ಲಾಹನು ಅವನಿಂದ ಯಾವುದೇ ಪರಿಹಾರ ಸ್ವೀಕರಿಸಲಾರನು. ಕೊನೆಗೆ ಅವನನ್ನು ನರಕಕ್ಕೆ ಹಾಕಲಾಗುವುದು.

(ಕಿತಾಬುಲ್ ಖಿರಾಜ್)

10. ಸಂಘಟನೆಯ ಶಿಸ್ತನ್ನು ಹೆಚ್ಚೆಚ್ಚು ಸುದೃಢಗೊಳಿಸಲು ಪ್ರಯತ್ನಿಸಿರಿ. ಎಂದೂ ಈ ವಿಷಯದಲ್ಲಿ ಅನಗತ್ಯ ವಿನಯ ಮತ್ತು ಕ್ಷಮಾಶೀಲತೆಯನ್ನು ಪ್ರದರ್ಶಿಸದಿರಿ.

ಅಲ್ಲಾಹನು ಈ ರೀತಿ ಆಜ್ಞಾಪಿಸಿರುವನು:

"ಅವರು ತಮ್ಮ ಕೆಲವೊಂದು ಕಾರ್ಯಕ್ಕಾಗಿ ನಿಮ್ಮಿಂದ ಅನುಮತಿ ಕೇಳಿದರೆ ಅವರ ಪೈಕಿ ನೀವಿಚ್ಛಿಸುವವರಿಗೆ ಅನುಮತಿ ನೀಡಿರಿ ಮತ್ತು ಅವರ ಪಾಪ ವಿಮೋಚನೆಗಾಗಿ ಅಲ್ಲಾಹನಲ್ಲಿ ಪ್ರಾರ್ಥಿಸಿರಿ". (ಪವಿತ್ರ ಕುರ್‌ಆನ್, 24:62)

ಅರ್ಥಾತ್ ಸಂಘಟನೆಯ ಕಾರ್ಯಕರ್ತರು ಸಾಮೂಹಿಕ ಅಗತ್ಯಕ್ಕಾಗಿ ಸಭೆ ಸೇರಿರುವಾಗ ಕೆಲವರು ತಮ್ಮ ಖಾಸಗಿ ಅಗತ್ಯಕ್ಕಾಗಿ ಅಥವಾ ಅಡಚಣೆಗಳಿಂದಾಗಿ ಅನುಮತಿ ಕೇಳಿದರೆ ಸಂಘಟನೆಯ ನಾಯಕನು ಸಂಘಟನೆಯ ಶಿಸ್ತನ್ನು ಕಾಪಾಡುವ ಸಲುವಾಗಿ ಸಂಘಟನಾ ಕಾರ್ಯಕ್ಕಿಂತಲೂ ಅಗತ್ಯವಾದ ಖಾಸಗೀ ಕಾರ್ಯವಿದ್ದವರಿಗೆ ಹಾಗೂ ಧರ್ಮಸಮ್ಮತವಾದ ಅಡಚಣೆ ಇರುವವರಿಗೆ ಮಾತ್ರ ಅನುಮತಿ ನೀಡಬೇಕು.

❖ ❖ ❖ ❖

ಅಧ್ಯಾಯ - ಐದು

# ದಾಸ್ಯ ಭಾವನೆ

## ಪಶ್ಚಾತ್ತಾಪ

1. ಪಶ್ಚಾತ್ತಾಪ ಸ್ವೀಕರಿಸಲ್ಪಡುವ ಬಗ್ಗೆ ಎಂದೂ ನಿರಾಶರಾಗದಿರಿ. ಎಷ್ಟೇ ದೊಡ್ಡ ಪಾಪಗಳಾಗಿರಲಿ, ಪಶ್ಚಾತ್ತಾಪದಿಂದ ಆತ್ಮವನ್ನು ಶುದ್ಧಗೊಳಿಸಿರಿ. ಅಲ್ಲಾಹನಲ್ಲಿ ಪೂರ್ಣ ಭರವಸೆ ಇಡಿರಿ. ನಿರಾಶೆ ಸತ್ಯನಿಷೇಧಿಗಳ ಲಕ್ಷಣ. ಅತ್ಯಧಿಕ ಪಶ್ಚಾತ್ತಾಪ ಪಡುವವರೆಂಬುದೇ ಸತ್ಯವಿಶ್ವಾಸಿಗಳ ವಿಶಿಷ್ಟ ಗುಣ. ಅವರೆಂದೂ ಯಾವ ಸ್ಥಿತಿಯಲ್ಲೂ ಅಲ್ಲಾಹನಿಂದ ನಿರಾಶ ರಾಗುವುದಿಲ್ಲ. ಪಾಪಗಳ ಆಧಿಕ್ಯದಿಂದ ಕಳವಳಗೊಂಡು ನಿರಾಶರಾಗುವುದು ಮತ್ತು ಪಶ್ಚಾತ್ತಾಪ ಸ್ವೀಕರಿಸಲ್ಪಡುವ ಬಗ್ಗೆ ನಂಬಿಕೆ ಇಲ್ಲದಿರುವುದು ಬುದ್ಧಿ ವಿವೇಕಗಳ ವಿನಾಶ ಕಾರಿ ಪಥಭ್ರಷ್ಟತೆಯಾಗಿದೆ. ದೇವನು ತನ್ನ ಆಪ್ತ ದಾಸರ ಬಗ್ಗೆ ಅವರಿಂದ ಪಾಪಗಳು ಸಂಭವಿಸುವುದೇ ಇಲ್ಲ ಎಂದು ಎಲ್ಲೂ ಹೇಳಿಲ್ಲ. ಬದಲಾಗಿ ಅವರಿಂದ ಪಾಪಗಳು ಸಂಭವಿಸಿದರೂ ಅವರು ಅದರಲ್ಲಿ ಹಟ ಹಿಡಿಯುವುದಿಲ್ಲ. ಮುಕ್ತವಾಗಿ ತಮ್ಮ ಪಾಪಗಳನ್ನು ಒಪ್ಪಿಕೊಳ್ಳುತ್ತಾರೆ. ತಮ್ಮನ್ನು ಅವುಗಳಿಂದ ಮುಕ್ತಗೊಳಿಸಲು ಹಾತೊರೆಯುತ್ತಾರೆ ಎಂದು ಬಂದಿದೆ.

والذين اذا فعلوا فاحشة او ظلموا انفسهم ذكروا الله فاستغفروا لذنوبهم
ومن يغفر الذنوب الا الله ولم يصروا على ما فعلوا وهم يعلمون ﴿١٣٥﴾

"ಅವರಿಂದ ಏನಾದರೂ ಅಶ್ಲೀಲ ಕಾರ್ಯ ಸಂಭವಿಸಿದಾಗ ಅಥವಾ ಅವರು ತಮ್ಮ ಮೇಲೆಯೇ ಅಕ್ರಮವೆಸಗಿದಾಗ ಅಲ್ಲಾಹನನ್ನು ಸ್ಮರಿಸುತ್ತಾರೆ ಮತ್ತು ತಮ್ಮ ಪಾಪಗಳಿಗೆ ಕ್ಷಮೆ ಯಾಚಿಸುತ್ತಾರೆ. ಅಲ್ಲಾಹನ ಹೊರತು ಪಾಪಗಳನ್ನು ಕ್ಷಮಿಸುವವನು ಯಾರಿದ್ದಾರೆ? ಅವರು ತಿಳಿದೂ ತಿಳಿದೂ ತಮ್ಮ ದುಷ್ಕೃತ್ಯಗಳ ಬಗ್ಗೆ ಹಟ ಹಿಡಿಯುವವರಲ್ಲ".

**(ಪವಿತ್ರ ಕುರ್‌ಆನ್, 3:135)**

ಇನ್ನೊಂದೆಡೆ ಪವಿತ್ರ ಕುರ್‌ಆನ್ ಈ ರೀತಿ ಹೇಳಿದೆ:

إِنَّ الَّذِينَ اتَّقَوْا إِذَا مَسَّهُمْ طَٰئِفٌ مِّنَ الشَّيْطَٰنِ تَذَكَّرُوا فَإِذَا هُم مُّبْصِرُونَ ﴿٢٠١﴾

"ನಿಶ್ಚಯವಾಗಿಯೂ ಧರ್ಮನಿಷ್ಠೆ ಉಳ್ಳವರನ್ನು ಶೈತಾನನ ಪ್ರಲೋಭನೆ ಸ್ಪರ್ಶಿಸಿ ಏನಾದರೂ ದುರಾಲೋಚನೆ ಹುಟ್ಟಿದರೆ ಕೂಡಲೇ ಎಚ್ಚರಗೊಳ್ಳುತ್ತಾರೆ ಮತ್ತು ಸರಿಯಾದ ಹಾದಿ ಯಾವುದೆಂದು ಅವರಿಗೆ ಸ್ಪಷ್ಟವಾಗಿ ಗೋಚರಿಸುತ್ತದೆ". (ಪವಿತ್ರ ಕುರ್‌ಆನ್, 7:201)

ಪ್ರವಾದಿ(ಸ) ಹೀಗೆ ಹೇಳಿರುವರು: "ಎಲ್ಲ ಮನುಷ್ಯರೂ ಪಾಪಿಗಳೇ ಆಗಿದ್ದಾರೆ. ಅವರ ಪೈಕಿ ಅತ್ಯುತ್ತಮ ಪಾಪಿಗಳು ಅತ್ಯಧಿಕ ಪಶ್ಚಾತ್ತಾಪ ಪಡುವವರಾಗಿದ್ದಾರೆ". (ತಿರ್ಮಿದಿ)

ಪವಿತ್ರ ಕುರ್‌ಆನಿನಲ್ಲಿ ಅಲ್ಲಾಹನು ತನ್ನ ಪ್ರಿಯ ದಾಸರ ವಿಶೇಷ ಗುಣವನ್ನು ವಿವರಿಸುತ್ತಾ ಅವರು ರಾತ್ರಿಯ ಅಂತಿಮ ಜಾವದಲ್ಲಿ ದೇವನ ಮುಂದೆ ಪ್ರಾರ್ಥಿಸುತ್ತಾರೆ ಮತ್ತು ಪಶ್ಚಾತ್ತಾಪ ಪಡುತ್ತಾರೆ ಎಂದಿದ್ದಾನೆ. ಪಶ್ಚಾತ್ತಾಪ ಪಡುತ್ತಿರುವಂತೆ ಆತನು ಸತ್ಯ ವಿಶ್ವಾಸಿಗಳಿಗೆ ಆದೇಶಿಸಿದ್ದಾನೆ. ಅಲ್ಲಾಹನು ಅವರ ಪಾಪಗಳ ಮೇಲೆ ತನ್ನ ಕ್ಷಮೆ ಮತ್ತು ಔದಾರ್ಯದ ಪರದೆಯನ್ನು ಹಾಕುವನೆಂದೂ ಭರವಸೆ ನೀಡಿರುವನು. ಏಕೆಂದರೆ ಅವನು ಅತ್ಯಧಿಕ ಕ್ಷಮಾಶೀಲನೂ, ತನ್ನ ದಾಸರನ್ನು ಅತ್ಯಧಿಕ ಪ್ರೀತಿಸುವವನೂ ಆಗಿರುತ್ತಾನೆ.

وَاسْتَغْفِرُوا رَبَّكُمْ ثُمَّ تُوبُوا إِلَيْهِ ۚ إِنَّ رَبِّي رَحِيمٌ وَدُودٌ ﴿٩٠﴾

"ನಿಮ್ಮ ಪ್ರಭುವಿನಿಂದ ಕ್ಷಮಾಯಾಚನೆ ಮಾಡಿರಿ ಮತ್ತು ಅವನತ್ತ ಪಶ್ಚಾತ್ತಾಪ ಪಟ್ಟು ಮರಳಿರಿ. ನಿಶ್ಚಯವಾಗಿಯೂ ನನ್ನ ಪ್ರಭು ಪರಮ ದಯಾಮಯನೂ, ಅತ್ಯಧಿಕ ಪ್ರೀತಿಸುವವನೂ ಆಗಿರುತ್ತಾನೆ". (ಪವಿತ್ರ ಕುರ್‌ಆನ್, 11:90)

2. ಅಲ್ಲಾಹನ ಕರುಣೆಯ ಬಗ್ಗೆ ಸದಾ ಆಶಾವಾದಿಯಾಗಿರಿ. ನನ್ನ ಪಾಪಗಳು ಎಷ್ಟೇ ಅಧಿಕವಿದ್ದರೂ ದೇವ ಕರುಣೆಯು ಅದಕ್ಕಿಂತಲೂ ಎಷ್ಟೋ ವಿಶಾಲವಾಗಿದೆ ಎಂದು ಭರವಸೆ ಇಡಿರಿ. ಸಮುದ್ರದ ನೊರೆಗಿಂತಲೂ ಹೆಚ್ಚು ಪಾಪಗಳನ್ನೆಸಗಿದವನು ತನ್ನ ಪಾಪಗಳಿಗೆ ಪಶ್ಚಾತ್ತಾಪಪಟ್ಟು ದೇವ ಸನ್ನಿಧಿಯಲ್ಲಿ ಪ್ರಾರ್ಥಿಸಿದರೆ ದೇವನು ಅವನ ಪ್ರಾರ್ಥನೆಯನ್ನು ಆಲಿಸುತ್ತಾನೆ ಮತ್ತು ಅವನನ್ನು ತನ್ನ ಕರುಣೆಯಿಂದ ಆಚ್ಛಾದಿಸುತ್ತಾನೆ.

يَٰعِبَادِيَ الَّذِينَ أَسْرَفُوا عَلَىٰ أَنفُسِهِمْ لَا تَقْنَطُوا مِن رَّحْمَةِ اللَّهِ ۚ إِنَّ اللَّهَ يَغْفِرُ الذُّنُوبَ جَمِيعًا ۚ إِنَّهُ هُوَ الْغَفُورُ الرَّحِيمُ ﴿٥٣﴾ وَأَنِيبُوا إِلَىٰ رَبِّكُمْ وَأَسْلِمُوا لَهُ مِن قَبْلِ أَن يَأْتِيَكُمُ الْعَذَابُ ثُمَّ لَا تُنصَرُونَ ﴿٥٤﴾

"ತಮ್ಮ ಮೇಲೆ ತಾವೇ ಅತಿರೇಕವೆಸಗಿಕೊಂಡಿರುವ ಓ ನನ್ನ ದಾಸರೇ! ಅಲ್ಲಾಹನ ಕರುಣೆಯಿಂದ ಎಂದೂ ನಿರಾಶರಾಗದಿರಿ. ನಿಸ್ಸಂದೇಹವಾಗಿ ಅಲ್ಲಾಹನು ನಿಮ್ಮ ಎಲ್ಲ

ಪಾಪಗಳನ್ನೂ ಕ್ಷಮಿಸುವನು. ನಿಶ್ಚಯವಾಗಿಯೂ ಅವನು ಅತ್ಯಧಿಕ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುವನು ಮತ್ತು ನೀವು ನಿಮ್ಮ ಮೇಲೆ ಯಾತನೆ ಎರಗುವುದಕ್ಕಿಂತ ಮುಂಚಿತವಾಗಿ ನಿಮ್ಮ ಪ್ರಭುವಿನತ್ತ ಮರಳಿರಿ ಮತ್ತು ಆತನಿಗೆ ಶರಣಾಗಿರಿ. ಯಾತನೆ ಎರಗಿದ ಬಳಿಕ ನಿಮಗೆ ಎಲ್ಲಿಂದಲೂ ಸಹಾಯ ಒದಗದು". (ಪವಿತ್ರ ಕುರ್‌ಆನ್, 39:53-54)

3. ಜೀವನದ ಯಾವ ಹಂತದಲ್ಲಾದರೂ ಪಾಪಗಳ ಬಗ್ಗೆ ಲಜ್ಜೆ ಮತ್ತು ಪಶ್ಚಾತ್ತಾಪ ಉಂಟಾದರೆ ಅದನ್ನು ಅಲ್ಲಾಹನ ಅನುಗ್ರಹವೆಂದೇ ಭಾವಿಸಿರಿ. ಪಶ್ಚಾತ್ತಾಪದ ಬಾಗಿಲು ಸದಾ ತೆರೆದಿದೆ ಎಂದೇ ಭಾವಿಸಿರಿ. ಮನುಷ್ಯನ ಕೊನೆಯ ಶ್ವಾಸದ ತನಕವೂ ಅಲ್ಲಾಹನು ಅವನ ಪಶ್ಚಾತ್ತಾಪವನ್ನು ಸ್ವೀಕರಿಸುತ್ತಾನೆ. ಕೊನೆಯುಸಿರು ಎಳೆಯುವ ಸಂದರ್ಭ ಬಂದೊದಗಿ ಮನುಷ್ಯನು ಪರಲೋಕದ ದರ್ಶನ ಮಾಡತೊಡಗಿದಾಗ ಮಾತ್ರ ಪಶ್ಚಾತ್ತಾಪದ ದ್ವಾರವು ಮುಚ್ಚಲ್ಪಡುತ್ತದೆ.

ಪ್ರವಾದಿ(ಸ) ಈ ರೀತಿ ಹೇಳಿರುವರು: "ದೇವನು ತನ್ನ ದಾಸನ ಪಶ್ಚಾತ್ತಾಪ ಸ್ವೀಕರಿಸುತ್ತಾನೆ. ಆದರೆ ಆತನು ಕೊನೆಯುಸಿರು ಎಳೆಯುವ ಮೊದಲು". (ತಿರ್ಮಿದಿ)

ಹ. ಯೂಸುಫ್‌ರ(ಅ) ಸೋದರರು ಅವರನ್ನು ಪಾಳು ಬಾವಿಗೆಸೆದು ಅವರನ್ನು ಕೊನೆಗಾಣಿಸಿದೆವೆಂದು ಭಾವಿಸಿದರು. ಅವರೋರ್ವ ಪ್ರವಾದಿಯ ಕೊಲೆಯ ಅಪರಾಧವೆಸಗಿದರು. ಅವರ ಅಂಗಿಯನ್ನು ರಕ್ತದಲ್ಲಿ ತೊಯ್ದು ತಮ್ಮ ತಂದೆ ಯಅ್‌ಕೂಬ್‌ರಿಗೆ(ಅ) ತೋರಿಸಿ ಯೂಸುಫ್(ಅ) ತೀರಿಕೊಂಡರೆಂದೂ ಅವರನ್ನು ತೋಳ ತಿಂದು ಬಿಟ್ಟಿತೆಂದೂ ನಂಬಿಸಲು ಪ್ರಯತ್ನಿಸಿದರು. ಇಷ್ಟೊಂದು ಮಹಾಪರಾಧವೆಸಗಿದ ಅನೇಕ ವರ್ಷಗಳ ಬಳಿಕ ಅವರಿಗೆ ತಮ್ಮ ಪಾಪದ ಅರಿವು ಮೂಡುತ್ತದೆ. ಅವರು ಪಶ್ಚಾತ್ತಾಪಪಟ್ಟು ತಮ್ಮ ತಮ್ಮ ಪಾಪ ವಿಮೋಚನೆಗಾಗಿ ಅಲ್ಲಾಹನಲ್ಲಿ ಪ್ರಾರ್ಥಿಸುವಂತೆ ವಿನಂತಿಸಿದರು. ಆಗ ದೇವ ಪ್ರವಾದಿಯಾದ ಹ. ಯಅ್‌ಕೂಬ್(ಅ) ನಿಮ್ಮದು ಮಹಾಪರಾಧ. ಆ ಮಹಾಪರಾಧಕ್ಕೆ ಈಗ ಎಷ್ಟೋ ವರ್ಷಗಳು ಸಂದವು. ಆದ್ದರಿಂದ ಈಗ ನಿಮ್ಮ ಪಾಪವಿಮೋಚನೆಯು ಸಾಧ್ಯವೇ ಇಲ್ಲ ಎಂದೇನೂ ಹೇಳಲಿಲ್ಲ. ಅವರನ್ನು ನಿರಾಶೆಗೊಳಿಸಲಿಲ್ಲ. ಬದಲಾಗಿ ತಾನು ಅಲ್ಲಾಹನಲ್ಲಿ ನಿಮ್ಮ ಪಾಪ ವಿಮೋಚನೆಗಾಗಿ ಪ್ರಾರ್ಥಿಸುವೆನೆಂದು ಭರವಸೆ ನೀಡುತ್ತಾರೆ. ಮಾತ್ರವಲ್ಲ ದೇವನು ಅತ್ಯಧಿಕ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುವುದರಿಂದ ನಿಮ್ಮನ್ನು ಖಂಡಿತ ಕ್ಷಮಿಸುವನೆಂಬ ಭರವಸೆಯನ್ನೂ ನೀಡುತ್ತಾರೆ.

قَالُوا يَا أَبَانَا اسْتَغْفِرْ لَنَا ذُنُوبَنَا إِنَّا كُنَّا خَاطِئِينَ ﴿٩٧﴾

"ಅವರೆಲ್ಲರೂ ಹೇಳಿದರು: ಓ ಪಿತೃವರ್ಯರೇ! ನಮ್ಮ ಪಾಪ ವಿಮೋಚನೆಗಾಗಿ ಪ್ರಾರ್ಥಿಸಿರಿ, ನಿಜಕ್ಕೂ ನಾವು ಅತಿದೊಡ್ಡ ಪಾಪಿಗಳಾಗಿದ್ದೆವು". (ಪವಿತ್ರ ಕುರ್‌ಆನ್, 12:97)

ಹ. ಯಅ್‌ಕೂಬ್(ಅ) ಹೇಳಿದರು:

قَالَ سَوْفَ أَسْتَغْفِرُ لَكُمْ رَبِّي إِنَّهُ هُوَ الْغَفُورُ الرَّحِيمُ ﴿٩٨﴾

"ನಾನು ನಿಮ್ಮ ಪಾಪ ವಿಮೋಚನೆಗಾಗಿ ಖಂಡಿತ ನನ್ನ ಪ್ರಭುವಿನಲ್ಲಿ ಪ್ರಾರ್ಥಿಸು ವೆನು. (ಅವನು ನಿಮ್ಮನ್ನು ಕ್ಷಮಿಸುವನು) ಖಂಡಿತವಾಗಿಯೂ ಅವನು ಅತ್ಯಧಿಕ ಕ್ಷಮಾ ಶೀಲನೂ ಕರುಣಾನಿಧಿಯೂ ಆಗಿರುವನು". (ಪವಿತ್ರ ಕುರ್‌ಆನ್, 12:98)

ಪ್ರವಾದಿ ಮುಹಮ್ಮದ್(ಸ) ತಮ್ಮ ಸಮುದಾಯವನ್ನು ನಿರಾಶೆಯ ವಿನಾಶದಿಂದ ರಕ್ಷಿಸುವ ಸಲುವಾಗಿ ಸಹಾಬಿವರ್ಯರಿಗೆ ಒಂದು ವಿಚಿತ್ರ ಘಟನೆಯನ್ನು ವಿವರಿಸಿದರು. ಸತ್ಯ ವಿಶ್ವಾಸಿಯು ಜೀವನದ ಯಾವ ಹಂತದಲ್ಲೇ ಆದರೂ ತಮ್ಮ ಪಾಪಗಳ ಬಗ್ಗೆ ಲಜ್ಜಿತ ನಾಗಿ ಹೃತ್ಪೂರ್ವಕವಾಗಿ ಪಶ್ಚಾತ್ತಾಪ ಪಟ್ಟು ಅಲ್ಲಾಹನಲ್ಲಿ ಪ್ರಾರ್ಥಿಸಿದರೆ, ಅಲ್ಲಾಹನು ಅವನನ್ನು ತನ್ನ ಕರುಣೆಯ ನೆರಳಲ್ಲಿ ಸೇರಿಸುವನು. ಅವನನ್ನೆಂದೂ ನಿರಾಶೆಗೊಳಿಸಿ ಮರಳಿಸಲಾರನು.

ಪ್ರವಾದಿ(ಸ) ಹೇಳಿದರು: ಹಿಂದಿನ ಜನಾಂಗದಲ್ಲಿ ಒಬ್ಬ ಮನುಷ್ಯನಿದ್ದನು. ಅವನು ತೊಂಬತ್ತೊಂಬತ್ತು ಕೊಲೆ ಮಾಡಿದ್ದನು. ಜಗತ್ತಿನಲ್ಲಿರುವ ಅತಿದೊಡ್ಡ ವಿದ್ವಾಂಸನು ಯಾರೆಂದು ಅವನು ಜನರಲ್ಲಿ ವಿಚಾರಿಸಿದನು. ಜನರು ಅವನಿಗೆ ಓರ್ವ ದೇವಭಕ್ತ ಸಂತನ ವಿಳಾಸ ತಿಳಿಸಿದರು. ಆತನು ಆ ಸಂತನ ಬಳಿಗೆ ಹೋಗಿ ಹೀಗೆ ಪ್ರಶ್ನಿಸಿದನು: 'ಹಿರಿಯರೇ! ನಾನು ತೊಂಬತ್ತೊಂಬತ್ತು ಕೊಲೆ ಮಾಡಿರುವೆನು. ನನ್ನ ಪಶ್ಚಾತ್ತಾಪ ಸ್ವೀಕೃತವಾದೀತೆ?' ಆ ಸಂತನು ಹೇಳಿದನು: ಇಲ್ಲ, ನಿಮ್ಮ ಪಶ್ಚಾತ್ತಾಪ ಸ್ವೀಕರಿಸಲ್ಪಡುವ ಯಾವ ಸಾಧ್ಯತೆಯೂ ಇಲ್ಲ. 'ಇದನ್ನು ಕೇಳುತ್ತಲೇ ಆತನು ಹತಾಶನಾಗಿ ಆ ಸಂತನನ್ನೇ ಕೊಂದು ಬಿಟ್ಟನು. ಈಗ ಆತ ನೂರು ವ್ಯಕ್ತಿಗಳ ಕೊಲೆಗಾರನಾಗಿದ್ದ. ಅವನು ಮತ್ತೆ ಜನರಲ್ಲಿ ಜಗತ್ತಿನಲ್ಲಿರುವ ಅತಿದೊಡ್ಡ ವಿದ್ವಾಂಸನಾರೆಂದು ವಿಚಾರಿಸತೊಡಗಿದನು. ಜನರು ಅವನಿಗೆ ಇನ್ನೋರ್ವ ಸಂತನ ವಿಳಾಸ ತಿಳಿಸಿದರು. ಈಗ ಅವನು ಪಶ್ಚಾತ್ತಾಪ ಪಟ್ಟು ಮರಳುವ ಸಲುವಾಗಿ ಆ ಸಂತನ ಬಳಿಗೆ ಹೋದನು. ತನ್ನ ವೃತ್ತಾಂತವನ್ನು ಈ ರೀತಿ ವಿವರಿಸುತ್ತಾ: 'ಹಿರಿಯರೇ! ನಾನು ನೂರು ಕೊಲೆ ಮಾಡಿರುವೆನು. ನನ್ನ ಪಶ್ಚಾತ್ತಾಪ ಸ್ವೀಕರಿಸಲ್ಪಡುವ ಸಾಧ್ಯತೆ ಇದೆಯೇ? ನಾನು ಕ್ಷಮಿಸಲ್ಪಡುವೆನೇ?' ಸಂತನು ಹೇಳಿದನು: 'ಯಾಕಿಲ್ಲ, ನಿಮ್ಮ ಮತ್ತು ಪಶ್ಚಾತ್ತಾಪದ ನಡುವೆ ಯಾವ ತಡೆಯೂ ಇಲ್ಲ. ನೀವು ಇಂತಿಂತಹ ಊರಿಗೆ ಹೋಗಿ. ಅಲ್ಲಿ ಕೆಲವು ದೇವಭಕ್ತ ಜನರು ದೇವನ ಆರಾಧನೆಯಲ್ಲಿ ತಲ್ಲೀನರಾಗಿದ್ದಾರೆ. ನೀವೂ ಅವರ ಜೊತೆ ಸೇರಿ ದೇವನ ಆರಾಧನೆ ಮಾಡುತ್ತಿರಿ. ಎಂದೂ ನಿಮ್ಮ ಊರಿಗೆ ಮರಳಿ ಬರಬೇಡಿ. ಏಕೆಂದರೆ ಈ ಊರು ನಿಮಗೆ ಧರ್ಮದ ದೃಷ್ಟಿಯಿಂದ ಉತ್ತಮವಲ್ಲ. (ಇಲ್ಲಿ ನಿಮಗೆ ನಿಮ್ಮ ಪಶ್ಚಾತ್ತಾಪವನ್ನು ಪಾಲಿಸಲು ಮತ್ತು ನಿಮ್ಮನ್ನು ಸುಧಾರಿಸಿಕೊಳ್ಳಲು ಸಾಧ್ಯವಾಗದು).' ಆ ವ್ಯಕ್ತಿ ಅಲ್ಲಿಂದ ಹೊರಟು ಹೋದ. ಅರ್ಧ ದಾರಿಯಲ್ಲಿರುವಾಗಲೇ ಅವನ ಮೃತ್ಯು ಬಂದು ಬಿಟ್ಟಿತು. ಆಗ ಅನುಗ್ರಹದ ಮತ್ತು ಯಾತನೆಯ ದೇವಚರರು ಪರಸ್ಪರ ಜಗಳಾಡ ತೊಡಗಿದರು. ಅನುಗ್ರಹದ ದೇವಚರರು ಹೇಳಿದರು: 'ಇವನು ಪಾಪಗಳಿಂದ ಪಶ್ಚಾತ್ತಾಪ ಪಟ್ಟು ದೇವನ ಕಡೆಗೆ ಮರಳಿ ಇಲ್ಲಿಗೆ ಬಂದಿರುವನು.' ಯಾತನೆಯ ದೇವಚರರು ಹೇಳಿದರು: 'ಈ ತನಕ ಈತನು ಯಾವುದೇ ಪುಣ್ಯಕಾರ್ಯ ಮಾಡಿದ್ದಿಲ್ಲ.' ಈ ಸಂಭಾಷಣೆ ನಡೆಯುತ್ತಿದ್ದಾಗ ಓರ್ವ ದೇವಚರನು ಮನುಷ್ಯ

ರೂಪದಲ್ಲಿ ಪ್ರತ್ಯಕ್ಷರಾದರು. ಈ ದೇವಚರರು ಆತನನ್ನು ತಮ್ಮ ಮಧ್ಯಸ್ಥಿಕೆದಾರನನ್ನಾಗಿ ಮಾಡಿದರು. ಈ ಸಮಸ್ಯೆಯನ್ನು ಹೇಗಾದರೂ ಬಗೆಹರಿಸಿಕೊಡಬೇಕೆಂದು ವಿನಂತಿಸಿಕೊಂಡರು. ಆತ ಹೇಳಿದ, 'ಎರಡೂ ಕಡೆಯ ದೂರವನ್ನು ಅಳೆಯಿರಿ, ಅವನು ಹೊರಟು ಬಂದ ಸ್ಥಳ ಹೆಚ್ಚು ಸಮೀಪವೋ, ಅವನು ತಲುಪಬೇಕಾದ ಸ್ಥಳ ಹೆಚ್ಚು ಸಮೀಪವೋ ಎಂಬುದನ್ನು ಕಂಡುಹಿಡಿಯಿರಿ. ದೇವಚರರು ಅಳತೆ ಮಾಡಿ ದಾಗ ಅವನು ತಲುಪಬೇಕಾದ ಸ್ಥಳವು ಹೆಚ್ಚು ಸಮೀಪವೆಂದು ತಿಳಿಯಿತು. ಅವನು ಹೋಗುತ್ತಿರುವಾಗ ಅನುಗ್ರಹದ ದೇವಚರರು ಅವನ ಪ್ರಾಣವನ್ನು ಎಳೆದರು. ಅಲ್ಲಾಹನು ಆತನನ್ನು ಕ್ಷಮಿಸಿದನು'. (ಬುಖಾರಿ, ಮುಸ್ಲಿಮ್)

4. ಕೇವಲ ಅಲ್ಲಾಹನ ಮುಂದೆ ನಿಮ್ಮ ಪಾಪಗಳನ್ನು ಒಪ್ಪಿಕೊಳ್ಳಿರಿ. ಅವನಲ್ಲೇ ಅತ್ತು, ಕೂಗಿ ಪ್ರಾರ್ಥಿಸಿರಿ. ಅವನ ಮುಂದೆಯೇ ನಿಮ್ಮ ಅಸಹಾಯಕತೆ ಮತ್ತು ತಪ್ಪು ಗಳನ್ನು ಪ್ರಕಟಿಸಿರಿ. ಅಸಹಾಯಕತೆ ಮತ್ತು ದೀನಭಾವವು ಕೇವಲ ಅಲ್ಲಾಹನ ಮುಂದೆ ಪ್ರದರ್ಶಿಸಲಿಕ್ಕಿರುವ ವಸ್ತುಗಳು. ಅದನ್ನು ತನ್ನಂತಹ ಅಸಹಾಯಕ ವ್ಯಕ್ತಿಗಳ ಮುಂದೆ ಪ್ರದರ್ಶಿಸಿದರೆ ಆ ಹತಭಾಗ್ಯನು ದಿವಾಳಿಕೋರನಾಗುತ್ತಾನೆ. ಅವನ ಬಳಿ ಅಲ್ಲಾಹನ ಮುಂದೆ ಪ್ರದರ್ಶಿಸಲಿಕ್ಕೆ ಏನೂ ಉಳಿದಿರುವುದಿಲ್ಲ. ತರುವಾಯ ಅವನು ನಿಂದ್ಯನೂ, ನಿಕೃಷ್ಟನೂ ಆಗಿ ಎಲ್ಲ ಕಡೆಗಳಿಂದಲೂ ಮರಳಿಸಲ್ಪಡುವನು. ಎಲ್ಲಿಯೂ ಅವನಿಗೆ ಗೌರವ ಲಭಿಸುವುದಿಲ್ಲ.

ಅಲ್ಲಾಹನು ಈ ರೀತಿ ಹೇಳಿರುವನು:

وَرَبُّكَ الْغَفُورُ ذُو الرَّحْمَةِ ۖ لَوْ يُؤَاخِذُهُم بِمَا كَسَبُوا لَعَجَّلَ لَهُمُ الْعَذَابَ ۚ بَل لَّهُم مَّوْعِدٌ لَّن يَجِدُوا مِن دُونِهِ مَوْئِلًا ﴿٥٨﴾

"ನಿಮ್ಮ ಪ್ರಭು ಪಾಪಗಳನ್ನು ಮರೆಸುವವನು ಮತ್ತು ಅತ್ಯಧಿಕ ಕರುಣೆ ತೋರುವವ ನಾಗಿರುತ್ತಾನೆ. ಅವನು ಅವರ ಪಾಪಗಳಿಗಾಗಿ ಅವರನ್ನು ಕೂಡಲೇ ಹಿಡಿಯಲಾರಂಭಿಸಿದರೆ ಅವರ ಮೇಲೆ ಯಾತನೆ ಎರಗಿಸಬಲ್ಲನು; ಆದರೆ ಅವನು (ತನ್ನ ಕರುಣೆಯಿಂದ) ಅವರಿ ಗೊಂದು ಸಮಯ ನಿರ್ದಿಷ್ಟ ಪಡಿಸಿರುವನು. ಮತ್ತೆ ಇವರು ರಕ್ಷಣೆಗಾಗಿ ಅವನ ಹೊರತು ಯಾವ ಆಶ್ರಯವನ್ನೂ ಪಡೆಯಲಾರರು". (ಪವಿತ್ರ ಕುರ್‌ಆನ್, **18:58**)

ಸೂರಃ ಅಶ್ಶೂರಾದಲ್ಲಿ ಹೀಗೆ ಹೇಳಲಾಗಿದೆ:

وَهُوَ الَّذِي يَقْبَلُ التَّوْبَةَ عَنْ عِبَادِهِ وَيَعْفُو عَنِ السَّيِّئَاتِ وَيَعْلَمُ مَا تَفْعَلُونَ ﴿٢٥﴾

"ತನ್ನ ದಾಸರ ಪಶ್ಚಾತ್ತಾಪವನ್ನು ಸ್ವೀಕರಿಸುವವನು ಮತ್ತು ಅವರ ಪಾಪಗಳನ್ನು ಕ್ಷಮಿಸುವವನು ಆತನೇ ಆಗಿರುತ್ತಾನೆ ಹಾಗೂ ಆತನು ನೀವು ಮಾಡುವುದೆಲ್ಲವನ್ನೂ ಅರಿಯುವವನಾಗಿರುತ್ತಾನೆ". (ಪವಿತ್ರ ಕುರ್‌ಆನ್, **42:25**)

ವಾಸ್ತವದಲ್ಲಿ ವಿಜಯದ ಏಕೈಕ ದ್ವಾರ ಇದು ಮಾತ್ರವಾಗಿದೆ ಎಂದು ಮನುಷ್ಯನು ದೃಢವಾಗಿ ನಂಬಬೇಕು. ಈ ದ್ವಾರದಿಂದ ಅಟ್ಟಲ್ಪಟ್ಟವನು ಸದಾ ನಿಂದ್ಯನೂ ವಂಚಿತನೂ ಆಗುವನು. ದಾಸನಿಂದ ಎಷ್ಟೇ ದೊಡ್ಡ ಅಪರಾಧವಾಗಲಿ ದೇವನ ಮುಂದೆ ಅತ್ತು, ಕೂಗಿ ಪ್ರಾರ್ಥಿಸುವುದು ಹಾಗೂ ಅವನ ಕೃಪಾಶ್ರಯವನ್ನು ಪಡೆಯುವುದೇ ಸತ್ಯವಿಶ್ವಾಸಿಯ ಲಕ್ಷಣವಾಗಿದೆ. ದಾಸನಿಗೆ ದೇವನ ಹೊರತು ಪಾಪ ವಿಮೋಚನೆಯ ಯಾವ ದ್ವಾರವೂ ಇಲ್ಲ. ಎಷ್ಟರವರೆಗೆಂದರೆ ಒಬ್ಬ ಮನುಷ್ಯನು ಅಲ್ಲಾಹನನ್ನು ಬಿಟ್ಟು ಆತನ ಪ್ರವಾದಿವರ್ಯರನ್ನು(ಸ) ಸಂತುಷ್ಟಗೊಳಿಸಲು ಪ್ರಯತ್ನಿಸಿದರೂ ದೇವನ ಸನ್ನಿಧಿಯಲ್ಲಿ ಅವನ ಆ ಪ್ರಯತ್ನಕ್ಕೆ ಯಾವ ಬೆಲೆಯೂ ಇರಲಾರದು. ಅವನು ಶಪಿಸಲ್ಪಡುವನು. ಪ್ರವಾದಿವರ್ಯರೂ(ಸ) ಅಲ್ಲಾಹನ ದಾಸರೇ. ಅವನ ಸನ್ನಿಧಿಯಲ್ಲಿ ದಾಸರೇ ಆಗಿರುತ್ತಾರೆ. ಅವರಿಗೆ ದೊರಕುವಂತಹ ಅತ್ಯುತ್ಕೃಷ್ಟ ಸ್ಥಾನವು ಅಲ್ಲಾಹನ ವತಿಯಿಂದಲೇ ದೊರಕಿದೆ. ಅವರು ಅಲ್ಲಾಹನ ಅತ್ಯಂತ ದೀನ ದಾಸರಾಗಿದ್ದು, ಸಾಮಾನ್ಯ ಜನರಿಂದ ಎಷ್ಟೋ ಪಟ್ಟು ಅಧಿಕ ಅಲ್ಲಾಹನ ಮುಂದೆ ದೈನ್ಯತೆ ಪ್ರಕಟಿಸುತ್ತಿದ್ದ ಕಾರಣದಿಂದಲೇ ಅವರಿಗೆ ಅಷ್ಟು ಉನ್ನತ ಸ್ಥಾನ ಪ್ರಾಪ್ತವಾಗಿದೆ. ಅವರ ಮಹಾನತೆಯ ರಹಸ್ಯವೂ ಅದುವೇ ಆಗಿದೆ.

ಪ್ರವಾದಿ(ಸ) ಈ ರೀತಿ ಹೇಳಿರುವರು: "ಓ ಜನರೇ! ಅಲ್ಲಾಹನಿಂದ ನಿಮ್ಮ ಪಾಪಗಳಿಗೆ ಕ್ಷಮೆ ಯಾಚಿಸಿರಿ ಮತ್ತು ಅವನತ್ತ ಮರಳಿ ಬನ್ನಿರಿ. ನನ್ನನ್ನು ನೋಡಿ. ನಾನು ದಿನವೊಂದಕ್ಕೆ ನೂರು ಸಾರಿ ಅಲ್ಲಾಹನಲ್ಲಿ ಕ್ಷಮಾಪಣೆ ಮಾಡುತ್ತಿರುತ್ತೇನೆ". (ಮುಸ್ಲಿಮ್)

ಕಪಟವಿಶ್ವಾಸಿಗಳ ಕುರಿತು ಪ್ರಸ್ತಾಪಿಸುತ್ತಾ ಅಲ್ಲಾಹನು ಹೀಗೆ ಹೇಳಿರುವನು:

يَحْلِفُوْنَ لَكُمْ لِتَرْضَوْا عَنْهُمْ ۚ فَاِنْ تَرْضَوْا عَنْهُمْ فَاِنَّ اللّٰهَ لَا يَرْضٰى عَنِ الْقَوْمِ الْفٰسِقِيْنَ ﴿٩٦﴾

**"ಈ ಕಪಟವಿಶ್ವಾಸಿಗಳು ನಿಮ್ಮ ಸಂಪ್ರೀತಿಗಾಗಿ ನಿಮ್ಮ ಮುಂದೆ ಆಣೆ ಹಾಕುವರು. ನೀವು ಅವರ ಬಗ್ಗೆ ಸಂತುಷ್ಟರಾದರೂ ಅಲ್ಲಾಹನು ಖಂಡಿತ ಈ ಅಧರ್ಮಿಗಳ ಬಗ್ಗೆ ಸಂತುಷ್ಟನಾಗಲಾರನು". (ಪವಿತ್ರ ಕುರ್‌ಆನ್, 9:96)**

ಪವಿತ್ರ ಕುರ್‌ಆನಿನಲ್ಲಿ ಹ. ಕಅಬ್ ಬಿನ್ ಮಾಲಿಕ್‌ರ(ರ) ಆದರ್ಶಪ್ರಾಯ ವೃತ್ತಾಂತ ಸತ್ಯವಿಶ್ವಾಸಿಗಳಿಗೆ ಸದಾ ಪಾಠವಾಗಿರುವುದು. ಓರ್ವ ಸತ್ಯವಿಶ್ವಾಸಿಯು ಎಲ್ಲ ಸಂಕಷ್ಟವನ್ನೂ ಸಹಿಸಬೇಕು. ಎಲ್ಲ ಪರೀಕ್ಷಾ ಘಟ್ಟಗಳನ್ನೂ ದಾಟಬೇಕು. ಆದರೆ ಅಲ್ಲಾಹನ ಸನ್ನಿಧಿಯಿಂದ ದೂರ ಹೋಗುವ ಬಗ್ಗೆ ಯೋಚಿಸಲೂಬಾರದು. ಧರ್ಮದ ಹಾದಿಯಲ್ಲಿ ಮನುಷ್ಯನಿಗೆ ಎಷ್ಟೇ ಸಂಕಷ್ಟ ಬಂದರೂ ದೇವನ ವತಿಯಿಂದ ಅವನು ಎಷ್ಟೇ ಪರೀಕ್ಷಿಸಲ್ಪಟ್ಟರೂ ಅದು ಅವನ ಜೀವನವನ್ನು ಉಜ್ವಲಗೊಳಿಸುವುದಕ್ಕಾಗಿ ಹಾಗೂ ಅವನ ಸ್ಥಾನವನ್ನು ಉನ್ನತಗೊಳಿಸುವುದಕ್ಕಾಗಿದೆ. ಈ ಅಪಕೀರ್ತಿಯು ಶಾಶ್ವತ ಕೀರ್ತಿಯ ನಿಖರ ಮಾರ್ಗವಾಗಿದೆ. ಯಾರು

ದೇವನ ಆಸ್ಥಾನವನ್ನು ಬಿಟ್ಟು ಇತರೆಡೆ ಕೀರ್ತಿಯನ್ನು ಅರಸುವನೋ ಅವನಿಗೆಲ್ಲಿಯೂ ಗೌರವ ಲಭಿಸದು. ಅವನು ಎಲ್ಲೆಡೆ ನಿಂದ್ಯನಾಗುವನು. ಭೂಮ್ಯಾಕಾಶಗಳ ಯಾವ ಜೀವಿಯೂ ಅವನನ್ನು ಗೌರವದ ದೃಷ್ಟಿಯಿಂದ ನೋಡಲಾರದು.

وَّعَلَى الثَّلٰثَةِ الَّذِيْنَ خُلِّفُوْا ؕ حَتّٰٓى اِذَا ضَاقَتْ عَلَيْهِمُ الْاَرْضُ بِمَا رَحُبَتْ وَضَاقَتْ عَلَيْهِمْ اَنْفُسُهُمْ وَظَنُّوْٓا اَنْ لَّا مَلْجَاَ مِنَ اللّٰهِ اِلَّآ اِلَيْهِ ؕ ثُمَّ تَابَ عَلَيْهِمْ لِيَتُوْبُوْا ؕ اِنَّ اللّٰهَ هُوَ التَّوَّابُ الرَّحِيْمُ ﴿۱۱۸﴾

"ಪ್ರಕರಣ ಮುಂದೂಡಲ್ಪಟ್ಟ ಆ ಮೂವರನ್ನೂ ಅಲ್ಲಾಹನು ಕ್ಷಮಿಸಿದನು. ಭೂಮಿಯು ತನ್ನೆಲ್ಲ ವೈಶಾಲ್ಯದ ಹೊರತಾಗಿಯೂ ಅವರ ಮಟ್ಟಿಗೆ ಸಂಕುಚಿತವಾದಾಗ ಅವರ ಜೀವನವೇ ಅವರಿಗೆ ಹೊರೆಯಾಗಿ ಮಾರ್ಪಟ್ಟಾಗ ಅಲ್ಲಾಹನಿಂದ ರಕ್ಷಣೆ ಹೊಂದಲು ಅವನ ಆಶ್ರಯ ಪಡೆಯುವ ಹೊರತು ಬೇರಾವ ಆಶ್ರಯವೂ ಇಲ್ಲವೆಂದೂ ಅವರಿಗೆ ಮನವರಿಕೆಯಾದಾಗ ಅಲ್ಲಾಹನು ತನ್ನ ಕರುಣೆಯೊಂದಿಗೆ ಅವರೆಡೆಗೆ ತಿರುಗಿದನು. ಖಂಡಿತವಾಗಿಯೂ ಅಲ್ಲಾಹ್ ಪಶ್ಚಾತ್ತಾಪ ಸ್ವೀಕರಿಸುವವನೂ ಕರುಣಾನಿಧಿಯೂ ಆಗಿರುತ್ತಾನೆ". (ಪವಿತ್ರ ಕುರ್‌ಆನ್, 9:118)

ಹ. ಕಅಬ್ ಬಿನ್ ಮಾಲಿಕ್(ರ), ಹ. ಮುರಾರಃ ಬಿನ್ ರಬೀಅ್(ರ) ಮತ್ತು ಹ. ಹಿಲಾಲ್ ಬಿನ್ ಉಮಯ್ಯ(ರ) ಅವರೇ ಈ ಮೂವರು ಮಹಾತ್ಮರು. ಈ ಮೂವರ ಪಶ್ಚಾತ್ತಾಪವು ಲೋಕಾಂತ್ಯದ ವರೆಗೆ ಸತ್ಯವಿಶ್ವಾಸಿಗಳಿಗೆ ದಾರಿದೀಪವಾಗಿದೆ. ಹ. ಕಅಬ್ ಬಿನ್ ಮಾಲಿಕ್(ರ) ಮುದಿ ಪ್ರಾಯದಲ್ಲಿ ಅಂಧರಾದರು. ತಮ್ಮ ಪುತ್ರನ ನೆರವಿನಿಂದಲೇ ಆಚೀಚೆ ನಡೆಯುತ್ತಿದ್ದರು. ಅವರು ಒಮ್ಮೆ ತಮ್ಮ ಪಶ್ಚಾತ್ತಾಪದ ಈ ಘಟನೆಯನ್ನು ಮಗನಿಗೆ ವಿವರಿಸಿ ಹೇಳಿದ್ದರು. ಅದು ಹದೀಸ್ ಗ್ರಂಥಗಳಲ್ಲಿ ಇಂದಿಗೂ ಸುರಕ್ಷಿತವಾಗಿದೆ.

"ತಬೂಕ್ ಯುದ್ಧದ ಸಿದ್ಧತೆಯ ಸಂದರ್ಭದಲ್ಲಿ ಪ್ರವಾದಿವರ್ಯರು(ಸ) ಮುಸ್ಲಿಮರನ್ನು ಈ ಯುದ್ಧದಲ್ಲಿ ಪಾಲ್ಗೊಳ್ಳುವಂತೆ ಪ್ರೇರೇಪಿಸುತ್ತಿದ್ದರು. ನಾನೂ ಆಗ ಆ ಸಭೆ ಗಳಲ್ಲಿ ಹಾಜರಿರುತ್ತಿದ್ದೆ. ಪ್ರವಾದಿವರ್ಯರ(ಸ) ಭಾಷಣ ಕೇಳಿದಾಗಲೆಲ್ಲಾ ನಾನು ಈ ಯುದ್ಧದಲ್ಲಿ ಭಾಗವಹಿಸಲು ಹೋಗಬೇಕೆಂಬ ನಿರ್ಧಾರ ಮಾಡುತ್ತಿದ್ದೆ. ಆದರೆ ಮನೆಗೆ ಮರಳಿದ ಕೂಡಲೇ ಆಲಸ್ಯ ತೋರುತ್ತಿದ್ದೆ. ಇನ್ನೂ ಸಾಕಷ್ಟು ಸಮಯವಿದೆ. ನನ್ನ ಬಳಿ ಪ್ರಯಾಣ ಸೌಕರ್ಯಗಳೆಲ್ಲವೂ ಇವೆ. ಆರೋಗ್ಯವೂ ಚೆನ್ನಾಗಿದೆ. ಅತ್ಯುತ್ತಮವಾದ ಸವಾರಿಯೂ ಇದೆ. ಆದ್ದರಿಂದ ನನಗೆ ಹೊರಡಲು ತಡವಾಗದು. ಹೀಗೆಯೇ ಯೋಚಿಸುತ್ತಾ ದಿನಗಳು ಉರುಳಿದುವು. ಕೊನೆಗೆ ಎಲ್ಲಾ ಮುಜಾಹಿದ್‌ಗಳೂ (ಧರ್ಮ ಯೋಧರು) ರಣರಂಗಕ್ಕೆ ತಲುಪಿಯಾಯಿತು. ನಾನು ಮಾತ್ರ ಮದೀನಾದಲ್ಲಿ ಯೋಚಿಸುತ್ತಲೇ ಉಳಿದುಬಿಟ್ಟೆ.

ಅಷ್ಟರಲ್ಲಿ ಪ್ರವಾದಿ(ಸ) ಮದೀನಾಕ್ಕೆ ಮರಳುತ್ತಾರೆಂಬ ಸುದ್ದಿ ಹರಡಿತು. ಒಂದು ದಿನ

ಪ್ರವಾದಿ(ಸ) ಬಂದೇ ಬಿಟ್ಟರು ಎಂದು ತಿಳಿಯಿತು. ವಾಡಿಕೆಯಂತೆ ಅವರು ಮಸೀದಿಯಲ್ಲೇ ತಂಗಿದ್ದರು. ನಾನು ಮಸೀದಿಗೆ ತಲಪಿದೆ. ಅಲ್ಲಿ ಕಪಟವಿಶ್ವಾಸಿಗಳು ಪ್ರವಾದಿವರ್ಯರನ್ನು(ಸ) ಸಂದರ್ಶಿಸುತ್ತಿದ್ದರು. ದೊಡ್ಡದೊಡ್ಡ ಆಣೆಗಳನ್ನು ಹಾಕಿ ತಮ್ಮ ನೆಪಗಳನ್ನು ಹೇಳುತ್ತಿದ್ದರು. ಪ್ರವಾದಿ(ಸ) ಆ ಕಪಟವಿಶ್ವಾಸಿಗಳ ಕಪೋಲ ಕಲ್ಪಿತ ನೆಪಗಳನ್ನು ಸ್ವೀಕರಿಸುತ್ತಿದ್ದರು. 'ಅಲ್ಲಾಹನು ನಿಮ್ಮನ್ನು ಕ್ಷಮಿಸಲಿ' ಎಂದು ಹೇಳುತ್ತಿದ್ದರು.

ನನ್ನ ಸರದಿ ಬಂದಾಗ ಪ್ರವಾದಿ(ಸ) 'ನೀವು ಯಾಕೆ ಹಿಂದೆ ಉಳಿದಿರಿ' ಎಂದು ವಿಚಾರಿಸಿದರು. ಪ್ರವಾದಿವರ್ಯರ(ಸ) ಮುಗುಳ್ನಗುವಿನ ಹಿಂದೆ ಕೋಪವಿದೆ ಎಂದು ಭಾಸವಾಗುತ್ತಿತ್ತು. ನಾನು ನನ್ನ ವಿಷಯವನ್ನು ಸ್ಪಷ್ಟವಾಗಿ ಮುಂದಿಟ್ಟೆ. ಓ ಅಲ್ಲಾಹನ ಸಂದೇಶವಾಹಕರೇ! ವಾಸ್ತವದಲ್ಲಿ ನನಗೆ ಯಾವ ನೆಪವೂ ಇರಲಿಲ್ಲ. ನಾನು ಆರೋಗ್ಯ ವಂತನಾಗಿದ್ದೆ, ಸ್ಥಿತಿವಂತನಾಗಿದ್ದೆ. ನನ್ನ ಬಳಿ ಸವಾರಿಯೂ ಇತ್ತು. ಕೇವಲ ನನ್ನ ಅಸಡ್ಡೆ ಮತ್ತು ಆಲಸ್ಯವು ನನ್ನನ್ನು ಈ ಸೌಭಾಗ್ಯದಿಂದ ವಂಚಿಸಿತು.

ನನ್ನ ಈ ಸ್ಪಷ್ಟ ಮಾತುಗಳನ್ನು ಕೇಳಿ ಪ್ರವಾದಿ(ಸ) ಹೀಗೆ ಆದೇಶಿಸಿದರು:

'ಸರಿ. ಹಾಗಾದರೆ ನೀವು ಹೋಗಿ. ಅಲ್ಲಾಹನು ನಿಮ್ಮ ಬಗ್ಗೆ ಯಾವ ತೀರ್ಮಾನ ಕೈಗೊಳ್ಳುತ್ತಾನೆಂಬುದನ್ನು ಕಾಯುತ್ತಿರಿ.' ನಾನು ಅಲ್ಲಿಂದ ಎದ್ದು ಹೋಗಿ ನನ್ನ ಗೋತ್ರದ ಜನರ ಮಧ್ಯೆ ಕುಳಿತೆ. 'ನೀವು ಏನಾದರೂ ನೆಪ ಯಾಕೆ ಹೇಳಲಿಲ್ಲ?' ಎಂದು ಅವರು ನನ್ನನ್ನು ತರಾಟೆಗೆ ತೆಗೆದುಕೊಂಡರು. 'ನೀವಂತೂ ಧರ್ಮದ ಎಲ್ಲ ಕಾರ್ಯಗಳಲ್ಲೂ ಸದಾ ಮುಂದಿರುವವರು' ಎಂದರು. ಆದರೆ ಇನ್ನಿಬ್ಬರು ಸಂಗಾತಿಗಳು ಕೂಡ ನನ್ನಂತೆ ಸತ್ಯ ಹೇಳಿರುವರೆಂದು ತಿಳಿದು ನನಗೆ ಸಮಾಧಾನವಾಯಿತು! ನಾನು ಸತ್ಯದ ಮೇಲೆ ಅಚಲವಾಗಿ ನಿಲ್ಲುವೆನೆಂಬ ದೃಢನಿಶ್ಚಯ ಮಾಡಿದೆ.

ತರುವಾಯ ನಮ್ಮ ಮೂವರ ಜೊತೆ ಯಾರೂ ಮಾತಾಡಕೂಡದೆಂದು ಪ್ರವಾದಿ(ಸ) ಸಾರ್ವಜನಿಕವಾಗಿ ಘೋಷಿಸಿದರು. ಈ ಘೋಷಣೆಯಾದ ಕೂಡಲೇ ಮದೀನಾದ ಭೂಮಿ ನನ್ನ ಮಟ್ಟಿಗೆ ಸಂಪೂರ್ಣ ಬದಲಾಯಿತು. ನಾನು ನಮ್ಮವರ ಮಧ್ಯೆಯೇ ಅಸಹಾಯಕನೂ ಅಪರಿಚಿತನೂ ಆಗಿ ಮಾರ್ಪಟ್ಟೆ. ಸಮಾಜದಲ್ಲಿ ಯಾರೂ ನನ್ನನ್ನು ಮಾತನಾಡಿಸುತ್ತಿರಲಿಲ್ಲ. ನನಗೆ ಸಲಾಮ್ ಹೇಳುತ್ತಿರಲಿಲ್ಲ. ಒಂದು ದಿನ ನನಗೆ ಬಹಳ ಬೇಸರವಾಯಿತು. ವ್ಯಾಕುಲಚಿತ್ತನಾಗಿ ನಾನು ನನ್ನ ಬಾಲ್ಯ ಸ್ನೇಹಿತನೂ ನನ್ನ ತಂದೆಯ ಸೋದರ ಪುತ್ರನೂ ಆದ ಅಬೂಕತಾದರ(ರ) ಬಳಿಗೆ ಹೋದೆ. ನಾನು ಹೋಗಿ ಸಲಾಮ್ ಹೇಳಿದಾಗ ಆ ಪುಣ್ಯಾತ್ಮರು ನನಗೆ ಸಲಾಮ್‌ನ ಉತ್ತರವನ್ನೂ ಹೇಳಲಿಲ್ಲ. 'ಅಬೂಕತಾದ! ನಾನು ಅಲ್ಲಾಹನಾಣೆ ಹಾಕಿ ಹೇಳುತ್ತೇನೆ. ಹೇಳಿರಿ, ನನಗೆ ಅಲ್ಲಾಹ್ ಮತ್ತು ಆತನ ಸಂದೇಶ ವಾಹಕರ ಮೇಲೆ ಪ್ರೀತಿ ಇಲ್ಲವೇ?' ಅವರು ಆಗಲೂ ಮೌನವಹಿಸಿದರು. ನಾನು ಮತ್ತೊ ಅದನ್ನೇ ವಿಚಾರಿಸಿದೆ. ಯಾವುದೇ ಉತ್ತರ ದೊರೆಯಲಿಲ್ಲ. ಮೂರನೆಯ ಸಲ ನಾನು ಅಲ್ಲಾಹನಾಣೆ ಹಾಕಿ ಕೇಳಿದಾಗ ಅವರು ಹೀಗೆಂದರು 'ಅಲ್ಲಾಹನೂ, ಆತನ ಸಂದೇಶ

ವಾಹಕರೂ ಚೆನ್ನಾಗಿ ಬಲ್ಲರು'. ಆಗ ನನ್ನ ಹೃದಯ ತುಂಬಿ ಬಂತು. ಕಣ್ಣುಗಳಿಂದ ಕಣ್ಣೀರಧಾರೆ ಹರಿಯತೊಡಗಿತು. ನಾನು ಖಿನ್ನ ಮನಸ್ಕನಾಗಿ ಮರಳಿದೆ.

ಅದೇ ವೇಳೆ ಪೇಟೆಯಲ್ಲಿ ಸಿರಿಯಾದ ಓರ್ವ ವ್ಯಾಪಾರಿಯು ಗಸ್ಸಾನ್ ರಾಜನ ಒಂದು ಪತ್ರವನ್ನು ನನಗೆ ನೀಡಿದರು. ಕ್ರೈಸ್ತನಾದ ಆ ಅರಸನು ಬರೆದ ಪತ್ರದ ಒಕ್ಕಣೆ ಈ ರೀತಿ ಇತ್ತು: 'ನಿಮ್ಮ ಸಂಗಾತಿಯು ನಿಮ್ಮ ಮೇಲೆ ಬಹಳ ದೌರ್ಜನ್ಯ ಮಾಡುತ್ತಿದ್ದಾರೆಂದು ನಾನು ಕೇಳಿದ್ದೇನೆ. ನೀವಂತೂ ನೀಚ ವ್ಯಕ್ತಿಯೇನಲ್ಲ. ನಿಮ್ಮ ಘನತೆ, ಗೌರವಗಳು ನಮಗೆ ತಿಳಿದಿದೆ. ನೀವು ನಮ್ಮ ಬಳಿ ಬನ್ನಿ. ನಾವು ನಿಮ್ಮ ಘನತೆಗೆ ಯೋಗ್ಯವಾಗಿ ನಿಮ್ಮೊಂದಿಗೆ ವರ್ತಿಸುವೆವು. ಪತ್ರ ಕಂಡ ಕೂಡಲೇ ಇದೊಂದು ಹೊಸ ಗಂಡಾಂತರ ಬಂದಿದೆ ಎನ್ನುತ್ತಾ ಅದನ್ನು ಆಗಲೇ ಒಲೆಗೆ ಹಾಕಿದೆ.'

ನಲ್ವತ್ತು ದಿನಗಳು ಈ ಅವಸ್ಥೆಯಲ್ಲೇ ಕಳೆದುವು. ಆಗ ನನ್ನ ಹೆಂಡತಿಯಿಂದಲೂ ದೂರವಿರಬೇಕೆಂದು ಪ್ರವಾದಿ(ಸ) ಆಜ್ಞಾಪಿಸಿರುವರೆಂದು ಓರ್ವ ಹರಿಕಾರ ಬಂದು ಹೇಳಿದ. 'ತಲಾಕ್ ನೀಡಬೇಕೆ?' ಎಂದು ನಾನು ವಿಚಾರಿಸಿದೆ. 'ಬೇಡ, ದೂರವಿದ್ದರೆ' ಸಾಕು ಎಂದರು. ನಾನು ಹೆಂಡತಿಯನ್ನು ಆಕೆಯ ತವರು ಮನೆಗೆ ಕಳುಹಿಸಿದೆ. 'ನೀನೂ ದೇವನ ತೀರ್ಮಾನ ವನ್ನು ಕಾಯುತ್ತಿರು' ಎಂದು ಆಕೆಗೆ ಹೇಳಿದೆ.

ಐವತ್ತನೆಯ ದಿನ ನಾನು ಪ್ರಭಾತ ನಮಾಝ್‌ನ ಬಳಿಕ ಜೀವನದಿಂದಲೇ ಜಿಗುಪ್ಸೆ ಹೊಂದಿ ಅತ್ಯಂತ ನಿರಾಶೆ ಹಾಗೂ ಖಿನ್ನನಾಗಿ ಮನೆಯ ಮಹಡಿಯಲ್ಲಿ ಕುಳಿತಿದ್ದೆ. ಅಷ್ಟರಲ್ಲಿ 'ಕಅಬ್! ಶುಭವಾಗಲಿ' ಎಂಬ ಶಬ್ದ ಎಲ್ಲಿಂದಲೋ ಕೇಳಿಸಿತು. ಇದನ್ನು ಕೇಳುತ್ತಲೇ ನನಗೆ ವಿಷಯ ತಿಳಿಯಿತು. ನಾನು ಅಲ್ಲಾಹನ ಮುಂದೆ ಸಾಷ್ಟಾಂಗವೆರಗಿದೆ. ಆ ಬಳಿಕ ಜನರ ಒಂದು ಸಮೂಹವೇ ನನ್ನ ಬಳಿ ಸೇರಿತು. ಜನರು ಗುಂಪು ಗುಂಪಾಗಿ ನನಗೆ ಶುಭಾಶಯ ಹೇಳಲು ಬರುತ್ತಿದ್ದರು. ನಾನು ಅಲ್ಲಿಂದ ಎದ್ದು ನೇರವಾಗಿ ಪ್ರವಾದಿವರ್ಯರ(ಸ) ಬಳಿ ಮಸೀದಿಗೆ ಹೋದೆ. ಪ್ರವಾದಿವರ್ಯರ(ಸ) ಮುಖವು ಆನಂದ ತುಂದಿಲವಾಗಿತ್ತು. ನಾನು ಮೊದಲು ಸಲಾಮ್ ಹೇಳಿದೆ. ಅದಕ್ಕೆ ಉತ್ತರಿಸಿದ ಬಳಿಕ ಪ್ರವಾದಿ(ಸ) ಈ ರೀತಿ ಹೇಳಿದರು: 'ಕಅಬ್! ಶುಭವಾಗಲಿ, ಇದು ನಿಮ್ಮ ಜೀವನದ ಅತ್ಯುತ್ತಮ ದಿವಸ'. ಆಗ ನಾನು ಪ್ರಶ್ನಿಸಿದೆ: 'ಪ್ರವಾದಿವರ್ಯರೇ(ಸ), ಈ ಕ್ಷಮಾದಾನ ತಮ್ಮ ವತಿಯಿಂದಲೋ ಅಥವಾ ಅಲ್ಲಾಹನ ವತಿಯಿಂದಲೋ?' ಆಗ ಪ್ರವಾದಿ(ಸ), 'ಅಲ್ಲಾಹನ ವತಿಯಿಂದ' ಎನ್ನುತ್ತಾ ಸೂರಃ ತೌಬದ ಮೇಲ್ಕಾಣಿಸಿದ ಸೂಕ್ತಗಳನ್ನು ಪಠಿಸಿದರು".

5. ಪಶ್ಚಾತ್ತಾಪ ಪಡುವಲ್ಲಿ ವಿಳಂಬ ಮಾಡದಿರಿ. ಜೀವನಾವಧಿಯ ಬಗ್ಗೆ ಯಾರಿಗೂ ತಿಳಿಯದು. ಅದು ಯಾವ ಕ್ಷಣದಲ್ಲೂ ಮುಗಿಯಬಹುದು. ಮುಂದಿನ ಕ್ಷಣ ಜೀವನದ್ದೋ ಮರಣದ್ದೋ ಎಂದು ಯಾರಿಗೂ ತಿಳಿಯದು. ಸದಾ ನಿಮ್ಮ ಅಂತ್ಯದ ಬಗ್ಗೆ ಜಾಗೃತರಾಗಿರಿ. ಪಶ್ಚಾತ್ತಾಪ ಮತ್ತು ಕ್ಷಮಾಪಣೆಯ ಮೂಲಕ ಮನ-ಮಸ್ತಿಷ್ಕವನ್ನೂ ಆತ್ಮ ಮತ್ತು ಶರೀರವನ್ನೂ ನಾಲಿಗೆಯನ್ನೂ ಪಾಪಗಳಿಂದ ಮುಕ್ತಗೊಳಿಸುತ್ತಿರಿ.

ಪ್ರವಾದಿ(ಸ) ಹೀಗೆ ಹೇಳಿರುವರು: ದಿನದ ವೇಳೆ ಪಾಪಗಳನ್ನೆಸಗಿದ ವ್ಯಕ್ತಿ ಪಶ್ಚಾತ್ತಾಪ ಪಟ್ಟು ಮರಳಲೆಂದು ರಾತ್ರಿಯ ಹೊತ್ತು ಅಲ್ಲಾಹನು ತನ್ನ ಕೈಗಳನ್ನು ಚಾಚುವನು. ರಾತ್ರಿಯ ವೇಳೆ ಮಾಡಿದ ಪಾಪಗಳಿಂದ ಪಶ್ಚಾತ್ತಾಪ ಪಟ್ಟು ಮರಳುವವನಿಗಾಗಿ ಹಾಗೂ ಕ್ಷಮಾಯಾಚನೆ ಮಾಡುವವನಿಗಾಗಿ ಹಗಲು ಹೊತ್ತು ಅಲ್ಲಾಹನು ತನ್ನ ಹಸ್ತಗಳನ್ನು ಚಾಚುವನು. ಈ ಪ್ರಕ್ರಿಯೆಯು ಸೂರ್ಯನು ಪಶ್ಚಿಮದಿಂದ ಮೂಡಿ ಬರುವ ತನಕ ನಡೆಯುತ್ತಿರುವುದು.

(ಮುಸ್ಲಿಮ್)

ಅಲ್ಲಾಹನು ಕೈ ಚಾಚುವುದೆಂದರೆ ಆತ ತನ್ನ ಪಾಪಿಗಳಾದ ದಾಸರನ್ನು ತನ್ನತ್ತ ಕರೆಯುತ್ತಾನೆ ಹಾಗೂ ತನ್ನ ಕರುಣಾಶ್ರಯದಲ್ಲಿ ಅವರ ಪಾಪಗಳನ್ನು ಮರೆಸ ಬಯಸುತ್ತಾನೆಂದರ್ಥ. ಕ್ಷಣಿಕ ದುಷ್ಪ್ರೇರಣೆಯಿಂದ ವ್ಯಕ್ತಿಯೊಬ್ಬನು ಯಾವುದಾದರೂ ಪಾಪ ಕಾರ್ಯವೆಸಗಿದರೆ ಆ ಕೂಡಲೇ ತನ್ನ ಕರುಣಾನಿಧಿಯೂ ಕ್ಷಮಾಪಾಲನೂ ಆದ ಅಲ್ಲಾಹ ನತ್ತ ಪಶ್ಚಾತ್ತಾಪ ಪಟ್ಟು ಮರಳಬೇಕು. ಈ ಬಗ್ಗೆ ಯಾವುದೇ ರೀತಿಯ ವಿಳಂಬ ಸಂಭವಿಸಕೂಡದು. ಪಾಪದಿಂದ ಪಾಪ ಜನಿಸುತ್ತದೆ. ಶೈತಾನನು ಸದಾ ಮನುಷ್ಯನನ್ನು ಪಾಪಕ್ಕೆ ಪ್ರೇರೇಪಿಸುವ ಸಂಚು ಹೂಡುತ್ತಿರುತ್ತಾನೆ. ಮನುಷ್ಯನನ್ನು ಸನ್ಮಾರ್ಗ ಭ್ರಷ್ಟಗೊಳಿ ಸುವ ಯಾವ ಅವಕಾಶವನ್ನೂ ಶೈತಾನ್ ಕೈಬಿಡುವುದಿಲ್ಲ.

6. ಅತ್ಯಂತ ನಿಷ್ಕಳಂಕವಾಗಿ, ಪ್ರಾಮಾಣಿಕತೆಯೊಂದಿಗೆ ಪಶ್ಚಾತ್ತಾಪಪಡಿರಿ. ಅದು ನಿಮ್ಮ ಜೀವನದ ದಿಕ್ಕು ದೆಸೆಗಳನ್ನೇ ಮಾರ್ಪಡಿಸುವಂತಿರಬೇಕು. ತೌಬಾದ ಬಳಿಕ ನೀವೊಬ್ಬ ಹೊಸ ಜನ್ಮ ಪಡೆದ ಮನುಷ್ಯನಾಗಿ ಮಾರ್ಪಡಬೇಕು. ಅಲ್ಲಾಹನು ಈ ರೀತಿ ಆಜ್ಞಾಪಿಸಿದ್ದಾನೆ:

يَا أَيُّهَا الَّذِينَ آمَنُوا تُوبُوا إِلَى اللَّهِ تَوْبَةً نَصُوحًا عَسَىٰ رَبُّكُمْ أَنْ
يُكَفِّرَ عَنْكُمْ سَيِّئَاتِكُمْ وَيُدْخِلَكُمْ جَنَّاتٍ تَجْرِي مِنْ تَحْتِهَا الْأَنْهَارُ
يَوْمَ لَا يُخْزِي اللَّهُ النَّبِيَّ وَالَّذِينَ آمَنُوا مَعَهُ

"ಓ ಸತ್ಯವಿಶ್ವಾಸಿಗಳೇ! ಅಲ್ಲಾಹನೆಡೆಗೆ ಪಶ್ಚಾತ್ತಾಪಪಟ್ಟು ಮರಳಿರಿ. ನಿಷ್ಕಳಂಕವಾದ ಪಶ್ಚಾತ್ತಾಪ. ನಿಮ್ಮ ಪ್ರಭು ಸದ್ಯವೇ ನಿಮ್ಮಿಂದ ನಿಮ್ಮ ಪಾಪಗಳನ್ನು ದೂರೀಕರಿಸುವನು ಮತ್ತು ನಿಮ್ಮನ್ನು ತಳಭಾಗದಲ್ಲಿ ನದಿಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶಗೊಳಿಸುವನು. ಆ ದಿನ ತನ್ನ ಪ್ರವಾದಿಗಳನ್ನೂ ಅವರಲ್ಲಿ ವಿಶ್ವಾಸವಿರಿಸಿದವರನ್ನೂ ಅಪಮಾನಗೊಳಿಸನು". (ಪವಿತ್ರ ಕುರ್‌ಆನ್, 66:8)

ಅರ್ಥಾತ್ ಇನ್ನೆಂದೂ ಪಾಪದ ಕಡೆಗೆ ಮರಳದಂತೆ ಮತ್ತು ನಿಮ್ಮ ಮನಮಸ್ತಿಷ್ಕ ಗಳಲ್ಲಿ ಪಾಪದ ಭಾವನೆಯು ಉಂಟಾಗದಂತೆ ಪಶ್ಚಾತ್ತಾಪ ಪಟ್ಟು ಮರಳಿರಿ. ಇಂತಹ ಪಶ್ಚಾತ್ತಾಪದ ಮೂರು ಅಥವಾ ನಾಲ್ಕು ಅಂಶಗಳಿವೆ. ಪಾಪವು ಅಲ್ಲಾಹನೊಂದಿಗಿರುವ ಸಂಬಂಧದ ಬಗೆಗಾಗಿದ್ದರೆ ಅದರ ಮೂರು ಅಂಶಗಳಿವೆ:

i) ಮನುಷ್ಯನು ತಾನೆಸಗಿದ ಪಾಪಗಳ ಬಗ್ಗೆ ನಾಚಿಕೆ ಪಡಬೇಕು.

ii) ಇನ್ನು ಮುಂದೆ ಪಾಪಗಳನ್ನೆಸಗಲಾರೆನೆಂಬ ದೃಢ ನಿರ್ಧಾರ ಮಾಡಬೇಕು.

iii) ಮುಂದಿನ ಜೀವನವನ್ನು ಪಾಪಗಳಿಂದ ಮುಕ್ತಗೊಳಿಸಿ ಪಾವನ ಮತ್ತು ಪರಿಶುದ್ಧನಾಗಲು ಆತ್ಮಾರ್ಥವಾಗಿ ಪರಿಶ್ರಮ ಮಾಡಬೇಕು.

ಅವನು ಮನುಷ್ಯರ ಹಕ್ಕುಗಳ ಪೈಕಿ ಯಾವುದನ್ನಾದರೂ ಕಬಳಿಸಿದ್ದರೆ ಅಥವಾ ನೀಡದೇ ಇದ್ದರೆ ಅದರ ಪಶ್ಚಾತ್ತಾಪದ ಇನ್ನೊಂದು ಅಂಶ ಈ ಕೆಳಗಿನಂತಿದೆ.

iv) ತಾನು ಕಬಳಿಸಿದ ಅಥವಾ ನೀಡದೇ ಇದ್ದ ಹಕ್ಕನ್ನು ನೀಡುವುದು ಅಥವಾ ಅದರ ಬಗ್ಗೆ ಸಂಬಂಧಪಟ್ಟ ವ್ಯಕ್ತಿಯಿಂದ ಕ್ಷಮೆ ಮಾಡಿಸಿಕೊಳ್ಳುವುದು.

ಈ ರೀತಿಯ ಪಶ್ಚಾತ್ತಾಪದಿಂದ ಮಾತ್ರ ಮನುಷ್ಯನು ಪಾಪಗಳಿಂದ ಮುಕ್ತನಾಗಬಲ್ಲನು. ಅವನ ಪಾಪಗಳು ತೊಳೆಯಲ್ಪಡುತ್ತವೆ. ಅವನ ಒಂದೊಂದು ಪಾಪವು ಅವನ ಆತ್ಮದಿಂದ ನೆಗೆದು ಬೀಳುತ್ತದೆ. ತರುವಾಯ ಸತ್ಕರ್ಮಗಳಿಂದ ಶೋಭಿತವಾದ ಜೀವನ ದೊಂದಿಗೆ ಅವನು ಅಲ್ಲಾಹನ ಮುಂದೆ ಹಾಜರಾಗುತ್ತಾನೆ. ಅಲ್ಲಾಹನು ಅವನಿಗೆ ತನ್ನ ಸ್ವರ್ಗದಲ್ಲಿ ಸ್ಥಳ ದಯಪಾಲಿಸುತ್ತಾನೆ.

ಪ್ರವಾದಿ(ಸ) ಹೀಗೆ ಹೇಳಿರುವರು: ಮನುಷ್ಯನು ಒಂದು ಪಾಪ ಕಾರ್ಯ ಮಾಡಿದರೆ ಅವನ ಮನದಲ್ಲಿ ಒಂದು ಕಲೆ ಬೀಳುತ್ತದೆ. ತರುವಾಯ ಆತನು

* ಪಾಪ ಕಾರ್ಯವನ್ನು ತೊರೆದರೆ,
* ತನ್ನ ತಪ್ಪುಗಳನ್ನು ಜ್ಞಾಪಿಸಿ ಆ ಬಗ್ಗೆ ಅಲ್ಲಾಹನಲ್ಲಿ ಕ್ಷಮಾಯಾಚನೆ ಮಾಡಿದರೆ,
* ಅಲ್ಲಾಹನತ್ತ ಮರಳಿದ ಬಳಿಕ ಇನ್ನೆಂದೂ ಪಾಪ ಕಾರ್ಯ ಎಸಗಲಾರೆ ಎಂದು ದೃಢ ನಿಶ್ಚಯ ಮಾಡಿಕೊಂಡರೆ-

ಅಲ್ಲಾಹನು ಅವನ ಪಾಪಗಳನ್ನು ಕ್ಷಮಿಸುವನು. ಅವನ ಮನವನ್ನು ಸ್ವಚ್ಛ ಗೊಳಿಸುವನು. ಆತನು ಮತ್ತೂ ಪಾಪಕೃತ್ಯ ಮಾಡಿದರೆ ಅವನ ಮನದ ಕಲೆಯು ಇನ್ನಷ್ಟು ವರ್ಧಿಸುವುದು. ಕೊನೆಗೆ ಅದು ಪೂರ್ಣ ಮನಸ್ಸನ್ನು ಆವರಿಸುತ್ತದೆ.

ಪವಿತ್ರ ಕುರ್‌ಆನಿನಲ್ಲಿ ಅಲ್ಲಾಹನು ಹೇಳಿರುವ ತುಕ್ಕು ಇದುವೇ ಆಗಿದೆ:

كَلَّا ۖ بَلْ ۜ رَانَ عَلَىٰ قُلُوبِهِم مَّا كَانُوا يَكْسِبُونَ ﴿١٤﴾

"ಖಂಡಿತವಾಗಿಯೂ ಅಲ್ಲ. ಅವರ ಹೃದಯಗಳಲ್ಲಿ ಅವರ ದುಷ್ಕರ್ಮಗಳ ತುಕ್ಕು ಹಿಡಿದಿದೆ". **(83:14)**

7. ನಿಮ್ಮ ಪಶ್ಚಾತ್ತಾಪದ ಮೇಲೆ ಸ್ಥಿರವಾಗಿ ನಿಲ್ಲುವ ದೃಢ ಸಂಕಲ್ಪ ಮಾಡಿರಿ. ದೇವನ ಮುಂದೆ ಮಾಡಿರುವ ವಾಗ್ದಾನದ ಉಲ್ಲಂಘನೆಯಾಗದಂತೆ ಸದಾ ಜಾಗ್ರತೆ ವಹಿಸಿರಿ. ನಿಮ್ಮಲ್ಲಿ ಆದ ಸುಧಾರಣೆ ಮತ್ತು ಸಂಸ್ಕಾರದ ಬಗ್ಗೆ ಪ್ರತಿ ದಿವಸವೂ ಅವಲೋಕನ

ನಡೆಸುತ್ತಿರಿ. ನಿಮ್ಮ ಎಲ್ಲ ಪ್ರಯತ್ನ, ಪರಿಶ್ರಮಗಳ ಹೊರತಾಗಿಯೂ ಪ್ರಮಾದವಶಾತ್ ನಿಮ್ಮಿಂದ ಯಾವುದಾದರೂ ಪಾಪ ಸಂಭವಿಸಿದರೆ ನಿರಾಶರಾಗದಿರಿ. ಮತ್ತೊಮ್ಮೆ ಪಶ್ಚಾತ್ತಾಪ ಪಟ್ಟು ಅಲ್ಲಾಹನತ್ತ ಮರಳಿರಿ. ಅವನ ಕ್ಷಮಾಶ್ರಯವನ್ನು ಅರಸಿರಿ. ಅವನ ಮುಂದೆ ಅತ್ತು, ಕೂಗಿ ಈ ರೀತಿ ಹೇಳಿರಿ: ಓ ಅಲ್ಲಾಹ್! ನಾನು ಅತ್ಯಂತ ಬಲಹೀನನು. ಆದರೆ ನೀನು ನನ್ನನ್ನು ನಿನ್ನ ಆಸ್ಥಾನದಿಂದ ಹೊರಗಟ್ಟಬೇಡ. ಏಕೆಂದರೆ ನಿನ್ನ ಹೊರತು ಬೇರಾರ ಆಶ್ರಯವೂ ನನಗಿಲ್ಲ.

ಹ. ಅಬೂ ಸಈದ್ ಅಬುಲ್ ಖೈರ್(ರ) ತಮ್ಮ ಒಂದು ಕವಿತೆಯಲ್ಲಿ ಹೀಗೆಂದಿದ್ದಾರೆ: "ಮರಳಿ ಬಾ! ದೇವನತ್ತ ಮರಳಿ ಬಾ! ನೀನು ಯಾರೇ ಆಗಿರಲಿ ಹೇಗೆಯೇ ಆಗಿರಲಿ. ದೇವನೆಡೆಗೆ ಮರಳಿ ಬಾ. ನೀನು ಸತ್ಯನಿಷೇಧಿ, ಅಗ್ನಿ ಆರಾಧಕ ಅಥವಾ ವಿಗ್ರಹಾರಾಧಕ ನಾಗಿದ್ದರೂ ಸರಿಯೇ. ದೇವನತ್ತ ಮರಳಿ ಬಾ".

ನಮ್ಮ ಈ ಆಸ್ಥಾನವು ನಿರಾಶೆ ಮತ್ತು ಹತಾಶೆಯ ಆಸ್ಥಾನವಲ್ಲ. ನೀನು ನೂರಾರು ಸಲ ತೌಬಾ ಮಾಡಿ ಅದನ್ನು ಮುರಿದಿದ್ದರೂ ಮರಳಿ ಬಾ.

ದೇವನಿಗೆ ಅತ್ಯಂತ ಸಂತೋಷ ಕೊಡುವ ವಿಷಯವು ದಾಸನ ಪಶ್ಚಾತ್ತಾಪವಾಗಿದೆ. ತೌಬಾದ ಅರ್ಥವೇ ಮರಳುವುದು ಎಂದಾಗಿದೆ. ಮನುಷ್ಯನು ವಿಚಾರ, ವಿಕಾರಗಳ ದುರ್ಮಾರ್ಗಕ್ಕೆ ಸಿಲುಕಿ ದುಷ್ಕರ್ಮಗಳಲ್ಲಿ ನಿರತನಾದರೆ ಅವನು ಅಲ್ಲಾಹನಿಂದ ಅಗಲುತ್ತಾನೆ. ಅದರಲ್ಲಿ ಬಹಳ ದೂರ ಸಾಗುತ್ತಾನೆ. ದೇವನಿಂದ ಬೇರ್ಪಡುತ್ತಾನೆ. ಆದರೆ ಆತನು ತನ್ನ ಕೃತ್ಯಗಳ ಬಗ್ಗೆ ಲಜ್ಜಿತನಾಗಿ ಯಾವಾಗ ದೇವನತ್ತ ಗಮನ ಹರಿಸುವನೋ ಆಗ ದೇವನ ಮಟ್ಟಿಗೆ ಕಳಕೊಂಡ ಒಂದು ವಸ್ತು ದೊರೆತಂತಾಗುತ್ತದೆ. ಈ ಪರಿಸ್ಥಿತಿಯನ್ನು ಪ್ರವಾದಿ ವರ್ಯರು ಅತ್ಯುತ್ತಮ ಶೈಲಿಯಲ್ಲಿ ಒಂದು ಉದಾಹರಣೆ ಕೊಟ್ಟು ವಿವರಿಸಿರುವರು:

ಪ್ರವಾದಿ(ಸ) ಹೇಳುತ್ತಾರೆ: "ನಿಮ್ಮ ಪೈಕಿ ಒಬ್ಬ ವ್ಯಕ್ತಿಯ ಒಂಟೆಯು ಮರುಭೂಮಿಯಲ್ಲಿ ಕಾಣೆಯಾಯಿತೆಂದಿಟ್ಟುಕೊಳ್ಳಿ. ಆತನ ಅನ್ನ ಪಾನೀಯಗಳೂ ಅದೇ ಕಾಣೆಯಾದ ಒಂಟೆಯಲ್ಲಿದ್ದರೆ ಹಾಗೂ ಆ ವ್ಯಕ್ತಿ ನಾಲ್ಕೂ ದಿಕ್ಕುಗಳಲ್ಲಿ ತನ್ನ ಒಂಟೆಗಾಗಿ ಹುಡುಕಾಡುತ್ತಾ ಜೀವನದಿಂದಲೇ ಜಿಗುಪ್ಸೆಗೊಂಡು ಮರಣವನ್ನು ನಿರೀಕ್ಷಿಸುತ್ತಾ ಒಂದು ಮರದ ನೆರಳಿನಲ್ಲಿ ಮಲಗಿದ್ದಾಗ ಪಕ್ಕನೆ ಅವನ ಒಂಟೆ ಸಾಮಾನು ಸಮೇತ ಪ್ರತ್ಯಕ್ಷವಾದರೆ ಆ ವ್ಯಕ್ತಿಗೆ ಎಷ್ಟು ಸಂತೋಷ ವಾದೀತೋ ನಿಮ್ಮ ಪ್ರಭುವಾದ ಅಲ್ಲಾಹನಿಗೆ ತನ್ನ ಪಥಭ್ರಷ್ಟ ದಾಸನು ಅವನತ್ತ ಪಶ್ಚಾತ್ತಾಪ ಪಟ್ಟು ಮರಳಿದಾಗ ಆ ವ್ಯಕ್ತಿಗಿಂತ ಎಷ್ಟೋ ಪಾಲು ಅಧಿಕ ಸಂತೋಷವಾಗುತ್ತದೆ". (ತಿರ್ಮಿದಿ)

ಇನ್ನೊಂದು ಸಂದರ್ಭದಲ್ಲಿ ಪ್ರವಾದಿ(ಸ) ಇದೇ ಯಥಾರ್ಥವನ್ನು ಇನ್ನೊಂದು ಅತ್ಯಂತ ಪರಿಣಾಮಕಾರಿ ಉದಾಹರಣೆಯ ಮೂಲಕ ವಿವರಿಸಿರುವರು.

ಒಮ್ಮೆ ಕೆಲವು ಮಂದಿ ಯುದ್ಧ ಕೈದಿಗಳು ಸೆರೆಯಾಗಿ ಬಂದರು. ಅವರ ಪೈಕಿ ಓರ್ವ ಮಹಿಳೆಯೂ ಇದ್ದರು. ಮಹಿಳೆಯ ಮೊಲೆ ಹಾಲುಣ್ಣುವ ಮಗುವು ಬೇರ್ಪಟ್ಟಿತ್ತು. ಆ ಮಹಿಳೆಯು ಮಾತೃ ವಾತ್ಸಲ್ಯದಿಂದ ಸಿಕ್ಕಸಿಕ್ಕ ಚಿಕ್ಕ ಮಗುವಿಗೆಲ್ಲಾ ಹಾಲುಣಿಸುತ್ತಿತ್ತು.

ಮಹಿಳೆಯ ಈ ಅವಸ್ಥೆಯನ್ನು ನೋಡಿ ಪ್ರವಾದಿವರ್ಯರು(ಸ) ತಮ್ಮ ಸಂಗಾತಿಗಳೊಂದಿಗೆ ಈ ತಾಯಿ ತನ್ನ ಮಗುವನ್ನು ಬೆಂಕಿಗೆ ಎಸೆಯುವಳೇ? ಎಂದು ಪ್ರಶ್ನಿಸಿದರು. ಸಹಾಬಿ ಗಳು ಹೇಳಿದರು, 'ಓ ಅಲ್ಲಾಹನ ಸಂದೇಶವಾಹಕರೇ! ಸ್ವಯಂ ಬೆಂಕಿಗೆ ಎಸೆಯು ವುದಂತಿರಲಿ, ಅದಾಗಿ ಬೀಳಲು ಹೋದರೆ ತನ್ನ ಪ್ರಾಣವನ್ನು ಬಲಿ ಕೊಟ್ಟಾದರೂ ಅದನ್ನು ಬೆಂಕಿಯಿಂದ ರಕ್ಷಿಸುವಳು.' ಆಗ ಪ್ರವಾದಿ(ಸ) ಹೇಳಿದರು: ಅಲ್ಲಾಹನು ತನ್ನ ದಾಸರನ್ನು, ಈ ತಾಯಿಯು ಮಗುವನ್ನು ಪ್ರೀತಿಸುವುದಕ್ಕಿಂತಲೂ ಅಧಿಕ ಪ್ರೀತಿಸುತ್ತಾನೆ.

8. ಪಶ್ಚಾತ್ತಾಪ ಮತ್ತು ಕ್ಷಮಾಯಾಚನೆ ನಿರಂತರ ಮಾಡುತ್ತಿರಿ. ಬೆಳಗ್ಗಿನಿಂದ ಸಂಜೆಯ ತನಕ ಮನುಷ್ಯನಿಂದ ಅಗಣಿತ ಪಾಪ ಕೃತ್ಯಗಳು ಸಂಭವಿಸುತ್ತಿರುತ್ತವೆ. ಕೆಲವೊಮ್ಮೆ ಅವನಿಗೆ ಅದರ ಅರಿವೇ ಇರುವುದಿಲ್ಲ. ಕೇವಲ ಮಹಾ ಪಾಪವೇನಾದರೂ ಸಂಭವಿಸಿದರೆ ಮಾತ್ರ ಪಶ್ಚಾತ್ತಾಪ ಪಡಬೇಕೆಂದು ಭಾವಿಸದಿರಿ. ಮನುಷ್ಯನು ಎಲ್ಲ ವೇಳೆಯೂ ಪಶ್ಚಾತ್ತಾಪ ಪಡುತ್ತಿರಬೇಕಾದುದು ಅಗತ್ಯ. ಹೆಜ್ಜೆ ಹೆಜ್ಜೆಗೂ ಅವನಿಂದ ತಪ್ಪುಗಳು ಸಂಭವಿಸಿಯೇ ತೀರುತ್ತದೆ. ಸ್ವಯಂ ಪ್ರವಾದಿ ಮುಹಮ್ಮದ್(ಸ) ದಿನವೊಂದಕ್ಕೆ ಎಪ್ಪತ್ತು ಸಲ ಮತ್ತು ನೂರು ಸಲ ಪಶ್ಚಾತ್ತಾಪ ಪಡುತ್ತಿದ್ದರು. (ಬುಖಾರಿ, ಮುಸ್ಲಿಮ್)

9. ತನ್ನ ಪಾಪಗಳಿಗೆ ಪಶ್ಚಾತ್ತಾಪ ಪಟ್ಟು ಮರಳಿದವನನ್ನು ಎಂದೂ ಕೀಳಾಗಿ ಕಾಣದಿರಿ. ಹ. ಇಮ್ರಾನ್ ಬಿನ್ ಹುಸೈನ್(ರ) ಪ್ರವಾದಿವರ್ಯರ(ಸ) ಕಾಲದ ಒಂದು ಘಟನೆಯನ್ನು ಈ ರೀತಿ ವಿವರಿಸಿದ್ದಾರೆ: ಜುಹೈನಾ ಗೋತ್ರದ ಓರ್ವ ಹೆಂಗಸು ಪ್ರವಾದಿವರ್ಯರ(ಸ) ಬಳಿ ಬಂದರು. ಆಕೆ ವ್ಯಭಿಚಾರದಿಂದಾಗಿ ಗರ್ಭವತಿಯಾಗಿದ್ದಳು. ಆಕೆ ಬಂದು, 'ಪ್ರವಾದಿವರ್ಯರೇ! ನಾನು ವ್ಯಭಿಚಾರದ ಶಿಕ್ಷೆಗೆ ಅರ್ಹಳಾಗಿದ್ದೇನೆ. ನನ್ನ ಮೇಲೆ ಇಸ್ಲಾಮಿ ದಂಡ ನಿಯಮವನ್ನು ಜಾರಿಗೊಳಿಸಿರಿ' ಎಂದು ಹೇಳಿದಳು. ಪ್ರವಾದಿವರ್ಯರು(ಸ) ಆ ಮಹಿಳೆಯ ರಕ್ಷಕರನ್ನು ಕರೆಸಿದರು. ಅವರಿಗೆ ಈ ರೀತಿ ಆದೇಶಿಸಿದರು: ನೀವು ಇವರೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸಬೇಕು. ಈಕೆಯ ಪ್ರಸವವಾದ ಬಳಿಕ ನನ್ನ ಬಳಿ ಕರೆ ತರಬೇಕು. ಮಗು ಹುಟ್ಟಿದ ಬಳಿಕ ಆ ಮಹಿಳೆ ಬಂದಾಗ ಆಕೆಯ ಬಟ್ಟೆಯನ್ನು ಚೆನ್ನಾಗಿ ಬಿಗಿದು ಸುತ್ತಬೇಕೆಂದೂ ಅದು ಕಲ್ಲೆಸೆದು ಕೊಲ್ಲುವ ಸಮಯದಲ್ಲಿ ಬಿಚ್ಚಿ ಹೋಗಬಾರದೆಂದೂ ಆಜ್ಞಾಪಿಸಿದರು. ತರುವಾಯ ಆಕೆಗೆ ಕಲ್ಲೆಸೆದು ಕೊಲ್ಲುವ ಶಿಕ್ಷೆ ನೀಡಲಾಯಿತು. ಬಳಿಕ ಪ್ರವಾದಿವರ್ಯರು(ಸ) ಆಕೆಯ ಜನಾಝು ನಮಾಝ್ ನಿರ್ವಹಿ ಸಿದರು. ಆಗ ಹ. ಉಮರ್(ರ) ಕೇಳಿದರು: ಓ ಪ್ರವಾದಿವರ್ಯರೇ! ತಾವೇಕೆ ಈಕೆಯ ಜನಾಝಾ ನಮಾಝ್ ನಿರ್ವಹಿಸಿದಿರಿ. ಈಕೆ ವ್ಯಭಿಚಾರಿಣಿಯಲ್ಲವೇ? ಆಗ ಪ್ರವಾದಿ(ಸ) ಹೇಳಿದರು: 'ಈ ಮಹಿಳೆ ಪಶ್ಚಾತ್ತಾಪ ಮಾಡಿದ್ದಾಳೆ. ಆಕೆಯ ಪಶ್ಚಾತ್ತಾಪವನ್ನು ಮದೀನಾದ ಎಪ್ಪತ್ತು ಮಂದಿಗೆ ವಿತರಿಸಿದರೆ ಅವರೆಲ್ಲರಿಗೂ ಕ್ಷಮಾದಾನ ಸಿಕ್ಕೀತು. ತನ್ನ ಪ್ರಾಣವನ್ನೇ ದೇವನಿಗಾಗಿ ಅರ್ಪಿಸಿದವರಿಗಿಂತ ಉತ್ತಮವಾಗಿ ಯಾರನ್ನಾದರೂ ನೀವು ಕಂಡಿರುವಿರಾ' ಎಂದು ಪ್ರವಾದಿ(ಸ) ಮರುಪ್ರಶ್ನೆ ಹಾಕಿದರು.

10. 'ಸೈಯದುಲ್ ಇಸ್ತಿಗ್‌ಫಾರ' (ಮುಖ್ಯ ಪಶ್ಚಾತ್ತಾಪ)ನ್ನು ಹೇಳುತ್ತಿರಿ. ಪ್ರವಾದಿ(ಸ)

ಹ. ಶದ್ದಾದ್ ಬಿನ್ ಔಸ್‌ರಿಗೆ(ರ) ಹೇಳಿದರು, ಸೈಯದುಲ್ ಇಸ್ತಿಗ್‌ಫಾರ್ ಅರ್ಥಾತ್ ಅತ್ಯುತ್ತಮ ಕ್ಷಮಾಯಾಚನೆ ಮತ್ತು ಪಶ್ಚಾತ್ತಾಪವು ಈ ರೀತಿ ಇದೆ:

اَللّٰھُمَّ اَنْتَ رَبِّیْ لَآ اِلٰہَ اِلَّا اَنْتَ خَلَقْتَنِیْ وَاَنَا عَبْدُکَ وَاَنَا عَلٰی عَھْدِکَ وَوَعْدِکَ مَا اسْتَطَعْتُ اَعُوْذُبِکَ مِنْ شَرِّ مَا صَنَعْتُ ۔ اَبُوْءُ لَکَ بِنِعْمَتِکَ عَلَیَّ وَاَبُوْءُ بِذَنْبِیْ فَاغْفِرْلِیْ فَاِنَّہٗ لَا یَغْفِرُ الذُّنُوْبَ اِلَّآ اَنْتَ

(بخاری، ترمذی)

"ಅಲ್ಲಾಹುಮ್ಮ ಅಂತ ರಬ್ಬೀ ಲಾ ಇಲಾಹ ಇಲ್ಲಾ ಅಂತ ಖಲಕ್ತನೀ ವಅನ ಅಬ್ದುಕ ವಅನ ಅಲಾ ಅಹ್ದಿಕ ವವಅ್‌ದಿಕ ಮಸ್ತತಅ್‌ತು ಅಊದುಬಿಕ ಮಿನ್‌ಶರ್ರಿ ಮಾ ಸನಅ್‌ತು ಅಬೂಉಲಕ ಬಿನಿಅ್‌ಮತಿಕ ಅಲಯ್ಯ ವ ಅಬೂಉ ಬಿದಂಬೀ ಫಗ್‌ಫಿರ್‌ಲೀ ಫಇನ್ನಹೂ ಲಾಯಗ್‌ಫಿರುದ್ದುನೂಬ ಇಲ್ಲಾ ಅಂತ".

(ಓ ಅಲ್ಲಾಹ್! ನೀನೇ ನನ್ನ ಪಾಲಕ ಪ್ರಭು. ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ. ನೀನೇ ನನ್ನನ್ನು ಸೃಷ್ಟಿಸಿದೆ. ನಾನು ನಿನ್ನ ದಾಸ. ನಾನು ನಿನ್ನಲ್ಲಿ ಮಾಡಿರುವ ದಾಸ್ಯ ಆರಾಧನೆಯ ಮತ್ತು ಅನುಸರಣೆಯ ಕರಾರನ್ನು ನನಗೆ ಸಾಧ್ಯವಿದ್ದಷ್ಟು ಪಾಲಿಸುವೆನು. ನನ್ನಿಂದ ಆಗಿ ಹೋದ ತಪ್ಪುಗಳ ದುಷ್ಪರಿಣಾಮಗಳಿಂದ ನಿನ್ನ ಅಭಯ ಕೋರುತ್ತೇನೆ. ನೀನು ನನಗೆ ಕೊಡ ಮಾಡಿದ ಅನುಗ್ರಹಗಳನ್ನು ನಾನು ಅಂಗೀಕರಿಸುತ್ತೇನೆ. ನಾನು ಪಾಪಿ ಎಂಬುದನ್ನು ಒಪ್ಪಿಕೊಳ್ಳುತ್ತೇನೆ. ಆದ್ದರಿಂದ ನನ್ನ ಪಾಪಗಳನ್ನು ಮನ್ನಿಸು. ನಿನ್ನ ಹೊರತು ನನ್ನ ಪಾಪಗಳನ್ನು ಮನ್ನಿಸುವವರು ಯಾರೂ ಇಲ್ಲ.) (ಬುಖಾರಿ, ತಿರ್ಮಿದಿ)

# ಪ್ರಾರ್ಥನೆಯ ಮರ್ಯಾದೆಗಳು

1. ಕೇವಲ ಅಲ್ಲಾಹನನ್ನೇ ಕರೆದು ಪ್ರಾರ್ಥಿಸಿರಿ. ಆತನ ಹೊರತು ಇನ್ನಾರನ್ನೂ ಎಂದೂ ಬಯಕೆಗಳ ಈಡೇರಿಕೆಗಾಗಿ ಕರೆಯಬೇಡಿರಿ. ದುಆ ಎಂಬುದು ಆರಾಧನೆಯ ತಿರುಳು. ಆರಾಧನೆಗೆ ಅರ್ಹನು ಅಲ್ಲಾಹನು ಮಾತ್ರ.

ಪವಿತ್ರ ಕುರ್‌ಆನ್ ಈ ರೀತಿ ಹೇಳುತ್ತದೆ:

لَهُۥ دَعْوَةُ ٱلْحَقِّ ۖ وَٱلَّذِينَ يَدْعُونَ مِن دُونِهِۦ لَا يَسْتَجِيبُونَ لَهُم بِشَىْءٍ إِلَّا

كَبَٰسِطِ كَفَّيْهِ إِلَى ٱلْمَآءِ لِيَبْلُغَ فَاهُ وَمَا هُوَ بِبَٰلِغِهِۦ ۚ وَمَا دُعَآءُ ٱلْكَٰفِرِينَ إِلَّا فِى ضَلَٰلٍ ﴿١٤﴾

"ಯಥಾರ್ಥ ಪ್ರಾರ್ಥನೆ ಆತನಿಗೆ ಮಾತ್ರ ಇರುವಂತಹದ್ದು. ಆತನ ಹೊರತು ಅವರು ಯಾರ್‍ಯಾರಲ್ಲಿ ಮೊರೆ ಇಡುತ್ತಾರೋ ಅವರು ಯಾವುದಕ್ಕೂ ಉತ್ತರ ಕೊಡಲಾರರು. ಅವರ ಪರಿಸ್ಥಿತಿಯು ತನ್ನಷ್ಟಕ್ಕೆ ನೀರು ಬಾಯಿಗೆ ಮುಟ್ಟಲೆಂದು ದೂರದಿಂದಲೇ ನೀರಿಗೆ ಕೈಚಾಚಿದವನಂತಿದೆ. ಅವನ ಬಾಯಿಗಂತೂ ಅದು ಮುಟ್ಟಲಾರದು. ಹೀಗೆಯೇ ಸತ್ಯ ನಿಷೇಧಿಗಳ ಪ್ರಾರ್ಥನೆಯೂ ಗುರಿ ತಪ್ಪಿರುತ್ತದೆ". **(13:14)**

ಅರ್ಥಾತ್ ಬಯಕೆಗಳನ್ನು ಈಡೇರಿಸುವ ಮತ್ತು ಕಾರ್ಯಗಳನ್ನು ಸುಗಮಗೊಳಿಸುವ ಎಲ್ಲ ಅಧಿಕಾರಗಳು ಅಲ್ಲಾಹನಲ್ಲಿಯೇ ಇವೆ. ಅವನ ಹೊರತು ಯಾರ ಬಳಿಯೂ ಯಾವ ಅಧಿಕಾರವೂ ಇಲ್ಲ. ಎಲ್ಲರೂ ಅವನ ಆಶ್ರಿತರು. ಅವನ ಹೊರತು ಮನುಷ್ಯರ ಪ್ರಾರ್ಥನೆಗಳನ್ನು ಆಲಿಸುವವನು ಮತ್ತು ಅವುಗಳಿಗೆ ಉತ್ತರ ನೀಡುವವರು ಬೇರಾರೂ ಇಲ್ಲ.

يَٰٓأَيُّهَا ٱلنَّاسُ أَنتُمُ ٱلْفُقَرَآءُ إِلَى ٱللَّهِ ۖ وَٱللَّهُ هُوَ ٱلْغَنِىُّ ٱلْحَمِيدُ ﴿١٥﴾

"ಓ ಮನುಷ್ಯರೇ! ನೀವು ಅಲ್ಲಾಹನ ಅವಲಂಬಿತರಾಗಿರುತ್ತೀರಿ. ಅಲ್ಲಾಹನಾದರೋ ನಿರಪೇಕ್ಷನೂ ಸ್ವಯಂ ಸ್ತುತ್ಯಾರ್ಹನೂ ಆಗಿರುತ್ತಾನೆ". (ಪವಿತ್ರ ಕುರ್‌ಆನ್, **35:15**)

ಅಲ್ಲಾಹನು ಹೇಳಿರುವುದಾಗಿ ಪ್ರವಾದಿ(ಸ) ಈ ರೀತಿ ಹೇಳಿದ್ದಾರೆ:

"ನನ್ನ ದಾಸರೇ! ನಾನು ನನ್ನ ಮೇಲೆ ಅಕ್ರಮವನ್ನು ನಿಷಿದ್ಧಗೊಳಿಸಿದ್ದೇನೆ. ನೀವು ಪರಸ್ಪರರ ಮೇಲೆ ಅಕ್ರಮವೆಸಗುವುದನ್ನು ನಿಷಿದ್ಧಗೊಳಿಸಿ. ನನ್ನ ದಾಸರೇ! ನಾನು ಮಾರ್ಗದರ್ಶನ ಮಾಡಿದವರ ಹೊರತು ನಿಮ್ಮ ಪೈಕಿ ಪ್ರತಿಯೊಬ್ಬರೂ ಪಥಭ್ರಷ್ಟರು. ಆದ್ದರಿಂದ ನೀವು ನನ್ನಿಂದಲೇ

ಮಾರ್ಗದರ್ಶನವನ್ನು ಬೇಡಿರಿ. ನಾನು ನಿಮಗೆ ಮಾರ್ಗದರ್ಶನ ಮಾಡುವೆನು. ನನ್ನ ದಾಸರೇ! ನಾನು ಉಣಿಸಿದವನ ಹೊರತು ನಿಮ್ಮಲ್ಲಿ ಪ್ರತಿಯೊಬ್ಬರೂ ಹಸಿದವರು. ಆದ್ದರಿಂದ ನೀವು ನನ್ನಿಂದಲೇ ಆಹಾರವನ್ನು ಬೇಡಿರಿ. ನಾನು ನಿಮಗೆ ಉಣಿಸುವೆನು. ಓ ನನ್ನ ದಾಸರೇ! ನಾನು ಬಟ್ಟೆ ತೊಡಿಸಿದವನ ಹೊರತು ನಿಮ್ಮ ಪೈಕಿ ಪ್ರತಿಯೊಬ್ಬರೂ ನಗ್ನರಾಗಿದ್ದೀರಿ. ಆದ್ದರಿಂದ ನೀವು ನನ್ನಿಂದಲೇ ವಸ್ತ್ರವನ್ನು ಬೇಡಿರಿ. ನಾನು ನಿಮಗೆ ತೊಡಿಸುವೆನು. ಓ ನನ್ನ ದಾಸರೇ! ನೀವು ರಾತ್ರಿಯಲ್ಲೂ ಪಾಪಗಳನ್ನೆಸಗುತ್ತೀರಿ. ಹಗಲಲ್ಲೂ ಪಾಪಗಳನ್ನೆಸಗುತ್ತೀರಿ. ನಾನು ನಿಮ್ಮ ಎಲ್ಲ ಪಾಪಗಳನ್ನೂ ಕ್ಷಮಿಸುವೆನು". (ಮುಸ್ಲಿಮ್)

ಪ್ರವಾದಿ(ಸ) ಹೀಗೂ ಹೇಳಿರುವರು: "ಮನುಷ್ಯನು ತನ್ನ ಎಲ್ಲ ಬಯಕೆಗಳಿಗೂ ಅಲ್ಲಾಹನಲ್ಲೇ ಮೊರೆ ಇಡಬೇಕು. ಎಷ್ಟರ ವರೆಗೆಂದರೆ ಪಾದರಕ್ಷೆಯ ಬಾರ ತುಂಡಾಗಿದ್ದರೂ ಅಲ್ಲಾಹನಲ್ಲೇ ಪ್ರಾರ್ಥಿಸಬೇಕು. ಉಪ್ಪಿನ ಅಗತ್ಯವಿದ್ದರೆ ಅದಕ್ಕೂ ಅಲ್ಲಾಹನಲ್ಲೇ ಮೊರೆ ಇಡಬೇಕು". (ತಿರ್ಮಿದಿ)

ಅರ್ಥಾತ್ ಮನುಷ್ಯನು ತನ್ನ ಅತ್ಯಂತ ಸಣ್ಣ ಬೇಡಿಕೆಗೂ ಅಲ್ಲಾಹನನ್ನೇ ಪ್ರಾರ್ಥಿಸಬೇಕು. ಆತನ ಹೊರತು ಪ್ರಾರ್ಥನೆಗಳನ್ನು ಆಲಿಸುವವರು ಮತ್ತು ಆಶೆ-ಆಕಾಂಕ್ಷೆಗಳನ್ನು ಈಡೇರಿಸುವವರು ಬೇರೆ ಯಾರೂ ಇಲ್ಲ.

2. ಧರ್ಮಬದ್ಧವೂ, ಶುದ್ಧವೂ ಆದುದನ್ನೇ ಅಲ್ಲಾಹನಲ್ಲಿ ಬೇಡಿರಿ. ದುರುದ್ದೇಶಕ್ಕಾಗಿ ಅಥವಾ ಪಾಪ ಕಾರ್ಯಗಳಿಗಾಗಿ ಅಲ್ಲಾಹನ ಮುಂದೆ ಕೈ ಚಾಚುವುದು ಅಸಭ್ಯ, ಅಶ್ಲೀಲ ಮತ್ತು ಅಗೌರವ ಕೃತ್ಯವಾಗಿದೆ. ಹರಾಮ್ ಅಥವಾ ನಿಷಿದ್ಧ ಉದ್ದೇಶಗಳಿಗಾಗಿ ಅಲ್ಲಾಹ ನಲ್ಲಿ ಪ್ರಾರ್ಥಿಸುವುದು ಮತ್ತು ಹರಕೆ ಹೊರುವುದು ಧರ್ಮದೊಂದಿಗೆ ಮಾಡುವ ಒಂದು ಪರಿಹಾಸ್ಯವಾಗಿದೆ. ಅಂತೆಯೇ ಪ್ರಕೃತಿ ನಿಯಮಕ್ಕೆ ವಿರುದ್ಧವಾದ ಯಾವುದನ್ನೂ ಅಲ್ಲಾಹನಿಂದ ಯಾಚಿಸಬೇಡಿರಿ. ಅವುಗಳಲ್ಲಿ ಯಾವುದೇ ಬದಲಾವಣೆಯಾಗದು. ಉದಾ: ಕುಳ್ಳನು ನೀಳಕಾಯನಾಗಲು ಪ್ರಾರ್ಥಿಸುವುದು ಅಥವಾ ಅತ್ಯಂತ ನೀಳಕಾಯದ ಮನುಷ್ಯ ಗಿಡ್ಡವಾಗಲು ಪ್ರಾರ್ಥಿಸುವುದು ಅಥವಾ ನಾನೆಂದೂ ಯುವಕನಾಗಿಯೇ ಇರಬೇಕು; ನನಗೆ ಮುದಿತನ ಬರಕೂಡದೆಂದು ಪ್ರಾರ್ಥಿಸುವುದು ಇತ್ಯಾದಿ.

ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಆದೇಶಿಸಲಾಗಿದೆ:

قُلْ أَمَرَ رَبِّي بِالْقِسْطِ ۖ وَأَقِيمُوا وُجُوهَكُمْ عِندَ كُلِّ مَسْجِدٍ وَادْعُوهُ مُخْلِصِينَ لَهُ الدِّينَ ۚ
كَمَا بَدَأَكُمْ تَعُودُونَ ﴿٢٩﴾

**"ಓ ಪೈಗಂಬರರೇ; ಇವರೊಡನೆ ಹೇಳಿರಿ, ನನ್ನ ಪ್ರಭು ನ್ಯಾಯಪರ ಆಜ್ಞೆಯನ್ನಿತ್ತಿದ್ದಾನೆ. ಪ್ರತಿಯೊಂದು ಉಪಾಸನೆಯಲ್ಲಿ ಗಮನವನ್ನು ಸರಿಯಾಗಿರಿಸಬೇಕೆಂದೂ ಧರ್ಮವನ್ನು ಅವನಿಗೇ ಮೀಸಲಾಗಿಟ್ಟು ಅವನನ್ನೇ ಕೂಗಿ ಕರೆಯಬೇಕೆಂದೂ ಅವನ ಆಜ್ಞೆಯಾಗಿರುತ್ತದೆ. ಅವನು ನಿಮ್ಮನ್ನು ಈಗ ಸೃಷ್ಟಿಸಿದಂತೆಯೇ ನೀವು ಪುನಃ ಸೃಷ್ಟಿಸಲ್ಪಡುವಿರಿ". (ಪವಿತ್ರ ಕುರ್‌ಆನ್, 7: 29)**

ಅಲ್ಲಾಹನ ಮುಂದೆ ತನ್ನ ಬೇಡಿಕೆಗಳನ್ನು ಇರಿಸುವವನು, ಧಿಕ್ಕಾರದ ಮಾರ್ಗದಲ್ಲಿ ನಡೆಯುವವನಾಗಿದ್ದು ನಿಷಿದ್ಧ ಬೇಡಿಕೆಗಳಿಗಾಗಿ ಪ್ರಾರ್ಥಿಸಬಾರದು. ಸಚ್ಚಾರಿತ್ರ್ಯವಂತನಾಗಿ ಒಳ್ಳೆಯ ಭಾವನೆಗಳೊಂದಿಗೆ ಸದುದ್ದೇಶಗಳ ಈಡೇರಿಕೆಗಾಗಿ ಪ್ರಾರ್ಥಿಸಬೇಕು.

3. ಅಲ್ಲಾಹನಲ್ಲಿ ನಿಷ್ಕಳಂಕವಾಗಿ, ಪರಿಶುದ್ಧ ಉದ್ದೇಶಗಳೊಂದಿಗೆ ಪ್ರಾರ್ಥಿಸಬೇಕು. ನೀವು ಯಾರಲ್ಲಿ ಬೇಡುತ್ತಿರುವಿರೋ ಆತನು ನಿಮ್ಮ ಮನದಿಂಗಿತವನ್ನೂ ಅರಿಯುತ್ತಾನೆ. ನಿಮ್ಮ ಮೇಲೆ ಅತ್ಯಧಿಕ ಕರುಣೆಯುಳ್ಳವನಾಗಿದ್ದಾನೆ. ಅವನೇ ಪ್ರಾರ್ಥನೆಗಳನ್ನು ಆಲಿಸುವವನು ಮತ್ತು ಈಡೇರಿಸುವವನು ಎಂಬ ದೃಢನಂಬಿಕೆ ನಿಮಗಿರಬೇಕು. ಕಾಪಟ್ಯ, ಆಡಂಬರ ಮತ್ತು ಬಹುದೇವಾರಾಧನೆಯ ವಾಂಛೆಯಿಂದ ನಿಮ್ಮ ಪ್ರಾರ್ಥನೆಯನ್ನು ಪಾವನವಾಗಿರಿಸಿ.

ಪವಿತ್ರ ಕುರ್‌ಆನ್ ಹೀಗೆ ಆದೇಶಿಸಿದೆ:

فَادْعُوا اللّٰهَ مُخْلِصِيْنَ لَهُ الدِّيْنَ

"ಆದ್ದರಿಂದ ಅನುಸರಣೆಯಲ್ಲಿ ಅಲ್ಲಾಹನಿಗೆ ಏಕನಿಷ್ಠರಾಗಿ ಆತನನ್ನೇ ಕರೆದು ಪ್ರಾರ್ಥಿಸಿರಿ". **(ಪವಿತ್ರ ಕುರ್‌ಆನ್, 40:14)**

ಇನ್ನೊಂದೆಡೆ ಅದು ಈ ರೀತಿ ಹೇಳಿದೆ:

وَإِذَا سَأَلَكَ عِبَادِي عَنِّي فَإِنِّي قَرِيبٌ أُجِيبُ دَعْوَةَ الدَّاعِ إِذَا دَعَانِ فَلْيَسْتَجِيبُوا لِي

وَلْيُؤْمِنُوا بِي لَعَلَّهُمْ يَرْشُدُونَ ﴿١٨٦﴾

"ಓ ಪ್ರವಾದಿವರ್ಯರೇ! ನನ್ನ ದಾಸರು ನನ್ನ ಬಗ್ಗೆ ನಿಮ್ಮಲ್ಲಿ ವಿಚಾರಿಸಿದರೆ ಹೇಳಿರಿ, ನಾನು ಸಮೀಪದಲ್ಲೇ ಇದ್ದೇನೆ. ಪ್ರಾರ್ಥಿಸುವವನು ನನ್ನನ್ನು ಕರೆದು ಪ್ರಾರ್ಥಿಸಿದರೆ ನಾನು ಆ ಪ್ರಾರ್ಥನೆಗೆ ಉತ್ತರ ನೀಡುವೆನು. ಆದ್ದರಿಂದ ಅವರು ನನ್ನ ಕರೆಗೆ ಓಗೊಡಲಿ ಮತ್ತು ನನ್ನ ಮೇಲೆ ವಿಶ್ವಾಸವಿಡಲಿ. ಈ ರೀತಿ ಅವರು ಸನ್ಮಾರ್ಗ ಪಡೆಯಬಹುದು".

**(ಪವಿತ್ರ ಕುರ್‌ಆನ್, 2: 186)**

4. ಪ್ರಾರ್ಥನೆಗಳನ್ನು ಪೂರ್ಣ ಗಮನ, ಏಕಾಗ್ರತೆ ಮತ್ತು ಮನದಾಳದಿಂದ ಮಾಡಿರಿ. ಅಲ್ಲಾಹನಿಂದ ಶುಭ ನಿರೀಕ್ಷೆಯನ್ನೇ ಇರಿಸಿರಿ. ನಿಮ್ಮ ಪಾಪಗಳ ರಾಶಿಯತ್ತ ದೃಷ್ಟಿ ಇಡದೆ ಅಲ್ಲಾಹನ ಅಪಾರ ಅನುಗ್ರಹ, ಕ್ಷಮಾಶೀಲತೆ, ಕರುಣೆ ಮತ್ತು ದಯಾಭಿಕ್ಷೆಯತ್ತಲೇ ಗಮನವಿರಿಸಿ. ದೇವನಿಂದ ಶುಭ ನಿರೀಕ್ಷೆಯಿಡದೆ, ಏಕಾಗ್ರತೆ ಇಲ್ಲದೆ, ಒಲ್ಲದ ಮನಸ್ಸಿನೊಂದಿಗೆ ಉಚ್ಚರಿಸುವ ಕೆಲವು ಶಬ್ದಗಳು ಪ್ರಾರ್ಥನೆಯಾಗಲು ಸಾಧ್ಯವೇ ಇಲ್ಲ.

ಹದೀಸ್‌ನಲ್ಲಿ ಈ ರೀತಿ ಹೇಳಿದೆ: "ನಿಮ್ಮ ಪ್ರಾರ್ಥನೆ ಸ್ವೀಕೃತವಾಗುವುದೆಂಬ ಭರವಸೆಯೊಂದಿಗೆ (ಏಕಾಗ್ರತೆಯಿಂದ) ಪ್ರಾರ್ಥಿಸಿರಿ. ಅಲಕ್ಷ್ಯ ಮತ್ತು ನಿರಪೇಕ್ಷ ಮನಸ್ಸಿನೊಂದಿಗೆ ಮಾಡಿದ ಪ್ರಾರ್ಥನೆಯನ್ನು ಅಲ್ಲಾಹನು ಸ್ವೀಕರಿಸುವುದಿಲ್ಲ". (ತಿರ್ಮಿದಿ)

5. ಅತ್ಯಂತ ದೈನ್ಯತೆ ಮತ್ತು ಭಯಭಕ್ತಿಯೊಂದಿಗೆ ಪ್ರಾರ್ಥಿಸಿರಿ. ಭಯಭಕ್ತಿ ಎಂದರೆ ನಿಮ್ಮ ಮನದಲ್ಲಿ ದೇವಭಯ ಮತ್ತು ಆತನ ಮಹಾತ್ಮೆಯ ಭಾವನೆ ತುಂಬಿ ತುಳುಕಬೇಕು. ಆತನ ಭಯದಿಂದ ನಿಮ್ಮ ಮೈ ನಡುಗುತ್ತಿರಬೇಕು. ನಿಮ್ಮ ಶರೀರದಲ್ಲೂ ಆತನ ಭಯ ಭಕ್ತಿಯ ಸಂಕೇತಗಳು ಗೋಚರವಾಗಬೇಕು. ತಲೆ ಮತ್ತು ದೃಷ್ಟಿ ತಗ್ಗಿರಬೇಕು. ಧ್ವನಿ ಮೆದುವಾಗಿರಬೇಕು. ಶರೀರದ ಅವಯವಗಳನ್ನು ಸಡಿಲು ಬಿಡಬೇಕು. ಕಣ್ಣುಗಳಲ್ಲಿ ಅಶ್ರು ತುಂಬಿರಬೇಕು. ಎಲ್ಲ ಅವಯವಗಳಿಂದ ನಿಮ್ಮ ದೈನ್ಯತೆ ಮತ್ತು ಅಸಹಾಯಕತೆ ವ್ಯಕ್ತವಾಗಬೇಕು. ಓರ್ವ ವ್ಯಕ್ತಿ ನಮಾಝ್ ಮಾಡುವ ವೇಳೆ ತನ್ನ ಗಡ್ಡದಲ್ಲಿ ಕೈಯಾಡಿಸುವುದನ್ನು ಪ್ರವಾದಿ(ಸ) ಕಂಡಾಗ, ಆತನ ಮನದಲ್ಲಿ ದೇವ ಭಯ-ಭಕ್ತಿ ಇರುತ್ತಿದ್ದರೆ ಅದು ಶರೀರದಲ್ಲೂ ಪ್ರಕಟವಾಗುತ್ತಿತ್ತು ಎಂದು ಹೇಳಿದರು.

ವಾಸ್ತವದಲ್ಲಿ ಪ್ರಾರ್ಥನೆ ಮಾಡುವಾಗ ನಾನೊಬ್ಬ ದೀನ, ಅಸಹಾಯಕ ವ್ಯಕ್ತಿ, ದುರ್ದೈವದಿಂದ ಅಲ್ಲಾಹನ ಆಸ್ಥಾನದಿಂದ ತಿರಸ್ಕರಿಸಲ್ಪಟ್ಟರೆ ನನಗೆ ಬೇರಾವ ಆಶ್ರಯವೂ ಇಲ್ಲ. ನನ್ನ ಬಳಿ ನನ್ನದೆಂಬುದು ಯಾವುದೂ ಇಲ್ಲ. ಎಲ್ಲವೂ ದೇವನ ಕೊಡುಗೆ. ಅವನು ಕೊಡದಿದ್ದರೆ ನನಗೆ ಕೊಡುವವರು ಜಗತ್ತಿನಲ್ಲಿ ಬೇರೆ ಯಾರೂ ಇಲ್ಲ. ಎಲ್ಲ ವಸ್ತುಗಳ ನೈಜ ಒಡೆಯ ಅಲ್ಲಾಹನು ಮಾತ್ರ. ಎಲ್ಲ ವಸ್ತುಗಳ ನಿಧಿಯೂ ಆತನ ಬಳಿಯೇ ಇದೆ. ದಾಸನು ತೀರಾ ಅಸಹಾಯಕ ಮತ್ತು ಆಶ್ರಿತನಾಗಿದ್ದಾನೆ ಎಂಬ ಭಾವನೆಯಿಂದ ಮೈಯಲ್ಲಿ ನಡುಕ ಹುಟ್ಟಬೇಕು. ಪವಿತ್ರ ಕುರ್‌ಆನ್ ಈ ರೀತಿ ಆದೇಶಿಸಿದೆ:

ادْعُوا رَبَّكُمْ تَضَرُّعًا وَّخُفْيَةً

"ನಿಮ್ಮ ಪ್ರಭುವನ್ನು ಭಯ ವಿನಯದೊಂದಿಗೆ ಮತ್ತು ರಹಸ್ಯವಾಗಿ ಪ್ರಾರ್ಥಿಸಿರಿ".

**(7:55)**

ದಾಸ್ಯದ ಮೇಲ್ಮೆ ಇರುವುದು ದಾಸನು ದೈನ್ಯತೆ ಮತ್ತು ಅಸಹಾಯಕತೆಯ ಭಾವನೆಯೊಂದಿಗೆ ಪ್ರಾರ್ಥಿಸುವುದರಲ್ಲಿ. ಅವನ ಮನ ಮಸ್ತಿಷ್ಕ, ಭಾವನೆ, ವಿಚಾರಗಳು, ಎಲ್ಲ ಅವಯವಗಳು ಅವನ ಮುಂದೆ ಬಾಗಿದಾಗ ಮಾತ್ರ. ಅವನ ಬಾಹ್ಯ, ಆಂತರಿಕ ಸ್ಥಿತಿಯಲ್ಲೇ ಮೊರೆ ಮತ್ತು ಪ್ರಾರ್ಥನೆ ತುಂಬಿ ತುಳುಕುವಂತಿರಬೇಕು.

6. ಮೆಲು ದನಿಯಲ್ಲಿ ರಹಸ್ಯವಾಗಿ ಪ್ರಾರ್ಥಿಸಿರಿ. ದೇವನ ಮುಂದೆ ಭಯದಿಂದ ಕಂಪಿಸಬೇಕು. ಆದರೆ ಈ ಕಂಪನದ ಪ್ರದರ್ಶನ ಮಾಡಕೂಡದು. ದಾಸನ ದೈನ್ಯತೆ, ಅಸಹಾಯಕತೆಗಳ ಪ್ರದರ್ಶನವೆಲ್ಲಾ ದೇವನ ಮುಂದೆಯೇ ಇರಬೇಕು.

ಕೆಲವೊಮ್ಮೆ ಪ್ರಾರ್ಥನೆಗಳನ್ನು ಉಚ್ಚ ಸ್ವರದಲ್ಲಿ ಮಾಡುವ ಅವಕಾಶ ಖಂಡಿತ ಇದೆ. ಆದರೆ ಅದು ನೀವೊಬ್ಬರೇ ಇರುವಾಗ ಅಥವಾ ಸಾಮೂಹಿಕ ಪ್ರಾರ್ಥನೆ ಮಾಡುತ್ತಿರುವಾಗ ಮಾತ್ರ. ಸಾಮಾನ್ಯ ಸ್ಥಿತಿಯಲ್ಲಿ ಮೆಲುದನಿಯಲ್ಲಿ ರಹಸ್ಯವಾಗಿಯೇ ಪ್ರಾರ್ಥಿಸಬೇಕು. ನಿಮ್ಮ

ಭಯಭಕ್ತಿ, ರೋದನ ಮತ್ತು ಮೊರೆ ಇಡುವಿಕೆಯೆಲ್ಲಾ ಅಲ್ಲಾಹನಿಗಾಗಿರಬೇಕೇ ವಿನಾ ಜನರಿಗೆ ತೋರಿಸಲು ಆಗಿರಬಾರದು.

وَاذْكُر رَّبَّكَ فِي نَفْسِكَ تَضَرُّعًا وَخِيفَةً وَدُونَ الْجَهْرِ مِنَ الْقَوْلِ بِالْغُدُوِّ وَالْآصَالِ وَلَا تَكُن مِّنَ الْغَافِلِينَ ۝

"ಓ ಪೈಗಂಬರರೇ, ನಿಮ್ಮ ಪ್ರಭುವನ್ನು ಸಂಜೆ ಮುಂಜಾನೆಗಳಲ್ಲಿ ಮನಸ್ಸಿನೊಳಗೂ ಭಯಭರಿತರಾಗಿಯೂ ಮೆಲುದನಿಯೊಂದಿಗೂ ಸ್ಮರಿಸುತ್ತಲಿರಿ; ಅಸಡ್ಡೆಯಲ್ಲಿ ಬಿದ್ದಿರುವವ ರಲ್ಲಾಗಬೇಡಿರಿ". (ಪವಿತ್ರ ಕುರ್‌ಆನ್, 7:205)

ಹ. ಝಕರಿಯ್ಯಾರನ್ನು(ಅ) ಶ್ಲಾಘಿಸುತ್ತಾ ಪವಿತ್ರ ಕುರ್‌ಆನ್ ಹೀಗೆ ಹೇಳಿದೆ:

إِذْ نَادَىٰ رَبَّهُ نِدَاءً خَفِيًّا ۝

"ತಮ್ಮ ಪ್ರಭುವನ್ನವರು ರಹಸ್ಯವಾಗಿ ಕರೆದು ಪ್ರಾರ್ಥಿಸಿದಾಗ". (19:3)

7. ಪ್ರಾರ್ಥಿಸುವುದಕ್ಕಿಂತ ಮುಂಚೆ ಏನಾದರೂ ಸತ್ಕಾರ್ಯವನ್ನು ತಪ್ಪದೆ ಮಾಡಿರಿ. ಉದಾ: ದಾನಧರ್ಮ, ಹಸಿದವನಿಗೆ ಉಣಿಸುವುದು, ಐಚ್ಛಿಕ ನಮಾಝ್ ಮಾಡುವುದು, ಐಚ್ಛಿಕ ಉಪವಾಸ ಆಚರಿಸುವುದು, ದುರದೃಷ್ಟವಶಾತ್ ಏನಾದರೂ ಸಂಕಷ್ಟದಲ್ಲಿ ಸಿಲುಕಿದರೆ ನಿಮ್ಮ ಸತ್ಕರ್ಮಗಳನ್ನು ಉಲ್ಲೇಖಿಸಿ ಪ್ರಾರ್ಥಿಸಿರಿ. ಆ ಸತ್ಕರ್ಮವು ಕೇವಲ ಅಲ್ಲಾಹನ ಸಂಪ್ರೀತಿ ಗಾಗಿ ಮಾಡಿದ್ದಾಗಿರಬೇಕು. ಪವಿತ್ರ ಕುರ್‌ಆನಿನಲ್ಲಿ ಹೀಗಿದೆ:

إِلَيْهِ يَصْعَدُ الْكَلِمُ الطَّيِّبُ وَالْعَمَلُ الصَّالِحُ يَرْفَعُهُ

"ಆತನೆಡೆ ಏರುವ ವಸ್ತು ಪವಿತ್ರ ವಚನ ಮಾತ್ರ. ಸತ್ಕರ್ಮವೇ ಅದನ್ನು ಮೇಲೇರಿಸುತ್ತದೆ". (35:10)

ಕತ್ತಲೆಯ ರಾತ್ರಿಯಲ್ಲಿ ಒಂದು ಗುಹೆಯಲ್ಲಿ ಸಿಲುಕಿಕೊಂಡ ಮೂವರ ವೃತ್ತಾಂತವನ್ನು ಪ್ರವಾದಿ(ಸ) ಹೇಳಿದ್ದಾರೆ. ಅವರು ತಂತಮ್ಮ ಪ್ರಾಮಾಣಿಕ ಸತ್ಕರ್ಮವನ್ನು ಉಲ್ಲೇಖಿಸಿ ಪ್ರಾರ್ಥಿಸಿದರು. ಅಲ್ಲಾಹನು ಅವರ ಸಂಕಷ್ಟವನ್ನು ದೂರೀಕರಿಸಿದನು.

ಘಟನೆ ಹೀಗಿದೆ: ಮೂವರು ಸ್ನೇಹಿತರು ಒಂದು ರಾತ್ರಿ ಒಂದು ಗುಹೆಯಲ್ಲಿ ಆಶ್ರಯ ಪಡೆದರು. ಪರ್ವತದಿಂದ ಒಂದು ಬಂಡೆ ಉರುಳಿ ಬಂದು ಅಕಸ್ಮಾತ್ ಅವರ ಗುಹೆಯ ಬಾಗಿಲಲ್ಲಿ ಬಿತ್ತು. ಬಾಗಿಲು ಮುಚ್ಚಿಕೊಂಡಿತು. ಅದನ್ನು ಸರಿಸಿ ಗುಹೆಯಿಂದ ಹೊರ ಬರುವುದು ಅಸಾಧ್ಯವಾಗಿತ್ತು. ಆಗ ಅವರು ಪರಸ್ಪರ ಸಮಾಲೋಚಿಸಿ ತಂತಮ್ಮ ಜೀವನ ದಲ್ಲಿ ಮಾಡಿದ ಅತ್ಯುತ್ತಮ ಸತ್ಕರ್ಮವನ್ನು ಉಲ್ಲೇಖಿಸಿ ಅಲ್ಲಾಹನಲ್ಲಿ ಪ್ರಾರ್ಥಿಸಬೇಕೆಂದು ತೀರ್ಮಾನ ಮಾಡಿದರು. ಅವರಲ್ಲೊಬ್ಬನು ಈ ರೀತಿ ಪ್ರಾರ್ಥಿಸಿದನು:

ನಾನು ಕಾಡಿನಲ್ಲಿ ಕುರಿ ಮೇಯಿಸುತ್ತಿದ್ದೆ. ಅದುವೇ ನನ್ನ ಕಸುಬಾಗಿತ್ತು. ನಾನು ಕಾಡಿನಿಂದ ಮರಳಿದಾಗ ಮೊದಲು ನನ್ನ ಮುದಿ ತಂದೆ-ತಾಯಿಗಳಿಗೆ ಹಾಲು ಕುಡಿಸುತ್ತಿದ್ದೆ. ಆ ಬಳಿಕ ನನ್ನ ಮಕ್ಕಳಿಗೆ ಕುಡಿಸುತ್ತಿದ್ದೆ. ಒಂದು ದಿನ ನಾನು ಮರಳುವಾಗ ತಡವಾಯಿತು. ಮುದಿ ತಂದೆ ತಾಯಿಗಳಿಬ್ಬರೂ ಮಲಗಿದ್ದರು. ಮಕ್ಕಳು ಎಚ್ಚರರಾಗಿದ್ದರು. ಹಸಿವಿನಿಂದ ಬಳಲಿದ್ದರು. ಆದರೆ ತಂದೆ ತಾಯಿಗಳಿಗಿಂತ ಮುಂಚೆ ಮಕ್ಕಳಿಗೆ ಕುಡಿಸಲು ನನ್ನ ಮನಸ್ಸು ಒಪ್ಪಲಿಲ್ಲ. ಅಂತೆಯೇ ತಂದೆ ತಾಯಿಯನ್ನು ಎಬ್ಬಿಸಿ ಅವರಿಗೆ ತೊಂದರೆ ಕೊಡಲು ಮನಸ್ಸು ಒಡಂಬಡಲಿಲ್ಲ. ಆದ್ದರಿಂದ ರಾತ್ರಿ ಇಡೀ ನಾನು ಹಾಲಿನ ಪಾತ್ರೆ ಹಿಡಿದು ಅವರ ಬಳಿ ನಿಂತೆ. ಮಕ್ಕಳು ನನ್ನ ಕಾಲಿಗೆ ಬಿದ್ದು ರೋದಿಸ ತೊಡಗಿದರು. ಆದರೆ ನಾನು ಬೆಳಗಾಗುವ ತನಕ ಅದೇ ರೀತಿ ನಿಂತಿದ್ದೆ.

'ಓ ಅಲ್ಲಾಹ್! ನಾನು ಈ ಸತ್ಕರ್ಮವನ್ನು ಕೇವಲ ನಿನ್ನ ಸಂಪ್ರೀತಿಗಾಗಿ ಮಾಡಿದೆ. ನೀನು ಆ ಸತ್ಕರ್ಮದ ಫಲವಾಗಿ ಬಾಗಿಲ ಬಳಿ ಇರುವ ಬಂಡೆಯನ್ನು ಸರಿಸು.' ಆಗ ಆ ಶಿಲೆಯು ಸ್ವಲ್ಪ ಸರಿಯಿತು. ಒಳಗಿನಿಂದಲೇ ಆಕಾಶ ಕಾಣತೊಡಗಿತು.

ಇನ್ನೊಬ್ಬನು ಹೇಳಿದ: ನಾನು ಕೆಲವು ಮಜೂರರಿಂದ ಕೆಲಸ ಮಾಡಿಸಿದೆ. ಅವರೆಲ್ಲರಿಗೂ ಸಂಬಳ ನೀಡಿದೆ. ಆದರೆ ಅವರ ಪೈಕಿ ಒಬ್ಬ ಕಾರ್ಮಿಕ ತನ್ನ ಸಂಬಳ ಪಡೆಯದೆಯೇ ಮರಳಿದನು. ಕೆಲವು ಕಾಲ ಬಿಟ್ಟು ಆತ ಬಂದು ತನ್ನ ಮಜೂರಿ ಕೇಳಿದಾಗ, 'ಈ ದನ-ಕರುಗಳು, ಕುರಿಗಳು, ಆಳುಗಳು ಎಲ್ಲವೂ ನಿನ್ನ ಮಜೂರಿಯಾಗಿವೆ. ಇವನ್ನು ನೀನು ಒಯ್ಯಬಹುದು' ಎಂದು ಹೇಳಿದೆ. ಆಗ ಅವನು, 'ಅಲ್ಲಾಹನಿಗಾಗಿ ನನ್ನನ್ನು ತಮಾಷೆ ಮಾಡಬೇಡಿ' ಎಂದ. 'ಇದು ತಮಾಷೆಯಲ್ಲ. ನಿಜಕ್ಕೂ ಇವೆಲ್ಲ ನಿನ್ನವೇ ಆಗಿವೆ. ನೀನು ಬಿಟ್ಟು ಹೋದ ಮೊತ್ತವನ್ನು ನಾನು ವ್ಯಾಪಾರದಲ್ಲಿ ತೊಡಗಿಸಿದೆ. ಅಲ್ಲಾಹನು ಅದರಲ್ಲಿ ಸಮೃದ್ಧಿ ನೀಡಿದನು. ಈಗ ನೀನು ನೋಡುತ್ತಿರುವುದೆಲ್ಲವೂ ಅದರಿಂದಲೇ ಆದುದು. ನೀನು ಇದನ್ನು ನಿಸ್ಸಂಕೋಚವಾಗಿ ಒಯ್ಯಬಹುದು. ಎಲ್ಲವೂ ನಿನ್ನದು' ಎಂದು ನಾನು ಹೇಳಿದಾಗ ಆ ಕಾರ್ಮಿಕ ಅದೆಲ್ಲವನ್ನು ಪಡೆದು ಮರಳಿದ.

'ಓ ಅಲ್ಲಾಹ್! ನಾನು ಇದನ್ನು ನಿನ್ನ ಸಂಪ್ರೀತಿಗಾಗಿ ಮಾಡಿದೆ. ಈ ಸತ್ಕರ್ಮದ ಫಲವಾಗಿ ಗುಹೆಯ ಬಂಡೆಯನ್ನು ಸರಿಸು' ಎಂದು ಪ್ರಾರ್ಥಿಸಿದನು. ದೇವಕೃಪೆಯಿಂದ ಬಂಡೆ ಇನ್ನಷ್ಟು ಸರಿಯಿತು.

ಮೂರನೆಯವನೆಂದ: ನನಗೆ ಓರ್ವ ಚಿಕ್ಕಪ್ಪನ ಪುತ್ರಿ ಇದ್ದಳು. ಅವಳ ಮೇಲೆ ನನಗೆ ಎಲ್ಲಿಲ್ಲದ ಮೋಹ. ಅವಳು ನನ್ನಿಂದ ಸ್ವಲ್ಪ ಹಣ ಕೇಳಿದಳು. ನಾನು ಕೊಟ್ಟೆ ಹಾಗೂ ನನ್ನ ಕಾಮ ಬಯಕೆಯನ್ನು ತೀರಿಸಲು ಆಕೆಯ ಬಳಿ ಕುಳಿತೆ. ಆಗ ಆಕೆ ಹೇಳಿದಳು, "ದೇವನನ್ನು ಭಯಪಡು, ಈ ಕೆಲಸದಿಂದ ದೂರವಿರು". ಆಗ ನಾನು ಪಕ್ಕನೆ ಅಲ್ಲಿಂದ ಎದ್ದೆ. ನಾನು ಆ ಹಣವನ್ನೂ ಅವಳಿಗೆ ಬಿಟ್ಟು ಬಿಟ್ಟೆನು.

'ಓ ಅಲ್ಲಾಹ್! ನಾನು ಈ ಕಾರ್ಯವನ್ನು ಕೇವಲ ನಿನ್ನ ಸಂಪ್ರೀತಿಗಾಗಿ ಮಾಡಿದೆ

ನೆಂಬುದು ನಿನಗೆ ಚೆನ್ನಾಗಿ ಗೊತ್ತು. ಅದರ ಫಲವಾಗಿ ಈ ಗುಹೆಯ ಬಾಗಿಲನ್ನು ತೆರೆದು ಬಿಡು' ಎಂದಾಗ ಅಲ್ಲಾಹನು ಗುಹೆಯ ಬಾಗಿಲಿನಿಂದ ಆ ಶಿಲೆಯನ್ನು ಸರಿಸಿದನು. ಈ ರೀತಿ ಮೂವರನ್ನೂ ಅಲ್ಲಾಹನು ಆ ಸಂಕಷ್ಟದಿಂದ ಪಾರುಗೊಳಿಸಿದನು.

8. ಸದುದ್ದೇಶಕ್ಕಾಗಿ ಅಲ್ಲಾಹನಲ್ಲಿ ಪ್ರಾರ್ಥಿಸುವುದರೊಂದಿಗೆ ನಿಮ್ಮ ಜೀವನವನ್ನೂ, ದೇವಾದೇಶದಂತೆ ರೂಪಿಸುವ ಮತ್ತು ಸುಧಾರಣೆ ಮಾಡುವ ಪ್ರಯತ್ನ ಮಾಡಿರಿ. ಪಾಪಕೃತ್ಯ ಮತ್ತು ನಿಷಿದ್ಧ ಕೃತ್ಯಗಳಿಂದ ಸಂಪೂರ್ಣ ದೂರವಿರಿ. ಎಲ್ಲ ಕೆಲಸ ಕಾರ್ಯಗಳಲ್ಲಿ ದೇವಾದೇಶವನ್ನು ಪಾಲಿಸಿರಿ. ಧರ್ಮನಿಷ್ಠೆಯ ಜೀವನ ವ್ಯಯಿಸಿರಿ. ನಿಷಿದ್ಧ ಸಂಪಾದನೆಯಿಂದ ತಿಂದು, ನಿಷಿದ್ಧ ಸಂಪಾದನೆಯಿಂದ ಕುಡಿದು, ನಿಷಿದ್ಧ ಸಂಪಾದನೆಯಿಂದ ಬಟ್ಟೆ ಉಟ್ಟು, ಹಾಗೂ ತನ್ನ ದೇಹವನ್ನು ನಿಷಿದ್ಧ ಸಂಪಾದನೆಯಿಂದಲೇ ಬೆಳೆಸಿದವನು ಪ್ರಾರ್ಥಿಸಿದರೆ ಪ್ರಾರ್ಥನೆ ಸ್ವೀಕೃತವಾಗುವುದೆಂದು ಭಾವಿಸುವುದು ತಿಳಿಗೇಡಿತನ ಮತ್ತು ದುಸ್ಸಾಹಸವಾಗಿದೆ. ಪ್ರಾರ್ಥನೆ ಸ್ವೀಕೃತವಾಗಬೇಕಾದರೆ ಮನುಷ್ಯನ ನಡೆ-ನುಡಿಗಳೂ ಧರ್ಮದ ಆದೇಶದಂತೆ ಇರಬೇಕಾದುದು ಅತೀ ಅಗತ್ಯ.

ಪ್ರವಾದಿ(ಸ) ಹೀಗೆ ಹೇಳಿರುವರು: "ದೇವನು ಪಾವನನು ಹಾಗೂ ಕೇವಲ ಪಾವನ ವಸ್ತುಗಳನ್ನೇ ಸ್ವೀಕರಿಸುವನು. ದೇವನು ತನ್ನ ಪ್ರವಾದಿಗಳಿಗೆ ಅದನ್ನೇ ಆಜ್ಞಾಪಿಸಿರುವನು. ಅದನ್ನೇ ಅವನು ತನ್ನ ಸತ್ಯ ವಿಶ್ವಾಸಿ ದಾಸರಿಗೆ ಆಜ್ಞಾಪಿಸಿರುವನು. ಅವನ ಆದೇಶ ಈ ರೀತಿ ಇದೆ:

يَٰٓأَيُّهَا ٱلرُّسُلُ كُلُوا۟ مِنَ ٱلطَّيِّبَٰتِ وَٱعْمَلُوا۟ صَٰلِحًا ۖ

"ಓ ಪ್ರವಾದಿಗಳೇ! ಶುದ್ಧ ಆಹಾರವನ್ನು ಉಣ್ಣಿರಿ ಮತ್ತು ಸತ್ಕರ್ಮ ಕೈಗೊಳ್ಳಿರಿ". (ಪವಿತ್ರ ಕುರ್‌ಆನ್, 23:51)

ಸತ್ಯವಿಶ್ವಾಸಿಗಳನ್ನುದ್ದೇಶಿಸಿ ಆತ ಹೀಗೆ ಹೇಳಿರುವನು:

يَٰٓأَيُّهَا ٱلَّذِينَ ءَامَنُوا۟ كُلُوا۟ مِن طَيِّبَٰتِ مَا رَزَقْنَٰكُمْ

"ಓ ಸತ್ಯವಿಶ್ವಾಸಿಗಳೇ! ನಾವು ನೀಡಿರುವ ಧರ್ಮಬದ್ಧ ಮತ್ತು ಶುದ್ಧ ವಸ್ತುಗಳನ್ನು ಉಣ್ಣಿರಿ". (ಪವಿತ್ರ ಕುರ್‌ಆನ್, 2:172)

ತರುವಾಯ ಪ್ರವಾದಿವರ್ಯರು(ಸ) ಬಹಳ ದೂರದಿಂದ ಪ್ರಯಾಣ ಮಾಡಿ ಬಂದು ಪವಿತ್ರ ಕಅಬಾದಲ್ಲಿ ಪ್ರಾರ್ಥಿಸಿದ ಓರ್ವನ ಬಗ್ಗೆ ಪ್ರಸ್ತಾಪಿಸುತ್ತಾರೆ. ಅವನ ದೇಹವು ಧೂಳು ಮುಕ್ಕಿದೆ. ತನ್ನ ಎರಡೂ ಕೈಗಳನ್ನು ಮೇಲಕ್ಕೆತ್ತಿ, 'ಓ ನನ್ನ ಪ್ರಭೂ! ಓ ನನ್ನ ಪ್ರಭೂ!' ಎನ್ನುತ್ತಾನೆ. ಆದರೆ ಅವನು ತಿನ್ನುವುದು, ಕುಡಿಯುವುದು, ಧರಿಸುವುದು ಹರಾಮ್ (ನಿಷಿದ್ಧ) ಸಂಪಾದನೆಯಿಂದ. ಅದರಿಂದಲೇ ಅವನ ದೇಹವು ಬೆಳೆದಿದೆ. ಹಾಗಿರುವಾಗ ಇಂತಹ ಧಿಕ್ಕಾರಿ ಮತ್ತು ಬಂಡುಕೋರನ ಪ್ರಾರ್ಥನೆ ಸ್ವೀಕೃತವಾಗುವುದಾದರೂ ಹೇಗೆ? (ಮುಸ್ಲಿಮ್)

9. ನಿರಂತರ ಪ್ರಾರ್ಥಿಸುತ್ತಿರಿ. ಅಲ್ಲಾಹನ ಮುಂದೆ ದೈನ್ಯತೆ, ಅಸಹಾಯಕತೆ ಹಾಗೂ ದಾಸ್ಯಭಾವದ ಪ್ರಕಟಣೆಯೇ ಒಂದು ಆರಾಧನೆಯಾಗಿದೆ. ಅಲ್ಲಾಹನೇ ಪ್ರಾರ್ಥಿಸುವಂತೆ ಆಜ್ಞಾಪಿಸುತ್ತಾನೆ. ದಾಸನು ನನ್ನನ್ನು ಕರೆಯುವಾಗ ಆತನ ಕರೆಯನ್ನು ನಾನು ಆಲಿಸುತ್ತೇನೆ ಎಂದು ಅತನೇ ಹೇಳಿರುವನು. ಪ್ರಾರ್ಥಿಸಲು ಎಂದೂ ಬೇಸರ ತಾಳಬೇಡಿರಿ. ದುಆದಿಂದ ನಿಮ್ಮ ವಿಧಿಲಿಖಿತ ಬದಲಾಗುತ್ತದೋ ಇಲ್ಲವೋ ಎಂಬ ಸಂಶಯದಲ್ಲಿ ಸಿಲುಕಬೇಡಿರಿ. ವಿಧಿಲಿಖಿತವನ್ನು ಬದಲಿಸುವುದೂ ಬದಲಿಸದಿರುವುದೂ ಪ್ರಾರ್ಥನೆಯನ್ನು ಸ್ವೀಕರಿಸುವುದೂ ಸ್ವೀಕರಿಸದಿರುವುದೂ ಆತನ ಕೆಲಸ. ಅವನು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುತ್ತಾನೆ. ದಾಸನು ಯಾವಾಗಲೂ ಓರ್ವ ದೀನನಂತೆ ಮತ್ತು ಅವಶ್ಯಕತೆ ಇರುವವನಂತೆ ನಿತ್ಯ ಆತನಲ್ಲಿ ಪ್ರಾರ್ಥಿಸುತ್ತಿರಬೇಕು. ಕ್ಷಣ ಮಾತ್ರಕ್ಕೂ ತನ್ನನ್ನು ನಿರಪೇಕ್ಷನೆಂದು ಪರಿಗಣಿಸಬಾರದು.

ಪ್ರವಾದಿ(ಸ) ಈ ರೀತಿ ಹೇಳಿರುವರು: "ಪ್ರಾರ್ಥನೆ ಮಾಡುವಾಗ ದೈನ್ಯತೆ ಪ್ರಕಟಿಸುವವನೇ ಅತೀ ದೊಡ್ಡ ದೀನನು". (ತಬ್ರಾನಿ)

ಪ್ರವಾದಿ(ಸ) ಹೀಗೂ ಹೇಳಿರುವರು: "ಅಲ್ಲಾಹನ ಬಳಿ ಪ್ರಾರ್ಥನೆಗಿಂತ ಗೌರವಯುತ ಮತ್ತು ಘನತೆಯುಳ್ಳ ಕಾರ್ಯ ಬೇರೊಂದಿಲ್ಲ". (ತಿರ್ಮಿದಿ)

ಸುಖ-ದುಃಖ, ದುಸ್ಥಿತಿ-ಸುಸ್ಥಿತಿ, ಬಡತನ-ಸಿರಿತನ, ಸಂಕಷ್ಟ-ಸಂತೋಷಗಳಲ್ಲಿ ದೇವನನ್ನೇ ಕರೆದು ಪ್ರಾರ್ಥಿಸುವುದು ಸತ್ಯವಿಶ್ವಾಸಿಯ ಲಕ್ಷಣವಾಗಿದೆ. ಅವನು ಆತನ ಮುಂದೆಯೇ ತನ್ನ ಬೇಡಿಕೆಗಳನ್ನಿಡುತ್ತಾನೆ. ಸದಾ ಒಳಿತಿಗಾಗಿ ಆತನಲ್ಲಿ ಪ್ರಾರ್ಥಿಸುತ್ತಿರುತ್ತಾನೆ.

ಪ್ರವಾದಿ(ಸ) ಹೇಳುತ್ತಾರೆ: "ಯಾರು ಅಲ್ಲಾಹನಲ್ಲಿ ಪ್ರಾರ್ಥಿಸುವುದಿಲ್ಲವೋ ಅವನ ಬಗ್ಗೆ ಅಲ್ಲಾಹನು ಕುಪಿತನಾಗುತ್ತಾನೆ". (ತಿರ್ಮಿದಿ)

10. ಪ್ರಾರ್ಥನೆ ಸ್ವೀಕೃತವಾಗುವ ಬಗ್ಗೆ ಅಲ್ಲಾಹನಲ್ಲಿ ಪೂರ್ಣ ಭರವಸೆ ತಾಳಿರಿ. ಪ್ರಾರ್ಥನೆ ಸ್ವೀಕೃತವಾಗುವ ಲಕ್ಷಣಗಳು ಶೀಘ್ರದಲ್ಲಿ ಗೋಚರವಾಗದೆ ಹೋದರೆ ಪ್ರಾರ್ಥನೆ ಮಾಡುವುದನ್ನೇ ಬಿಟ್ಟು ಬಿಡುವ ತಪ್ಪು ಎಂದೂ ಎಸಗದಿರಿ. ಪ್ರಾರ್ಥನೆ ಸ್ವೀಕೃತವಾಗುವ ಬಗ್ಗೆ ಚಿಂತಿಸುವ ಬದಲು ಪ್ರಾರ್ಥಿಸುವ ಚಿಂತೆಯನ್ನೇ ಬೆಳೆಸಿಕೊಳ್ಳಿರಿ.

ಹ. ಉಮರ್(ರ) ಹೇಳುತ್ತಾರೆ: "ನನಗೆ ಪ್ರಾರ್ಥನೆ ಸ್ವೀಕೃತವಾಗುವ ಚಿಂತೆಯಿಲ್ಲ. ಕೇವಲ ಪ್ರಾರ್ಥನೆ ಮಾಡುವ ಚಿಂತೆ ಇದೆ. ಪ್ರಾರ್ಥನೆ ಮಾಡುವ ಸೌಭಾಗ್ಯ ನನಗೆ ಲಭಿಸಿದ ಮೇಲೆ ಅದು ಸ್ವೀಕೃತವಾಗುವ ಸೌಭಾಗ್ಯವೂ ಅದರ ಜೊತೆಯಲ್ಲೇ ಸಿಗುವುದು".

ಪ್ರವಾದಿ(ಸ) ಈ ರೀತಿ ಹೇಳಿರುವರು: "ಒಬ್ಬ ಮುಸ್ಲಿಮನು ಯಾವಾಗ ದೇವನಿಂದ ಪ್ರಾರ್ಥಿಸಲಿಕ್ಕಾಗಿ ತನ್ನ ಮುಖವನ್ನು ಮೇಲೆತ್ತುತ್ತಾನೋ ಆಗ ದೇವನು ಅವನ ಪ್ರಾರ್ಥನೆಯನ್ನು ಖಂಡಿತ ಪೂರೈಸುತ್ತಾನೆ. ಒಂದೋ ಅವನ ಬೇಡಿಕೆ ಈಡೇರುತ್ತದೆ ಅಥವಾ ಅವನು ಯಾಚಿಸಿದ ವಸ್ತುವನ್ನು ಪರಲೋಕದಲ್ಲಿ ಅವನಿಗೆ ಭದ್ರಪಡಿಸುತ್ತಾನೆ. ನಿರ್ಣಾಯಕ ದಿನದಂದು ಅಲ್ಲಾಹನು ತನ್ನ ಓರ್ವ ದಾಸನನ್ನು ಕರೆಯುವನು. ಅವನನ್ನು ತನ್ನ ಮುಂದೆ ನಿಲ್ಲಿಸಿ ಈ ರೀತಿ ವಿಚಾರಿಸುವನು, ಓ ನನ್ನ ದಾಸನೇ! ನಾನು ನಿನಗೆ ಪ್ರಾರ್ಥಿಸಲು ಆಜ್ಞಾಪಿಸಿದ್ದೆ ಮತ್ತು ನಿನ್ನ

ಪ್ರಾರ್ಥನೆಯನ್ನು ನಾನು ಸ್ವೀಕರಿಸುವೆನೆಂದು ವಾಗ್ದಾನ ಮಾಡಿದ್ದೆ. ನೀನು ಪ್ರಾರ್ಥಿಸಿದ್ದಿಯಾ? ಅವನು ಹೇಳುವನು, 'ಓ ನನ್ನ ಪ್ರಭೂ! ಹೌದು, ನಾನು ಪ್ರಾರ್ಥಿಸಿದ್ದೆ.' ಆಗ ಅಲ್ಲಾಹನು, 'ನೀನು ಮಾಡಿದ ಎಲ್ಲ ಪ್ರಾರ್ಥನೆಗಳನ್ನೂ ಸ್ವೀಕರಿಸಿದೆನು. ಇಂತಿಂತಹ ದಿನ ನಿನ್ನನ್ನು ಪೀಡಿಸುತ್ತಿದ್ದ ದುಃಖ ದುಮ್ಮಾನವನ್ನು ದೂರೀಕರಿಸಬೇಕೆಂದು ನೀನು ಪ್ರಾರ್ಥಿಸಿರಲಿಲ್ಲವೇ? ಆಗ ನಾನು ನಿನ್ನ ದುಃಖ ದುಮ್ಮಾನಗಳನ್ನು ದೂರೀಕರಿಸಲಿಲ್ಲವೇ' ಎಂದು ಕೇಳುವನು. ಆಗ ದಾಸನು, 'ನನ್ನ ಪ್ರಭೂ! ಹೌದು, ನಿಜಕ್ಕೂ ದೂರೀಕರಿಸಿದೆ.' ಎಂದು ಹೇಳುವನು. ಆಗ ಅಲ್ಲಾಹನು ಹೇಳುವನು, 'ಆ ಪ್ರಾರ್ಥನೆಯನ್ನು ಸ್ವೀಕರಿಸಿ ಲೋಕದಲ್ಲೇ ನಿನಗೆ ನಿನ್ನ ಆಶೆಯನ್ನು ಈಡೇರಿಸಿದೆ. ಆದರೆ ಇನ್ನೊಂದು ಸಂದರ್ಭದಲ್ಲಿ ಇನ್ನೊಂದು ದುಃಖದಲ್ಲಿ ನೀನು ಸಿಲುಕಿದಾಗ 'ಓ ಅಲ್ಲಾಹ್! ನನ್ನನ್ನು ದುಃಖದಿಂದ ಮುಕ್ತಗೊಳಿಸು' ಎಂದು ಪ್ರಾರ್ಥಿಸಿದೆ. ಆದರೆ ನಿನಗೆ ಆ ದುಃಖದಿಂದ ಮುಕ್ತಿ ದೊರೆಯಲಿಲ್ಲ. ನೀನು ಆ ದುಃಖ ದಲ್ಲಿ ನಿರಂತರ ಬಳಲುತ್ತಲೇ ಇದ್ದೆ.' ಆಗ ದಾಸನು, 'ಹೌದು ಪ್ರಭೂ!' ಎನ್ನುವನು. ನಾನು ಆ ಪ್ರಾರ್ಥನೆಗೆ ಪ್ರತಿಯಾಗಿ ಸ್ವರ್ಗದಲ್ಲಿ ತರತರದ ಅನುಗ್ರಹಗಳನ್ನು ನಿನಗಾಗಿ ಶೇಖರಿಸಿ ರುವೆನು. ಇದೇ ರೀತಿ ಇತರ ಬೇಡಿಕೆಗಳ ಬಗ್ಗೆಯೂ ವಿಚಾರಿಸಿ ಹೀಗೆಯೇ ಹೇಳುವನು".

ತರುವಾಯ ಪ್ರವಾದಿ(ಸ) ಹೇಳಿದರು: "ಸತ್ಯವಿಶ್ವಾಸಿಯ ಯಾವ ಪ್ರಾರ್ಥನೆಯ ಬಗ್ಗೆಯೂ ಅಲ್ಲಾಹನು 'ನಾನು ಸ್ವೀಕರಿಸಿದೆ ಮತ್ತು ಪರಲೋಕದಲ್ಲಿ ನಿನಗಾಗಿ ಶೇಖರಿಸಿಟ್ಟೆ' ಎಂದು ಹೇಳದೆ ಇರಲಾರನು. ಆಗ ದಾಸನು ಬಯಸುವನು, 'ನನ್ನ ಮೇಲೆ ಯಾವ ಪ್ರಾರ್ಥನೆಯೂ ಲೋಕದಲ್ಲಿ ಸ್ವೀಕೃತವಾಗದಿರುತ್ತಿದ್ದರೆ ಎಷ್ಟು ಚೆನ್ನಾಗಿತ್ತು'. ಆದ್ದರಿಂದ ದಾಸನು ಸದಾ ಪ್ರಾರ್ಥಿಸುತ್ತಲೇ ಇರಬೇಕು". (ಹಾಕಿಮ್)

11. ಪ್ರಾರ್ಥಿಸುವಾಗ ಬಾಹ್ಯ ಶಿಷ್ಟಾಚಾರ ಹಾಗೂ ಶುದ್ಧಿಯ ಬಗ್ಗೆ ಗಮನಿಸಿರಿ. ಮನಸ್ಸನ್ನು ದುರ್ವಿಚಾರ, ದುರ್ವಿಕಾರ ಮತ್ತು ಮೂಢನಂಬಿಕೆಗಳಿಂದ ಮುಕ್ತಗೊಳಿಸಿರಿ.

ಪವಿತ್ರ ಕುರ್‌ಆನಿನಲ್ಲಿ ಹೀಗಿದೆ:

إِنَّ اللَّهَ يُحِبُّ التَّوَّابِينَ وَيُحِبُّ الْمُتَطَهِّرِينَ ﴿٢٢٢﴾

"ಅತ್ಯಧಿಕ ಪಶ್ಚಾತ್ತಾಪ ಪಡುವವರೂ, ಅತ್ಯಧಿಕ ಪರಿಶುದ್ಧರೂ ಅಲ್ಲಾಹನಿಗೆ ಅತ್ಯಂತ ಪ್ರಿಯರು". (ಪವಿತ್ರ ಕುರ್‌ಆನ್, 2: 222)

ಸೂರಃ ಮುದ್ದಸ್ಸಿರ್‌ನಲ್ಲಿ ಈ ರೀತಿ ಹೇಳಲಾಗಿದೆ:

وَرَبَّكَ فَكَبِّرْ ﴿٣﴾ وَثِيَابَكَ فَطَهِّرْ ﴿٤﴾

"ನಿಮ್ಮ ಪ್ರಭುವಿನ ಹಿರಿಮೆಯನ್ನು ಕೊಂಡಾಡಿರಿ ಮತ್ತು ನಿಮ್ಮ ಬಟ್ಟೆಯನ್ನು ಶುಚಿಯಾಗಿಡಿರಿ". (ಪವಿತ್ರ ಕುರ್‌ಆನ್, 74:3-4)

12. ಇತರರಿಗಾಗಿಯೂ ಪ್ರಾರ್ಥಿಸಿರಿ. ಆದರೆ ಯಾವಾಗಲೂ ಮೊದಲು ನಿಮಗಾಗಿ ಪ್ರಾರ್ಥಿಸಿರಿ. ಮೊದಲು ನಿಮಗಾಗಿ ಪ್ರಾರ್ಥಿಸಿ ಆ ಬಳಿಕ ಇತರರಿಗಾಗಿ ಪ್ರಾರ್ಥಿಸಿರಿ. ಪವಿತ್ರ

ಕುರ್‌ಆನಿನಲ್ಲಿ ಹ. ಇಬ್ರಾಹೀಮ್(ಅ) ಮತ್ತು ಹ. ನೂಹ್‌ರ(ಅ) ಪ್ರಾರ್ಥನೆಗಳನ್ನು ಉಲ್ಲೇಖಿಸಲಾಗಿದೆ. ಅವುಗಳಿಂದ ಇದೇ ಪಾಠ ಸಿಗುತ್ತದೆ.

رَبِّ اجْعَلْنِي مُقِيمَ الصَّلٰوةِ وَمِنْ ذُرِّيَّتِي ۖ رَبَّنَا وَتَقَبَّلْ دُعَاءِ ۝

رَبَّنَا اغْفِرْ لِي وَلِوَالِدَيَّ وَلِلْمُؤْمِنِينَ يَوْمَ يَقُومُ الْحِسَابُ ۝

"ರಬ್ಬಿಜ್‌ಅಲ್‌ನೀ ಮುಕೀಮಸ್ಸಲಾತಿ ವಮಿನ್ ದುರ್‍ರಿಯ್ಯತೀ ರಬ್ಬನಾ ವತಕಬ್ಬಲ್ ದುಆಇ. ರಬ್ಬನಗ್‌ಫಿರ್‌ಲೀ ವಲಿವಾಲಿದಯ್ಯ ವಲಿಲ್ ಮುಅ್‌ಮಿನೀನ ಯೌಮಯಕೂಮುಲ್ ಹಿಸಾಬ್". (ಓ ನನ್ನ ಪ್ರಭೂ! ನನ್ನನ್ನು ನಮಾಝ್ ಸಂಸ್ಥಾಪಿಸುವವನನ್ನಾಗಿ ಮಾಡು. ಅಂತೆಯೇ ನನ್ನ ಸಂತಾನವನ್ನೂ ಮಾಡು. ಓ ನನ್ನ ಪ್ರಭೂ! ನನ್ನ ಪ್ರಾರ್ಥನೆಯನ್ನು ಸ್ವೀಕರಿಸು. ಓ ನನ್ನ ಪ್ರಭೂ! ಜನರ ವಿಚಾರಣೆ ನಡೆಸಲ್ಪಡುವ ದಿವಸ ನನ್ನನ್ನೂ ನನ್ನ ಮಾತಾಪಿತರನ್ನೂ ಎಲ್ಲ ಸತ್ಯವಿಶ್ವಾಸಿಗಳನ್ನೂ ಕ್ಷಮಿಸು.) (ಪವಿತ್ರ ಕುರ್‌ಆನ್, 14:40-41)

رَبِّ اغْفِرْ لِي وَلِوَالِدَيَّ وَلِمَنْ دَخَلَ بَيْتِيَ مُؤْمِنًا وَّلِلْمُؤْمِنِينَ وَالْمُؤْمِنٰتِ

"ರಬ್ಬಿಗ್‌ಫಿರ್‌ಲೀ ವಲಿವಾಲಿದಯ್ಯ ವಲಿಮನ್ ದಖಲ ಬೈತಿಯ ಮುಅ್‌ಮಿನನ್ ವಲಿಲ್ ಮುಅ್‌ಮಿನೀನ ವಲ್ ಮುಅ್‌ಮಿನಾತ್".

(ಓ ನನ್ನ ಪ್ರಭೂ! ನನ್ನನ್ನು ಕ್ಷಮಿಸು. ನನ್ನ ಮಾತಾಪಿತರನ್ನೂ ಕ್ಷಮಿಸು. ವಿಶ್ವಾಸವಿಟ್ಟು ನನ್ನ ಮನೆಯನ್ನು ಪ್ರವೇಶಿಸಿದ ಎಲ್ಲ ಸತ್ಯವಿಶ್ವಾಸಿಗಳನ್ನೂ ಕ್ಷಮಿಸು ಮತ್ತು ಎಲ್ಲ ಸತ್ಯವಿಶ್ವಾಸಿ ಸ್ತ್ರೀ ಪುರುಷರನ್ನು ಕ್ಷಮಿಸು.) (ಪವಿತ್ರ ಕುರ್‌ಆನ್, 71:28)

ಹ. ಉಬೈ ಬಿನ್ ಕಅಬ್(ರ) ಹೇಳುತ್ತಾರೆ: ಪ್ರವಾದಿ(ಸ) ಯಾರ ಪ್ರಸ್ತಾಪವೆತ್ತಿದರೂ ಅವರಿಗಾಗಿ ಪ್ರಾರ್ಥಿಸುತ್ತಿದ್ದರು. ಆದರೆ ಪ್ರಾರ್ಥನೆಯನ್ನು ತನ್ನಿಂದಲೇ ಆರಂಭಿಸುತ್ತಿದ್ದರು. (ತಿರ್ಮಿದಿ)

13. ನೀವು ನಮಾಝ್‌ನ ನಾಯಕತ್ವ ವಹಿಸುತ್ತಿದ್ದರೆ ಯಾವಾಗಲೂ ಬಹುವಚನ ದಲ್ಲೇ ಪ್ರಾರ್ಥಿಸಿರಿ. ಪವಿತ್ರ ಕುರ್‌ಆನಿನಲ್ಲಿರುವ ದುಆಗಳ ಪೈಕಿ ಬಹುವಂಶ ಬಹುವಚನ ದಲ್ಲೇ ಇವೆ. ಇಮಾಮ್ ವಾಸ್ತವದಲ್ಲಿ ಎಲ್ಲ ನಮಾಝ್ ಮಾಡುವವರ ಪ್ರತಿನಿಧಿಯಾಗಿ ರುತ್ತಾನೆ. ಅವರು ಬಹುವಚನದಲ್ಲಿ ಪ್ರಾರ್ಥಿಸುವಾಗ ನಮಾಝ್ ಮಾಡುವವರು ಆಮೀನ್ ಎಂದು ಹೇಳುತ್ತಿರಬೇಕು.

14. ಪ್ರಾರ್ಥನೆಯಲ್ಲಿ ಸಂಕುಚಿತತೆ ಪ್ರಕಟಿಸಬೇಡಿರಿ. ಸ್ವಾರ್ಥಕ್ಕಾಗಿ ಪ್ರಾರ್ಥಿಸದಿರಿ. ದೇವನ ಅಪಾರ ಕರುಣೆಯನ್ನು ನಿಮಗೆ ಮಾತ್ರ ಸೀಮಿತಗೊಳಿಸುವ ತಪ್ಪನ್ನೆಂದೂ ಎಸಗದಿರಿ. ಅವನ ಅನುಗ್ರಹ ಮತ್ತು ಕೊಡುಗೆಗಳನ್ನು ನಿಮಗೆ ಮಾತ್ರ ಸೀಮಿತಗೊಳಿಸಲು ಪ್ರಾರ್ಥಿಸದಿರಿ.

ಹ. ಅಬೂ ಹುರೈರಾ(ರ) ಹೇಳುತ್ತಾರೆ: ಮಸ್ಜಿದುನ್ನಬವಿಯಲ್ಲಿ ಓರ್ವ ಗ್ರಾಮೀಣ ಅರಬ ಬಂದು ನಮಾಝ್ ಮಾಡಿದ. ಬಳಿಕ ಈ ರೀತಿ ಪ್ರಾರ್ಥಿಸಿದ: ಓ ಅಲ್ಲಾಹ್, ನನ್ನ ಮೇಲೆ ಮತ್ತು ಮುಹಮ್ಮದ್‌ರ(ಸ) ಮೇಲೆ ಕರುಣೆ ತೋರು ಮತ್ತು ನಮ್ಮ ಜೊತೆ ಯಾರ ಮೇಲೂ ಕರುಣೆ ತೋರಬೇಡ. ಆಗ ಪ್ರವಾದಿ(ಸ) ಹೇಳಿದರು: لَقَدْ تَحَجَّرْتَ وَاسِعًا 'ನೀನು ದೇವನ ಅಪಾರ ಕರುಣೆಯನ್ನು ಸಂಕುಚಿತಗೊಳಿಸಿದೆ'. (ಬುಖಾರಿ)

15. ಪ್ರಾರ್ಥನೆಯಲ್ಲಿ ಪ್ರಾಸಬದ್ಧತೆ ಮತ್ತು ತಾಳಬದ್ಧತೆ ಮಾಡಲು ಶ್ರಮಿಸದಿರಿ. ಸರಳ ರೀತಿಯಲ್ಲಿ ನಡುಗುತ್ತಾ ಪ್ರಾರ್ಥಿಸಿರಿ. ನೀವು ಬಯಸದೆಯೇ ಪ್ರಾಸಬದ್ಧವಾಗಿ ದುಆ ನಿಮ್ಮ ಬಾಯಿಯಿಂದ ಹೊರಟರೆ ಅಡ್ಡಿಯಿಲ್ಲ. ಪ್ರವಾದಿವರ್ಯರಿಂದ(ಸ) ಉದ್ಧೃತವಾದ ಕೆಲವು ಪ್ರಾರ್ಥನೆಗಳಲ್ಲೂ ಅಂತಹ ಪ್ರಾಸಬದ್ಧತೆಯನ್ನು ಕಾಣಬಹುದಾಗಿದೆ. ಉದಾ: ಝೈದ್ ಬಿನ್ ಅರ್ಕಮ್(ರ) ಪ್ರವಾದಿವರ್ಯರ(ಸ) ಒಂದು ಸಾರವತ್ತಾದ ಪ್ರಾರ್ಥನೆಯನ್ನು ಈ ರೀತಿ ಉದ್ಧರಿಸಿದ್ದಾರೆ:

اَللّٰهُمَّ اِنِّىٓ اَعُوْذُ بِكَ مِنْ قَلْبٍ لَّا يَخْشَعُ وَنَفْسٍ لَا تَشْبَعُ وَعِلْمٍ لَا يَنْفَعُ وَدَعْوَةٍ لَا يُسْتَجَابُ لَهَا (الترمذى)

"ಅಲ್ಲಾಹುಮ್ಮ ಇನ್ನೀ ಅಊದು ಬಿಕ ಮಿನ್ ಕಲ್ಬಿನ್ ಲಾ ಯಖ್‌ಷಉ ವನಫ್ಸಿನ್ ಲಾತಷ್‌ಬಉ ವಇಲ್‌ಮಿನ್ ಲಾ ಯನ್‌ಫಉ ವದಅ್‌ವತಿನ್ ಲಾ ಯುಸ್‌ತಜಾಬುಲಹಾ".

(ಓ ಅಲ್ಲಾಹ್! ನಾನು ನಿನ್ನ ಅಭಯ ಕೋರುತ್ತೇನೆ, ಭಯರಹಿತ ಹೃದಯದಿಂದ, ಸಹನೆರಹಿತ ಶರೀರದಿಂದ, ಪ್ರಯೋಜನರಹಿತ ಜ್ಞಾನದಿಂದ ಮತ್ತು ಸ್ವೀಕಾರರಹಿತ ಪ್ರಾರ್ಥನೆಯಿಂದ.)

16. ದೇವನ ಮುಂದೆ ಪ್ರಾರ್ಥಿಸಲು ಆರಂಭಿಸುವಾಗ ಮೊದಲು ಅವನ ಸ್ತುತಿಗೈಯಿರಿ. ತರುವಾಯ ಎರಡು ರಕಅತ್ ಐಚ್ಛಿಕ ನಮಾಝನ್ನೂ ನೆರವೇರಿಸಿರಿ. ದುಆದ ಆರಂಭ ಮತ್ತು ಕೊನೆಯಲ್ಲಿ ಪ್ರವಾದಿವರ್ಯರ(ಸ) ಮೇಲೆ ಸ್ವಸ್ತಿವಚನ(ಸಲಾತ್) ಹೇಳಿರಿ.

ಪ್ರವಾದಿ(ಸ) ಹೀಗೆ ಹೇಳಿರುವರು: "ಯಾವನಾದರೂ ಅಲ್ಲಾಹನಿಂದ ಅಥವಾ ಮನುಷ್ಯರಿಂದ ತನ್ನ ಬೇಡಿಕೆಯನ್ನು ಅಲ್ಲಾಹನ ಮುಂದೆ ಇಡ ಬಯಸಿದರೆ ಮೊದಲು ವುಝೂ ಮಾಡಿ ಎರಡು ರಕಅತ್ ನಮಾಝ್ ನಿರ್ವಹಿಸಲಿ. ತರುವಾಯ ದೇವನನ್ನು ಸ್ತುತಿಸಲಿ. ಅನಂತರ ಪ್ರವಾದಿಯ ಮೇಲೆ ಸಲಾತ್ ಮತ್ತು ಸಲಾಮ್ ಹೇಳಲಿ. (ಆ ಬಳಿಕ ಅಲ್ಲಾಹನ ಮುಂದೆ ತನ್ನ ಬೇಡಿಕೆಗಳನ್ನಿಡಲಿ.)" (ತಿರ್ಮಿದಿ)

ದೇವಸ್ತುತಿ ಮತ್ತು ಸಲಾತ್‌ನ ಜೊತೆಗೆ ಮಾಡುವ ಪ್ರಾರ್ಥನೆಯು ಸ್ವೀಕೃತವಾಗುತ್ತದೆಂದು ಪ್ರವಾದಿ(ಸ) ಸಾಕ್ಷ್ಯವಹಿಸಿದ್ದಾರೆ. ಹ. ಫುಝಾಲಃ(ರ) ಹೇಳುತ್ತಾರೆ: ಪ್ರವಾದಿ(ಸ)

ಮಸೀದಿಯಲ್ಲಿ ಆಸೀನರಾಗಿದ್ದಾಗ ಓರ್ವ ವ್ಯಕ್ತಿ ಬಂದು ನಮಾಝ್ ಮಾಡಿದ ಬಳಿಕ ಹೇಳಿದ, اَللّٰهُمَّ اغْفِرْلِىْ "ಅಲ್ಲಾಹುಮ್ಮಗ್ ಫಿರ್‌ಲೀ." (ಓ ನನ್ನ ಪ್ರಭೂ! ನನ್ನನ್ನು ಕ್ಷಮಿಸು.)

ಆಗ ಪ್ರವಾದಿ(ಸ) ಅವರನ್ನು ಕರೆದು ಹೇಳಿದರು, ನೀವು ಪ್ರಾರ್ಥಿಸುವಾಗ ಆತುರ ಪಟ್ಟಿರಿ. ನಮಾಝ್ ಮಾಡಿ ಆದ ಬಳಿಕ ಕುಳಿತುಕೊಂಡು ದೇವನ ಸ್ತುತಿಸ್ತೋತ್ರ ಮಾಡಬೇಕು. ತರುವಾಯ ಪ್ರವಾದಿವರ್ಯರ(ಸ) ಮೇಲೆ ಸಲಾತ್ ಹೇಳಬೇಕು. ಆ ಬಳಿಕ ಪ್ರಾರ್ಥಿಸಬೇಕು. ಪ್ರವಾದಿ(ಸ) ಇದನ್ನು ಹೇಳುತ್ತಿರುವಾಗಲೇ ಇನ್ನೊಬ್ಬ ವ್ಯಕ್ತಿ ಬಂದು ನಮಾಝ್ ಮಾಡಿದನು. ತರುವಾಯ ದೇವನ ಸ್ತುತಿಸ್ತೋತ್ರ ಮಾಡಿದನು. ಅನಂತರ ಸಲಾತ್ ಹೇಳಿದನು. ಆಗ ಪ್ರವಾದಿ(ಸ) ಹೇಳಿದರು: ಈಗ ಪ್ರಾರ್ಥಿಸಿರಿ, ನಿಮ್ಮ ಪ್ರಾರ್ಥನೆ ಸ್ವೀಕೃತವಾಗುವುದು. (ತಿರ್ಮಿದಿ)

17. ಯಾವಾಗಲೂ ದೇವನಲ್ಲಿ ಪ್ರಾರ್ಥಿಸುತ್ತಿರಿ. ಅವನು ತನ್ನ ದಾಸರ ಮೊರೆಗಳನ್ನು ಕೇಳಿ ದಣಿಯುವುದಿಲ್ಲ. ಆದರೆ ಕೆಲವು ಕ್ಷಣಗಳು ಮತ್ತು ಘಳಿಗೆಗಳಿವೆ. ಆಗ ಪ್ರಾರ್ಥನೆಗಳು ಹೆಚ್ಚು ಶೀಘ್ರ ಸ್ವೀಕೃತವಾಗುತ್ತವೆ. ಆದ್ದರಿಂದ ಈ ವೇಳೆಗಳಲ್ಲಿ ತಪ್ಪದೆ ದುಆ ಮಾಡುವ ಪರಿಪಾಠವಿಟ್ಟುಕೊಳ್ಳಿರಿ.

i) ರಾತ್ರಿಯ ಅಂತಿಮ ಜಾವದಲ್ಲಿ, ಜಗತ್ತು ಸುಖನಿದ್ರೆಯಲ್ಲಿ ಬಿದ್ದು ಮಲಗಿರುವಾಗ ಒಬ್ಬನು ಎದ್ದು ತನ್ನ ಪ್ರಭುವಿನಲ್ಲಿ ರಹಸ್ಯ ಸಂಭಾಷಣೆ ನಡೆಸಿದಾಗ ಹಾಗೂ ದೀನಭಾವದಿಂದ ಆತನ ಮುಂದೆ ತನ್ನ ಬೇಡಿಕೆಯನ್ನಿರಿಸಿದಾಗ ಆತನು ಅವನ ಮೇಲೆ ವಿಶೇಷ ಕರುಣೆ ತೋರುತ್ತಾನೆ.

ಪ್ರವಾದಿ(ಸ) ಈ ರೀತಿ ಹೇಳಿದ್ದಾರೆ: "ಅಲ್ಲಾಹನು ಪ್ರತಿ ರಾತ್ರಿಯೂ ಆಕಾಶ ಲೋಕದಲ್ಲಿ ಪ್ರತ್ಯಕ್ಷನಾಗುತ್ತಾನೆ. ರಾತ್ರಿಯ ಅಂತಿಮ ಜಾವ ಬಂದಾಗ, ಯಾರು ನನ್ನನ್ನು ಕರೆಯುತ್ತಾನೆ. ನಾನವನ ಕರೆಗೆ ಓಗೊಡುವೆನು. ಯಾರು ನನ್ನಲ್ಲಿ ಬೇಡುತ್ತಾನೆ, ನಾನವನ ಬೇಡಿಕೆಯನ್ನು ಈಡೇರಿಸುವೆನು. ಯಾರು ನನ್ನಿಂದ ಕ್ಷಮೆ ಯಾಚಿಸುತ್ತಾನೆ ನಾನು ಅವನನ್ನು ಕ್ಷಮಿಸುವೆನು" ಎಂದು ಹೇಳುತ್ತಾನೆ. (ತಿರ್ಮಿದಿ)

ii) ಲೈಲತುಲ್ ಕದ್ರ್(ವಿಧಿ ನಿರ್ಣಾಯಕ ರಾತ್ರಿ)ನಲ್ಲಿ ಅತಿ ಹೆಚ್ಚು ಪ್ರಾರ್ಥಿಸಿರಿ, ಈ ರಾತ್ರಿಯು ದೇವನ ಬಳಿ ಒಂದು ಸಹಸ್ರ ತಿಂಗಳುಗಳಿಗಿಂತಲೂ ಉತ್ತಮವೆನಿಸಿದೆ. ಈ ಕೆಳಗಿನ ಪ್ರಾರ್ಥನೆಯನ್ನು ವಿಶೇಷವಾಗಿ ಪಠಿಸಿರಿ.

اَللّٰهُمَّ اِنَّكَ عَفُوٌّ تُحِبُّ الْعَفْوَ فَاعْفُ عَنِّىْ

"ಅಲ್ಲಾಹುಮ್ಮ ಇನ್ನಕ ಅಫುವ್ವುನ್ ತುಹಿಬ್ಬುಲ್ ಅಫ್ವ ಫಅ್‌ಫುಅನ್ನೀ".

(ಓ ಅಲ್ಲಾಹ್! ನೀನು ಅತ್ಯಧಿಕ ಕ್ಷಮಿಸುವವನು. ಕ್ಷಮಿಸುವುದನ್ನು ನೀನು ಇಷ್ಟಪಡುತ್ತಿ. ಆದ್ದರಿಂದ ನನ್ನನ್ನು ನೀನು ಕ್ಷಮಿಸಿಬಿಡು.) (ತಿರ್ಮಿದಿ)

iii) ಅರಫಾ ಮೈದಾನದಲ್ಲಿ ದುಲ್ ಹಜ್ಜ್ ತಿಂಗಳ 9ರಂದು ಅಲ್ಲಾಹನ ಅತಿಥಿಗಳು ಸಮ್ಮೇಳಿಸಿದಾಗ. (ತಿರ್ಮಿದಿ)

iv) ಶುಕ್ರವಾರದ ಒಂದು ವಿಶಿಷ್ಟ ಗಳಿಗೆಯಲ್ಲಿ. ಅದು ಖುತ್‌ಬಾ ಆರಂಭವಾಗಿ

ನಮಾಝ್ ಮುಗಿಯುವ ತನಕ ಅಥವಾ ಅಸರ್ ನಮಾಝ್‌ನಿಂದ ಮಗ್ರಿಬ್ ನಮಾಝ್‌ನ ತನಕ ಇರುವುದು.

v) ಅದಾನ್ ಆಗುವ ವೇಳೆ ಮತ್ತು ಧರ್ಮಯುದ್ಧದ ಪಂಕ್ತಿಗಳು ಅಣಿಗೊಳ್ಳುವಾಗ.

ಪ್ರವಾದಿ(ಸ) ಹೀಗೆ ಹೇಳಿರುವರು: "ಎರಡು ವಸ್ತುಗಳು ದೇವನ ಬಳಿ ಸ್ವೀಕೃತ ವಾಗದಿರುವುದಿಲ್ಲ. ಒಂದು, ಅದಾನಿನ ವೇಳೆ, ಮತ್ತೊಂದು, ಜಿಹಾದ್‌ನ ವೇಳೆ (ಪಂಕ್ತಿಗಳು ಅಣಿಗೊಳ್ಳುವಾಗ) ಮಾಡುವ ದುಆ". (ಅಬೂದಾವೂದ್)

vi) ಅದಾನ್ ಮತ್ತು ಇಕಾಮತ್‌ಗಳ ಮಧ್ಯಾವಧಿಯಲ್ಲಿ.

ಪ್ರವಾದಿ(ಸ) ಹೇಳಿರುವರು:

"ಅದಾನ್ ಮತ್ತು ಇಕಾಮತ್‌ಗಳ ಮಧ್ಯಾವಧಿಯ ಪ್ರಾರ್ಥನೆ ಸ್ವೀಕೃತವಾಗದೆ ಇರುವುದಿಲ್ಲ. ಸಹಾಬಿವರ್ಯರು ವಿಚಾರಿಸಿದರು, ಓ ಅಲ್ಲಾಹನ ಸಂದೇಶವಾಹಕರೇ! ಆ ಮಧ್ಯಾವಧಿಯಲ್ಲಿ ನಾವು ಏನೆಂದು ಪ್ರಾರ್ಥಿಸಬೇಕು."

ಪ್ರವಾದಿ(ಸ) ಹೇಳಿದರು, ಈ ರೀತಿ ಪ್ರಾರ್ಥಿಸಿರಿ:

اَللّٰهُمَّ اِنِّىٓ اَسْئَلُكَ الْعَفْوَ وَالْعَافِيَةَ فِى الدُّنْيَا وَالْاٰخِرَةِ

"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕಲ್ ಅಫ್‌ವ ವಲ್ ಆಫಿಯತ ಫಿದ್ದುನ್‌ಯಾ ವಲ್ ಅಖಿರಃ". (ಓ ಅಲ್ಲಾಹ್! ನಾನು ನಿನ್ನಿಂದ ಇಹಲೋಕದಲ್ಲೂ ಪರಲೋಕದಲ್ಲೂ ಕರುಣೆ ಕ್ಷಮೆ ಮತ್ತು ರಕ್ಷಣೆಯನ್ನು ಕೋರುತ್ತೇನೆ.)

vii) ರಮಝಾನಿನ ಪಾವನ ದಿನಗಳಲ್ಲಿ, ವಿಶೇಷವಾಗಿ ಪಾರಣೆ (ಇಫ್ತಾರ್) ಮಾಡುವ ವೇಳೆ. (ಬಝ್ಝಾರ್)

viii) ಕಡ್ಡಾಯ ನಮಾಝ್‌ಗಳ ಬಳಿಕ (ತಿರ್ಮಿದಿ) ಒಬ್ಬಂಟಿಗರಾಗಿಯೋ ಇಮಾಮರ ಜೊತೆಯಲ್ಲೋ.

ix) ಸುಜೂದ್(ಸಾಷ್ಟಾಂಗ)ನ ವೇಳೆ. ಪ್ರವಾದಿ(ಸ) ಹೇಳಿರುವರು: "ಸುಜೂದ್‌ನ ಸ್ಥಿತಿಯಲ್ಲಿ ದಾಸನು ಅಲ್ಲಾಹನಿಗೆ ಅತ್ಯಂತ ನಿಕಟನಾಗುತ್ತಾನೆ. ಆದ್ದರಿಂದ ಆ ಸಂದರ್ಭದಲ್ಲಿ ನೀವು ಹೆಚ್ಚೆಚ್ಚು ಪ್ರಾರ್ಥಿಸಿರಿ".

x) ನೀವು ಅತ್ಯಂತ ದುಃಖ ಅಥವಾ ಸಂಕಷ್ಟದಲ್ಲಿ ಸಿಲುಕಿರುವಾಗ. (ಹಾಕಿಮ್)

xi) ದೇವಸ್ಮರಣೆ ಅಥವಾ ಧರ್ಮದ ಕುರಿತು ವಿಚಾರ ವಿನಿಮಯದ ಸಭೆ ಏರ್ಪಟ್ಟಾಗ. (ಮುಸ್ಲಿಮ್)

xii) ಪವಿತ್ರ ಕುರ್‌ಆನ್ ಪಾರಾಯಣ ಮುಗಿದಾಗ. (ತಬ್ರಾನಿ)

18) ಈ ಕೆಳಗಿನ ಸ್ಥಳಗಳಲ್ಲಿ ವಿಶೇಷವಾಗಿ ಪ್ರಾರ್ಥಿಸಿರಿ. ಹ. ಹಸನ್ ಬಸರೀ(ರ) ಮಕ್ಕಾದಿಂದ ಬಸ್ರಾಕ್ಕೆ ಹೊರಟಾಗ ಅವರು ಮಕ್ಕಾ ನಿವಾಸಿಗಳಿಗೆ ಒಂದು ಪತ್ರ ಬರೆದರು. ಅದರಲ್ಲಿ ಮಕ್ಕಾದಲ್ಲಿ ವಾಸಿಸುವ ಪ್ರಾಮುಖ್ಯತೆ ಮತ್ತು ಪುಣ್ಯವನ್ನು ವಿವರಿಸಿದ್ದರು. ಮಕ್ಕಾ ದಲ್ಲಿ ಈ ಹನ್ನೊಂದು ಸ್ಥಳಗಳಲ್ಲಿ ವಿಶೇಷವಾಗಿ ಪ್ರಾರ್ಥನೆಗಳು ಸ್ವೀಕೃತವಾಗುತ್ತವೆ ಎಂದರು:

i) ಮುಲ್ತಝಿಮ್‌ನ ಸಮೀಪ.
ii) ಮೀಝಾಬ್‌ನ ಕೆಳಗೆ.
iii) ಕಅಬಾದ ಒಳಗೆ.
iv) ಝಮ್ ಝಮ್ ಚಿಲುಮೆಯ ಬಳಿ.
v) ಸಫಾ ಮತ್ತು ಮರ್ವಾದಲ್ಲಿ.
vi) ಸಫಾ ಮತ್ತು ಮರ್ವಾದ ಮಧ್ಯೆ ನಡೆದಾಡುವ ಸ್ಥಳದಲ್ಲಿ.
vii) ಮಕಾಮು ಇಬ್ರಾಹೀಮ್‌ನ ಹಿಂದೆ.
viii) ಅರಫಾದಲ್ಲಿ.
ix) ಮುಝ್ದಲಿಫಾದಲ್ಲಿ.
x) ಮಿನಾದಲ್ಲಿ.
xi) ಮೂರು ಜಮ್ರಾಗಳ ಬಳಿ.

19) ಪ್ರಾರ್ಥನೆ ಮಾಡಲಿಕ್ಕೆ ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ವಚನಗಳಲ್ಲಿ ಬಂದ ಪ್ರಾರ್ಥನೆಗಳನ್ನು ಕಲಿಯುವ ಪ್ರಯತ್ನ ಮಾಡಿರಿ. ದೇವನು ತನ್ನ ಪ್ರವಾದಿಗಳ ಮತ್ತು ಉತ್ತಮ ದಾಸರ ದುಆಗಳನ್ನು ಪ್ರಸ್ತಾಪಿಸಿರುವಾಗ, ಪ್ರಾರ್ಥನೆಗೆ ಅವುಗಳಿಗಿಂತ ಉತ್ತಮ ಶಬ್ದಗಳನ್ನು ಮತ್ತು ಶೈಲಿಯನ್ನು ತರುವುದು ಸಾಧ್ಯವಿಲ್ಲ. ಅಂತೆಯೇ ದೇವ ವಾಕ್ಯಗಳಲ್ಲಿ ವಿವರಿಸಲ್ಪಟ್ಟ ಮತ್ತು ದೇವ ಪ್ರವಾದಿಗಳಿಂದ ಉದ್ಧೃತ್ತವಾದ ಪ್ರಾರ್ಥನೆಗಳಿಗಿಂತ ಉತ್ತಮ, ಪ್ರಭಾವ ಪೂರ್ಣ, ಸಾರವತ್ತಾದ ಸಮೃದ್ಧ ಹಾಗೂ ಸ್ವೀಕಾರಾರ್ಹವಾದ ಪ್ರಾರ್ಥನೆ ಬೇರೆ ಇರಲು ಸಾಧ್ಯವೇ ಇಲ್ಲ. ಇದೇ ರೀತಿ ಪ್ರವಾದಿ(ಸ) ದಿನರಾತ್ರಿ ಪಠಿಸುತ್ತಿದ್ದಂತಹ ದುಆಗಳಲ್ಲಿರುವ ಮಾಧುರ್ಯ, ಗಾಂಭೀರ್ಯ ಸಾರವತ್ತಾದ ಮತ್ತು ಸಂಪೂರ್ಣ ದಾಸ್ಯ ಭಾವನೆಯನ್ನು ಪ್ರಕಟಿಸುವ ದುಆಗಳು, ಪ್ರಾರ್ಥನೆಗಳು ಮತ್ತು ಬೇಡಿಕೆಗಳು ಬೇರೆ ಇರುವುದು ಸಾಧ್ಯವೇ ಇಲ್ಲ.

ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ವಚನಗಳಲ್ಲಿ ಬಂದ ದುಆಗಳನ್ನು ಪಠಿಸುವುದರಿಂದ ನಮ್ಮ ತರಬೇತಿಯೂ ಆಗುತ್ತದೆ. ಅವುಗಳ ಬಗ್ಗೆ ಗಹನವಾಗಿ ಚಿಂತಿಸಿದರೆ ನಮ್ಮ ವಿಚಾರ ಶೈಲಿ, ಬಯಕೆ, ಬೇಡಿಕೆಗಳು ಯಾವ ರೀತಿ ಇರಬೇಕೆಂದೂ ಅವುಗಳಿಂದ ಸ್ಪಷ್ಟವಾಗುತ್ತದೆ. ನಮ್ಮ ಶ್ರಮಗಳು ಯಾವ ಕಾರ್ಯಗಳಿಗಾಗಿ ವಿನಿಯೋಗವಾಗಬೇಕು, ಯಾವ ವಸ್ತುಗಳನ್ನು ಧ್ಯೇಯವಾಗಿರಿಸಬೇಕು ಎಂದೆಲ್ಲಾ ಇದರಿಂದ ವಿಶದವಾಗುತ್ತದೆ.

ಪ್ರಾರ್ಥನೆಗೆ ಯಾವುದೇ ಭಾಷೆ, ಶೈಲಿ ಮತ್ತು ಶಬ್ದಗಳ ನಿರ್ಬಂಧವಿಲ್ಲವೆಂಬುದರಲ್ಲಿ ಸಂಶಯವಿಲ್ಲ. ದಾಸನು ತನ್ನ ಪ್ರಭುವಿನಿಂದ ಯಾವ ಭಾಷೆಯಲ್ಲಾದರೂ ಯಾವ ಶಬ್ದಗಳಲ್ಲಾದರೂ ಬೇಕಾದುದನ್ನು ಕೇಳಬಹುದು. ನನ್ನಿಂದ ಈ ವಸ್ತುಗಳನ್ನು ಈ ರೀತಿ ಕೇಳಿರಿ ಎಂದು ತಿಳಿಸಿರುವುದು ಅಲ್ಲಾಹನ ಒಂದು ಮಹಾ ಅನುಗ್ರಹವಾಗಿದೆ. ಪ್ರಾರ್ಥನೆಯ ಶಬ್ದಗಳನ್ನು ಕಲಿಸಿ ಸತ್ಯವಿಶ್ವಾಸಿಗೆ ಧರ್ಮ ಮತ್ತು ಲೋಕದ ಬಗ್ಗೆ ಅದರ ವಿಜಯದ ಬಗ್ಗೆ ಯಾವ ದೃಷ್ಟಿಕೋನವನ್ನು ಇರಿಸಬೇಕೆಂಬುದನ್ನು ಸ್ಪಷ್ಟಪಡಿಸಲಾಗಿದೆ. ಧರ್ಮ ಮತ್ತು ಲೋಕಕ್ಕೆ

ಸಂಬಂಧಪಟ್ಟ, ಯಾವ ಬಯಕೆ, ಬೇಡಿಕೆಗಳೂ ಈ ಪ್ರಾರ್ಥನೆಗಳಲ್ಲಿ ಬಿಟ್ಟು ಹೋಗಿಲ್ಲ. ಆದ್ದರಿಂದ ಅಲ್ಲಾಹನಲ್ಲಿ ಪ್ರಾರ್ಥಿಸುವಾಗ ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ವಚನಗಳಲ್ಲಿ ಬಂದಿರುವ ಪ್ರಾರ್ಥನೆಗಳನ್ನು ಬಳಸುವುದೇ ಉತ್ತಮ. ಸದಾ ಪವಿತ್ರ ಕುರ್‌ಆನಿನ ದುಆಗಳನ್ನು ಪಠಿಸುತ್ತಿರುವುದು ಅಥವಾ ಪ್ರವಾದಿ(ಸ) ವಿವಿಧ ಸಂದರ್ಭಗಳಿಗೆ ಕಲಿಸಿದ ದುಆಗಳನ್ನು ಪಠಿಸುವುದು ಉತ್ತಮ.

ಈ ದುಆಗಳ ಶಬ್ದಗಳನ್ನು ಕಲಿಯುವ ತನಕ ನಿಮ್ಮ ಭಾಷೆಯಲ್ಲಿ ಇದೇ ಅರ್ಥದ ಮಾತನ್ನು ಪ್ರಾರ್ಥನೆಗಾಗಿ ಬಳಸುವುದರಲ್ಲಿ ಅಡ್ಡಿಯಿಲ್ಲ.

ಮುಂದಿನ ಅಧ್ಯಾಯಗಳಲ್ಲಿ ಪವಿತ್ರ ಕುರ್‌ಆನ್ ಮತ್ತು ಪ್ರವಾದಿವರ್ಯರ(ಸ) ಕೆಲವು ಸಾರವತ್ತಾದ ದುಆಗಳನ್ನು ಕೊಡಲಾಗಿದೆ. ಈ ದುಆಗಳನ್ನು ಕಲಿತು ಇವುಗಳಲ್ಲೇ ಪ್ರಾರ್ಥಿಸುವುದು ಉತ್ತಮ.

(ಅರಬಿ ಲಿಪಿ ಬಾರದವರ ಅನುಕೂಲತೆಗಾಗಿ ಈ ದುಆಗಳನ್ನು ಕನ್ನಡದಲ್ಲಿ ಲಿಪಿಯಂತರ ಮಾಡಲಾಗಿದೆ. ಕನ್ನಡದಲ್ಲಿ ಬರೆಯಲು ಸಾಧ್ಯವಿಲ್ಲದ ಎಷ್ಟೋ ಉಚ್ಚಾರಗಳು ಅರಬಿಯಲ್ಲಿವೆ. ಆದ್ದರಿಂದ ಇದನ್ನು ಪಠಿಸಿ ಕಂಠಸ್ಥಗೊಳಿಸುವ ವೇಳೆ ಅರಬಿ ತಿಳಿದವರ ಮುಂದೆ ಓದಿ ಉಚ್ಚಾರ ಸರಿಪಡಿಸಿ ಕೊಳ್ಳುವುದು ಅಗತ್ಯ. -ಅನು)

# ಕುರ್‌ಆನಿನ ಸಾರವತ್ತಾದ ಪ್ರಾರ್ಥನೆಗಳು

## ಕರುಣೆ ಮತ್ತು ಕ್ಷಮೆಯ ಪ್ರಾರ್ಥನೆ:

رَبَّنَا ظَلَمۡنَآ أَنفُسَنَا وَإِن لَّمۡ تَغۡفِرۡ لَنَا وَتَرۡحَمۡنَا لَنَكُونَنَّ مِنَ ٱلۡخَٰسِرِينَ ﴿٢٣﴾

"ರಬ್ಬನಾ ಝುಲಮ್‌ನಾ ಅನ್‌ಫುಸನಾ ವ ಇಲ್ಲಮ್ ತಗ್ಫಿರ್‌ಲನಾ. ವತರ್‌ಹಮ್‌ನಾ ಲನಕೂನನ್ನ ಮಿನಲ್ ಖಾಸಿರೀನ್".

(ಓ ನಮ್ಮ ಪ್ರಭೂ! ನಮ್ಮ ಮೇಲೆ ನಾವೇ ಅಕ್ರಮವೆಸಗಿದೆವು. ಈಗ ನಮ್ಮನ್ನು ನೀನು ಕ್ಷಮಿಸದಿದ್ದರೆ ಹಾಗೂ ನಮ್ಮ ಮೇಲೆ ದಯೆ ತೋರದಿದ್ದರೆ ಖಂಡಿತ ನಾವು ನಷ್ಟಕ್ಕೊಳಗಾಗುವೆವು.) **(7: 23)**

ನಿಸ್ಸಂದೇಹವಾಗಿಯೂ ಅಲ್ಲಾಹನು ಮನುಷ್ಯನ ತಪ್ಪುಗಳನ್ನು ಕ್ಷಮಿಸದಿದ್ದರೆ ಹಾಗೂ ತನ್ನ ಅಪಾರ ಕರುಣೆಯ ಆಶ್ರಯ ನೀಡದಿದ್ದರೆ ಮನುಷ್ಯನು ನಾಶ ಹೊಂದುವನು.

## ಉಭಯ ಲೋಕಗಳ ವಿಜಯದ ಸಾರವತ್ತಾದ ಪ್ರಾರ್ಥನೆ:

رَبَّنَآ ءَاتِنَا فِي ٱلدُّنۡيَا حَسَنَةً وَفِي ٱلۡأٓخِرَةِ حَسَنَةً وَقِنَا عَذَابَ ٱلنَّارِ ﴿٢٠١﴾

"ರಬ್ಬನಾ ಆತಿನಾ ಫಿದ್ದುನ್ಯಾ ಹಸನತನ್ ವಫಿಲ್ ಆಖಿರತಿ ಹಸನತನ್ ವಕಿನಾ ಅದಾಬನ್ನಾರ್".

(ಓ ನಮ್ಮ ಪ್ರಭೂ! ಇಹಲೋಕದಲ್ಲಿ ನಮಗೆ ಒಳಿತನ್ನು ದಯಪಾಲಿಸು. ಪರಲೋಕ ದಲ್ಲಿಯೂ ಒಳಿತನ್ನೇ ದಯಪಾಲಿಸು ಮತ್ತು ನರಕದ ಯಾತನೆಯಿಂದ ನಮ್ಮನ್ನು ರಕ್ಷಿಸು.) **(2: 201)**

## ಸಹನೆ ಮತ್ತು ಸ್ಥಿರತೆಯ ಪ್ರಾರ್ಥನೆ:

رَبَّنَآ أَفۡرِغۡ عَلَيۡنَا صَبۡرٗا وَثَبِّتۡ أَقۡدَامَنَا وَٱنصُرۡنَا عَلَى ٱلۡقَوۡمِ ٱلۡكَٰفِرِينَ ﴿٢٥٠﴾

"ರಬ್ಬನಾ ಅಫ್ರಿಗ್ ಅಲೈನಾ ಸಬ್‌ರನ್ ವಸಬ್ಬಿತ್ ಅಕ್‌ದಾಮನಾ ವನ್‌ಸುರ್‌ನಾ ಅಲಲ್ ಕೌಮಿಲ್ ಕಾಫಿರೀನ್".

(ಓ ನಮ್ಮ ಪ್ರಭೂ! ನಮಗೆ ತಾಳ್ಮೆಯನ್ನು ದಯಪಾಲಿಸು. ನಮ್ಮ ಪಾದಗಳನ್ನು

ಸ್ಥಿರಗೊಳಿಸು ಸತ್ಯನಿಷೇಧಿಗಳಾದ ಜನರೆದುರು ನಮಗೆ ನೀನು ನೆರವಾಗು.) (2: 250)

**ಶೈತಾನನ ಕಾಟದಿಂದ ರಕ್ಷಣೆ ಹೊಂದುವ ಪ್ರಾರ್ಥನೆ:**

رَّبِّ أَعُوذُ بِكَ مِنْ هَمَزَاتِ الشَّيَاطِينِ ﴿٩٧﴾ وَأَعُوذُ بِكَ رَبِّ أَن يَحْضُرُونِ ﴿٩٨﴾

"ರಬ್ಬಿ ಅಊದುಬಿಕ ಮಿನ್ ಹಮಝಾತಿಶ್ಶಯಾತೀನ್ ವಅಊದುಬಿಕ ರಬ್ಬಿ ಅಂಯಹ್‌ದುರೂನ್".

(ಓ ನನ್ನ ಪ್ರಭೂ! ಶೈತಾನನ ಕುಪ್ರಚೋದನೆಯಿಂದ ನಾನು ನಿನ್ನ ಮೊರೆ ಹೋಗುತ್ತೇನೆ ಮತ್ತು ಅವರು ನನ್ನ ಬಳಿ ಬರುವುದರಿಂದಲೂ ನಿನ್ನ ಅಭಯ ಕೋರುತ್ತೇನೆ.)

(23: 97-98)

**ನರಕ ಯಾತನೆಯಿಂದ ರಕ್ಷಣೆಯ ಪ್ರಾರ್ಥನೆ:**

رَبَّنَا اصْرِفْ عَنَّا عَذَابَ جَهَنَّمَ ۖ إِنَّ عَذَابَهَا كَانَ غَرَامًا ﴿٦٥﴾ إِنَّهَا سَاءَتْ مُسْتَقَرًّا وَمُقَامًا ﴿٦٦﴾

"ರಬ್ಬನಸ್‌ರಿಫ್ ಅನ್ನಾ ಅದಾಬ ಜಹನ್ನಮ ಇನ್ನ ಅದಾಬಹಾ ಕಾನ ಗರಾಮಾ ಇನ್ನಹಾ ಸಾಅತ್ ಮುಸ್‌ತಕರ್‍ರಂವಮುಕಾಮಾ".

(ಓ ನಮ್ಮ ಪ್ರಭೂ! ನರಕದ ಯಾತನೆಯಿಂದ ನಮ್ಮನ್ನು ಕಾಪಾಡು. ಖಂಡಿತವಾಗಿಯೂ ಅದರ ಯಾತನೆ ಪ್ರಾಣಾಂತಿಕವಾದುದು. ನಿಶ್ಚಯವಾಗಿಯೂ ಅದು ಬಹಳ ಕೆಟ್ಟ ತಾಣ ಮತ್ತು ನಿಕೃಷ್ಟ ನೆಲೆಯಾಗಿದೆ.) (25: 65-66)

**ಹೃದಯ ಸುಧಾರಣೆಯ ಪ್ರಾರ್ಥನೆ:**

رَبَّنَا لَا تُزِغْ قُلُوبَنَا بَعْدَ إِذْ هَدَيْتَنَا وَهَبْ لَنَا مِن لَّدُنكَ رَحْمَةً ۚ إِنَّكَ أَنتَ الْوَهَّابُ ﴿٨﴾

"ರಬ್ಬನಾ ಲಾ ತುಝಿಗ್ ಕುಲೂಬನಾ ಬಅ್‌ದ ಇದ್ ಹದೈತನಾ ವಹಬ್‌ಲನಾ ಮಿಲ್ಲದುಂಕ ರಹ್ಮತನ್ ಇನ್ನಕ ಅಂತಲ್ ವಹ್ಹಾಬ್".

(ಓ ನಮ್ಮ ಪ್ರಭೂ! ನಮಗೆ ನೀನು ಸನ್ಮಾರ್ಗದರ್ಶನ ಮಾಡಿದ ಬಳಿಕ ನಮ್ಮ ಹೃದಯಗಳನ್ನು ಅದರಿಂದ ದೂರ ಮಾಡದಿರು. ನಿನ್ನ ವತಿಯಿಂದ ನಮಗೆ ಕರುಣೆಯನ್ನು ದಯಪಾಲಿಸು. ನಿಶ್ಚಯವಾಗಿಯೂ ನೀನು ಮಹಾ ದಾನಿಯಾಗಿರುವಿ.) (3: 8)

### ಹೃದಯ ಪರಿಶುದ್ಧತೆಯ ಪ್ರಾರ್ಥನೆ:

رَبَّنَا اغْفِرْ لَنَا وَلِإِخْوَانِنَا الَّذِينَ سَبَقُونَا بِالْإِيمَانِ وَلَا تَجْعَلْ فِي قُلُوبِنَا غِلًّا لِّلَّذِينَ آمَنُوا رَبَّنَا إِنَّكَ رَءُوفٌ رَّحِيمٌ ﴿١٠﴾

"ರಬ್ಬನಗ್‌ಫಿರ್‌ಲನಾ ವಲಿಇಖ್‌ವಾನಿನಲ್ಲದೀನ ಸಬಕೂನಾ ಬಿಲ್ ಈಮಾನ್, ವಲಾ ತಜ್‌ಅಲ್ ಫೀ ಕುಲೂಬಿನಾ ಗಿಲ್ಲಲ್ಲಿಲ್ಲದೀನ ಆಮನೂ ರಬ್ಬನಾ ಇನ್ನಕ ರಊಫುರ್ರಹೀಮ್".

(ಓ ನಮ್ಮ ಪ್ರಭೂ! ನಮ್ಮನ್ನೂ ವಿಶ್ವಾಸದಲ್ಲಿ ನಮಗಿಂತ ಮುಂದೆ ಸಾಗಿದ ನಮ್ಮ ಸೋದರರನ್ನೂ ಕ್ಷಮಿಸು ಮತ್ತು ಸತ್ಯವಿಶ್ವಾಸಿಗಳ ಬಗ್ಗೆ ನಮ್ಮ ಹೃದಯದಲ್ಲಿ ಹಗೆ ಹಾಕಬೇಡ. ಓ ನಮ್ಮ ಪ್ರಭೂ! ನಿಶ್ಚಯವಾಗಿಯೂ ನೀನು ಅತ್ಯಧಿಕ ಕನಿಕರವುಳ್ಳವನೂ ಕರುಣಾನಿಧಿಯೂ ಆಗಿರುತ್ತಿ.) **(59: 10)**

### ಪರಿಸ್ಥಿತಿ ಸುಧಾರಣೆಗೆ ಪ್ರಾರ್ಥನೆ:

رَبَّنَا آتِنَا مِن لَّدُنكَ رَحْمَةً وَهَيِّئْ لَنَا مِنْ أَمْرِنَا رَشَدًا ﴿١٠﴾

"ರಬ್ಬನಾ ಆತಿನಾ ಮಿಲ್ಲದುಂಕ ರಹ್ಮತನ್ ವ ಹಯ್ಯಿಲ್ ಲನಾ ಮಿನ್ ಅಮ್ರಿನಾ ರಶದಾ".

(ಓ ನಮ್ಮ ಪ್ರಭೂ! ನಿನ್ನ ವತಿಯಿಂದ ನಮಗೆ ವಿಶಿಷ್ಟ ಕರುಣೆಯನ್ನು ದಯಪಾಲಿಸು ಮತ್ತು ನಮ್ಮ ವ್ಯವಹಾರಗಳನ್ನು ಸುಗಮಗೊಳಿಸು.) **(18: 10)**

### ಕ್ಷಮಾಯಾಚನೆ:

رَبَّنَا آمَنَّا فَاغْفِرْ لَنَا وَارْحَمْنَا وَأَنتَ خَيْرُ الرَّاحِمِينَ ﴿١٠٩﴾

"ರಬ್ಬನಾ ಆಮನ್ನಾ ಫಗ್‌ಫಿರ್‌ಲನಾ ವರ್‌ಹಮ್‌ನಾ ವ ಅಂತ ಖೈರುರ್ರಾಹಿಮೀನ್".

(ಓ ನಮ್ಮ ಪ್ರಭೂ! ನಾವು ವಿಶ್ವಾಸವಿರಿಸಿದೆವು. ನಮ್ಮನ್ನು ನೀನು ಕ್ಷಮಿಸು, ನಮ್ಮ ಮೇಲೆ ದಯೆತೋರು, ನೀನು ಅತ್ಯಂತ ದಯಾಮಯನಾಗಿರುತ್ತಿ.) **(23: 109)**

### ಕುಟುಂಬದ ಬಗ್ಗೆ ನೆಮ್ಮದಿಯ ಪ್ರಾರ್ಥನೆ:

رَبَّنَا هَبْ لَنَا مِنْ أَزْوَاجِنَا وَذُرِّيَّاتِنَا قُرَّةَ أَعْيُنٍ وَاجْعَلْنَا لِلْمُتَّقِينَ إِمَامًا ﴿٧٤﴾

"ರಬ್ಬನಾ ಹಬ್‌ಲನಾ ಮಿನ್ ಅಝ್‌ವಾಜಿನಾ ವ ದುರ್ರಿಯ್ಯಾತಿನಾ ಕುರ್ರತ ಅಅ್‌ಯು

ನಿನ್ ವಜ್‌ಅಲ್‌ನಾ ಲಿಲ್ ಮುತ್ತಕೀನ ಇಮಾಮಾ".

(ಓ ನಮ್ಮ ಪ್ರಭೂ! ನಮ್ಮ ಪತ್ನಿಯರಿಂದಲೂ ನಮ್ಮ ಸಂತಾನಗಳಿಂದಲೂ ನಮ್ಮ ಕಣ್ಣುಗಳಿಗೆ ತಂಪನ್ನು ದಯಪಾಲಿಸು ಮತ್ತು ನಮ್ಮನ್ನು ಧರ್ಮನಿಷ್ಠರ ನಾಯಕರಾಗಿ ಮಾಡು. **(25: 74)**

ಅರ್ಥಾತ್ ಸತ್ಯವಿಶ್ವಾಸಿಗಳೂ ಧರ್ಮನಿಷ್ಠರೂ ನಮ್ಮನ್ನು ಮಾದರಿಯಾಗಿ ಪರಿಗಣಿಸು ವಂತೆ ನಮ್ಮ ಜೀವನವನ್ನು ಪವಿತ್ರ ಮತ್ತು ಪಾವನಗೊಳಿಸು.

## ಮಾತಾಪಿತರಿಗೆ ಪ್ರಾರ್ಥನೆ:

رَبَّنَا اغْفِرْ لِي وَلِوَالِدَيَّ وَلِلْمُؤْمِنِينَ يَوْمَ يَقُومُ الْحِسَابُ ﴿٤١﴾

"ರಬ್ಬನಗ್‌ಫಿರ್‌ಲೀ ವಲಿವಾಲಿದಯ್ಯ ವಲಿಲ್ ಮುಅ್‌ಮಿನೀನ ಯೌಮ ಯಕೂಮುಲ್ ಹಿಸಾಬ್".

(ಓ ನಮ್ಮ ಪ್ರಭೂ! ಜನರ ವಿಚಾರಣೆ ನಡೆಸಲ್ಪಡುವ ದಿವಸ ನನಗೂ ನನ್ನ ಮಾತಾಪಿತರಿಗೂ ಇತರೆಲ್ಲ ಸತ್ಯವಿಶ್ವಾಸಿಗಳಿಗೂ ನೀನು ಕ್ಷಮೆ ನೀಡು.) **(14: 41)**

## ಪರೀಕ್ಷೆಗಳಿಂದ ದೂರವಿರಿಸಲು ಪ್ರಾರ್ಥನೆ:

رَبَّنَا لَا تُؤَاخِذْنَا إِن نَّسِينَا أَوْ أَخْطَأْنَا ۚ رَبَّنَا وَلَا تَحْمِلْ عَلَيْنَا إِصْرًا كَمَا حَمَلْتَهُ
عَلَى الَّذِينَ مِن قَبْلِنَا ۚ رَبَّنَا وَلَا تُحَمِّلْنَا مَا لَا طَاقَةَ لَنَا بِهِ ۖ وَاعْفُ عَنَّا ۗ
وَاغْفِرْ لَنَا ۗ وَارْحَمْنَا ۚ أَنتَ مَوْلَانَا فَانصُرْنَا عَلَى الْقَوْمِ الْكَافِرِينَ ﴿٢٨٦﴾

"ರಬ್ಬನಾ ಲಾ ತುಆಖಿದ್‌ನಾ ಇನ್ನಸೀನಾ ಔ ಅಖ್‌ತಅ್‌ನಾ ರಬ್ಬನಾ ವಲಾ ತಹ್ಮಿಲ್ ಅಲೈನಾ ಇಸ್ರನ್ ಕಮಾ ಹಮಲ್ತಹೂ ಅಲಲ್ಲದೀನ ಮಿನ್‌ಕಬ್‌ಲಿನಾ ರಬ್ಬನಾ ವಲಾ ತುಹಮ್ಮಿಲ್ನಾ ಮಾಲಾ ತಾಕತಲನಾಬಿಹೀ ವಅ್‌ಫು ಅನ್ನಾ ವಗ್‌ಫಿರ್‌ಲನಾ ವರ್‌ಹಮ್‌ನಾ ಅಂತ ಮೌಲಾನಾ ಫನ್ಸುರ್‌ನಾ ಅಲಲ್ ಕೌಮಿಲ್ ಕಾಫಿರೀನ್".

(ಓ ನಮ್ಮ ಪ್ರಭೂ! ನಾವು ಮರೆತು ಬಿಟ್ಟರೆ ಇಲ್ಲವೇ ನಾವು ಎಡವಿ ಬಿದ್ದರೆ ನಮ್ಮನ್ನು ಶಿಕ್ಷಿಸಬೇಡ. ಓ ನಮ್ಮ ಪ್ರಭೂ! ನಮ್ಮ ಪೂರ್ವಜರ ಮೇಲೆ ಹೊರಿಸಿದಂತಹ ಭಾರವನ್ನು ನಮ್ಮ ಮೇಲೆ ಹೊರಿಸಬೇಡ. ಓ ನಮ್ಮ ಪ್ರಭೂ! ನಮಗೆ ಹೊರಲು ಸಾಧ್ಯವಿಲ್ಲದ್ದನ್ನು ನಮ್ಮಿಂದ ಹೊರಿಸಬೇಡ. ನಮ್ಮ ಪಾಪಗಳನ್ನು ಪರಿಹರಿಸು; ನಮ್ಮನ್ನು ಕ್ಷಮಿಸು, ನಮ್ಮ ಮೇಲೆ ಕರುಣೆ ತೋರು, ನೀನು ನಮ್ಮ ಸ್ವಾಮಿ. ಆದ್ದರಿಂದ ಸತ್ಯನಿಷೇಧಿ ಗಳ ವಿರುದ್ಧ ನಮಗೆ ಸಹಾಯ ಮಾಡು.) **(2: 286)**

### ಸತ್ಯನಿಷೇಧಿಗಳಿಂದ ಮುಕ್ತಿಯ ಪ್ರಾರ್ಥನೆ:

عَلَى اللّٰهِ تَوَكَّلْنَا ۚ رَبَّنَا لَا تَجْعَلْنَا فِتْنَةً لِّلْقَوْمِ الظّٰلِمِيْنَ ﴿٨٥﴾ وَنَجِّنَا بِرَحْمَتِكَ مِنَ الْقَوْمِ الْكٰفِرِيْنَ ﴿٨٦﴾

"ಅಲಲ್ಲಾಹಿ ತವಕ್ಕಲ್‌ನಾ ರಬ್ಬನಾ ಲಾ ತಜ್‌ಅಲ್‌ನಾ ಫಿತ್ನತಲ್ಲಿಲ್ ಕೌಮಿ ಝ್ಝ್ವಾಲಿಮೊನ್. ವನಜ್ಜಿನಾ ಬಿರಹ್ಮತಿಕ ಮಿನಲ್ ಕೌಮಿಲ್ ಕಾಫಿರೀನ್".

(ಅಲ್ಲಾಹನಲ್ಲಿಯೇ ನಾವು ಭರವಸೆ ಇಟ್ಟೆವು. ಓ ನಮ್ಮ ಪ್ರಭೂ! ಅಕ್ರಮಿಗಳಾದ ಜನರಿಗೆ ನಮ್ಮನ್ನು ಪರೀಕ್ಷಾ ಸಾಧನವಾಗಿ ಮಾಡದಿರು ಮತ್ತು ನಿನ್ನ ಅನುಗ್ರಹದಿಂದ ಸತ್ಯನಿಷೇಧಿಗಳಾದ ಜನರಿಂದ ನಮ್ಮನ್ನು ರಕ್ಷಿಸು.) **(10: 85-86)**

### ಉತ್ತಮ ಅಂತ್ಯಕ್ಕಾಗಿ ಪ್ರಾರ್ಥನೆ:

فَاطِرَ السَّمٰوٰتِ وَالْاَرْضِ ۚ اَنْتَ وَلِيّٖ فِى الدُّنْيَا وَالْاٰخِرَةِ ۚ تَوَفَّنِيْ مُسْلِمًا وَّاَلْحِقْنِيْ بِالصّٰلِحِيْنَ ﴿١٠١﴾

"ಫಾತಿರಸ್ಸಮಾವಾತಿ ವಲ್ ಅರ್ದಿ ಅಂತ ವಲಿಯ್ಯೀ ಫಿದ್ದುನ್ಯಾ ವಲ್ ಆಖಿರತಿ ತವಪ್ಪನೀ ಮುಸ್ಲಿಮನ್ ವ್ವಅಲ್‌ಹಿಕ್‌ನೀ ಬಿಸ್ಸಾಲಿಹೀನ್".

(ಭೂಮಿ-ಆಕಾಶಗಳ ಕರ್ತನೇ! ಇಹಪರಗಳೆರಡರಲ್ಲಿಯೂ ನೀನೇ ನನ್ನ ರಕ್ಷಕ. ನನ್ನನ್ನು ನೀನು ಮುಸ್ಲಿಮರಲ್ಲಾಗಿ ಮರಣಗೊಳಿಸು ಮತ್ತು ಸಜ್ಜನರಲ್ಲಿ ನನ್ನನ್ನು ಸೇರಿಸು.) **(12: 101)**

رَبَّنَاۤ اِنَّنَا سَمِعْنَا مُنَادِيًا يُّنَادِىْ لِلْاِيْمَانِ اَنْ اٰمِنُوْا بِرَبِّكُمْ فَاٰمَنَّا ۖ رَبَّنَا فَاغْفِرْ لَنَا ذُنُوْبَنَا وَكَفِّرْ عَنَّا سَيِّاٰتِنَا وَتَوَفَّنَا مَعَ الْاَبْرَارِ ﴿١٩٣﴾ رَبَّنَا وَاٰتِنَا مَا وَعَدْتَّنَا عَلٰى رُسُلِكَ وَلَا تُخْزِنَا يَوْمَ الْقِيٰمَةِ ۗ اِنَّكَ لَا تُخْلِفُ الْمِيْعَادَ ﴿١٩٤﴾

"ರಬ್ಬನಾ ಇನ್ನನಾ ಸಮಿಅ್‌ನಾ ಮುನಾದಿಯನ್‌ಯ್ಯುನಾದೀ ಲಿಲ್ ಈಮಾನಿ ಅನ್ ಆಮಿನೂ ಬಿರಬ್ಬಿಕುಮ್ ಫ ಆಮನ್ನಾ ರಬ್ಬನಾ ಫಗ್‌ಫಿರ್‌ಲನಾ ದುನೂಬನಾ ವ ಕಫ್ಫಿರ್ ಅನ್ನಾ ಸಯ್ಯಿಅತಿನಾ ವತವಫ್ಫನಾ ಮಅಲ್ ಅಬ್ರಾರ್, ರಬ್ಬನಾ ವಆತಿನಾ ಮಾವಅತ್ತನಾ

ಅಲಾ ರುಸುಲಿಕ ವಲಾ ತುಖ್‌ಝಿನಾ ಯೌಮಲ್ ಕಿಯಾಮತಿ ಇನ್ನಕ ಲಾ ತುಖ್‌ಲಿಫುಲ್ ಮೀಆದ್".

(ಓ ನಮ್ಮ ಪ್ರಭೂ! ಸತ್ಯವಿಶ್ವಾಸದೆಡೆಗೆ ಆಹ್ವಾನಿಸುವ ಓರ್ವ ಪ್ರಬೋಧಕ 'ನಿಮ್ಮ ಪ್ರಭುವಿನಲ್ಲಿ ವಿಶ್ವಾಸವಿಡಿ' ಎಂದು ಹೇಳುವುದನ್ನು ನಾವು ಕೇಳಿದೆವು. ಹಾಗೆಯೇ ನಾವೀಗ ವಿಶ್ವಾಸವಿಟ್ಟಿರುತ್ತೇವೆ. ಓ ನಮ್ಮ ಪ್ರಭೂ! ಆದ್ದರಿಂದ ನಮ್ಮ ಪಾಪಗಳನ್ನು ಕ್ಷಮಿಸು. ನಮ್ಮ ಕೇಡುಗಳನ್ನು ನಮ್ಮಿಂದ ತೊಲಗಿಸು. ಸಜ್ಜನರ ಜೊತೆಯಲ್ಲೇ ನಮ್ಮನ್ನು ಮರಣಗೊಳಿಸು. ಓ ನಮ್ಮ ಪ್ರಭೂ! ನಿನ್ನ ಸಂದೇಶವಾಹಕರ ಮೂಲಕ ನೀನು ವಾಗ್ದಾನ ಮಾಡಿರುವುದನ್ನು ನಮಗೆ ಕರುಣಿಸು. ಪುನರುತ್ಥಾನ ದಿನದಂದು ನಮ್ಮನ್ನು ಅಪಮಾನ ಗೊಳಿಸದಿರು. ನಿಶ್ಚಯವಾಗಿಯೂ ನೀನು ನಿನ್ನ ವಾಗ್ದಾನವನ್ನು ಮೀರುವವನಲ್ಲ.) **(3: 193-194)**

# ಪ್ರವಾದಿವರ್ಯರ(ಸ) ಕೆಲವು ಪ್ರಾರ್ಥನೆಗಳು

ಪ್ರವಾದಿವರ್ಯರು(ಸ) ಹಗಲು ರಾತ್ರಿಗಳಲ್ಲಿ ಪ್ರಯಾಣ ಮತ್ತು ತಾಣಗಳಲ್ಲಿ ಮಾಡಿದ ಎಲ್ಲ ಪ್ರಾರ್ಥನೆಗಳನ್ನು ಹದೀಸ್ ಸಂಗ್ರಹಕಾರರು ತಮ್ಮ ಕಠಿಣ ಪರಿಶ್ರಮದಿಂದ ಸಂಗ್ರಹಿಸಿ ಹದೀಸ್ ಗ್ರಂಥಗಳಲ್ಲಿ ಉಲ್ಲೇಖಿಸಿರುವರು. ಪವಿತ್ರ ಕುರ್‌ಆನಿನ ಪ್ರಾರ್ಥನೆಗಳ ಜೊತೆಗೆ ಈ ಪ್ರಾರ್ಥನೆಗಳನ್ನೂ ರೂಢಿಸಿಕೊಳ್ಳಿರಿ. ಈ ಪ್ರಾರ್ಥನೆಗಳು ಅತ್ಯಂತ ಸಾರವತ್ತಾಗಿವೆ. ಪ್ರಭಾವಪೂರ್ಣ ಮತ್ತು ಸಮೃದ್ಧಿದಾಯಕವಾಗಿವೆ. ಸತ್ಯವಿಶ್ವಾಸಿಯ ವಿಚಾರ ಶೈಲಿ, ಆಶಾ ಕೇಂದ್ರ ಮತ್ತು ಬೇಡಿಕೆಗಳು ಹೇಗಿರಬೇಕೆಂದು ಈ ಪ್ರಾರ್ಥನೆಗಳಿಂದ ವ್ಯಕ್ತವಾಗುತ್ತದೆ. ಜನರಿಂದ ದೂರವಾಗಿ ಕೇವಲ ಅಲ್ಲಾಹನ ಮುಂದೆ ಯಾಚಿಸುವಾಗ ಮಾನವನು ಬಳಸುವ ಪದಗಳಿಂದ ಅವನ ಬಯಕೆಗಳೇನೆಂದು ತಿಳಿಯುತ್ತದೆ. ಈ ಬಯಕೆಗಳಿಂದಲೇ ಒಬ್ಬ ಮನುಷ್ಯನ ನೈಜ ಚಿತ್ರ ಮೂಡಿ ಬರುತ್ತದೆ. ಪ್ರವಾದಿವರ್ಯರು(ಸ) ರಾತ್ರಿಯ ಅಂಧಕಾರ ದಲ್ಲಿ, ಏಕಾಂತದಲ್ಲಿ ಜನರಿಂದ ದೂರವಿದ್ದು ಹಾಗೂ ಜನರ ಜೊತೆಗಿದ್ದು ಮಾಡಿದ ಪ್ರಾರ್ಥನೆಗಳಿಂದ ಅವುಗಳ ಪ್ರತಿಯೊಂದು ಪದದಿಂದ ಪ್ರಾಮಾಣಿಕತೆ, ಭಕ್ತಿ, ಲವಲವಿಕೆ ಮತ್ತು ಪ್ರಕಾಶ ಸ್ಪಷ್ಟವಾಗಿ ಗೋಚರಿಸುತ್ತಿದ್ದುವು. ಅದು, ಮಹಾ ದಾಸನು ತನ್ನ ದಾಸ್ಯ ಭಾವನೆಯ ಪೂರ್ಣ ಪರಿಜ್ಞಾನದೊಂದಿಗೆ ಅಡಿಯಿಂದ ಮುಡಿ ತನಕ ಬೇಡಿಕೆಯಾಗಿ ಸದಾ ತಮ್ಮ ಪ್ರಭುವಿನ ಮುಂದೆ ಯಾಚಿಸುತ್ತಿರುವುದಾಗಿ ಕಾಣಿಸುತ್ತದೆ. ಅವರ ಲವಲವಿಕೆ ಮತ್ತು ಭಕ್ತಿ ಬೆಳೆಯುತ್ತಲೇ ಹೋಗುತ್ತಿತ್ತು. ಅವರು ಬೇಡುವುದರ ತಿರುಳು ದೇವಸಾಮೀಪ್ಯ ಮತ್ತು ಆತನ ಸಂಪ್ರೀತಿಯಾಗಿತ್ತು. ಆತನ ಕ್ರೋಧದಿಂದ ರಕ್ಷಣೆ ಮತ್ತು ಪರಲೋಕ ವಿಜಯದ ಪ್ರಾಪ್ತಿಯಾಗಿತ್ತು.

## ಬೆಳಗು ಬೈಗುಗಳ ಪ್ರಾರ್ಥನೆಗಳು:

ಪ್ರವಾದಿ(ಸ) ಹೇಳಿರುವುದಾಗಿ ಹ. ಉಸ್ಮಾನ್ ಬಿನ್ ಅಫ್ಫಾನ್(ರ) ಹೇಳುತ್ತಾರೆ:

ಯಾವನು ಪ್ರತಿ ಬೆಳಗು ಬೈಗುಗಳಲ್ಲಿ ಈ ದುಆ ಪಠಿಸುವನೋ ಅವನಿಗೆ ಯಾವ ವಸ್ತುವೂ ಯಾವುದೇ ರೀತಿಯ ನಷ್ಟ ಉಂಟು ಮಾಡಲಾರದು.

بِسْمِ اللّٰهِ الَّذِىْ لَا يَضُرُّ مَعَ اسْمِهٖ شَىْءٌ فِى الْاَرْضِ وَلَا فِى السَّمَآءِ

وَهُوَ السَّمِيْعُ الْعَلِيْمُ (مسند احمد)

"ಬಿಸ್ಮಿಲ್ಲಾಹಿಲ್ಲದೀ ಲಾ ಯದುರ್ರು ಮಅಸ್‌ಮಿಹೀ ಶೈಉನ್ ಫಿಲ್‌ಅರ್‌ದಿ ವಲಾ ಫಿಸ್ಸಮಾಇ ವಹುವಸ್ಸಮೀಉಲ್ ಅಲೀಮ್."

(ಅಲ್ಲಾಹನ ನಾಮದಿಂದ ಪ್ರತಿಯೊಂದು ಕಾರ್ಯದ ಆರಂಭವಿದೆ. ಅವನ ನಾಮದೊಂದಿಗೆ ಭೂಮಿ-ಆಕಾಶಗಳ ಯಾವುದೇ ವಸ್ತು ನಷ್ಟ ಉಂಟು ಮಾಡಲಾರದು. ಅವನು ಸರ್ವಶ್ರುತನೂ, ಸರ್ವಜ್ಞನೂ ಆಗಿರುವನು.) (ಮುಸ್ನದ್ ಅಹ್ಮದ್)

ಹ. ಅಬ್ದುಲ್ಲಾ ಬಿನ್ ಉಮರ್(ರ) ಹೇಳುತ್ತಾರೆ: ಪ್ರವಾದಿ(ಸ) ಸಂಜೆ, ಮುಂಜಾನೆಗಳಲ್ಲಿ ಈ ದುಆವನ್ನು ತಪ್ಪದೆ ಪಠಿಸುತ್ತಿದ್ದರು:

اَللّٰهُمَّ اِنِّىٓ اَسْئَلُكَ الْعَافِيَةَ فِى الدُّنْيَا وَالْاٰخِرَةِ اَللّٰهُمَّ اِنِّىٓ اَسْئَلُكَ الْعَفْوَ وَالْعَافِيَةَ فِىْ دِيْنِىْ وَدُنْيَاىَ وَاَهْلِىْ وَمَالِىْ اَللّٰهُمَّ اسْتُرْ عَوْرَاتِىْ وَاٰمِنْ رَوْعَاتِىْ اَللّٰهُمَّ احْفَظْنِىْ مِنْ بَيْنِ يَدَىَّ وَمِنْ خَلْفِىْ وَعَنْ يَّمِيْنِىْ وَعَنْ شِمَالِىْ وَمِنْ فَوْقِىْ، وَاَعُوْذُ بِعَظْمَتِكَ اَنْ اُغْتَالَ مِنْ تَحْتِىْ

(ترمذی)

"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕಲ್ ಆಫಿಯತ ಫಿದ್ದುನ್‌ಯಾ ವಲ್‌ಆಖಿರತಿ ಅಲ್ಲಾಹುಮ್ಮ ಇನ್ನೀ ಅಸ್‌ಅಲುಕಲ್ ಅಫ್‌ವ ವಲ್ ಆಫಿಯತ ಫೀದೀನೀ ವದುನ್ಯಾಯ ವ ಅಹ್‌ಲೀ ವಮಾಲೀ ಅಲ್ಲಾಹುಮ್ಮಸ್‌ತುರ್ ಔರಾತೀ ವ ಆಮಿನ್ ರೌಆತೀ ಅಲ್ಲಾಹುಮ್ಮಹ್‌ಫಝ್‌ನೀ ಮಿನ್ ಬೈನಿ ಯದಯ್ಯ ವಮಿನ್ ಖಲ್‌ಫೀ ವಅನ್ ಯಮೀನೀ ವ ಅನ್‌ಶಿಮಾಲೀ ವ ಮಿನ್ ಫೌಕೀ ಅಊದು ಬಿಅಝ್‌ಮತಿಕ ಅನ್ ಉಗ್‌ತಾಲ ಮಿನ್ ತಹ್‌ತೀ".

(ಓ ಅಲ್ಲಾಹ್! ನಾನು ನಿನ್ನಿಂದ ಇಹಪರಗಳ ಕ್ಷೇಮವನ್ನು ಬಯಸುತ್ತೇನೆ. ಓ ಅಲ್ಲಾಹ್! ನಾನು ಇಹಪರಗಳ ವ್ಯವಹಾರಗಳಲ್ಲಿ, ನನ್ನ ಕುಟುಂಬ ಮತ್ತು ಸೊತ್ತು ಸಂಪತ್ತಿನ ಬಗ್ಗೆ ನಿನ್ನಿಂದ ಕ್ಷಮೆ, ರಕ್ಷಣೆ ಮತ್ತು ಕ್ಷೇಮವನ್ನು ಬಯಸುತ್ತೇನೆ. ಓ ಅಲ್ಲಾಹ್! ನನ್ನ ಕೆಡುಕುಗಳನ್ನು ಮರೆಸು. ನನ್ನ ಬೇಗುದಿಗಳನ್ನು ನೆಮ್ಮದಿಯಾಗಿ ಮಾರ್ಪಡಿಸು. ಓ ಅಲ್ಲಾಹ್! ಹಿಂದೆ-ಮುಂದೆ, ಎಡ-ಬಲ ಮತ್ತು ಮೇಲಿನಿಂದ ನನ್ನನ್ನು ರಕ್ಷಿಸು. ನನಗರಿವಿಲ್ಲದಂತೆಯೇ ಭೂಮಿಯ ತಳದಿಂದ ನಾಶ ಮಾಡಲ್ಪಡುವುದರಿಂದ ನಾನು ನಿನ್ನ ಮಹಾನತೆಯ ಅಭಯ ಕೋರುತ್ತೇನೆ. [ಅರ್ಥಾತ್ ನನ್ನನ್ನು ಭೂ ಕುಸಿತದಿಂದ ರಕ್ಷಿಸು.]) (ತಿರ್ಮಿದಿ)

**ಮೈಗಳ್ಳತನ ಮತ್ತು ಹೇಡಿತನದಿಂದ ರಕ್ಷಣೆಯ ಪ್ರಾರ್ಥನೆ:**

ಹ. ಅನಸ್ ಬಿನ್ ಮಾಲಿಕ್(ರ) ಹೇಳುತ್ತಾರೆ: ನಾನು ಪ್ರವಾದಿವರ್ಯರ(ಸ) ಸನ್ನಿಧಿಯಲ್ಲಿರುತ್ತಿದ್ದೆ. ಅವರು ಈ ಕೆಳಗಿನ ದುಆವನ್ನು ಅತ್ಯಧಿಕ ಪಠಿಸುತ್ತಿದ್ದರು:

اَللّٰهُمَّ اِنِّیْ اَعُوْذُبِكَ مِنَ الْهَمِّ وَالْحُزْنِ وَالْعَجْزِ وَالْكَسْلِ، وَالْبُخْلِ

وَالْجُبْنِ وَضَلْعِ الدَّيْنِ وَغَلَبَةِ الرِّجَالِ (بخاری، مسلم)

"ಅಲ್ಲಾಹುಮ್ಮ ಇನ್ನೀ ಅಊದುಬಿಕ ಮಿನಲ್ ಹಮ್ಮಿ ವಲ್ ಹುಝ್ನಿ ವಲ್ ಅಜ್ಝಿ ವಲ್ ಕಸ್ಲಿ, ವಲ್‌ಬುಖ್‌ಲಿ ವಲ್‌ಜುಬ್ನಿ ವದಲ್‌ಇದ್ದೈನಿ ವಗಲಬತಿರ್ರಿಜಾಲಿ".

(ಓ ಅಲ್ಲಾಹ್! ನಾನು ದುಃಖ ದುಮ್ಮಾನದಿಂದ, ಅಸಹಾಯಕತೆ ಮತ್ತು ಮೈಗಳ್ಳತನದಿಂದ, ಲೋಭ ಮತ್ತು ಹೇಡಿತನದಿಂದ, ಸಾಲದ ಹೊರೆ ಮತ್ತು ಜನರ ದೌರ್ಜನ್ಯದಿಂದ ನಿನ್ನ ಅಭಯ ಕೋರುತ್ತೇನೆ.) (ಬುಖಾರಿ, ಮುಸ್ಲಿಮ್)

**ತಕ್ವಾ ಮತ್ತು ಸುಶೀಲತೆಯ ಪ್ರಾರ್ಥನೆ:**

اَللّٰهُمَّ اِنِّی اَسْئَلُكَ الْهُدٰی وَالتُّقٰی وَالْعَفَافَ وَالْغِنٰی

"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕಲ್ ಹುದಾ, ವತ್ತುಕಾ, ವಲ್ ಅಫಾಫ, ವಲ್‌ಗಿನಾ".

(ಓ ಅಲ್ಲಾಹ್! ನಾನು ನಿನ್ನಿಂದ ಸನ್ಮಾರ್ಗದರ್ಶನ, ಧರ್ಮನಿಷ್ಠೆ, ಪರಿಶುದ್ಧತೆ ಮತ್ತು ನಿರಪೇಕ್ಷತೆಯನ್ನು ಬಯಸುತ್ತೇನೆ.)

ಇದು ಅತ್ಯಂತ ಸಾರವತ್ತಾದ ಪ್ರಾರ್ಥನೆ. ಈ ನಾಲ್ಕು ಪದಗಳಲ್ಲಿ ಸತ್ಯವಿಶ್ವಾಸಿಯೋರ್ವನು ಬಯಸುವುದೆಲ್ಲವನ್ನೂ ಪ್ರವಾದಿವರ್ಯರು(ಸ) ಕ್ರೋಢೀಕರಿಸಿರುವರು.

**ಇಹಪರಗಳ ನಿಂದ್ಯತೆಯಿಂದ ರಕ್ಷಣೆಯ ಪ್ರಾರ್ಥನೆ:**

اَللّٰهُمَّ اَحْسِنْ عَاقِبَتَنَا فِی الْاُمُوْرِ كُلِّهَا وَاَجِرْنَا مِنْ خِزْیِ الدُّنْیَا

وَعَذَابِ الْاٰخِرَةِ (طبرانی)

"ಅಲ್ಲಾಹುಮ್ಮ ಅಹ್ಸಿನ್ ಆಕಿಬತನಾ ಫಿಲ್ ಉಮೂರಿ ಕುಲ್ಲಿಹಾ ವಅಜಿರ್‌ನಾ ಮಿನ್ ಖಿಝ್ಯಿದ್ದುನ್ಯಾ ವ ಅದಾಬಿಲ್ ಆಖಿರಃ".

(ಓ ಅಲ್ಲಾಹ್! ಎಲ್ಲ ಕಾರ್ಯಗಳಲ್ಲಿ ನಮ್ಮ ಫಲಿತಾಂಶ ಉತ್ತಮಗೊಳಿಸು. ನಮ್ಮನ್ನು ಲೋಕದ ನಿಕೃಷ್ಟತೆ ಮತ್ತು ಪರಲೋಕದ ಶಿಕ್ಷೆಯಿಂದ ರಕ್ಷಿಸು.) (ತಬ್ರಾನಿ)

## ನಮಾಝ್‌ನ ಬಳಿಕದ ಪ್ರಾರ್ಥನೆ:

ಹ. ಮುಆದ್(ರ) ಹೇಳುತ್ತಾರೆ: ಒಂದು ದಿನ ಪ್ರವಾದಿ(ಸ) ನನ್ನ ಕೈ ಹಿಡಿದು ಹೀಗೆ ಹೇಳಿದರು:

ಓ ಮುಆದ್! ನಾನು ನಿಮ್ಮನ್ನು ಪ್ರೀತಿಸುತ್ತೇನೆ. ಓ ಮುಆದ್! ಯಾವ ನಮಾಝ್‌ನ ಬಳಿಕವೂ ಈ ದುಆವನ್ನು ಪಠಿಸದಿರಬಾರದೆಂದು ನಾನು ನಿಮಗೆ ಉಪದೇಶಿಸುತ್ತೇನೆ. ಎಲ್ಲ ನಮಾಝ್‌ನ ಬಳಿಕವೂ ಇದನ್ನು ತಪ್ಪದೆ ಪಠಿಸಬೇಕು.

اَللّٰهُمَّ اَعِنِّىْ عَلٰى ذِكْرِكَ وَشُكْرِكَ وَحُسْنِ عِبَادَتِكَ

"ಅಲ್ಲಾಹುಮ್ಮ ಅಇನ್ನೀ ಅಲಾ ದಿಕ್ರಿಕ ವಶುಕ್ರಿಕ ವಹುಸ್ನಿ ಇಬಾದತಿಕ".

(ಓ ಅಲ್ಲಾಹ್! ನಿನ್ನ ಸ್ಮರಣೆ, ಕೃತಜ್ಞತೆ ಮತ್ತು ಉತ್ತಮ ದಾಸ್ಯಾರಾಧನೆಗೆ ನನಗೆ ನೀನು ನೆರವಾಗು.)

## ಪ್ರವಾದಿವರ್ಯರ(ಸ) ಉಪದೇಶ:

ಹ. ಶದ್ದಾದ್ ಬಿನ್ ಔಸ್(ರ) ಹೇಳುತ್ತಾರೆ: ನನಗೆ ಪ್ರವಾದಿ(ಸ) ಈ ರೀತಿ ಉಪದೇಶಿಸಿದರು: ಶದ್ದಾದ್! ಜನರು ಧನ ಕನಕಗಳನ್ನು ಶೇಖರಿಸುತ್ತಿರುವುದನ್ನು ಕಂಡಾಗ ನೀವು ಈ ವಾಕ್ಯಗಳನ್ನು ಶೇಖರಿಸಿರಿ:

اَللّٰهُمَّ اِنِّىْ اَسْئَلُكَ الثَّبَاتَ فِى الْاَمْرِ وَالْعَزِيْمَةِ عَلَى الرُّشْدِ وَاَسْأَلُكَ
شُكْرَ نِعْمَتِكَ وَحُسْنَ عِبَادَتِكَ وَاَسْأَلُكَ قَلْبًا سَلِيْمًا وَلِسَانًا صَادِقًا
وَاَسْأَلُكَ مِنْ خَيْرِ مَا تَعْلَمُ وَاَعُوْذُبِكَ مِنْ شَرِّ مَا تَعْلَمُ وَاَسْتَغْفِرُكَ لِمَا
تَعْلَمُ اِنَّكَ اَنْتَ عَلَّامُ الْغُيُوب

"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕಸ್ಸಬಾತ ಫಿಲ್ ಅಮ್ರಿ ವಲ್ ಅಝೀಮತಿ ಅಲರ್‍ರುಶ್ದಿ ವಅಸ್‌ಅಲುಕ ಶುಕ್ರ ನಿಅ್‌ಮತಿಕ ವಹುಸ್ನ ಇಬಾದತಿಕ ವ ಅಸ್‌ಅಲುಕ ಕಲ್ಬನ್ ಸಲೀಮನ್ ವ ಲಿಸಾನನ್ ಸಾದಿಕನ್ ವಅಸ್‌ಅಲುಕ ಮಿನ್‌ಖೈರಿ ಮಾ ತಅ್‌ಲಮು ವಅಊದುಬಿಕ

ಮಿನ್‌ಶರ್ರಿ ಮಾತಅ್‌ಲಮು ವ ಅಸ್‌ತಗ್‌ಫಿರುಕ ಲಿಮಾ ತಅ್‌ಲಮು ಇನ್ನಕ ಅಂತ ಅಲ್ಲಾಮುಲ್ ಗುಯೂಬ್".

(ಓ ಅಲ್ಲಾಹ್! ನಾನು ದೃಢಚಿತ್ತತೆ ಮತ್ತು ಸತ್ಯಸಂಧತೆಯಲ್ಲಿ ದೃಢತೆಯನ್ನು ಬಯಸುತ್ತೇನೆ. ನಿನ್ನ ಅನುಗ್ರಹಗಳ ಕೃತಜ್ಞತೆ ಅರ್ಪಿಸಲು ಮತ್ತು ನಿನ್ನ ಅತ್ಯುತ್ತಮ ದಾಸ್ಯಾರಾಧನೆಗೈಯಲು ಸೌಭಾಗ್ಯವನ್ನು ಬಯಸುತ್ತೇನೆ. ಓ ಅಲ್ಲಾಹ್! ನಾನು ನಿನ್ನಿಂದ ಉತ್ತಮ ಹೃದಯ ಮತ್ತು ಸತ್ಯಸಂಧ ನಾಲಗೆಯನ್ನು ಬಯಸುತ್ತೇನೆ ಮತ್ತು ನಿನ್ನಿಂದ ನಿನ್ನ ತಿಳುವಳಿಕೆಯಲ್ಲಿರುವ ಎಲ್ಲ ಒಳಿತುಗಳನ್ನೂ ಬಯಸುತ್ತೇನೆ. ನಿನ್ನ ತಿಳುವಳಿಕೆಯಲ್ಲಿರುವ ಎಲ್ಲ ಕೆಡುಕುಗಳಿಂದಲೂ ನಿನ್ನ ಅಭಯ ಕೋರುತ್ತೇನೆ ಮತ್ತು ನಿನ್ನ ತಿಳುವಳಿಕೆಯಲ್ಲಿರುವ ಎಲ್ಲ ಪಾಪಗಳಿಗೂ ಕ್ಷಮೆಯನ್ನು ಯಾಚಿಸುತ್ತೇನೆ. ಖಂಡಿತವಾಗಿಯೂ ನೀನು ರಹಸ್ಯ ಜ್ಞಾನಿಯಾಗಿರುವಿ! (ಮುಸ್ನದ್ ಅಹ್ಮದ್)

## ಕ್ಷಮೆ ಮತ್ತು ದೇವಸಂಪ್ರೀತಿಯ ಪ್ರಾರ್ಥನೆ:

ಹ. ಅಬೂ ಹುರೈರಾ(ರ) ಹೇಳುತ್ತಾರೆ: ಪ್ರವಾದಿ(ಸ) ಹ. ಸಲ್ಮಾನ್ ಫಾರ್ಸಿಯವರಿಗೆ ಉಪದೇಶಿಸುತ್ತಾ ಹೇಳಿದರು:

ನಾನು ನಿಮಗೆ ಕೆಲವು ಪದಗಳನ್ನು ಹೇಳಿಕೊಡುತ್ತೇನೆ. ಅವುಗಳ ಮೂಲಕ ನೀವು ಪರಮ ದಯಾಮಯನಿಂದ ಬೇಡಿರಿ. ಆತನತ್ತ ವಾಲಿರಿ. ದಿನ ರಾತ್ರಿ ಇದೇ ಪದಗಳ ಮೂಲಕ ಅಲ್ಲಾಹನಲ್ಲಿ ಪ್ರಾರ್ಥಿಸಿರಿ:

اَللّٰهُمَّ اِنِّیْ اَسْأَلُكَ صِحَّةً فِی اِیْمَانٍ وَاِیْمَانًا فِی حُسْنِ خُلْقٍ وَنَجَاحًا يَتْبَعُهُ فَلَاحٌ وَرَحْمَةً مِّنْكَ وَعَافِيَةً وَمَغْفِرَةً مِّنْكَ وَرِضْوَانًا

(طبرانی، حاکم)

"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಸಿಹ್ಹತನ್ ಫೀ ಈಮಾನಿನ್ ವ ಈಮಾನನ್ ಫೀ ಹುಸ್ನಿ ಖುಲುಕಿನ್ ವನಜಾಹನ್ ಯತ್‌ಬಉಹು ಫಲಾಹುನ್ ವರಹ್ಮತನ್ ಮಿಂಕ ವ ಆಫಿಯತನ್ ವಮುಗ್‌ಫಿರತನ್ ಮಿಂಕ ವರಿದ್‌ವಾನನ್".

(ಓ ಅಲ್ಲಾಹ್! ನಾನು ನಿನ್ನಿಂದ ಆರೋಗ್ಯಕರ ಸತ್ಯವಿಶ್ವಾಸವನ್ನು ಬಯಸುತ್ತೇನೆ. ಸಚ್ಚಾರಿತ್ರ್ಯದಲ್ಲಿ ಸತ್ಯವಿಶ್ವಾಸದ ಪ್ರಭಾವವನ್ನು ಬಯಸುತ್ತೇನೆ. ಪರಲೋಕದ ಯಶಸ್ಸು ಸಿಗುವಂತಹ ವಿಜಯವನ್ನು ನಾನು ನಿನ್ನಿಂದ ಬಯಸುತ್ತೇನೆ. ನಿನ್ನಿಂದ ಕರುಣೆ, ರಕ್ಷಣೆ, ಪಾಪಗಳಿಗೆ ಕ್ಷಮೆ ಮತ್ತು ಸಂಪ್ರೀತಿಯನ್ನು ಬಯಸುತ್ತೇನೆ.) (ತಬ್ರಾನಿ, ಹಾಕಿಮ್)

## ಪಾಪಗಳಿಂದ ಮುಕ್ತವಾಗುವ ಪ್ರಾರ್ಥನೆ:

ಹ. ಉಮ್ಮುಸಲ್ಮಾ(ರ) ಹೇಳುತ್ತಾರೆ: ಪ್ರವಾದಿ(ಸ) ಈ ರೀತಿ ಪ್ರಾರ್ಥಿಸುತ್ತಿದ್ದರು:

اَللّٰهُمَّ نَقِّ قَلْبِىْ مِنَ الْخَطَايَا كَمَا نَقَّيْتَ الثَّوْبَ الْاَبْيَضَ مِنَ الدَّنَسِ

اَللّٰهُمَّ بَعِّدْ بَيْنِىْ وَبَيْنَ خَطِيْئَتِىْ كَمَا بَعَدْتَّ بَيْنَ الْمَشْرِقِ وَالْمَغْرِبِ

(معجم كبير)

"ಅಲ್ಲಾಹುಮ್ಮ ನಕ್ಕೀ ಕಲ್ಬೀ ಮಿನಲ್ ಖತಾಯಾ ಕಮಾ ನಕ್ಕೈತಸ್ಸೌಬಲ್ ಅಬ್‌ಯದ ಮಿನದ್ದನಸಿ ಅಲ್ಲಾಹುಮ್ಮ ಬಯ್ಯಿದ್ ಬೈನೀ ವಬೈನ ಖತೀಅತೀ ಕಮಾ ಬಅತ್ತ ಬೈನಲ್ ಮಶ್ರಿಕಿ ವಲ್ ಮಗ್ರಿಬಿ".

(ಓ ಅಲ್ಲಾಹ್! ಬಿಳಿ ಬಟ್ಟೆಯನ್ನು ಕೊಳೆಗಳಿಂದ ಶುದ್ಧಗೊಳಿಸುವಂತೆ ನನ್ನ ಹೃದಯವನ್ನು ಅಪರಾಧಗಳ ಕೊಳೆಯಿಂದ ಶುದ್ಧಗೊಳಿಸು. ಓ ಅಲ್ಲಾಹ್! ನೀನು ಪೂರ್ವ-ಪಶ್ಚಿಮಗಳ ಮಧ್ಯೆ ಇಟ್ಟಿರುವಷ್ಟು ದೂರವನ್ನು ನನ್ನ ಮತ್ತು ನನ್ನ ಪಾಪಗಳ ಮಧ್ಯೆ ಇಡು.)

(ಮುಅ್‌ಜಮ್ ಕಬೀರ್)

## ಜನರ ಮಧ್ಯೆ ಪ್ರತಾಪದ ಪ್ರಾರ್ಥನೆ:

اَللّٰهُمَّ اجْعَلْنِىْ صَبُوْرًا وَّاجْعَلْنِىْ شَكُوْرًا وَّاجْعَلْنِىْ فِىْ عَيْنِىْ صَغِيْرًا

وَفِىْ اَعْيُنِ النَّاسِ كَبِيْرًا

"ಅಲ್ಲಾಹುಮ್ಮಜ್ ಅಲ್‌ನೀ ಸುಬೂರನ್ ವಜ್‌ಅಲ್‌ನೀ ಶಕೂರನ್ ವಜ್‌ಅಲ್‌ನೀ ಫೀ ಐನೀ ಸಗೀರನ್ ವಫೀ ಅಅ್‌ಯುನಿನ್ನಾಸಿ ಕಬೀರಾ".

(ಓ ಅಲ್ಲಾಹ್! ನನ್ನನ್ನು ನೀನು ಅತ್ಯಂತ ಸಹನಶೀಲನಾಗಿ ಮಾಡು ಮತ್ತು ಅತ್ಯಂತ ಕೃತಜ್ಞನಾಗಿ ಮಾಡು. ನನ್ನ ದೃಷ್ಟಿಯಲ್ಲಿ ನನ್ನನ್ನು ಸಣ್ಣವನಾಗಿಯೂ ಜನರ ದೃಷ್ಟಿಯಲ್ಲಿ ದೊಡ್ಡವನಾಗಿಯೂ ಮಾಡು.)

## ಸಾರವತ್ತಾದ ಪ್ರಾರ್ಥನೆ:

ಹ. ಆಯಿಶಾ(ರ) ಹೇಳುತ್ತಾರೆ: ಒಮ್ಮೆ ಪ್ರವಾದಿ(ಸ) ನನ್ನ ಬಳಿಗೆ ಬಂದರು. ನಾನಾಗ ನಮಾಝ್ ಮಾಡುತ್ತಿದ್ದೆ. ಪ್ರವಾದಿವರ್ಯರಿಗೆ(ಸ) ನನ್ನಲ್ಲಿ ಏನೋ ಕೆಲಸವಿತ್ತು. ನನಗೆ ನಮಾಝ್‌ನಲ್ಲಿ ತಡವಾಯಿತು. ಆಗ ಪ್ರವಾದಿ(ಸ) ಹೇಳಿದರು, ಸಂಕ್ಷಿಪ್ತ ಮತ್ತು ಸಾರವತ್ತಾದ

ಪ್ರಾರ್ಥನೆಗಳನ್ನು ಹೇಳಬೇಕು. ನಾನು ಪ್ರವಾದಿವರ್ಯರ(ಸ) ಬಳಿಗೆ ಬಂದಾಗ, ಓ ದೇವ ಸಂದೇಶವಾಹಕರೇ! ಸಂಕ್ಷಿಪ್ತ ಮತ್ತು ಸಾರವತ್ತಾದ ಪ್ರಾರ್ಥನೆ ಯಾವುದು? ಎಂದು ಕೇಳಿದೆ. ಆಗ ಪ್ರವಾದಿ(ಸ) ಹೇಳಿದರು:

اَللّٰهُمَّ اِنِّىٓ اَسْئَلُكَ مِنَ الْخَيْرِ كُلِّهِ عَاجِلِهِ وَاٰجِلِهِ مَا عَلِمْتُ مِنْهُ وَمَا لَمْ اَعْلَمْ وَاَعُوْذُبِكَ مِنَ الشَّرِّ كُلِّهِ عَاجِلِهِ وَاٰجِلِهِ مَا عَلِمْتُ مِنْهُ وَمَا لَمْ اَعْلَمْ وَاَسْئَلُكَ الْجَنَّةَ وَمَا قَرَّبَ اِلَيْهَا مِنْ قَوْلٍ اَوْ عَمَلٍ وَاَعُوْذُبِكَ مِنَ النَّارِ وَمَا قَرَّبَ اِلَيْهَا مِنْ قَوْلٍ اَوْ عَمَلٍ وَاَسْئَلُكَ مِمَّا سَاَلَكَ بِهِ مُحَمَّدٌ وَاَعُوْذُبِكَ مِمَّا تَعَوَّذَ مِنْهُ مُحَمَّدٌ وَمَا قَضَيْتَ لِىْ مِنْ قَضَآءٍ فَاجْعَلْ عَاقِبَتَهُ رَشَدًا

(حاكم)

"ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಮಿನಲ್‌ಖೈರಿ ಕುಲ್ಲಿಹೀ ಆಜಿಲಿಹೀ ವಆಜಿಲಿಹೀ ಮಾ ಅಲಿಮ್ತು ಮಿನ್‌ಹು ವಮಾಲಮ್ ಅಅ್‌ಲಮು ವಅಊದುಬಿಕ ಮಿನಶ್ಶರ್ರಿ ಕುಲ್ಲಿಹೀ ಆಜಿಲಿಹೀ ವ ಆಜಿಲಿಹೀ ಮಾ ಅಲಿಮ್ತು ಮಿನ್‌ಹು ವಮಾಲಮ್ ಅಅ್‌ಲಮ್ ವ ಅಸ್‌ಅಲುಕಲ್ ಜನ್ನತ ವಮಾಕರ್‍ರಬ ಇಲೈಹಾ ಮಿನ್ ಕೌಲಿನ್ ಔ ಅಮಲಿನ್ ವ ಅಊದುಬಿಕ ಮಿನನ್ನಾರಿ ವಮಾ ಕರ್‍ರಬ ಇಲೈಹಾ ಮಿನ್ ಕೌಲಿನ್ ಔಅಮಲಿನ್ ವ ಅಸ್‌ಅಲುಕ ಮಿಮ್ಮಾ ಸಅಲಕ ಬಿಹೀ ಮುಹಮ್ಮದುನ್ ವ ಅಊದುಬಿಕ ಮಿಮ್ಮಾ ತಅವ್ವದ ಮಿನ್‌ಹು ಮುಹಮ್ಮದುನ್ ವಮಾಕದೈತ ಲೀ ಮಿನ್ ಕದಾಇನ್ ಫಜ್‌ಅಲ್ ಆಕಿಬತಹೂ ರಶದಾ".

(ಓ ಅಲ್ಲಾಹ್! ನಾನು ನಿನ್ನಿಂದ ಶೀಘ್ರ ಬರುವಂತಹ ತಡವಾಗಿ ಬರುವಂತಹ, ನಾನು ತಿಳಿದಂತಹ ಮತ್ತು ತಿಳಿಯದಂತಹ ಎಲ್ಲ ಒಳಿತನ್ನೂ ಯಾಚಿಸುತ್ತೇನೆ. ನಾನು ಶೀಘ್ರ ಬರುವಂತಹ, ತಡವಾಗಿ ಬರುವಂತಹ ನಾನು ತಿಳಿದಂತಹ ಮತ್ತು ತಿಳಿಯದಂತಹ ಎಲ್ಲ ಕೆಡುಕುಗಳಿಂದ ನಿನ್ನ ಅಭಯ ಯಾಚಿಸುತ್ತೇನೆ. ನಾನು ನಿನ್ನಿಂದ ಸ್ವರ್ಗವನ್ನು ಬೇಡುತ್ತೇನೆ. ನನ್ನನ್ನು ಸ್ವರ್ಗಕ್ಕೆ ಸಮೀಪಗೊಳಿಸುವ ಎಲ್ಲ ನಡೆನುಡಿಗಳನ್ನು ಯಾಚಿಸುತ್ತೇನೆ. ನಾನು ನರಕದಿಂದ ನಿನ್ನ ಅಭಯ ಕೋರುತ್ತೇನೆ. ನರಕಕ್ಕೆ ನಿಕಟಗೊಳಿಸುವ ಎಲ್ಲ ನಡೆ ನುಡಿ ಗಳಿಂದಲೂ ನಿನ್ನ ಅಭಯ ಯಾಚಿಸುತ್ತೇನೆ. ನಾನು ನಿನ್ನಿಂದ ಪ್ರವಾದಿ ಮುಹಮ್ಮದ್(ಸ) ಕೋರಿದ್ದ ಎಲ್ಲ ಒಳಿತುಗಳನ್ನು ಕೋರುತ್ತೇನೆ ಮತ್ತು ನಿನ್ನಿಂದ ಪ್ರವಾದಿ ಮುಹಮ್ಮದ್(ಸ)

ಅಭಯ ಕೋರಿದ್ದ ಎಲ್ಲ ಕೆಡುಕುಗಳಿಂದಲೂ ಅಭಯ ಕೋರುತ್ತೇನೆ. ನೀನು ನನ್ನ ಬಗ್ಗೆ ಮಾಡುವ ಎಲ್ಲ ನಿರ್ಧಾರಗಳ ಪರಿಣಾಮ ಉತ್ತಮಗೊಳಿಸಬೇಕೆಂದು ಬಯಸುತ್ತೇನೆ.)

(ಹಾಕಿಮ್)

## ಇಸ್ಲಾಮಿನಲ್ಲಿ ಸ್ಥಿರತೆಗೆ ಪ್ರಾರ್ಥನೆ:

اَللّٰهُمَّ احْفَظْنِىْ بِالْإِسْلَامِ قَآئِمًا وَاحْفَظْنِىْ بِالْإِسْلَامِ قَاعِدًا وَّاحْفَظْنِىْ بِالْإِسْلَامِ رَاقِدًا وَّلَا تُشْمِتْ بِىْ عَدُوًّا حَاسِدًا

"ಅಲ್ಲಾಹುಮ್ಮಹ್‌ಫಝ್‌ನೀ ಬಿಲ್ ಇಸ್ಲಾಮಿ ಕಾಯಿಮನ್ ವಹ್‌ಫಝ್‌ನೀ ಬಿಲ್ ಇಸ್ಲಾಮಿ ಕಾಇದನ್ ವಹ್‌ಫಝ್‌ನೀ ಬಿಲ್ ಇಸ್ಲಾಮಿ ರಾಕಿದನ್ ವಲಾತುಷ್ಮಿತ್ ಬೀ ಅದುವ್ವನ್ ಹಾಸಿದಾ".

(ಓ ಅಲ್ಲಾಹ್! ನನ್ನನ್ನು ನಿಂತೂ ಕುಳಿತೂ ಒರಗಿಯೂ (ಎಲ್ಲ ಅವಸ್ಥೆಗಳಲ್ಲೂ) ಇಸ್ಲಾಮಿನಲ್ಲಿ ಸ್ಥಿರಗೊಳಿಸು. ಯಾವನೇ ವೈರಿ ಅಥವಾ ಮತ್ಸರಿಗೆ ನನ್ನನ್ನು ನಗೆಪಾಟಲಿಗೀಡು ಮಾಡದಿರು.)

## ನವ ಮುಸ್ಲಿಮನ ಪ್ರಾರ್ಥನೆ:

ಹ. ಅಬೂ ಮಾಲಿಕ್ ಅಶ್‌ಜಈ(ರ) ಹೇಳುತ್ತಾರೆ, ನನ್ನ ತಂದೆಯವರು ಹೇಳುತ್ತಿದ್ದರು, ಯಾವನಾದರೂ ಇಸ್ಲಾಮಿನಲ್ಲಿ ಪ್ರವೇಶಿಸಿದರೆ ಪ್ರವಾದಿ(ಸ) ಅವನಿಗೆ ನಮಾಝ್ ಕಲಿಸಿ ಕೊಡುತ್ತಿದ್ದರು. ಆ ಬಳಿಕ ಈ ರೀತಿ ಪ್ರಾರ್ಥಿಸಬೇಕೆಂದು ಕಲಿಸುತ್ತಿದ್ದರು.

اَللّٰهُمَّ اغْفِرْلِىْ، وَارْحَمْنِىْ وَاهْدِنِىْ وَعَافِنِىْ وَارْزُقْنِىْ

"ಅಲ್ಲಾಹುಮ್ಮಗ್‌ಫಿರ್‌ಲೀ ವರ್‌ಹಮ್‌ನೀ ವಹ್‌ದಿನೀ ವ ಆಫಿನೀ ವರ್‌ಝುಕ್‌ನೀ".

(ಓ ಅಲ್ಲಾಹ್! ನನ್ನನ್ನು ಕ್ಷಮಿಸು; ನನ್ನ ಮೇಲೆ ದಯೆ ತೋರು; ನನಗೆ ಸನ್ಮಾರ್ಗ ದರ್ಶನ ಮಾಡು; ನನಗೆ ಕ್ಷೇಮ ನೀಡು ಮತ್ತು ನನಗೆ ಆಹಾರ ಒದಗಿಸು.)

## ಕಾಪಟ್ಯ ಮತ್ತು ದುರ್ನಡತೆಯಿಂದ ರಕ್ಷಣೆಯ ಪ್ರಾರ್ಥನೆ:

اَللّٰهُمَّ اِنِّىْ اَعُوْذُبِكَ مِنْ مُنْكَرَاتِ الْاَخْلَاقِ وَالْاَعْمَالِ وَالْاَهْوَآءِ اَللّٰهُمَّ اِنِّىْ اَعُوْذُبِكَ مِنَ الشِّقَاقِ وَالنِّفَاقِ وَسُوْءِ الْاَخْلَاقِ

"ಅಲ್ಲಾಹುಮ್ಮ ಇನ್ನೀ ಅಊದುಬಿಕ ಮಿನ್ ಮುಂಕರಾತಿಲ್ ಅಖ್‌ಲಾಕಿ

ವಲ್‌ಅಲ್‌ಮಾಲಿ ವಲ್ ಅಹ್‌ವಾಇ. ಅಲ್ಲಾಹುಮ್ಮ ಇನ್ನೀ ಅಊದುಬಿಕ ಮಿನಶ್ಶಿಕಾಕಿ ವನ್ನಿಫಾಕಿ ವಸೂಇಲ್ ಅಕ್‌ಲಾಕಿ".

(ಓ ಅಲ್ಲಾಹ್! ನಾನು ದುರ್ನಡತೆ, ದುರಾಚಾರ ಮತ್ತು ದೇಹೇಚ್ಛೆಗಳಿಂದ ನಿನ್ನ ಅಭಯ ಕೋರುತ್ತೇನೆ. ಓ ಅಲ್ಲಾಹ್! ನಾನು ಜಗಳ, ಕಾಪಟ್ಯ ಮತ್ತು ದುರ್ನಡತೆಯಿಂದ ನಿನ್ನ ಅಭಯ ಕೋರುತ್ತೇನೆ.)

## ಸಾಲ ಸಂದಾಯದ ಪ್ರಾರ್ಥನೆ:

ಹ. ಅಬೂ ವಾಇಲ್(ರ) ಹೇಳುತ್ತಾರೆ: ಹಝ್ರತ್ ಅಲೀಯವರ(ರ) ಸಮ್ಮುಖದಲ್ಲಿ ಓರ್ವ ಕರಾರು ಪಡೆದ ಗುಲಾಮನು ಹಾಜರಾದನು. ಅವನು ಹೇಳಿದ: ಹಝ್ರತ್! ನನಗೆ ಸಹಾಯ ಮಾಡಿರಿ. ನಾನು ಕರಾರು ಮಾಡಿದ ಹಣವನ್ನು ಕೊಡಲು ಸಾಧ್ಯವಾಗುವುದಿಲ್ಲ. ಹ. ಅಲೀ(ರ) ಹೇಳಿದರು: ನಾನು ನಿಮಗೆ ಪ್ರವಾದಿವರ್ಯರು(ಸ) ನನಗೆ ಹೇಳಿಕೊಟ್ಟ ಒಂದು ಪ್ರಾರ್ಥನೆಯನ್ನು ಕಲಿಸಲೇ? ಅದನ್ನು ಹೇಳಿದ ಕೂಡಲೇ ನಿಮ್ಮ ಮೇಲೆ ಉಹುದ್ ಪರ್ವತದಷ್ಟು ದೊಡ್ಡ ಸಾಲವಿದ್ದರೂ ಅಲ್ಲಾಹನು ಅದನ್ನು ತೀರಿಸುವನು. ಆ ಗುಲಾಮ ಹೇಳಿದ: 'ನನಗೆ ಅದನ್ನು ಹೇಳಿ ಕೊಡಿ.' ಆಗ ಹ. ಅಲೀ(ರ) ಹೇಳಿದರು:

اَللّٰهُمَّ اكْفِنِىْ بِحَلَالِكَ عَنْ حَرَامِكَ وَاغْنِنِىْ بِفَضْلِكَ عَمَّنْ سِوَاكَ

"ಅಲ್ಲಾಹುಮ್ಮಕ್‌ಫಿನೀ ಬಿಹಲಾಲಿಕ ಅನ್‌ಹರಾಮಿಕ ವಗ್‌ನಿನೀ ಬಿ ಫದ್‌ಲಿಕ ಅಮ್ಮನ್ ಸಿವಾಕ".

(ಓ ಅಲ್ಲಾಹ್! ನನಗೆ ಧರ್ಮಸಮ್ಮತವಾದ ಜೀವನೋಪಾಯ ದಯಪಾಲಿಸು. ಧರ್ಮನಿಷಿದ್ಧ ಜೀವನೋಪಾಯದಿಂದ ನನ್ನನ್ನು ಮುಕ್ತಗೊಳಿಸು. ನಿನ್ನ ಅನುಗ್ರಹದಿಂದ ನಿನ್ನ ಹೊರತು ಇತರ ಎಲ್ಲರಿಂದ ನನ್ನನ್ನು ನಿರಪೇಕ್ಷಗೊಳಿಸು.)

❖ ❖ ❖ ❖

# ಸಲಾತ್ ಮತ್ತು ಸಲಾಮ್

ನಿಮ್ಮ ಮಹಾ ಉಪಕಾರಿಯಾದ ಹ. ಮುಹಮ್ಮದ್‌ರ(ಸ) ಮೇಲೆ ಅತ್ಯಧಿಕ ಸಲಾತ್ ಮತ್ತು ಸಲಾಮ್ ಹೇಳುತ್ತಲಿರಿ. ವಾಸ್ತವದಲ್ಲಿ ಅವರ ಅಗಣಿತ ಉಪಕಾರಗಳ ಮತ್ತು ಅಪಾರ ಅನುಗ್ರಹದ ಋಣ ತೀರಿಸಲು ನಮ್ಮಿಂದ ಸಾಧ್ಯವೇ ಇಲ್ಲ. ನಮ್ಮ ಪ್ರೇಮ, ಗೌರವ, ಆದರ ಮತ್ತು ಸಮರ್ಪಣೆಯ ಭಾವನೆಗಳ ಅಭಿವ್ಯಕ್ತಿಗಾಗಿ ನಮ್ಮಿಂದ ಸಾಧ್ಯವಿರುವುದು ಅವರ ಮೇಲೆ ಸಲಾತ್ ಮತ್ತು ಸಲಾಮ್ ಹೇಳುವುದಾಗಿದೆ ಮತ್ತು ಅಲ್ಲಾಹನಿಂದ ಈ ರೀತಿ ಪ್ರಾರ್ಥಿಸಿರಿ: "ಓ ಪ್ರಭೂ! ನಿನ್ನ ಅಂತಿಮ ಪ್ರವಾದಿ ಹ. ಮುಹಮ್ಮದ್(ಸ) ನಮಗಾಗಿ ಪಟ್ಟ ಪಾಡು ಮತ್ತು ಸಹಿಸಿದ ಕಷ್ಟ ಕೋಟಲೆಗಳು ಅಪಾರ. ಆದರೂ ನಿನ್ನ ಧರ್ಮದ ಪ್ರಕಾಶವನ್ನು ಅವರು ನಮಗೆ ತಲುಪಿಸಿದರು. ನಮ್ಮ ಸನ್ಮಾರ್ಗದರ್ಶನಕ್ಕಾಗಿ ಕೊರಗಿದರು. ಓ ನಮ್ಮ ಪ್ರಭೂ! ನಾವು ಅಸದೃಶವಾದ ಉಪಕಾರದ ಋಣ ತೀರಿಸಲು ಅಶಕ್ತರು. ನಿನ್ನಲ್ಲೇ ನಾವು ಮೊರೆ ಇಡುತ್ತೇವೆ. ಓ ನಮ್ಮ ಪ್ರಭೂ! ನಿನ್ನ ಅಗಣಿತವೂ ಅಪಾರವೂ ಆದ ಕರುಣೆ ಯನ್ನು ಅವರ ಮೇಲೆ ಸದಾ ವರ್ಷಿಸುತ್ತಿರು. ಅವರ ಸ್ಥಾನಮಾನವನ್ನು ಉನ್ನತ ಗೊಳಿಸು. ಅವರ ಧರ್ಮವನ್ನು ಅಸತ್ಯದ ಬಿರುಗಾಳಿಯಿಂದ ರಕ್ಷಿಸು. ಅದನ್ನು ಪ್ರಗತಿ ಪಥದಲ್ಲಿ ಮುನ್ನಡೆಸು. ಅವರಿಗೆ ಪರಲೋಕದಲ್ಲಿ ನಿನ್ನ ಎಲ್ಲ ಆಪ್ತೇಷ್ಟರಿಗಿಂತಲೂ ಆಪ್ತವಾದ ಸ್ಥಾನವನ್ನು ದಯಪಾಲಿಸು." ಪವಿತ್ರ ಕುರ್‌ಆನ್ ಮುಸ್ಲಿಮರಿಗೆ ಈ ರೀತಿ ಆದೇಶಿಸಿದೆ:

إِنَّ اللَّهَ وَمَلَائِكَتَهُ يُصَلُّونَ عَلَى النَّبِيِّ ۚ يَا أَيُّهَا الَّذِينَ آمَنُوا صَلُّوا عَلَيْهِ وَسَلِّمُوا تَسْلِيمًا ﴿٥٦﴾

"ಅಲ್ಲಾಹನು ಮತ್ತು ಆತನ ಮಲಕ್‌ಗಳು ಪ್ರವಾದಿವರ್ಯರ ಮೇಲೆ ಸಲಾತ್ ಹೇಳುತ್ತಿರುತ್ತಾರೆ. ಓ ಸತ್ಯವಿಶ್ವಾಸಿಗಳೇ! ನೀವೂ ಅವರ ಮೇಲೆ ಸಲಾತ್ ಮತ್ತು ಸಲಾಮ್ ಹೇಳುತ್ತಿರಿ". (33: 56)

ಹ. ಉಬೈ ಬಿನ್ ಕಅಬ್‌ರಿಗೆ(ರ) ಪ್ರವಾದಿವರ್ಯರು(ಸ) ಹೀಗೆ ಹೇಳಿದರು:
"ಓ ಉಬೈ! ನೀವು ನಿಮ್ಮ ಸಮಯವೆಲ್ಲವನ್ನು ಸಲಾತ್ ಮತ್ತು ಸಲಾಮ್ ಹೇಳು ವುದರಲ್ಲಿ ವ್ಯಯಿಸಿದರೆ ಇಹಲೋಕದಲ್ಲೂ, ಪರಲೋಕದಲ್ಲೂ ನಿಮ್ಮ ಸಂರಕ್ಷಣೆಯ ಹೊಣೆಯನ್ನು ಅಲ್ಲಾಹನೇ ವಹಿಸುವನು". (ಮುಸ್ನದ್ ಅಹ್ಮದ್)

ಹ. ಅನಸ್ ಬಿನ್ ಮಾಲಿಕ್(ರ) ಹೇಳುತ್ತಾರೆ: ಪ್ರವಾದಿ(ಸ) ಈ ರೀತಿ ಹೇಳಿದರು:

"ಯಾವನು ನನ್ನ ಮೇಲೆ ಒಮ್ಮೆ ಸಲಾತ್ ಹೇಳುತ್ತಾನೋ ದೇವನು ಹತ್ತು ಅನುಗ್ರಹ ಗಳನ್ನು ಅವನ ಮೇಲೆ ವರ್ಷಿಸುತ್ತಾನೆ. ಹತ್ತು ಪುಣ್ಯಗಳನ್ನು ಅವನಿಗಾಗಿ ಬರೆಯುತ್ತಾನೆ. ಅವನ ಹತ್ತು ಪಾಪಗಳನ್ನು ನಿವಾರಿಸುತ್ತಾನೆ ಮತ್ತು ಅವನನ್ನು ಹತ್ತು ಸ್ಥಾನ ಮೇಲೇರಿಸುತ್ತಾನೆ". (ನಸಾಈ)

ಪ್ರವಾದಿ(ಸ) ಈ ರೀತಿ ಹೇಳಿರುವರು: "ನನ್ನ ಮೇಲೆ ಸಲಾತ್ ಹೇಳುತ್ತಿರುವಷ್ಟು ಕಾಲ ಮಲಕ್‌ಗಳು ಅವನ ಮೇಲೆ ಸಲಾತ್ ಹೇಳುತ್ತಿರುತ್ತಾರೆ". (ಅಹ್ಮದ್, ಇಬ್ನುಮಾಜಃ)

ಪ್ರವಾದಿವರ್ಯರ(ಸ) ಪ್ರಸ್ತಾಪ ಕೇಳಿಯೂ ಅವರ ಮೇಲೆ ಸಲಾತ್ ಹೇಳದಿರುವವನನ್ನು ಪ್ರವಾದಿವರ್ಯರು(ಸ) ಜಿಪುಣನೆಂದು ಸಾರಿರುವರು. "ಒಬ್ಬನ ಮುಂದೆ ನನ್ನ ಪ್ರಸ್ತಾಪ ಮಾಡಿಯೂ ನನ್ನ ಮೇಲೆ ಸಲಾತ್ ಹೇಳದಿರುವವನು ಜಿಪುಣನು". (ತಿರ್ಮಿದಿ)

ಯಾವನು ನನ್ನ ಮೇಲೆ ಅತ್ಯಧಿಕ ಸಲಾತ್ ಮತ್ತು ಸಲಾಮ್ ಹೇಳುವನೋ ಅವನು ಪರಲೋಕದಲ್ಲಿ ನನ್ನ ಸಾಮಿಪ್ಯದ ಅತ್ಯಧಿಕ ಹಕ್ಕುದಾರನೆಂದು ಸಾರಲ್ಪಡುವನು. "ನಿರ್ಣಾಯಕ ದಿನದಂದು ನನ್ನ ಸಾಮಿಪ್ಯದ ಅತ್ಯಧಿಕ ಹಕ್ಕುದಾರನು ನನ್ನ ಮೇಲೆ ಅತ್ಯಧಿಕ ಸಲಾತ್ ಹೇಳುವವನಾಗಿರುವನು". (ತಿರ್ಮಿದಿ)

ಸಹಾಬಿವರ್ಯರಿಗೆ ಪ್ರವಾದಿ(ಸ) ವಿಭಿನ್ನ ಸಂದರ್ಭಗಳಲ್ಲಿ ಸಲಾತ್ ಮತ್ತು ಸಲಾಮ್‌ಗೆ ಹೇಳಿಕೊಟ್ಟಂತಹ ಪದಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸವಿದೆ. ನೀವು ಆ ಪೈಕಿ ಯಾವ ಸಲಾತನ್ನಾದರೂ ಪಠಿಸಬಹುದು. ಸಾಮಾನ್ಯವಾಗಿ ನಮಾಝ್‌ನಲ್ಲಿ ಪಠಿಸುವಂತಹ ಸಲಾತ್ ಈ ಕೆಳಗಿನಂತಿದೆ. ಹಝ್ರತ್ ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಇದನ್ನು ಅತ್ಯುತ್ತಮ ಸಲಾತ್ ಎಂದು ಸಾರಿರುವರು.

اَللّٰهُمَّ صَلِّ عَلٰى مُحَمَّدٍ وَّعَلٰى اٰلِ مُحَمَّدٍ كَمَا صَلَّيْتَ عَلٰى اِبْرَاهِيْمَ وَعَلٰى اٰلِ اِبْرَاهِيْمَ اِنَّكَ حَمِيْدٌ مَّجِيْدٌ ـ اَللّٰهُمَّ بَارِكْ عَلٰى مُحَمَّدٍ وَّعَلٰى اٰلِ مُحَمَّدٍ كَمَا بَارَكْتَ عَلٰى اِبْرَاهِيْمَ وَعَلٰى اٰلِ اِبْرَاهِيْمَ اِنَّكَ حَمِيْدٌ مَّجِيْدٌ

(صحاح ستة، مسند احمد)

"ಅಲ್ಲಾಹುಮ್ಮ ಸಲ್ಲಿಅಲಾ ಮುಹಮ್ಮದಿನ್ ವಅಲಾ ಆಲಿ ಮುಹಮ್ಮದಿನ್ ಕಮಾ ಸಲ್ಲೈತ ಅಲಾ ಇಬ್ರಾಹೀಮ ವಅಲಾ ಆಲಿ ಇಬ್ರಾಹೀಮ ಇನ್ನಕ ಹಮೀದುಮ್ಮಜೀದ್.

ಅಲ್ಲಾಹುಮ್ಮ ಬಾರಿಕ್ ಅಲಾ ಮುಹಮ್ಮದಿನ್ ವಅಲಾ ಆಲಿ ಮುಹಮ್ಮದಿನ್ ಕಮಾ ಬಾರಕ್‌ತ ಅಲಾ ಇಬ್ರಾಹೀಮ ವಅಲಾ ಆಲಿ ಇಬ್ರಾಹೀಮ ಇನ್ನಕ ಹಮೀದುಮ್ಮಜೀದ್".

(ಓ ಅಲ್ಲಾಹ್! ಮುಹಮ್ಮದರ ಮೇಲೆ ಮತ್ತು ಮುಹಮ್ಮದರ ಸಂತತಿಗಳ ಮೇಲೆ ಅನುಗ್ರಹ ಸುರಿಸು. ನೀನು ಇಬ್ರಾಹೀಮರ ಮತ್ತು ಇಬ್ರಾಹೀಮರ ಸಂತತಿಗಳ ಮೇಲೆ ಅನುಗ್ರಹ

ಸುರಿಸಿದಂತೆ. ಖಂಡಿತವಾಗಿಯೂ ನೀನು ಸ್ತುತ್ಯರ್ಹನೂ ಮಹಿಮಾವಂತನೂ ಆಗಿರುವಿ.

ಓ ಅಲ್ಲಾಹ್! ಮುಹಮ್ಮದರ ಮತ್ತು ಮುಹಮ್ಮದರ ಸಂತತಿಗಳ ಮೇಲೆ ಸಮೃದ್ಧಿ ಪ್ರದಾನ ಮಾಡು. ನೀನು ಇಬ್ರಾಹೀಮರ ಮತ್ತು ಇಬ್ರಾಹೀಮರ ಸಂತತಿಗಳ ಮೇಲೆ ಸಮೃದ್ಧಿ ಪ್ರದಾನ ಮಾಡಿದಂತೆ. ಖಂಡಿತವಾಗಿಯೂ ನೀನು ಸ್ತುತ್ಯರ್ಹನೂ ಮಹಿಮಾವಂತನೂ ಆಗಿರುವಿ.) (ಸಿಹಾಹುಸ್ಸಿತ್ತಃ, ಮುಸ್ನದ್ ಅಹ್ಮದ್)

ಹ. ಅಬ್ದುಲ್ಲಾ ಬಿನ್ ಮಸ್‌ಊದ್(ರ) ಜನರಿಗೆ ಹೇಳಿದರು: ನೀವು ಸಲಾತ್ ಹೇಳುವಾಗ ಅತ್ಯುತ್ತಮ ಶೈಲಿಯಲ್ಲಿ ಹೇಳಬೇಕು. ನಿಮ್ಮ ಸಲಾತ್ ಪ್ರವಾದಿವರ್ಯರ(ಸ) ಸನ್ನಿಧಿಯಲ್ಲಿ ಅರ್ಪಿಸಲ್ಪಡಲೂ ಬಹುದು. ಆ ಬಳಿಕ ಜನರ ಕೋರಿಕೆಯ ಮೇರೆಗೆ ಅವರು ಜನರಿಗೆ ಈ ರೀತಿ ಸಲಾತ್ ಕಲಿಸಿಕೊಟ್ಟರು.

اَللّٰهُمَّ اجْعَلْ صَلٰوتَكَ وَرَحْمَتَكَ وَبَرَكَاتِكَ عَلٰى سَيِّدِ الْمُرْسَلِيْنَ وَاِمَامِ الْمُتَّقِيْنَ وَخَاتَمِ النَّبِيِّيْنَ مُحَمَّدٍ عَبْدِكَ وَرَسُوْلِكَ اِمَامِ الْخَيْرِ وَقَآئِدِ الْخَيْرِ وَرَسُوْلِ الرَّحْمَةِ، اَللّٰهُمَّ ابْعَثْهُ مَقَامًا يَّغْبِطُهُ بِهِ الْاَوَّلُوْنَ، اَللّٰهُمَّ صَلِّ عَلٰى مُحَمَّدٍ وَّعَلٰٓى اٰلِ مُحَمَّدٍ كَمَا صَلَّيْتَ عَلٰٓى اِبْرَاهِيْمَ وَعَلٰٓى اٰلِ اِبْرَاهِيْمَ اِنَّكَ حَمِيْدٌ مَّجِيْدٌ، اَللّٰهُمَّ بَارِكْ عَلٰى مُحَمَّدٍ وَعَلٰى اٰلِ مُحَمَّدٍ كَمَا بَارَكْتَ عَلٰٓى اِبْرَاهِيْمَ وَعَلٰٓى اٰلِ اِبْرَاهِيْمَ اِنَّكَ حَمِيْدٌ مَّجِيْدٌ (ابن ماجة)

"ಅಲ್ಲಾಹುಮ್ಮಜ್‌ಅಲ್ ಸಲಾತಕ ವರಹ್‌ಮತಕ ವಬರಕಾತಿಕ ಅಲಾ ಸಯ್ಯಿದಿಲ್ ಮುರ್‌ಸಲೀನ ವಇಮಾಮಿಲ್ ಮುತ್ತಕೀನ ವಖಾತ ಮಿನ್ನಬಿಯ್ಯೀನ ಮುಹಮ್ಮದಿನ್ ಅಬ್ದಿಕ ವರಸೂಲಿಕ ಇಮಾಮಿಲ್ ಖೈರಿ ವಕಾಯಿದಿಲ್ ಖೈರಿ ವರಸೂಲಿರ್ರಹ್‌ಮತಿ ಅಲ್ಲಾಹುಮ್ಮಬ್ ಅಸ್‌ಹು ಮಕಾಮನ್ ಯಗ್‌ಬಿತುಹು ಬಿಹಿಲ್ ಅವ್ವಲೂನ್ ಅಲ್ಲಾಹುಮ್ಮ ಸಲ್ಲಿ ಅಲಾ ಮುಹಮ್ಮದಿನ್ ವಅಲಾ ಆಲಿ ಮುಹಮ್ಮದಿನ್ ಕಮಾಸಲ್ಲೈತ ಅಲಾ ಇಬ್ರಾಹೀಮ ವಅಲಾ ಆಲಿ ಇಬ್ರಾಹೀಮ ಇನ್ನಕ ಹಮಿೂದುಮ್ಮಜೀದ್. ಅಲ್ಲಾಹುಮ್ಮ ಬಾರಿಕ್ ಅಲಾ ಮುಹಮ್ಮದಿನ್ ವಅಲಾ ಆಲಿ ಮುಹಮ್ಮದಿನ್ ಕಮಾ ಬಾರಕ್‌ತ ಅಲಾ ಇಬ್ರಾಹೀಮ ವಅಲಾ ಆಲಿ ಇಬ್ರಾಹೀಮ ಇನ್ನಕ ಹಮಿೂದುಮ್ಮಜೀದ್".

(ಓ ಅಲ್ಲಾಹ್ ನೀನು ನಿನ್ನ ಸಮೃದ್ಧಿ, ಕರುಣೆ ಮತ್ತು ಅನುಗ್ರಹಗಳನ್ನು ಪ್ರವಾದಿಗಳ

ನಾಯಕ, ಧರ್ಮನಿಷ್ಠರ ಮುಂದಾಳು ಮತ್ತು ಪ್ರವಾದಿಗಳಲ್ಲಿ ಕೊನೆಯವರಾದ ಹ. ಮುಹಮ್ಮದರ ಮೇಲೆ ಸುರಿಸು. ಅವರು ನಿನ್ನ ದಾಸರು, ನಿನ್ನ ಸಂದೇಶವಾಹಕರು, ಒಳಿತಿನ ಮಾದರಿ, ಪುಣ್ಯದ ಮಾರ್ಗದರ್ಶಕ ಹಾಗೂ ಅನುಗ್ರಹದ ಪ್ರವಾದಿಯಾಗಿರುವರು. ಓ ಅಲ್ಲಾಹ್! ಹಿಂದಿನವರಿಗೆ ಈರ್ಷ್ಯೆಯಾಗುವ ರೀತಿಯಲ್ಲಿ ನೀನು ಅವರಿಗೆ ಅತ್ಯುನ್ನತ ಸ್ಥಾನವನ್ನು ದಯಪಾಲಿಸು.

ಓ ಅಲ್ಲಾಹ್! ಮುಹಮ್ಮದರ ಮೇಲೆ ಮತ್ತು ಮುಹಮ್ಮದರ ಸಂತತಿಗಳ ಮೇಲೆ ಅನುಗ್ರಹ ಸುರಿಸು. ನೀನು ಇಬ್ರಾಹೀಮರ ಮತ್ತು ಇಬ್ರಾಹೀಮರ ಸಂತತಿಗಳ ಮೇಲೆ ಅನುಗ್ರಹ ಸುರಿಸಿದಂತೆ. ಖಂಡಿತವಾಗಿಯೂ ನೀನು ಸ್ತುತ್ಯರ್ಹನೂ ಮಹಿಮಾವಂತನೂ ಆಗಿರುವಿ. ಓ ಅಲ್ಲಾಹ್! ಮುಹಮ್ಮದರ ಮತ್ತು ಮುಹಮ್ಮದರ ಸಂತತಿಗಳ ಮೇಲೆ ಸಮೃದ್ಧಿ ಪ್ರದಾನ ಮಾಡು. ನೀನು ಇಬ್ರಾಹೀಮರ ಮತ್ತು ಇಬ್ರಾಹೀಮರ ಸಂತತಿಗಳ ಮೇಲೆ ಸಮೃದ್ಧಿ ಪ್ರದಾನ ಮಾಡಿದಂತೆ. ಖಂಡಿತವಾಗಿಯೂ ನೀನು ಸ್ತುತ್ಯರ್ಹನೂ, ಮಹಿಮಾವಂತನೂ ಆಗಿರುವಿ.) (ಇಬ್ನುಮಾಜಃ)

ಹ. ಅಬೂ ಮಸ್‌ಊದ್ ಅನ್ಸಾರಿ(ರ) ಹೇಳುತ್ತಾರೆ: ಒಮ್ಮೆ ಬಶೀರ್ ಬಿನ್ ಸಅದ್(ರ) ಪ್ರವಾದಿವರ್ಯರಲ್ಲಿ(ಸ) ಹೀಗೆ ವಿಚಾರಿಸಿದರು: 'ಓ ಅಲ್ಲಾಹನ ಸಂದೇಶವಾಹಕರೇ! ನಾವು ಯಾವ ರೀತಿ ತಮ್ಮ ಮೇಲೆ ಸಲಾತ್ ಮತ್ತು ಸಲಾಮ್ ಹೇಳಬೇಕು? ಆಗ ಪ್ರವಾದಿ ವರ್ಯರು(ಸ) ಸ್ವಲ್ಪ ಹೊತ್ತು ಮೌನವಾಗಿದ್ದು, ಅನಂತರ ಈ ರೀತಿ ಹೇಳಿದರು:

اَللّٰهُمَّ صَلِّ عَلٰى مُحَمَّدٍ وَّعَلٰى اٰلِ مُحَمَّدٍ كَمَا صَلَّيْتَ عَلٰى اٰلِ
اِبْرَاهِيْمَ وَبَارِكْ عَلٰى مُحَمَّدٍ وَّعَلٰى اٰلِ مُحَمَّدٍ كَمَا بَارَكْتَ عَلٰى
اِبْرَاهِيْمَ فِى الْعَالَمِيْنَ اِنَّكَ حَمِيْدٌ مَّجِيْدٌ (مسلم)

"ಅಲ್ಲಾಹುಮ್ಮ ಸಲ್ಲಿ ಅಲಾ ಮುಹಮ್ಮದಿನ್ ವಅಲಾ ಆಲಿ ಮುಹಮ್ಮದಿನ್ ಕಮಾ ಸಲ್ಲೈತ ಅಲಾ ಆಲಿ ಇಬ್ರಾಹೀಮ ವಬಾರಿಕ್ ಅಲಾ ಮುಹಮ್ಮದಿನ್ ವಅಲಾ ಆಲಿ ಮುಹಮ್ಮದಿನ್ ಕಮಾ ಬಾರಕ್‌ತ ಅಲಾ ಇಬ್ರಾಹೀಮ ಫಿಲ್ ಆಲಮೀನ ಇನ್ನಕ ಹಮೀದುಮ್ಮಜೀದ್".

(ಓ ಅಲ್ಲಾಹ್! ಮುಹಮ್ಮದರ ಮತ್ತು ಮುಹಮ್ಮದರ ಸಂತತಿಗಳ ಮೇಲೆ ಅನುಗ್ರಹ ಸುರಿಸು. ನೀನು ಇಬ್ರಾಹೀಮರ ಸಂತತಿಗಳ ಮೇಲೆ ಅನುಗ್ರಹ ಸುರಿಸಿದಂತೆ. ಮುಹಮ್ಮದರ ಮತ್ತು ಮುಹಮ್ಮದರ ಸಂತತಿಗಳ ಮೇಲೆ ಸಮೃದ್ಧಿ ಪ್ರದಾನ ಮಾಡು. ನೀನು ಇಡೀ ವಿಶ್ವದಲ್ಲಿ ಇಬ್ರಾಹೀಮರ ಮೇಲೆ ಸಮೃದ್ಧಿ ಪ್ರದಾನ ಮಾಡಿದಂತೆ. ಖಂಡಿತವಾಗಿಯೂ ನೀನು ಸ್ತುತ್ಯರ್ಹನೂ ಮಹಿಮಾವಂತನೂ ಆಗಿರುವಿ.) (ಮುಸ್ಲಿಮ್)

# ಕುರ್ಬಾನಿ ಮತ್ತು ಅಕೀಕದ ಪ್ರಾರ್ಥನೆ

ಬಲಿ ನೀಡಲಿರುವ ಪ್ರಾಣಿಯನ್ನು ಕಿಬ್ಲಾಭಿಮುಖವಾಗಿ ಮಲಗಿಸಿ ಮೊದಲು ಈ ರೀತಿ ಪ್ರಾರ್ಥಿಸಿ:

اِنِّىْ وَجَّهْتُ وَجْهِىَ لِلَّذِىْ فَطَرَ السَّمٰوَاتِ وَالْاَرْضَ حَنِيْفًا وَّمَآ اَنَا مِنَ الْمُشْرِكِيْنَ اِنَّ صَلٰوتِىْ وَنُسُكِىْ وَمَحْيَاىَ وَمَمَاتِىْ لِلّٰهِ رَبِّ الْعٰلَمِيْنَ لَا شَرِيْكَ لَهُ وَبِذَالِكَ اُمِرْتُ وَاَنَا مِنَ الْمُسْلِمِيْنَ اَللّٰهُمَّ لَكَ وَمِنْكَ

"ಇನ್ನೀ ವಜ್ಜಹ್ತು ವಜ್‌ಹಿಯ ಲಿಲ್ಲದೀ ಫತರಸ್ಸಮಾವಾತಿ ವಲ್ ಅರ್ದ ಹನೀಫನ್ ವಮಾ ಅನಮಿನಲ್ ಮುಶ್ರಿಕೀನ್. ಇನ್ನ ಸಲಾತೀ ವನುಸುಕೀ ವಮಹ್‌ಯಾಯ ವ ಮಮಾತೀ ಲಿಲ್ಲಾಹಿ ರಬ್ಬಿಲ್ ಆಲಮೀನ, ಲಾ ಶರೀಕ ಲಹೂ ವಬಿದಾಲಿಕ ಉಮಿರ್ತು ವ ಅನಮಿನಲ್ ಮುಸ್ಲಿಮೀನ್ ಅಲ್ಲಾಹುಮ್ಮ ಲಕ ವ ಮಿನ್ಕ".

(ನಾನು ಏಕನಿಷ್ಠನಾಗಿ ನನ್ನ ಮುಖವನ್ನು ಭೂಮಿ-ಆಕಾಶಗಳ ಸೃಷ್ಟಿಕರ್ತನಾದ ಅಲ್ಲಾಹನ ಕಡೆಗೆ ಮಾಡಿದೆ ಮತ್ತು ನಾನು ಬಹುದೇವಾರಾಧಕರಲ್ಲಿ ಸೇರಿದವನಲ್ಲ. ಖಂಡಿತವಾಗಿಯೂ ನನ್ನ ನಮಾಝ್, ನನ್ನ ಬಲಿದಾನ, ನನ್ನ ಜೀವನ, ನನ್ನ ಮರಣ ಎಲ್ಲವೂ ಸರ್ವಲೋಕಗಳ ಪರಿಪಾಲಕನಿಗೆ ಮೀಸಲಿದೆ. ಅವನಿಗಾರೂ ಸಹಭಾಗಿ ಇಲ್ಲ. ಇದನ್ನೇ ನನಗೆ ಆಜ್ಞಾಪಿಸಲಾಗಿದೆ. ನಾನು ಆತನಿಗೆ ಸಂಪೂರ್ಣ ಶರಣಾದವನು (ಮುಸ್ಲಿಮನು). ಓ ಅಲ್ಲಾಹ್! ಇದೋ ನಿನಗಿದು ಅರ್ಪಿತ! ನೀನೇ ನೀಡಿದುದಿದು!)

بِسْمِ اللّٰهِ اَللّٰهُ اَكْبَرُ

"ಬಿಸ್ಮಿಲ್ಲಾಹಿ ಅಲ್ಲಾಹು ಅಕ್ಬರ್" ಎನ್ನುತ್ತಾ ಹರಿತವಾದ ಕತ್ತಿಯನ್ನು ಜಾನುವಾರಿನ ಕೊರಳಿಗಿಡಿರಿ. ದಿಬ್ಹ್ ಮಾಡಿದ ಬಳಿಕ ಹೀಗೆ ಪ್ರಾರ್ಥಿಸಿರಿ:

اَللّٰهُمَّ تَقَبَّلْهُ مِنِّىْ كَمَا تَقَبَّلْتَ مِنْ خَلِيْلِكَ اِبْرَاهِيْمَ وَحَبِيْبِكَ مُحَمَّدٍ عَلَيْهِمَا الصَّلٰوةُ وَالسَّلَامُ

"ಅಲ್ಲಾಹುಮ್ಮ ತಕಬ್ಬಲ್‌ಹು ಮಿನ್ನೀ* ಕಮಾ ತಕಬ್ಬಲ್ತ ಮಿನ್ ಖಲೀಲಿಕ ಇಬ್ರಾಹೀಮ ವ ಹಬೀಬಿಕ ಮುಹಮ್ಮದಿನ್ ಅಲೈಹಿಮಸ್ಸಲಾತು ವಸ್ಸಲಾಮು".

(ಓ ಅಲ್ಲಾಹ್! ನೀನು ನನ್ನ ವತಿಯಿಂದ ಈ ಬಲಿದಾನವನ್ನು ಸ್ವೀಕರಿಸು. ನೀನು ನಿನ್ನ ಸ್ನೇಹಿತರಾದ ಇಬ್ರಾಹೀಮ್(ಅ) ಮತ್ತು ನಿನ್ನ ಆಪ್ತರಾದ ಮುಹಮ್ಮದರಿಂದ(ಸ) ಸ್ವೀಕರಿಸಿದಂತೆ. ಇಬ್ಬರ ಮೇಲೂ ಅಲ್ಲಾಹನ ಅನುಗ್ರಹ ಮತ್ತು ರಕ್ಷಣೆ ಇರಲಿ.)

ಬಲಿ ಪ್ರಾಣಿಯನ್ನು ಬೇರೆಯವರಿಂದ ಕಡಿಸುವುದೂ ಧರ್ಮಸಮ್ಮತವಾಗಿದೆ. ಆದರೂ ನೀವೇ ಸ್ವಯಂ ಕಡಿಯುವುದು ಉತ್ತಮ. ನೀವು ಪ್ರಾರ್ಥನೆಯ ವಾಕ್ಯಗಳಲ್ಲಿ ಹೇಳುವ ಭಾವನೆಗಳು ನಿಮ್ಮ ಮನ ಮಸ್ತಿಷ್ಕವನ್ನು ಆವರಿಸಿರಲಿ. ಅರ್ಥಾತ್ ನಮ್ಮ ಸರ್ವಸ್ವವೂ ಅಲ್ಲಾಹನಿಗೇ ಸೇರಿದ್ದು, ಆತನ ಮಾರ್ಗದಲ್ಲಿ ಬಲಿ ನೀಡಬೇಕಾದುದು. ಅವನ ಆಜ್ಞೆಯ ಮೇರೆಗೆ ಅವನ ಮಾರ್ಗದಲ್ಲಿ ಇಂದು ಈ ಪ್ರಾಣಿಯನ್ನು ಬಲಿ ನೀಡುತ್ತಿದ್ದೇವೆ. ಅವನ ಆಜ್ಞೆ ಬಂದರೆ ನಾಳೆ ಅವನ ಮಾರ್ಗದಲ್ಲಿ ನಮ್ಮ ಪ್ರಿಯವಾದ ಜೀವವನ್ನೂ ಇದೇ ಭಾವನೆಗಳೊಂದಿಗೆ ಬಲಿ ನೀಡಲು ಸಿದ್ಧರಿರುವೆವು. ಮಾತ್ರವಲ್ಲ ತನ್ನ ಮಾರ್ಗದಲ್ಲಿ ಪ್ರಾಣ ಬಲಿ ನೀಡುವ (ಹುತಾತ್ಮರಾಗುವ) ಸೌಭಾಗ್ಯ ದಯಪಾಲಿಸಿದುದಕ್ಕಾಗಿ ಆತನಿಗೆ ಕೃತಜ್ಞತೆ ಅರ್ಪಿಸುವೆವು.

## ಅಕೀಕದ ಪ್ರಾರ್ಥನೆ

ಅಕೀಕ ಅಂದರೆ ನವಜಾತ ಶಿಶುವಿನ ವತಿಯಿಂದ ಅದರ ಜನನದ ಏಳನೆಯ ದಿನದಂದು ದಾನ ರೂಪವಾಗಿ ನೀಡಲ್ಪಡುವ ಪ್ರಾಣಿ ಬಲಿದಾನ.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಏಳನೆಯ ದಿನ ಮಗುವಿಗೆ ಹೆಸರಿಡಬೇಕು, ಕೂದಲು ಇತ್ಯಾದಿ ಮಲಿನಗಳನ್ನು ದೂರೀಕರಿಸಬೇಕು ಮತ್ತು ಅದರ ವತಿಯಿಂದ ಅಕೀಕ ಮಾಡಬೇಕು".

ಮೃಗವನ್ನು ಬಲಿ ನೀಡುವಾಗ ಕಿಬ್ಲಾಭಿಮುಖವಾಗಿ ಮಲಗಿಸಿ, ಮೊದಲು ಬಲಿದಾನದ ಪ್ರಾರ್ಥನೆಯನ್ನು ಪಠಿಸಿರಿ. ಅರ್ಥಾತ್ ಇನ್ನೀ ವಜ್ಜಹ್ತುನಿಂದ ಲಕ ವ ಮಿನ್ಕ ತನಕ. ತರುವಾಯ "ಬಿಸ್ಮಿಲ್ಲಾಹಿ ಅಲ್ಲಾಹು ಅಕ್ಬರ್" ಎನ್ನುತ್ತಾ ಹರಿತವಾದ ಚೂರಿಯಿಂದ ಕೊರಳನ್ನು ಕೊಯ್ಯಿರಿ. ಈ ರೀತಿ ದಿಬ್ಹ ಮಾಡುತ್ತಾ ಈ ಕೆಳಗಿನಂತೆ ಪ್ರಾರ್ಥಿಸಿರಿ:

* ಪ್ರಾಣಿಯನ್ನು ಹಲವು ಮಂದಿ ಸೇರಿ ಬಲಿ ನೀಡುವುದಾದರೆ 'ಮಿನ್ನೀ' ಎನ್ನುವ ಬದಲು 'ಮಿನ್' ಎಂದು ಹೇಳಿ, ತರುವಾಯ ಎಲ್ಲರ ಹೆಸರು ಹೇಳಿರಿ.

اَللّٰهُمَّ هٰذِهِ عَقِيْقَةُ.........تَقَبَّلْهُ كَمَا تَقَبَّلْتَ مِنْ حَبِيْبِكَ مُحَمَّدٍ وَخَلِيْلِكَ اِبْرَاهِيْمَ عَلَيْهِمَا الصَّلٰوةُ وَالسَّلَامُ دَمُهَا بِدَمِهٖ لَحْمُهَا بِلَحْمِهٖ شَعْرُهَا بِشَعْرِهٖ عَظْمُهَا بِعَظْمِهٖ

"ಅಲ್ಲಾಹುಮ್ಮ ಹಾದಿಹೀ ಅಕೀಕತು*..... ತಕಬ್ಬಲ್‌ಹು ಕಮಾತಕಬ್ಬಲ್ತ ಮಿನ್ ಹಬೀಬಿಕ ಮುಹಮ್ಮದಿನ್ ವ ಖಲೀಲಿಕ ಇಬ್ರಾಹೀಮ ಅಲೈಹಿಮಸ್ಸಲಾತು ವಸ್ಸಲಾಮು ದಮುಹಾ ಬಿದಮಿಹೀ ಲಹ್ಮುಹಾ ಬಿಲಹ್ಮಿಹೀ ಶಲ್‌ರುಹಾ ಬಿಶಲ್‌ರಿಹೀ ಅಝ್‌ಮುಹಾ ಬಿ ಅಝ್‌ಮಿಹೀ".

(ಓ ಅಲ್ಲಾಹ್! ಇದು..... ವತಿಯಿಂದ ಅಕೀಕ. ಇದನ್ನು ನೀನು ಸ್ವೀಕರಿಸು. ನಿನ್ನ ಆಪ್ತರಾದ ಮುಹಮ್ಮದ್‌ರಿಂದ(ಸ) ಮತ್ತು ನಿನ್ನ ಸ್ನೇಹಿತರಾದ ಇಬ್ರಾಹೀಮರಿಂದ(ಅ) ಸ್ವೀಕರಿಸಿದಂತೆ, ಇದರ ರಕ್ತವು ಮಗುವಿನ ರಕ್ತದ, ಇದರ ಮಾಂಸವು ಮಗುವಿನ ಮಾಂಸದ, ಇದರ ಕೂದಲು ಮಗುವಿನ ಕೂದಲಿನ ಮತ್ತು ಇದರ ಎಲುಬುಗಳು ಮಗುವಿನ ಎಲುಬುಗಳ ಪರಿಹಾರ (ಓ ಅಲ್ಲಾಹ್! ನೀನಿದನ್ನು ಸ್ವೀಕರಿಸು).

(ಹಾದಿ ಹೀ ಅಕೀಕತು ಎಂದ ಬಳಿಕ ಯಾರ ವತಿಯಿಂದ ಬಲಿ ನೀಡಲಾಗುತ್ತಿದೆಯೋ ಆ ಮಗುವಿನ ಹೆಸರೆತ್ತಿರಿ.)

ಸಾಧ್ಯವಿದ್ದವರು ತಮ್ಮ ಮಗುವಿನ ವತಿಯಿಂದ ಈ ದಾನ ಕೊಡಲೇ ಬೇಕು. ಅಕೀಕ ಒಂದು ಉತ್ತಮ ದಾನ. ಗಂಡು ಮಗುವಿನ ವತಿಯಿಂದ ಎರಡು ಆಡು ಮತ್ತು ಹೆಣ್ಣು ಮಗುವಿನ ವತಿಯಿಂದ ಒಂದು ಆಡು ನೀಡಬೇಕು. ಗಂಡು ಮಗುವಿನ ವತಿಯಿಂದ ಒಂದು ಆಡು ನೀಡುವುದೂ ಧರ್ಮಸಮ್ಮತವಾಗಿದೆ. ಆದರೆ ಸಾಧ್ಯವಿಲ್ಲದವರು ಕೇವಲ ತೋರಿಕೆಗಾಗಿ ಅಥವಾ ಅಕೀಕ ಮಾಡಿಯೇ ತೀರಬೇಕೆಂಬ ಭಾವನೆಯಿಂದ ಈ ದಾನವನ್ನು ಮಾಡಿ ಸಾಲಗಾರ ರಾಗುವುದು ಧರ್ಮಸಮ್ಮತವಲ್ಲ.

ಅಕೀಕ ಮಾಂಸವನ್ನು ಹಸಿಯಾಗಿಯೂ ವಿತರಿಸಬಹುದು. ಸಾರು ಅಥವಾ ಇತರ ಪದಾರ್ಥ ಮಾಡಿಯೂ ವಿತರಿಸಬಹುದು. ಪಾಕ ಮಾಡಿ ಬಡಬಗ್ಗರಿಗೆ ಮತ್ತು ನೆರೆಹೊರೆಯ ವರಿಗೆ ನೀಡುವುದು ಉತ್ತಮ. ನಿಮ್ಮ ಸಂಬಂಧಿಕರು ಮತ್ತು ಸ್ನೇಹಿತರಿಗೂ ನೀಡಬಹುದು. ಹ. ಹಸನ್‌ರವರ(ರ) ಅಕೀಕದ ಸಂದರ್ಭದಲ್ಲಿ ಒಂದು ಕಾಲು(ತೋಳು) ದಾದಿಗೆ ಕಳುಹಿಸಿ ಕೊಡಿ, ಉಳಿದುದನ್ನು ನೀವು ತಿನ್ನಿರಿ ಇತರರಿಗೂ ತಿನ್ನಿಸಿರಿ ಎಂದು ಪ್ರವಾದಿ(ಸ) ಹೇಳಿದ್ದರು.
(ಅಬೂದಾವೂದ್)

# ತರಾವೀಹ್ ಪ್ರಾರ್ಥನೆ ಮತ್ತು ಕುನೂತ್ ನಾಝಿಲ

ತರಾವೀಹ್ ಎಂಬುದು 'ತರ್‌ವೀಹ' ಎಂಬ ಪದದ ಬಹುವಚನ. ತರಾವೀಹ್‌ನಲ್ಲಿ ನಾಲ್ಕು ರಕಅತ್‌ಗಳ ಬಳಿಕ ಕುಳಿತುಕೊಳ್ಳುವ ಮತ್ತು ವಿರಾಮ ಪಡೆಯುವುದರ ಹೆಸರೇ ತರ್‌ವೀಹ. ಆದ್ದರಿಂದಲೇ ರಮಝಾನ್ ತಿಂಗಳ ಈ ಐಚ್ಛಿಕ ನಮಾಝನ್ನು ತರಾವೀಹ್ ಎನ್ನಲಾಗುತ್ತದೆ. ತರ್‌ವೀಹ ಎಂದರೆ ಪ್ರತಿ ನಾಲ್ಕು ರಕಅತ್‌ಗಳ ಬಳಿಕ ಕುಳಿತುಕೊಳ್ಳುವುದು ಮತ್ತು ವಿರಮಿಸುವುದು. ಇದು ಸುನ್ನತ್ ಅರ್ಥಾತ್ ಪ್ರವಾದಿ ಚರ್ಯೆಯಾಗಿದೆ.

ತರ್‌ವೀಹ್‌ನಲ್ಲಿ ಈ ದುಆ ಪಠಿಸಿರಿ:

سُبْحَانَ ذِى الْمُلْكِ وَالْمَلَكُوْتِ سُبْحَانَ ذِى الْعِزَّةِ وَالْعَظْمَةِ وَالْهَيْبَةِ وَالْقُدْرَةِ وَالْكِبْرِيَاءِ وَالْجَبَرُوْتِ سُبْحَانَ الْمَلِكِ الْحَيِّ الَّذِىْ لَا يَنَامُ وَلَا يَمُوْتُ سُبُّوْحٌ قُدُّوْسٌ، رَبُّنَا وَرَبُّ الْمَلَائِكَةِ وَالرُّوْحِ اَللّٰهُمَّ اَجِرْنَا مِنَ النَّارِ يَا مُجِيْرُ يَا مُجِيْرُ يَا مُجِيْرُ

**"ಸುಬ್‌ಹಾನ ದಿಲ್ ಮುಲ್ಕಿ ವಲ್ ಮಲಕೂತಿ, ಸುಬ್‌ಹಾನ ದಿಲ್ ಇಝ್ಝತಿ ವಲ್ ಅಝ್‌ಮತಿ ವಲ್ ಹೈಬತಿ ವಲ್ ಕುದ್‌ರತಿ ವಲ್ ಕಿಬ್ರಿಯಾ ವಲ್ ಜಬರೂತ್. ಸುಬ್‌ಹಾನಲ್ ಮಲಿಕಿಲ್ ಹಯ್ಯಿಲ್ಲದೀ ಲಾ ಯನಾಮು ವಲಾ ಯಮೂತ್. ಸುಬ್ಬೂಹುನ್ ಕುದ್ದೂಸುನ್ ರಬ್ಬುನಾ ವರಬ್ಬುಲ್ ಮಲಾಇಕತಿ ವರ್ರೂಹ್. ಅಲ್ಲಾಹುಮ್ಮ ಅಜಿರ್ನಾ ಮಿನನ್ನಾರ್ ಯಾ ಮುಜೀರು! ಯಾ ಮುಜೀರು! ಯಾ ಮುಜೀರ್!"**

(ಪರಮ ಪಾವನನು, ಆಧಿಪತ್ಯ ಮತ್ತು ಅಧಿಕಾರದ ಒಡೆಯ, ಪರಮ ಪಾವನನು ಪ್ರತಾಪವಂತ, ಮಹಿಮಾವಂತ, ಭೀತಿಕಾರಕ, ಸರ್ವ ಸಮರ್ಥ, ಘನಸ್ಥಿಕೆ ಠೀವಿಯುಳ್ಳವನಾದ ಒಡೆಯ. ಪರಮ ಪಾವನನು, ಚಿರಂತನ, ಅಧಿಪತಿ, ಅವನು ನಿದ್ರಿಸುವುದಿಲ್ಲ. ಅವನಿಗೆಂದೂ ಮರಣವಿಲ್ಲ. ಪರಮ ಪಾವನನು ಸರ್ವ ದುರ್ಗುಣ ವಿರಹಿತನು. ನಮ್ಮ ಪ್ರಭು, ಮಲಕ್‌ಗಳ(ದೇವಚರರ) ಪ್ರಭು ಮತ್ತು ಹ. ಜಿಬ್ರೀಲ್‌ರ(ಅ) ಪ್ರಭು. ಓ ಅಲ್ಲಾಹ್! ನಮ್ಮನ್ನು ನರಕಾಗ್ನಿಯಿಂದ ರಕ್ಷಿಸು. ಓ ರಕ್ಷಕ! ಓ ರಕ್ಷಕ! ಓ ರಕ್ಷಕ!)

ತರಾವೀಹ್ ನಮಾಝನ್ನು ಜಮಾಅತ್ ಸಹಿತ ನಿರ್ವಹಿಸಿರಿ. ಸಾಧ್ಯವಿದ್ದರೆ ಈ ನಮಾಝ್‌ನಲ್ಲಿ ಪೂರ್ತಿ ಕುರ್‌ಆನ್ ಒಮ್ಮೆ ಆಲಿಸುವ ಪ್ರಯತ್ನ ಮಾಡಿರಿ. ಪೂರ್ಣ ಗೌರವ, ತಲ್ಲೀನತೆ ಮತ್ತು ನಿಷ್ಠೆಯೊಂದಿಗೆ ನಿಲ್ಲಿಸಿ ನಿಲ್ಲಿಸಿ ಮಧ್ಯಮ ಗತಿಯಲ್ಲಿ ಕುರ್‌ಆನ್ ಪಠಿಸುವ ಹಾಫಿಝ್(ಕುರ್‌ಆನ್ ಪೂರ್ಣ ಕಂಠಸ್ಥಗೊಳಿಸಿದವರು)ಗಳ ಜೊತೆಗೆ ನಮಾಝ್ ಮಾಡಲು ಪ್ರಯತ್ನಿಸಿರಿ. ದೀರ್ಘವಾಗಿ ಮಂದಗತಿಯಿಂದ ಓದುವುದರಿಂದ ಜನರಿಗೆ ತೊಂದರೆಯೂ ಆಗಕೂಡದು. ಕುರ್‌ಆನನ್ನು ಸ್ಪಷ್ಟವಾದ ಉಚ್ಚಾರದೊಂದಿಗೆ ಪಠಿಸುವವರಾಗಿರಬೇಕು. ಕುರ್‌ಆನನ್ನು ಯಾವ ವಿವೇಚನ ಅಥವಾ ಚಿಂತನೆ ಇಲ್ಲದೆ ಶೀಘ್ರ ಓದುತ್ತಾ ಹೋಗುವುದು ಅದನ್ನೊಂದು ಭಾರವೆಂದು ಭಾವಿಸಿ ಇಳಿಸ ಹೊರಟಂತೆ. ಇದು ಕುರ್‌ಆನಿನೊಂದಿಗೆ ಮಾಡುವ ಅತಿ ದೊಡ್ಡ ಅಕ್ರಮ, ಅನ್ಯಾಯ. ದೇವ ಗ್ರಂಥವನ್ನು ಪೂರ್ಣ ಮನಸ್ಸಾನಿಧ್ಯ ದೊಂದಿಗೆ ಹಾಗೂ ಲವಲವಿಕೆಯೊಂದಿಗೆ ಪಠಿಸಬೇಕು. ಅದನ್ನು ಅರ್ಥ ಮಾಡುವ ಮತ್ತು ಅದರ ಬಗ್ಗೆ ಚಿಂತಿಸುವ ಪರಿಪಾಠವಿಟ್ಟುಕೊಳ್ಳಬೇಕು.

ಅದೇ ರೀತಿ ತರಾವೀಹ್ ನಮಾಝನ್ನು ಮನಸ್ಸಾನಿಧ್ಯ, ಶಾಂತಿ ಮತ್ತು ಗಾಂಭೀರ್ಯತೆಯೊಂದಿಗೆ ನಿರ್ವಹಿಸಬೇಕು. ಪರಿವೆ ಇಲ್ಲದವರಂತೆ ಶೀಘ್ರವಾಗಿ ರುಕೂಅ್ ಸುಜೂದ್ ಮಾಡುತ್ತಿರುವುದು ನಮಾಝ್‌ನ ಉದ್ದೇಶಕ್ಕೇ ಮಾರಕ. ನಮಾಝ್‌ನ ರುಚಿಯೂ ಅದರಿಂದ ಸಿಗಲಾರದು.

## ಕುನೂತ್ ನಾಝಿಲ

ದುರದೃಷ್ಟವಶಾತ್ ಮುಸ್ಲಿಮರು ಅತ್ಯಂತ ಕಠಿಣ ಪರಿಸ್ಥಿತಿಯನ್ನೆದುರಿಸುತ್ತಿದ್ದರೆ, ವೈರಿಗಳ ಭಯವಿದ್ದರೆ, ಭೀತಿಯ ವಾತಾವರಣವಿದ್ದರೆ ನಮಾಝ್‌ಗಳಲ್ಲಿ ಕುನೂತ್ ನಾಝಿಲ ಪಠಿಸಿರಿ. ವಿಶೇಷವಾಗಿ ಪ್ರಭಾತದ ನಮಾಝ್‌ನಲ್ಲಿ ಇದನ್ನು ಪಠಿಸಿರಿ. ಮುಂಜಾವಿನ ನಮಾಝ್‌ನ ಎರಡನೆಯ ರಕಅತ್‌ನ ರುಕೂಅ್ ಆದ ಬಳಿಕ ನಿಂತುಕೊಂಡು ಈ ದುಆ ಪಠಿಸಿರಿ. ತರುವಾಯ ಸುಜೂದ್ ಮಾಡಿರಿ. ಕಠಿಣ ಪರಿಸ್ಥಿತಿಗಳಲ್ಲಿ ಪ್ರವಾದಿವರ್ಯರು(ಸ) ಈ ಪ್ರಾರ್ಥನೆಯನ್ನು ಎಲ್ಲ ನಮಾಝ್‌ಗಳಲ್ಲೂ ಪಠಿಸುತ್ತಿದ್ದರೆಂದೂ ವಿಶೇಷವಾಗಿ ಪ್ರಭಾತ ನಮಾಝ್‌ನಲ್ಲಿ ಇದನ್ನು ತಪ್ಪದೆ ನಿರ್ವಹಿಸುತ್ತಿದ್ದರೆಂದೂ ಹದೀಸ್‌ಗಳಿಂದ ತಿಳಿದು ಬರುತ್ತದೆ.

اَللّٰهُمَّ اهْدِنَا فِيْمَنْ هَدَيْتَ وَعَافِنَا فِيْمَنْ عَافَيْتَ وَتَوَلَّنَا فِيْمَنْ تَوَلَّيْتَ

وَبَارِكْ لَنَا فِيْمَآ اَعْطَيْتَ وَقِنَا شَرَّمَا قَضَيْتَ فَاِنَّكَ تَقْضِىْ وَلَا يُقْضٰى

عَلَيْكَ اِنَّهُ لَا يَذِلُّ مَنْ وَّالَيْتَ وَلَا يَعِزُّ مَنْ عَادَيْتَ تَبَارَكْتَ رَبَّنَا

وَتَعَالَيْتَ نَسْتَغْفِرُكَ وَنَتُوْبُ اِلَيْكَ، اَللّٰهُمَّ عَذِّبِ الْكَفَرَةَ الَّذِيْنَ

يَصُدُّوْنَ عَنْ سَبِيْلِكَ وَيُكَذِّبُوْنَ رُسُلَكَ وَيُقَاتِلُوْنَ اَوْلِيَآئَكَ - اَللّٰهُمَّ اغْفِرْ لِلْمُؤْمِنِيْنَ وَالْمُؤْمِنَاتِ وَالْمُسْلِمِيْنَ وَالْمُسْلِمَاتِ وَاَصْلِحْ ذَاتَ بَيْنِهِمْ وَاَلِّفْ بَيْنَ قُلُوْبِهِمْ وَاجْعَلْ فِيْ قُلُوْبِهِمُ الْاِيْمَانَ وَالْحِكْمَةَ وَثَبِّتْهُمْ عَلٰى مِلَّةِ رَسُوْلِكَ صَلَّى اللّٰهُ عَلَيْهِ وَسَلَّمَ وَاَوْزِعْهُمْ اَنْ يُّوْفُوْا بِعَهْدِكَ الَّذِيْ عَاهَدْتَّهُمْ عَلَيْهِ وَانْصُرْهُمْ عَلٰى عَدُوِّكَ وَعَدُوِّهِمْ اِلٰهَ الْحَقِّ وَاجْعَلْنَا مِنْهُمْ

"ಅಲ್ಲಾಹುಮ್ಮಹ್‌ದಿನಾ ಫೀಮನ್ ಹದೈತ್. ವ ಆಫಿನಾ ಫೀಮನ್ ಆಫೈತ್. ವತವಲ್ಲನಾ ಫೀಮನ್ತವಲ್ಲೈತ್ ವಬಾರಿಕ್ ಲನಾ ಫೀಮಾ ಅಅ್‌ತೈತ್ ವಕಿನಾ ಶರ್‌ರಮಾ ಕದೈತ್. ಫ ಇನ್ನಕ ತಕ್‌ದೀ ವಲಾಯುಕ್‌ದಾ ಅಲೈಕ ಇನ್ನಹೂ ಲಾ ಯದಿಲ್ಲು ಮನ್‌ವಾಲೈತ್ ವಲಾ ಯಊಝ್ಝು ಮನ್ ಆದೈತ್ ತಬಾರಕ್ತ ರಬ್ಬನಾ ವತಆಲೈತ್. ನಸ್‌ತಗ್‌ಫಿರುಕ ವನತೂಬು ಇಲೈಕ್. ಅಲ್ಲಾಹುಮ್ಮ ಅದ್ದಿಬಿಲ್ ಕಫರತಲ್ಲದೀನ ಯಸುದ್ದೂನ ಅನ್ ಸಬೀಲಿಕ ವಯುಕದ್ದಿಬೂನ ರುಸುಲಕ ವ ಯುಕಾತಿಲೂನ ಔಲಿಯಾಅಕ್. ಅಲ್ಲಾಹುಮ್ಮಗ್ಫಿರ್ ಲಿಲ್‌ಮುಅ್‌ಮಿನೀನ ವಲ್‌ಮುಅ್‌ಮಿನಾತ್ ವಲ್ ಮುಸ್ಲಿಮೀನ ವಲ್ ಮುಸ್ಲಿಮಾತ್ ವ ಅಸ್ಲಿಹ್ ದಾತ ಬೈನಿಹಿಮ್ ವಅಲ್ಲಿಫ್ ಬೈನ ಕುಲೂಬಿಹಿಮ್ ವಜ್‌ಅಲ್ ಫೀ ಕುಲೂಬಿಹಿಮುಲ್ ಈಮಾನ ವಲ್ ಹಿಕ್ಮತ ವಸಬ್ಬಿತ್‌ಹುಮ್ ಅಲಾ ಮಿಲ್ಲತಿ ರಸೂಲಿಕ ಸಲ್ಲಲ್ಲಾಹು ಅಲೈಹಿವಸಲ್ಲಮ್ ವ ಔಝಿಅ್‌ಹುಮ್ ಅನ್‌ಯೂಫೂ ಬಿಅಹ್ದಿಕಲ್ಲದೀ ಆಹತ್ತಹುಮ್ ಅಲೈಹಿ ವನ್‌ಸುರ್‌ಹುಮ್ ಅಲಾ ಅದುವ್ವಿಕ ವ ಅದುವ್ವಿಹಿಮ್ ಇಲಾಹಲ್ ಹಕ್ಕಿ ವಜ್‌ಅಲ್‌ನಾ ಮಿನ್‌ಹುಮ್".

(ಓ ಅಲ್ಲಾಹ್! ನೀನು ನಮಗೆ ಸನ್ಮಾರ್ಗದರ್ಶನ ಮಾಡಿ ಸನ್ಮಾರ್ಗಗಾಮಿಗಳಲ್ಲಿ ನಮ್ಮನ್ನು ಸೇರಿಸು. ನಮಗೆ ಕ್ಷೇಮ ನೀಡಿ ಕ್ಷೇಮ ಪಡೆದವರೊಂದಿಗೆ ಸೇರಿಸು. ನಮ್ಮ ಸಂರಕ್ಷಣೆ ಮಾಡಿ ನಮ್ಮನ್ನು ಸುರಕ್ಷಿತರಲ್ಲಿ ಸೇರಿಸು. ನೀನು ನಮಗೆ ನೀಡಿರುವ ವಸ್ತುಗಳಲ್ಲಿ ನಮಗೆ ಸಮೃದ್ಧಿ ದಯಪಾಲಿಸು. ನೀನು ನಿರ್ಧರಿಸಿರುವ ಕೇಡಿನ ಬಾಧೆಯಿಂದ ನಮ್ಮನ್ನು ರಕ್ಷಿಸು. ನಿರ್ಧಾರ ಮಾಡುವವನು ನೀನೇ. ನಿನ್ನ ಮೇಲೆ ಯಾರ ನಿರ್ಧಾರವೂ ಬಾಧಕವಾಗುವುದಿಲ್ಲ. ನೀನು ಸಂರಕ್ಷಣೆ ದಯಪಾಲಿಸಿದವನು ಎಂದೆಂದಿಗೂ ನಿಕೃಷ್ಟನಾಗ ಲಾರನು. ನೀನು ಯಾರನ್ನು ನಿನ್ನ ಶತ್ರುವೆಂದು ಸಾರುವೆಯೋ ಅವನೆಂದೂ ಗೌರವ ಗಳಿಸಲಾರನು. ನೀನು ಅತ್ಯಂತ ಸಮೃದ್ಧಿದಾತನು. ಓ ನಮ್ಮ ಪ್ರಭೂ! ನೀನು ಅತ್ಯುನ್ನತನು. ನಾವು ನಿನ್ನಿಂದ ಕ್ಷಮೆ

ಯಾಚಿಸುತ್ತೇವೆ. ನಿನ್ನ ಸನ್ನಿಧಾನಕ್ಕೆ ಪಶ್ಚಾತ್ತಾಪ ಪಟ್ಟು ಮರಳುತ್ತೇವೆ. ಓ ಅಲ್ಲಾಹ್! ನಿನ್ನ ಮಾರ್ಗದಿಂದ ತಡೆಯುವ, ನಿನ್ನ ಸಂದೇಶವಾಹಕರನ್ನು ನಿರಾಕರಿಸುವ ಮತ್ತು ನಿನ್ನ ಆಪ್ತರೊಂದಿಗೆ ಸಮರಕ್ಕಿಳಿದಿರುವ ಸತ್ಯನಿಷೇಧಿಗಳಿಗೆ ಶಿಕ್ಷೆ ನೀಡು. ಓ ಅಲ್ಲಾಹ್! ಸತ್ಯವಿಶ್ವಾಸಿ ಸ್ತ್ರೀ-ಪುರುಷರನ್ನೂ ಅನುಸರಣಾಶೀಲ ಸ್ತ್ರೀ-ಪುರುಷರನ್ನೂ ಕ್ಷಮಿಸು. ಅವರ ಪರಸ್ಪರ ಸಂಬಂಧವನ್ನು ಸುಗಮಗೊಳಿಸು. ಅವರ ಹೃದಯಗಳಲ್ಲಿ ಪರಸ್ಪರ ಪ್ರೇಮ ಹುಟ್ಟಿಸು. ಅವರ ಹೃದಯಗಳಲ್ಲಿ ಸತ್ಯವಿಶ್ವಾಸ ಮತ್ತು ಸದ್ವಿವೇಕ ಉಂಟು ಮಾಡು. ಅವರನ್ನು ನಿನ್ನ ಸಂದೇಶವಾಹಕರ(ಸ) ಮಾರ್ಗದಲ್ಲಿ ಸ್ಥಿರಗೊಳಿಸು. ನೀನು ಅವರಿಂದ ಪಡೆದಿರುವ ವಾಗ್ದಾನವನ್ನು ಪೂರ್ಣಗೊಳಿಸುವ ಸೌಭಾಗ್ಯವನ್ನವರಿಗೆ ದಯಪಾಲಿಸು. ನಿನ್ನ ಶತ್ರುಗಳ ವಿರುದ್ಧ ಮತ್ತು ಅವರ ಶತ್ರುಗಳ ವಿರುದ್ಧ ಅವರಿಗೆ ನೆರವಾಗು. ಓ ನೈಜ ಆರಾಧ್ಯನೇ! ನಮ್ಮ ಮೊರೆಗಳನ್ನು ಆಲಿಸು. ನಮ್ಮನ್ನೂ ಅಂಥವರಲ್ಲಿ ಸೇರಿಸು.)

# ಅಪೇಕ್ಷೆಯ ನಮಾಝ್

ನಿಮಗೆ ಸಣ್ಣ ಅಥವಾ ದೊಡ್ಡ ಬೇಡಿಕೆಗಳಿದ್ದಾಗ ಅಲ್ಲಾಹನ ಮುಂದೆ ನಿಂತು ಎರಡು ರಕಅತ್ ಐಚ್ಛಿಕ ನಮಾಝ್(ಸಲಾತುಲ್ ಹಾಜತ್) ಮಾಡಿರಿ. ತರುವಾಯ ಹಮ್ದ್-ಸನಾ (ಸ್ತುತಿಸ್ತೋತ್ರ), ಸಲಾತ್(ಸ್ವಸ್ತಿ ವಚನ) ಹೇಳಿ ಈ ಕೆಳಗಿನ ದುಆ ಪಠಿಸಿರಿ. ಅಲ್ಲಾಹನು ನಿಮ್ಮ ಅಪೇಕ್ಷೆಯನ್ನು ನಿರಾಕರಿಸಲಾರನು. ಪ್ರವಾದಿ(ಸ) ಹೇಳುತ್ತಾರೆ: ಒಬ್ಬ ವ್ಯಕ್ತಿಗೆ ಅಲ್ಲಾಹನಿಂದ ಅಥವಾ ಯಾವನೇ ವ್ಯಕ್ತಿಯಿಂದ ಏನಾದರೂ ಅಪೇಕ್ಷೆ ಇದ್ದರೆ ಅವನು ಚೆನ್ನಾಗಿ ವುಝೂ ಮಾಡಿಕೊಳ್ಳಲಿ. ತರುವಾಯ ಎರಡು ರಕಅತ್ ನಮಾಝ್ ಮಾಡಿ ದೇವನ ಸ್ತುತಿಸ್ತೋತ್ರ ಮಾಡಲಿ. ಆ ಬಳಿಕ ಪ್ರವಾದಿಯ ಮೇಲೆ ಸಲಾತ್(ಸ್ವಸ್ತಿ ವಚನ) ಹೇಳಲಿ. ಆಮೇಲೆ ಈ ರೀತಿ ಪ್ರಾರ್ಥಿಸಲಿ:

لَااِلٰهَ اِلَّا اللّٰهُ الْحَلِيْمُ الْكَرِيْمُ سُبْحَانَ اللّٰهِ رَبِّ الْعَرْشِ الْعَظِيْمِ وَالْحَمْدُ لِلّٰهِ رَبِّ الْعَالَمِيْنَ اَسْأَلُكَ مُوْجِبَاتِ رَحْمَتِكَ وَعَزَآئِمِ مَغْفِرَتِكَ وَالْغَنِيْمَةَ مِنْ كُلِّ بِرٍّ وَالسَّلَامَةَ مِنْ كُلِّ اِثْمٍ لَا تَدَعْ لِيْ ذَنْبًا اِلَّا غَفَرْتَهُ وَلَا هَمًّا اِلَّا فَرَّجْتَهُ وَلَا حَاجَةً هِيَ لَكَ رِضًا اِلَّا قَضَيْتَهَا يَآاَرْحَمَ الرَّاحِمِيْنَ

(ترمذی، ابن ماجة)

"ಲಾ ಇಲಾಹ ಇಲ್ಲಲ್ಲಾಹುಲ್ ಹಲೀಮುಲ್ ಕರೀಮು ಸುಬ್‌ಹಾನಲ್ಲಾಹಿ ರಬ್ಬಿಲ್ ಅರ್ಶಿಲ್ ಅಝೀಮಿ ವಲ್ ಹಮ್ದುಲಿಲ್ಲಾಹಿ ರಬ್ಬಿಲ್ ಆಲಮೀನ ಅಸ್‌ಅಲುಕ ಮೂಜಿಬಾತಿ ರಹ್ಮತಿಕ ವ ಅಝಾಇಮಿ ಮಗ್ಫಿರತಿಕ ವಲ್ ಗನೀಮತ ಮಿನ್‌ಕುಲ್ಲಿ ಬಿರ್‍ರಿನ್ ವಸ್ಸಲಾಮತ ಮಿನ್‌ಕುಲ್ಲಿ ಇಸ್ಮಿನ್ ಲಾ ತದಅ್ ಲೀ ದಮ್ಬನ್ ಇಲ್ಲಾ ಗಫರ್‌ತಹೂ ವಲಾ ಹಮ್ಮನ್ ಇಲ್ಲಾ ಫರ್‍ರಜ್ತಹೂ ವಲಾ ಹಾಜತನ್ ಹಿಯ ಲಕ ರಿದನ್ ಇಲ್ಲಾ ಕದೈತಹಾ ಯಾ ಅರ್‌ಹಮರ್ರಾಹಿಮೀನ್".

(ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲ. ಆತನು ಅತ್ಯಂತ ಸಹನಶೀಲ ಮತ್ತು ಉದಾರಿಯಾಗಿರುವನು. ಪರಮೋನ್ನತ ಅರ್ಶ್(ವಿಶ್ವ ಸಿಂಹಾಸನ)ನ ಒಡೆಯನಾದ ಅಲ್ಲಾಹನು ಪರಮ ಪಾವನನು. ಸರ್ವ ಸ್ತುತಿಸ್ತೋತ್ರಗಳೂ ಅಲ್ಲಾಹನಿಗೇ ಇವೆ. ಅವನು ಸರ್ವ ಲೋಕಗಳ ಪರಿಪಾಲಕ. (ಓ ಅಲ್ಲಾಹ್!) ನಿನ್ನ ಕರುಣೆಯನ್ನು ನನ್ನ ಮೇಲೆ ಕಡ್ಡಾಯ ಗೊಳಿಸುವ ಮತ್ತು ನಿನ್ನ ಕ್ಷಮೆಯನ್ನು ಖಾತ್ರಿಗೊಳಿಸುವ ವಸ್ತುಗಳನ್ನು ಬೇಡುತ್ತೇನೆ. ಎಲ್ಲ ಒಳಿತುಗಳಲ್ಲಿ ಪಾಲು ಮತ್ತು ಎಲ್ಲ ಕೆಡುಕುಗಳಿಂದ ಸಂರಕ್ಷಣೆ ಯಾಚಿಸುತ್ತೇನೆ. ಓ ಅಲ್ಲಾಹ್! ನೀನು ನನ್ನ ಯಾವ ಪಾಪವನ್ನೂ ಕ್ಷಮಿಸದಿರಬೇಡ. ನನ್ನ ಯಾವ ದುಃಖ ದುಮ್ಮಾನವನ್ನೂ ನೀಗಿಸದಿರಬೇಡ. ನಿನಗೆ ಪ್ರಿಯವಾದ ನನ್ನ ಯಾವ ಬಯಕೆಯನ್ನೂ ಈಡೇರಿಸದಿರಬೇಡ. ಓ ಕರುಣಾಳುಗಳಲ್ಲಿ ಅತ್ಯಧಿಕ ಕರುಣಾಳುವೇ!) (ತಿರ್ಮಿದಿ, ಇಬ್ನುಮಾಜಃ)

# ಕುರ್‌ಆನ್ ಕಂಠಸ್ಥಗೊಳಿಸುವ ಪ್ರಾರ್ಥನೆ

ಪವಿತ್ರ ಕುರ್‌ಆನನ್ನು ಕಂಠಸ್ಥಗೊಳಿಸಲು ಅಥವಾ ಕಂಠಸ್ಥವಾದುದನ್ನು ಸಂರಕ್ಷಿಸಲು ಈ ಪ್ರಾರ್ಥನೆಯನ್ನು ತಪ್ಪದೆ ಮಾಡುತ್ತಿರಿ. ಇದನ್ನು ಪ್ರವಾದಿವರ್ಯರು(ಸ) ಹ. ಅಲೀಯವರಿಗೆ(ರ) ಕಲಿಸಿದ್ದರು.

ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಹೇಳುತ್ತಾರೆ, "ಒಮ್ಮೆ ನಾವು ಪ್ರವಾದಿವರ್ಯರ(ಸ) ಸಭೆಯಲ್ಲಿ ಕುಳಿತಿದ್ದೆವು. ಆಗ ಹ. ಅಲೀ(ರ) ಬಂದರು. ಅವರು ತಮ್ಮ ಜ್ಞಾಪಕ ಶಕ್ತಿಯ ಬಗ್ಗೆ ದೂರುತ್ತಿದ್ದರು. 'ಓ ಅಲ್ಲಾಹನ ಸಂದೇಶವಾಹಕರೇ! ಕುರ್‌ಆನಿನ ಸೂಕ್ತಗಳು ನನ್ನ ಮನದಲ್ಲಿ ಸುರಕ್ಷಿತವಿರುವುದಿಲ್ಲ. ಯಾವುದು ಕಲಿತರೂ ನೆನಪು ಉಳಿಯುವುದಿಲ್ಲ.' ಹ. ಅಲೀಯವರ(ರ) ಈ ದೂರು ಕೇಳಿ ಪ್ರವಾದಿ(ಸ) ಈ ರೀತಿ ಹೇಳಿದರು: ಓ ಅಬುಲ್ ಹಸನ್(ರ) ನಾನು ಒಂದು ದುಆ ನಿಮಗೆ ಹೇಳಿ ಕೊಡಲೇ? ಅದನ್ನು ಕಲಿತ ಬಳಿಕ ನಿಮಗೂ ನೀವು ಅದನ್ನು ಕಲಿಸಿದವರಿಗೂ ಕುರ್‌ಆನ್‌ನಿಂದ ಕಲಿತದ್ದು ಮರೆತು ಹೋಗಲಾರದು. ಹ. ಅಲೀ(ರ), ಹೇಳಿದರು: 'ಅಂತಹ ದುಆ ಅವಶ್ಯ ಕಲಿಸಿರಿ' ಎಂದಾಗ ಪ್ರವಾದಿ(ಸ) ಆ ದುಆದ ಬಗ್ಗೆ ಈ ರೀತಿ ಹೇಳಿದರು:

"ಶುಕ್ರವಾರ ರಾತ್ರಿ ಈ ದುಆ ಪಠಿಸಿರಿ. ಮೂರು, ಐದು ಅಥವಾ ಏಳು ಶುಕ್ರವಾರ ರಾತ್ರಿಗಳಂದು ಇದನ್ನು ಬಿಡದೆ ಪಠಿಸಿರಿ. ಅಲ್ಲಾಹನ ಆಜ್ಞೆಯಂತೆ ಈ ದುಆ ತಪ್ಪದೆ ಗುರಿ ತಲುಪುವುದು. ನನ್ನನ್ನು ಪ್ರವಾದಿಯಾಗಿ ಸತ್ಯಧರ್ಮದೊಂದಿಗೆ ನಿಯೋಗಿಸಿದವನಾಣೆ! ಸತ್ಯವಿಶ್ವಾಸಿಯ ಈ ದುಆ ಎಂದೂ ತಿರಸ್ಕರಿಸಲ್ಪಡುವುದಿಲ್ಲ."

ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಹೇಳುತ್ತಾರೆ: ಕೇವಲ ಐದು ಅಥವಾ ಏಳು ಗುರುವಾರಗಳೇ ಕಳೆದಿರಬಹುದು. ಅದೇ ರೀತಿ ಮತ್ತೊಮ್ಮೆ ಹ. ಅಲೀ(ರ) ಪ್ರವಾದಿ ವರ್ಯರ(ಸ) ಸನ್ನಿಧಿಗೆ ಬಂದು ಈ ರೀತಿ ಹೇಳಿದರು: "ಪ್ರವಾದಿವರ್ಯರೇ! ನಾನು ಮೊದಲು ನಾಲ್ಕು ಸೂಕ್ತಗಳನ್ನು ಕಂಠಸ್ಥಗೊಳಿಸುತ್ತಿದ್ದೆ. ಆದಾಗ್ಯೂ ಅದು ನನ್ನ ಸ್ಮೃತಿಯಿಂದ ಮಾಯವಾಗುತ್ತಿತ್ತು. ಈಗಂತೂ ನಾನು ನಲ್ವತ್ತು ನಲ್ವತ್ತು ಸೂಕ್ತಗಳನ್ನು ಕಂಠಪಾಠ ಮಾಡುತ್ತೇನೆ. ಆದರೂ ಓದುವಾಗ ನನ್ನ ಮುಂದೆ ದೇವಗ್ರಂಥ ತೆರೆದಿಟ್ಟಂತೆ ಭಾಸ ವಾಗುತ್ತದೆ. ಅಂತೆಯೇ ಮೊದಲು ನಾನು ಒಂದು ಹದೀಸ್ ಕೇಳಿ ಆ ಬಳಿಕ ಅದನ್ನು ಪುನರುಚ್ಚರಿಸಲು ಪ್ರಯತ್ನಿಸಿದರೆ ಮರೆತು ಹೋಗುತ್ತಿತ್ತು. ಈಗಂತೂ ಎಷ್ಟು ಹದೀಸ್‌ಗಳನ್ನು ಕೇಳಿದರೂ ಪುನರುಚ್ಚರಿಸುವಾಗ ಒಂದು ಪದದ ವ್ಯತ್ಯಾಸವೂ ಆಗುತ್ತಿಲ್ಲ".

ಇದನ್ನು ಕೇಳಿ ಪ್ರವಾದಿ(ಸ) ಹೇಳಿದರು: ಕಅಬಾದ ಒಡೆಯನ ಆಣೆ ಅಬುಲ್ ಹಸನ್ ಸತ್ಯವಿಶ್ವಾಸಿಯಾಗಿರುವರು.

ದುಆ ಪಠಿಸುವ ವಿಸ್ತೃತ ರೂಪ ತಿಳಿಸುತ್ತಾ, ಪ್ರವಾದಿ(ಸ) ಈ ರೀತಿ ಆದೇಶಿಸಿರುವರು: "ಶುಕ್ರವಾರ ಮೊದಲ ರಾತ್ರಿ ಈ ದುಆ ಪಠಿಸಿರಿ. ನನ್ನ ಸೋದರ ಯಾಕೂಬರ ಮಕ್ಕಳು ಅವರಲ್ಲಿ ತಮ್ಮ ಕ್ಷಮೆಗಾಗಿ ದೇವ ಸನ್ನಿಧಿಯಲ್ಲಿ ಪ್ರಾರ್ಥಿಸುವಂತೆ ಹೇಳಿದಾಗ ಅವರು: ನಾನು ಶೀಘ್ರವೇ ನಿಮ್ಮ ಕ್ಷಮೆಗಾಗಿ ಪ್ರಾರ್ಥಿಸಲಿರುವೆನು" ಎಂದರು. ಅವರು ಶುಕ್ರವಾರ ರಾತ್ರಿ ಬರುವುದನ್ನು ಕಾಯುತ್ತಿದ್ದರು. ಓ ಅಲೀ(ರ)! ನೀವು ಶುಕ್ರವಾರ ರಾತ್ರಿ ತಹಜ್ಜುದ್‌ನ ಸಮಯದಲ್ಲಿ ಏಳಿ. ಏಕೆಂದರೆ ಈ ಸಮಯ ಪ್ರಾರ್ಥನೆಗಳು ಸ್ವೀಕೃತವಾಗುವ ಸಮಯ ವಾಗಿದೆ. ಮನಸ್ಸು ಆಗ ಜಾಗೃತವಾಗಿದ್ದು ದೇವನತ್ತ ವಾಲಿರುತ್ತದೆ. ರಾತ್ರಿಯ ಅಂತಿಮ ಜಾವದಲ್ಲಿ ನಿಮ್ಮಿಂದ ಏಳಲಾಗದಿದ್ದರೆ ಮಧ್ಯ ರಾತ್ರಿ ಏಳಿರಿ. ಮಧ್ಯರಾತ್ರಿಯೂ ಏಳುವುದು ಅಸಾಧ್ಯವೆಂದಾದರೆ ರಾತ್ರಿಯ ಮೊದಲ ಭಾಗದಲ್ಲೇ ನಾಲ್ಕು ರಕಅತ್ ಐಚ್ಛಿಕ ನಮಾಝ್ ನಿರ್ವಹಿಸಿರಿ. ಮೊದಲ ರಕಅತ್‌ನಲ್ಲಿ ಸೂರಃ ಫಾತಿಹದ ಬಳಿಕ ಸೂರಃ ಅಲ್ ಯಾಸೀನ್ ಎರಡನೆಯ ರಕಅತ್‌ನಲ್ಲಿ ಸೂರಃ ಫಾತಿಹ ಮತ್ತು ಸೂರಃ ಅದ್ದುಖಾನ್, ಮೂರನೆಯ ರಕಅತ್‌ನಲ್ಲಿ ಸೂರಃ ಅಲಿಫ್ ಲಾಮ್ ಮೀಮ್ ಅಸ್ಸಜ್ದ ಮತ್ತು ನಾಲ್ಕನೆಯ ರಕಅತ್‌ನಲ್ಲಿ ಸೂರಃ ಫಾತಿಹದ ಜೊತೆಗೆ ಸೂರಃ ಅಲ್ ಮುಲ್ಕ್ ಪಠಿಸಿರಿ. ತರುವಾಯ ಅತ್ತಹಿಯ್ಯಾತ್ ಪಠಿಸಿ ಸಲಾಮ್ ಹೇಳಿದ ಬಳಿಕ ಚೆನ್ನಾಗಿ ದೇವ ಸ್ತುತಿಸ್ತೋತ್ರ ಮಾಡಿರಿ ಮತ್ತು ಚೆನ್ನಾಗಿ ಪ್ರವಾದಿವರ್ಯರ(ಸ) ಮೇಲೆ ಹಾಗೂ ಎಲ್ಲ ಪ್ರವಾದಿಗಳ ಮೇಲೆ ಸಲಾತ್ ಮತ್ತು ಸಲಾಮ್ ಹೇಳಿರಿ. ಆ ಬಳಿಕ ಸತ್ಯವಿಶ್ವಾಸಿಗಳಾದ ಎಲ್ಲಾ ಸ್ತ್ರೀ-ಪುರುಷರ ಪಾಪ ವಿಮೋಚನೆಗಾಗಿ ಪ್ರಾರ್ಥಿಸಿರಿ. ನಿಮಗಿಂತ ಮೊದಲು ಸತ್ಯವಿಶ್ವಾಸ ಸ್ವೀಕರಿಸಿದ ನಿಮ್ಮ ಸೋದರರಿಗಾಗಿಯೂ ಪ್ರಾರ್ಥಿಸಿರಿ. ಕೊನೆಯಲ್ಲಿ ಈ ದುಆ ಪಠಿಸಿರಿ:

اَللّٰهُمَّ ارْحَمْنِىْ بِتَرْكِ الْمَعَاصِىْ اَبَدًا مَّآ اَبْقَيْتَنِىْ وَارْحَمْنِىْ اَنْ اَتَكَلَّفَ
مَا لَا يَعْنِيْنِىْ وَارْزُقْنِىْ حُسْنَ النَّظْرِ فِيْمَا يُرْضِيْكَ عَنِّىْ اَللّٰهُمَّ بَدِيْعَ
السَّمٰوٰتِ وَالْاَرْضِ ذَاالْجَلَالِ وَالْاِكْرَامِ وَالْعِزَّةِ الَّتِىْ لَا تُرَامُ اَسْئَلُكَ يَا
اَللّٰهُ يَارَحْمٰنُ بِجَلَالِكَ وَنُوْرِ وَجْهِكَ اَنْ تُلْزِمَ قَلْبِىْ حِفْظَ كِتَابِكَ
كَمَا عَلَّمْتَنِىْ وَارْزُقْنِىْ اَنْ اَتْلُوَهُ عَلَى النَّحْوِ الَّذِىْ يُرْضِيْكَ عَنِّىْ اَللّٰهُمَّ
بَدِيْعَ السَّمٰوٰتِ وَالْاَرْضِ ذَاالْجَلَالِ وَالْاِكْرَامِ وَالْعِزَّةِ الَّتِىْ لَا تُرَامُ

اَسْئَلُكَ يَا اَللّٰهُ يَارَحْمٰنُ بِجَلَالِكَ وَنُوْرِ وَجْهِكَ اَنْ تُنَوِّرَ بِكِتَابِكَ بَصَرِيْ وَاَنْ تُطْلِقَ بِهِ لِسَانِيْ وَاَنْ تُفَرِّجَ بِهِ عَنْ قَلْبِيْ وَاَنْ تَشْرَحَ بِهِ صَدْرِيْ وَاَنْ تَغْسِلَ بِهِ بَدَنِيْ فَاِنَّهُ لَا يُعِيْنُنِيْ عَلَى الْحَقِّ غَيْرُكَ وَلَا يُؤْتِيْهِ اِلَّا اَنْتَ وَلَا حَوْلَ وَلَا قُوَّةَ اِلَّا بِاللّٰهِ الْعَلِيِّ الْعَظِيْمِ

(ترمذی)

"ಅಲ್ಲಾಹುಮ್ಮರ್‌ಹಮ್‌ನೀ ಬಿತರ್‌ಕಿಲ್ ಮಆಸೀ ಅಬ್‌ದಮ್ಮಾ ಅಬ್‌ಕೈತನೀ ವರ್‌ಹಮ್‌ನೀ ಅನ್ ಅತಕಲ್ಲಫ ಮಾಲಾ ಯಅ್‌ನೀನೀ ವರ್‌ಝುಕ್‌ನೀ ಹುಸ್ನನ್ನಝ್‌ರಿ ಫೀಮಾ ಯುರ್‌ದೀಕ ಅನ್ನೀ ಅಲ್ಲಾಹುಮ್ಮ ಬದೀಅಸ್ಸಮಾವಾತಿ ವಲ್ ಅರ್‌ದಿ ಝುಲ್ ಜಲಾಲಿ ವಲ್ ಇಕ್ರಾಮಿ ವಲ್ ಇಝ್ಝತಿಲ್ಲತೀ ಲಾ ತುರಾಮು ಅಸ್‌ಅಲುಕ ಯಾ ಅಲ್ಲಾಹು ಯಾ ರಹ್‌ಮಾನು ಬಿಜಲಾಲಿಕ ವನೂರಿ ವಜ್‌ಹಿಕ ಅನ್ ತುಲ್‌ಝಿಮ ಕಲ್‌ಬೀ ಹಿಫ್‌ಝು ಕಿತಾಬಿಕ ಕಮಾ ಅಲ್ಲಮ್‌ತನೀ ವರ್‌ಝುಕ್‌ನೀ ಅನ್ ಅತ್‌ಲುವಹೂ ಅಲನ್ನಹ್‌ವಿಲ್ಲದೀ ಯುರ್‌ದೀಕ ಅನ್ನೀ. ಅಲ್ಲಾಹುಮ್ಮ ಬದೀಅಸ್ಸಮಾವಾತಿ ವಲ್ ಅರ್‌ದಿ ಝುಲ್ ಜಲಾಲಿ ವಲ್ ಇಕ್ರಾಮಿ ವಲ್ ಇಝ್ಝತ್ತಿಲ್ಲತೀ ಲಾ ತುರಾಮು ಅಸ್‌ಅಲುಕ ಯಾ ಅಲ್ಲಾಹು ಯಾ ರಹ್‌ಮಾನು ಬಿಜಲಾಲಿಕ ವನೂರಿ ವಜ್‌ಹಿಕ ಅನ್ ತುನವ್ವಿರ ಬಿಕಿತಾಬಿಕ ಬಸರೀ ವಅನ್ ತುತ್‌ಲಿಕ ಬಿಹಿ ಲಿಸಾನೀ ವಅನ್ ತುಫರ್‌ರಿಜ ಬಿಹೀ ಅನ್‌ಕಲ್‌ಬೀ ವಅನ್ ತಶ್‌ರಹ ಬಿಹೀ ಸದ್‌ರೀ ವಅನ್ ತಗ್‌ಸಿಲ ಬಿಹೀ ಬದನೀ ಫಇನ್ನಹೂ ಲಾ ಯುಈನುನೀ ಅಲಲ್ ಹಕ್ಕಿ ಗೈರುಕ ವಲಾ ಯುಅ್‌ತೀಹಿ ಇಲ್ಲಾ ಅಂತ ವಲಾ ಹೌಲ ವಲಾ ಕುವ್ವತ ಇಲ್ಲಾ ಬಿಲ್ಲಾಹಿಲ್ ಅಲಿಯ್ಯಿಲ್ ಅಝೀಮ್."

(ಓ ಅಲ್ಲಾಹ್! ನೀನು ನನ್ನನ್ನು ಜೀವಂತವಿರಿಸುವ ತನಕ, ನಿನ್ನ ಕರುಣೆಯಿಂದ, ಸದಾ ಪಾಪಗಳಿಂದ ದೂರವಿರುವ ಸೌಭಾಗ್ಯ ನೀಡು. ನಿನ್ನ ಕರುಣೆಯಿಂದ ನನಗೆ ಉದ್ದೇಶರಹಿತ ಮತ್ತು ನಿರರ್ಥಕ ಕಾರ್ಯಗಳಿಂದ ದೂರವಿರುವ ಶಕ್ತಿ ದಯಪಾಲಿಸು. ನಿನ್ನ ಸಂಪ್ರೀತಿ ಪ್ರಾಪ್ತವಾಗುವ ಕಾರ್ಯಗಳ ಬಗ್ಗೆ ಉತ್ತಮ ದೃಷ್ಟಿಕೋನ ನೀಡು. ಓ ಅಲ್ಲಾಹ್! ಅಸದೃಶವಾದ ಭೂಮ್ಯಾಕಾಶಗಳ ಕರ್ತನೇ! ಮಹಿಮಾವಂತನೇ, ಗೌರವಪೂರ್ಣನೇ! ಅನುಲ್ಲಂಘನೀಯ ಅಧಿಕಾರಗಳ ಒಡೆಯನೇ! ಓ ಅಲ್ಲಾಹ್! ಓ ಪರಮ ದಯಾಮಯನೇ! ನಾನು ನಿನ್ನ ಮಹಾನತೆ ಮತ್ತು ನಿನ್ನ ಆತ್ಮದ ಜ್ಯೋತಿಯ ಆಣೆಯಿಟ್ಟು ನಿನ್ನಲ್ಲಿ ಯಾಚಿಸುತ್ತೇನೆ. ನೀನು ನನಗೆ ನಿನ್ನ ಗ್ರಂಥವನ್ನು ಕಲಿಸಿದಂತೆ ಅದನ್ನು ಸ್ಮರಣೆಯಲ್ಲಿಡುವ

ಶಕ್ತಿಯನ್ನೂ ದಯಪಾಲಿಸು. ನಿನ್ನ ಸಂಪ್ರೀತಿ ಗಳಿಸಲನುವಾಗುವ ರೀತಿಯಲ್ಲಿ ಅದಮ್ನ ಪಠಿಸುವ ಸೌಭಾಗ್ಯವನ್ನು ಕರುಣಿಸು. ಓ ಭೂಮ್ಯಾಕಾಶಗಳ ಕರ್ತನೇ, ಮಹಿಮಾವಂತನೇ, ಗೌರವಪೂರ್ಣನೇ! ಅನುಲ್ಲಂಘನೀಯ ಅಧಿಕಾರಗಳ ಒಡೆಯನೇ! ಓ ಅಲ್ಲಾಹ್! ಓ ಪರಮ ದಯಾಮಯನೇ! ನಾನು ನಿನ್ನ ಮಹಾನತೆ ಮತ್ತು ನಿನ್ನ ಆತ್ಮದ ಜ್ಯೋತಿಯ ಆಣೆಯಿಟ್ಟು ನಿನ್ನಲ್ಲಿ ಯಾಚಿಸುತ್ತೇನೆ. ನೀನು ನನಗೆ ನಿನ್ನ ಗ್ರಂಥವನ್ನು ಕಲಿಸಿದಂತೆ ಅದನ್ನು ಸ್ಮರಣೆಯಲ್ಲಿಡುವ ಶಕ್ತಿಯನ್ನೂ ದಯಪಾಲಿಸು. ನಿನ್ನ ಸಂಪ್ರೀತಿ ಗಳಿಸಲನುವಾಗುವ ರೀತಿಯಲ್ಲಿ ಅದನ್ನು ಪಠಿಸುವ ಸೌಭಾಗ್ಯವನ್ನು ಕರುಣಿಸು. ಓ ಭೂಮ್ಯಾಕಾಶಗಳ ಕರ್ತನೇ! ಮಹಿಮಾವಂತನೇ! ಗೌರವಪೂರ್ಣನೇ! ಅನುಲ್ಲಂಘನೀಯ ಅಧಿಕಾರಗಳ ಒಡೆಯನೇ! ಓ ಅಲ್ಲಾಹ್! ಓ ಪರಮ ದಯಾಮಯನೇ! ನಾನು ನಿನ್ನ ಮಹಾನತೆ ಮತ್ತು ನಿನ್ನ ಆತ್ಮದ ಜ್ಯೋತಿಯ ಆಣೆಯಿಟ್ಟು ನಿನ್ನಲ್ಲಿ ಯಾಚಿಸುತ್ತೇನೆ, ನೀನು ನಿನ್ನ ಗ್ರಂಥದ ಸಮೃದ್ಧಿಯಿಂದ ನನ್ನ ಕಣ್ಣಿಗೆ ಪ್ರಕಾಶವನ್ನು ದಯಪಾಲಿಸು. ನನ್ನ ನಾಲಿಗೆಯಲ್ಲಿ ಅದರ ಪದಗಳನ್ನು ಜಾರಿಗೊಳಿಸು. ನನ್ನ ಮನಸ್ಸಿನಿಂದ ದುಃಖ ದುಮ್ಮಾನವನ್ನು ದೂರೀಕರಿಸು. ಅದರ ಸಮೃದ್ಧಿ ಯಿಂದ ಅದಕ್ಕೆ ನನ್ನ ಹೃದಯ ದ್ವಾರವನ್ನು ತೆರೆ. ಅದರ ಸಮೃದ್ಧಿಯಿಂದ ನನ್ನ ದೇಹವನ್ನು ತೊಳೆದು ಶುದ್ಧಗೊಳಿಸು. ನಿನ್ನ ಹೊರತು ಸತ್ಯದ ಬಗ್ಗೆ ನನಗೆ ನೆರವಾಗುವವರು ಯಾರೂ ಇಲ್ಲ. ಸತ್ಯದ ಸೌಭಾಗ್ಯ ಕರುಣಿಸುವವನು ನೀನು ಮಾತ್ರ. ಪಾಪಗಳಿಂದ ದೂರವಿರುವ ಶಕ್ತಿ ಮತ್ತು ಒಳಿತುಗಳ ಮೇಲೆ ಸ್ಥಿರವಾಗಿರುವ ಸಾಮರ್ಥ್ಯ ಅಲ್ಲಾಹನಿಂದಲೇ ದೊರೆಯಬಲ್ಲುದು. ಅವನು ಅತ್ಯುನ್ನತನು ಹಾಗೂ ಅತ್ಯಂತ ಮಹಾನನು". (ತಿರ್ಮಿದಿ)

# ಕುರ್‌ಆನಿನ ಜ್ಞಾನ ಗಳಿಸುವ ಪ್ರಾರ್ಥನೆ

ಪವಿತ್ರ ಕುರ್‌ಆನಿನ ಪಠನ ಮಾಡುವುದು ಮತ್ತು ಅದರ ವ್ಯಾಖ್ಯಾನದ ಬಗ್ಗೆ ಚಿಂತಿಸುವುದು ಸತ್ಯವಿಶ್ವಾಸಿಯ ಪ್ರಿಯಕರವಾದ ಆರಾಧನೆಯಾಗಿದೆ. ಪವಿತ್ರ ಕುರ್‌ಆನಿನೊಂದಿಗೆ ವೈಚಾರಿಕ ಮತ್ತು ಭಾವನಾತ್ಮಕ ಸಂಬಂಧ ದೇವನೊಂದಿಗೆ ಸಂಬಂಧದ ಹೇತುವೂ ಹೌದು, ಪುರಾವೆಯೂ ಹೌದು. ಕುರ್‌ಆನಿನ ಬಗ್ಗೆ ಗಹನವಾಗಿ ಚಿಂತಿಸುವುದರಿಂದ ಸತ್ಯವಿಶ್ವಾಸಿಗೆ ಆತ್ಮೀಯ ಆನಂದ ಲಭಿಸುತ್ತದೆ. ಮಾತ್ರವಲ್ಲ ತನ್ಮೂಲಕ ವಿವೇಕ ಮತ್ತು ವೈಚಾರಿಕತೆಯ ಬಾಗಿಲು ಅವನಿಗೆ ತೆರೆಯಲ್ಪಡುತ್ತದೆ.

ಪವಿತ್ರ ಕುರ್‌ಆನ್ ಬಹಳ ಸುಲಭದ ಗ್ರಂಥ. ಅದರ ಶಿಕ್ಷಣಗಳು ಬಹಳ ಸರಳ, ಸ್ಪಷ್ಟ ಮತ್ತು ಅಸಂದಿಗ್ಧ. ಅದರಿಂದ ಪ್ರತಿಯೊಬ್ಬನೂ ಮಾರ್ಗದರ್ಶನ ಹೊಂದಬಹುದು. ಆದರೆ ಅದರಲ್ಲಡಕವಾಗಿರುವ ವಿವೇಕಪೂರ್ಣ ವಿಚಾರಗಳನ್ನು ತಿಳಿಯ ಬೇಕಾದರೆ ಅದನ್ನು ಬಹಳ ಆಳವಾಗಿ ಅಭ್ಯಸಿಸಬೇಕಾಗುತ್ತದೆ. ನೈಜ ಬಯಕೆಯೊಂದಿಗೆ ಅದನ್ನು ಪಠಿಸಬೇಕು. ಯಾವ ಸಂದರ್ಭದಲ್ಲೂ ಅದರ ಬಗ್ಗೆ ಅಶ್ರದ್ಧೆ ತೋರಬಾರದು. ನಿರಂತರ ಅದನ್ನು ಪಠಿಸುತ್ತಿರಬೇಕು. ಜೀವನದಾದ್ಯಂತ ಈ ಕೆಲಸ ಜಾರಿಯಲ್ಲಿರಬೇಕು.

ಪಾರಾಯಣ ಮಾಡುವ ವೇಳೆ ಕ್ಲಿಷ್ಟತೆಗಳು ಎದುರಾಗುವುದು ಸ್ವಾಭಾವಿಕ. ಕೆಲವೆಡೆ ಕಠಿಣ ಪ್ರಯೋಗಗಳು ಬರುತ್ತವೆ. ಗಾಢವಾದ ಚಿಂತನೆಯ ಬಳಿಕವೂ ಅದು ನಿಮಗೆ ತಿಳಿಯದೆ ಇರಬಹುದು. ಆದರೆ ನೀವು ನಿಜವಾಗಿಯೂ ಪವಿತ್ರ ಕುರ್‌ಆನಿನ ಅಧ್ಯಯನಶೀಲ ವಿದ್ಯಾರ್ಥಿಯಾಗಿದ್ದರೆ ಅಂತಹ ಸಂದರ್ಭಗಳಲ್ಲಿ ನೀವು ನಿರಾಶರಾಗಬಾರದು, ಎದೆಗುಂದ ಬಾರದು. ಪವಿತ್ರ ಕುರ್‌ಆನನ್ನು ಟೀಕಿಸುವ ಯೋಚನೆಯೂ ನಿಮಗೆ ಬರಬಾರದು. ಬೇಸತ್ತು ಪಠನ ಮತ್ತು ಅಧ್ಯಯನವನ್ನು ತೊರೆಯಲೂ ಬಾರದು. ಪೂರ್ಣ ನಿಷ್ಠೆಯೊಂದಿಗೆ, ಏಕಾಗ್ರತೆಯಿಂದ ಅಲ್ಲಾಹನತ್ತ ಗಮನ ಹರಿಸಬೇಕು. ದೇವನಲ್ಲಿ ಈ ಕ್ಲಿಷ್ಟತೆಯನ್ನು ನೀಗಿಸಲು ಪ್ರಾರ್ಥಿಸಬೇಕು. ಪವಿತ್ರ ಕುರ್‌ಆನಿನ ವಾಕ್ಯಗಳನ್ನು ಇಷ್ಟ ಬಂದಂತೆ ವ್ಯಾಖ್ಯಾನಿಸುವುದು, ಅದರ ಬಗ್ಗೆ ಸ್ವಂತ ಅಭಿಪ್ರಾಯವನ್ನು ಹೊಂದುವುದು ಅಥವಾ ತನ್ನಿಷ್ಟದ ಅರ್ಥವನ್ನು ಅದರಿಂದ ಪಡೆಯಲು ಯತ್ನಿಸುವುದು ಸಂಪೂರ್ಣ ತ್ಯಾಜ್ಯ. ಓರ್ವ ಸತ್ಯಾನ್ವೇಷಿ ಯಂತೆ ಕುರ್‌ಆನಿನ ವಾಕ್ಯಗಳಿಂದ ಸ್ಫುಟವಾಗುವ ಅರ್ಥವನ್ನೇ ಗ್ರಹಿಸಲು ಯತ್ನಿಸಿರಿ. ಅತ್ಯಂತ ದೀನಭಾವದೊಂದಿಗೆ ಅಲ್ಲಾಹನಲ್ಲಿ ಪ್ರಾರ್ಥಿಸಿರಿ. ಓ ಅಲ್ಲಾಹ್! ನನ್ನ ಈ ಕ್ಲಿಷ್ಟತೆಯನ್ನು ನೀಗಿಸು. ಅದರ ನಿಜವಾದ ಅರ್ಥವನ್ನು ಗ್ರಹಿಸುವ ಸೌಭಾಗ್ಯ ದಯಪಾಲಿಸು. ಅದರ ಅರ್ಥ ಮತ್ತು ವ್ಯಾಖ್ಯಾನದ ಬಗ್ಗೆ ನನ್ನ ಹೃದಯಕ್ಕೆ ಸಂತೃಪ್ತಿ ದಯಪಾಲಿಸು. ಈ ಉದ್ದೇಶಾರ್ಥ ನಿಶಾ ನಮಾಝ್‌ನಲ್ಲಿ ಆ ಸೂಕ್ತಗಳನ್ನು ನಿಲ್ಲಿಸಿ

ನಿಲ್ಲಿಸಿ ಪಠಿಸಿರಿ. ಸ್ವಲ್ಪ ಜೋರಾಗಿಯೇ ಪಠಿಸಿರಿ. ಈ ಕೆಳಗಿನ ದುಆವನ್ನೂ ಪಠಿಸುತ್ತಲಿರಿ. ಈ ದುಆ ಫಲಕಾರಿಯಾಗುವುದೆಂದು ನಿರೀಕ್ಷಿಸಬಹುದು.

ಪ್ರವಾದಿ(ಸ) ಹೀಗೆ ಹೇಳಿರುವರು: ಯಾರು ತನ್ನ ಚಿಂತನೆ ಮತ್ತು ದುಃಖದ ವೇಳೆ ಈ ದುಆ ಪಠಿಸುವನೋ ಅವನಿಂದ ಆ ಚಿಂತೆ ಮತ್ತು ದುಃಖವನ್ನು ಅಲ್ಲಾಹನು ನೀಗಿಸುವನು. ಸಂತೋಷ ಮತ್ತು ಸಂತೃಪ್ತಿ ದಯಪಾಲಿಸುವನು.

اَللّٰهُمَّ اِنِّىْ عَبْدُكَ، اِبْنُ عَبْدِكَ، اِبْنُ اَمَتِكَ نَاصِيَتِىْ بِيَدِكَ، مَاضٍ فِىْ حُكْمِكَ، عَدْلٌ فِىْ قَضَآئِكَ اَسْئَلُكَ بِكُلِّ اسْمٍ هُوَ لَكَ، سَمَّيْتَ بِهٖ نَفْسَكَ اَوْ اَنْزَلْتَهُ فِىْ كِتَابِكَ اَوْ عَلَّمْتَهُ اَحَدًا مِّنْ خَلْقِكَ اَوِ اسْتَأْثَرْتَ بِهٖ فِىْ عِلْمِ الْغَيْبِ عِنْدَكَ، اَنْ تَجْعَلَ الْقُرْاٰنَ رَبِيْعَ قَلْبِىْ، وَنُوْرَ صَدْرِىْ وَجِلَآءَ حُزْنِىْ وَذِهَابَ هَمِّىْ وَغَمِّىْ (مسند احمد، ابن حبّان)

"ಅಲ್ಲಾಹುಮ್ಮ ಇನ್ನೀ ಅಬ್ದುಕ, ಇಬ್ನು ಅಬ್ದಿಕ, ಇಬ್ನು ಅಮತಿಕ ನಾಸಿಯತೀ ಬಿಯದಿಕ. ಮಾದಿನ್ ಫೀ ಹುಕ್‌ಮಿಕ, ಅದ್‌ಲುನ್ ಫೀ ಕದಾಇಕ ಅಸ್‌ಅಲುಕ ಬಿಕುಲ್ಲಿಸ್‌ಮಿನ್ ಹುವಲಕ, ಸಮ್ಮೈತ ಬಿಹಿ ನಫ್‌ಸಕ ಅವ್ ಅನ್‌ಝಲ್‌ತಹೂ ಫೀ ಕಿತಾಬಿಕ ಅವ್ ಅಲ್ಲಮ್‌ತಹೂ ಅಹದಮ್ಮಿನ್ ಖಲ್‌ಕಿಕ ಅವಿಸ್ತಅ್‌ಸರ್‌ತ ಬಿಹೀ ಫೀ ಇಲ್‌ಮಿಲ್ ಗೈಬಿ ಇಂದಕ, ಅನ್ ತಜ್‌ಅಲಲ್ ಕುರ್‌ಆನ ರಬೀಅ ಕಲ್‌ಬೀ, ವನೂರ ಸದ್‌ರೀ ವಜಿಲಾಅ ಹುಝ್‌ನೀ ವದಿಹಾಬ ಹಮ್ಮೀ ವಗಮ್ಮೀ".

(ಓ ಅಲ್ಲಾಹ್! ನಾನು ನಿನ್ನ ದಾಸ. ನಿನ್ನ ದಾಸನ ಪುತ್ರ. ನಿನ್ನ ದಾಸಿಯ ಪುತ್ರ. ನನ್ನ ಜುಟ್ಟು ನಿನ್ನ ಕೈಯಲ್ಲಿದೆ. ನನ್ನ ಮೇಲೆ ನಿನ್ನ ಆಜ್ಞೆಯೇ ನಡೆಯುತ್ತದೆ. ನನ್ನ ಮಟ್ಟಿಗೆ ನಿನ್ನ ತೀರ್ಮಾನವು ನ್ಯಾಯಯುತವಾಗಿದೆ. ನಾನು ನಿನ್ನ ಅತ್ಯುತ್ತಮ ಹಾಗೂ ನೀನೇ ಇಟ್ಟಿರುವ, ನಿನ್ನ ಗ್ರಂಥದಲ್ಲಿ ಉಲ್ಲೇಖಿಸಿರುವ, ನೀನು ನಿನ್ನ ದಾಸರ ಪೈಕಿ ಯಾರಿಗಾದರೂ ಕಲಿಸಿರುವ ಅಥವಾ ನೀನು ನಿನ್ನ ಬಳಿಯೇ ರಹಸ್ಯವಾಗಿ ಇಟ್ಟಿರುವ ಎಲ್ಲ ಗುಣನಾಮಗಳ ಆಣೆ ಹಾಕಿ ಪ್ರಾರ್ಥಿಸುತ್ತೇನೆ. ಕುರ್‌ಆನನ್ನು ನನ್ನ ಹೃದಯದ ಶಾಂತಿ, ನನ್ನ ಎದೆಯ ಜ್ಯೋತಿ, ನನ್ನ ದುಃಖಗಳಿಗೆ ಪರಿಹಾರ ಮತ್ತು ನನ್ನ ಎಲ್ಲ ಚಿಂತೆಗಳ ನಿವಾರಣೆಯ ಹೇತುವಾಗಿಸು.

(ಮುಸ್ನದ್ ಅಹ್ಮದ್, ಇಬ್ನ್ ಹಿಬ್ಬಾನ್)

ಈ ಹದೀಸನ್ನು ವರದಿ ಮಾಡಿದ ಹ. ಅಬ್ದುಲ್ಲಾ ಬಿನ್ ಮಸ್‌ಊದ್(ರ) ಹೇಳುತ್ತಾರೆ: (ಪ್ರವಾದಿವರ್ಯರಲ್ಲಿ(ಸ) ವಿಚಾರಿಸಲಾಯಿತು) 'ನಾವು ಈ ಪ್ರಾರ್ಥನೆಯನ್ನು ಕಲಿಯಬೇಕೇ?' ಎಂದು. ಆಗ ಪ್ರವಾದಿ(ಸ) ಹೇಳಿದರು: 'ಹೌದು, ನಿಮ್ಮ ಪೈಕಿ ಯಾರು ಈ ದುಆವನ್ನು ಆಲಿಸಿದರೂ ಇದನ್ನವನು ತಪ್ಪದೆ ಕಂಠಪಾಠ ಮಾಡಬೇಕು'.

❖ ❖ ❖ ❖

# ಶುಕ್ರವಾರದ ಪ್ರವಚನ

ಇಸ್ಲಾಮೀ ಭಾವನೆಗಳನ್ನು ಬಡಿದೆಬ್ಬಿಸುವ, ಸತ್ಯವಿಶ್ವಾಸಕ್ಕೆ ಚೈತನ್ಯ ನೀಡುವ, ಬೋಧನೆ ಮತ್ತು ಸ್ಮರಣೆಯ ಕರ್ತವ್ಯವನ್ನು ನಿರಂತರವಾಗಿಯೂ ಕ್ರಮಬದ್ಧವಾಗಿಯೂ ನಿರ್ವಹಿಸುವ ಅತ್ಯಂತ ಪರಿಣಾಮಕಾರಿ ಮತ್ತು ವ್ಯವಸ್ಥಿತ ಮಾಧ್ಯಮವೇ ಜುಮಾದ ಖುತ್‌ಬಾ(ಶುಕ್ರವಾರದ ಪ್ರವಚನ). ಸಹಜ ಶೈಲಿಯಲ್ಲಿ ಪ್ರತಿವಾರ ಮುಸ್ಲಿಮರಿಗೆ ಅವರ ಕರ್ತವ್ಯಗಳನ್ನು ನೆನಪಿಸುವ, ಧರ್ಮದ ಬೇಡಿಕೆಗಳನ್ನು ಮನದಟ್ಟು ಮಾಡುವ ಹಾಗೂ ಇಸ್ಲಾಮ್ ಧರ್ಮಕ್ಕಾಗಿ ಏನಾದರೂ ಮಾಡಬೇಕು ಎಂಬ ಕಳಕಳಿಯನ್ನು ಉಂಟು ಮಾಡುವ ಒಂದು ಧಾರ್ಮಿಕ ವ್ಯವಸ್ಥೆಯದು. ಅದಕ್ಕೆ ಸರಿಸಾಟಿಯಾದ ಒಂದು ವ್ಯವಸ್ಥೆ ಬೇರೆ ಇಲ್ಲ. ಆದರೆ ಅದರಿಂದ ಪೂರ್ಣ ಪ್ರಯೋಜನ ಪಡೆಯಬೇಕಾದರೆ ಪ್ರವಚನಕಾರರು ಶ್ರೋತೃಗಳ ಭಾಷೆಯಲ್ಲೂ ಅವರನ್ನು ಅಭಿಸಂಬೋಧಿಸಬೇಕಾದುದು ಅತ್ಯಗತ್ಯ.

ಖುತ್‌ಬತುಸ್ಸಾನೀ(ದ್ವಿತೀಯ ಪ್ರವಚನ)ಯು ಅರಬೀ ಭಾಷೆಯಲ್ಲೇ ಆಗಿರಬೇಕು. ಆದರೆ ಪ್ರಥಮ ಪ್ರವಚನವನ್ನು ಜನರಿಗೆ ಅರ್ಥವಾಗುವ ಭಾಷೆಯಲ್ಲೂ ನೀಡಬೇಕು. ಇದಕ್ಕಾಗಿ ಪ್ರಸಕ್ತ ಪರಿಸ್ಥಿತಿಯನ್ನು ಮುಂದಿರಿಸಿಕೊಂಡು ಧರ್ಮದ ಬೇಡಿಕೆಗಳನ್ನೊಳಗೊಂಡ ಸಂಕ್ಷಿಪ್ತ ಮತ್ತು ಸಾರವತ್ತಾದ ಪ್ರವಚನವನ್ನು ನೀವೇ ಸಿದ್ಧಪಡಿಸಿಕೊಳ್ಳುವುದು ಉತ್ತಮ. ಪ್ರತಿ ವಾರವೂ ನಿರಂತರವಾಗಿ ಮತ್ತು ಕ್ರಮಬದ್ಧವಾಗಿ ಸತ್ಯವಿಶ್ವಾಸವನ್ನು ವರ್ಧಿಸುವ ಮತ್ತು ಸತ್ಕರ್ಮಗಳಿಗೆ ಪ್ರೇರಣೆ ನೀಡುವ ಪ್ರಯತ್ನ ಮಾಡಬೇಕು. ಒಂದು ವೇಳೆ ನಿಮ್ಮಲ್ಲಿ ಈ ಸಾಮರ್ಥ್ಯವಿಲ್ಲದಿದ್ದರೆ ಕನಿಷ್ಠಪಕ್ಷ ಯಾವುದಾದರೂ ಅರಬೀ ಖುತ್‌ಬಾವನ್ನು ಪಠಿಸಿದ ಬಳಿಕ ಅದರ ತಾತ್ಪರ್ಯವನ್ನು ಶ್ರೋತೃಗಳ ಭಾಷೆಯಲ್ಲಿ ವಿವರಿಸಬೇಕು. ಅರಬೀ ಖುತ್‌ಬಾವನ್ನು ಆರಿಸುವಾಗ ಪ್ರವಾದಿವರ್ಯರ(ಸ) ಮತ್ತು ನಾಲ್ಕು ಮಂದಿ ಸತ್ಯಸಂಧ ಖಲೀಫಾಗಳ(ರ) ಖುತ್‌ಬಾವನ್ನೇ ಆರಿಸುವುದು ಅತ್ಯುತ್ತಮ. ಪ್ರವಾದಿ ಮುಹಮ್ಮದ್‌ರ(ಸ) ಖುತ್‌ಬಾದ ಮಾತುಗಳನ್ನು ನಾವು ಅಧಿಕೃತ ಹದೀಸ್‌ಗಳಿಂದ ಆಯ್ದು ಈ ಕೆಳಗೆ ಕೊಡುತ್ತಿದ್ದೇವೆ. ಈ ಪೈಕಿ ಮೊದಲನೆಯದು ಹಿಜ್ರತ್‌ನ ಬಳಿಕ ಪ್ರವಾದಿ(ಸ) ಮದೀನಾದಲ್ಲಿ ನೀಡಿದ ಪ್ರಥಮ ಐತಿಹಾಸಿಕ ಖುತ್‌ಬಾ ಆಗಿದೆ. ಎರಡನೆಯದು ಪ್ರವಾದಿ(ಸ) ಮುಸ್ಲಿಮರನ್ನು ಪವಿತ್ರ ಕುರ್‌ಆನಿನೊಂದಿಗೆ ಗಾಢ ಸಂಬಂಧ ಬೆಳೆಸಬೇಕೆಂದೂ ಅದರ ಬಗ್ಗೆ ನಿರಂತರ ಚಿಂತನ-ಮಂಥನ ನಡೆಸುತ್ತಿರಬೇಕೆಂದೂ ಅತ್ಯಂತ ಪ್ರಬುದ್ಧ ಶೈಲಿಯಲ್ಲಿ ಉಪದೇಶಿಸಿರುವ ಖುತ್‌ಬಾ ಆಗಿದೆ. ಏಕೆಂದರೆ ಪವಿತ್ರ ಕುರ್‌ಆನಿನೊಂದಿಗೆ ಗಾಢವಾದ ಸಂಬಂಧ ಬೆಳೆಸದೆ ಧರ್ಮದೊಂದಿಗೆ ನಮ್ಮ ಸಂಬಂಧವನ್ನು ಉಳಿಸಿಕೊಳ್ಳುವುದು ಸಾಧ್ಯವಿಲ್ಲ.

## ಮದೀನಾದ ಪ್ರಥಮ ಪ್ರವಚನ

اَلْحَمْدُ لِلّٰهِ اَحْمَدُهُ وَاَسْتَعِيْنُهُ وَاَسْتَغْفِرُهُ وَاَسْتَهْدِيْهِ وَأُؤْمِنُ بِهِ وَلَا اَكْفُرُهُ، وَّاُعَادِيْ مَنْ يَّكْفُرُهُ، وَاَشْهَدُ اَنْ لَّآ اِلٰهَ اِلَّا اللّٰهُ وَحْدَهُ لَا شَرِيْكَ لَهُ وَاَشْهَدُ اَنَّ مُحَمَّدًا عَبْدُهُ وَرَسُوْلُهُ ـ اَرْسَلَهُ بِالْهُدٰى وَالنُّوْرِ وَالْمَوْعِظَةِ عَلٰى فَتْرَةٍ مِّنَ الرُّسُلِ وَقِلَّةٍ مِّنَ الْعِلْمِ وَضَلَالَةٍ مِّنَ النَّاسِ وَانْقِطَاعٍ مِّنَ الزَّمَانِ وَدُنُوٍّ مِّنَ السَّاعَةِ وَقُرْبٍ مِّنَ الْاَجَلِ، وَمَنْ يُّطِعِ اللّٰهَ وَرَسُوْلَهُ فَقَدْ رَشَدَ وَمَنْ يَّعْصِهِمَا فَقَدْ غَوٰى وَفَرَّطَ وَضَلَّ ضَلَالًا بَعِيْدًا اُوْصِيْكُمْ بِتَقْوَى اللّٰهِ فَاِنَّهُ خَيْرُ مَآ اَوْصٰى بِهِ الْمُسْلِمُ الْمُسْلِمَ اَنْ يَّحُضَّهُ عَلَى الْاٰخِرَةِ وَاَنْ يَّأْمُرَهُ بِتَقْوَى اللّٰهِ فَاحْذَرُوْا مَا حَذَّرَكُمُ اللّٰهُ مِنْ نَّفْسِهِ وَلَآ اَفْضَلَ مِنْ ذٰلِكَ نَصِيْحَةً وَّلَآ اَفْضَلَ مِنْ ذٰلِكَ ذِكْرًا وَّاِنَّ تَقْوَى اللّٰهِ لِمَنْ عَمِلَ بِهِ عَلٰى وَجَلٍ وَّمَخَافَةٍ مِّنْ رَّبِّهِ عَوْنُ صِدْقٍ عَلٰى مَا تَبْغُوْنَ مِنْ اَمْرِ الْاٰخِرَةِ وَمَنْ يُّصْلِحْ الَّذِيْ بَيْنَهُ وَبَيْنَ اللّٰهِ مِنْ اَمْرِهِ فِي السِّرِّ وَالْعَلَانِيَةِ لَا يَنْوِيْ بِذَالِكَ اِلَّا وَجْهَ اللّٰهِ يَكُنْ لَّهُ ذِكْرًا فِيْ عَاجِلِ اَمْرِهِ وَذُخْرًا فِيْمَا بَعْدَ الْمَوْتِ حِيْنَ يَفْتَقِرُ الْمَرْءُ اِلٰى مَا قَدَّمَ وَمَا كَانَ سِوٰى ذٰلِكَ يَوَدُّ لَوْ اَنَّ بَيْنَهَا وَبَيْنَهُ اَمَدًا بَعِيْدًا وَّيُحَذِّرُكُمُ اللّٰهُ نَفْسَهُ وَاللّٰهُ رَؤُفٌ بِالْعِبَادِ وَالَّذِيْ صَدَقَ قَوْلَهُ، وَاَنْجَزَ وَعْدَهُ لَا خُلِفَ لِذَالِكَ فَاِنَّهُ يَقُوْلُ عَزَّوَجَلَّ مَا يُبَدَّلُ الْقَوْلُ لَدَيَّ وَمَآ اَنَا بِظَلَّامٍ لِّلْعَبِيْدِ

فَاتَّقُوا اللّٰهَ فِيْ عَاجِلِ اَمْرِكُمْ وَاٰجِلِهٖ فِي السِّرِّ وَالْعَلَانِيَةِ فَاِنَّهٗ مَنْ يَّتَّقِ اللّٰهَ يُكَفِّرْ عَنْهُ سَيِّاٰتِهٖ وَيُعْظِمْ لَهٗٓ اَجْرًا وَمَنْ يَّتَّقِ اللّٰهَ فَقَدْ فَازَ فَوْزًا عَظِيْمًا، وَاِنَّ تَقْوَى اللّٰهِ يُوَقِّيْ مَقْتَهٗ وَيُوَقِّيْ عُقُوبَتَهٗ وَيُوَقِّيْ سَخْطَهٗ، وَاِنَّ تَقْوَى اللّٰهِ يُبَيِّضُ الْوُجُوْهَ وَيُرْضِي الرَّبَّ وَيَرْفَعُ الدَّرَجَةَ

خُذُوْا بِحَظِّكُمْ وَلَا تُفَرِّطُوْا فِيْ جَنْبِ اللّٰهِ وَقَدْ عَلَّمَكُمُ اللّٰهُ كِتَابَهٗ وَنَهَجَ لَكُمْ سَبِيْلَهٗ لِيَعْلَمَ الَّذِيْنَ صَدَقُوْا وَيَعْلَمَ الْكَاذِبِيْنَ۔ فَاَحْسِنُوْا كَمَآ اَحْسَنَ اللّٰهُ اِلَيْكُمْ وَعَادُوْٓا اَعْدَآئَهٗ وَجَاهِدُوْا فِي اللّٰهِ حَقَّ جِهَادِهٖ هُوَ اجْتَبٰكُمْ وَسَمّٰكُمُ الْمُسْلِمِيْنَ لِيَهْلِكَ مَنْ هَلَكَ عَنْ بَيِّنَةٍ وَّيَحْيٰى مَنْ حَيَّ عَنْ بَيِّنَةٍ وَلَا قُوَّةَ اِلَّا بِاللّٰهِ

فَاَكْثِرُوْا ذِكْرَ اللّٰهِ وَاعْمَلُوْا لِمَا بَعْدَ الْيَوْمِ فَاِنَّهٗ مَنْ يُّصْلِحُ مَا بَيْنَهٗ وَبَيْنَ اللّٰهِ يَكْفِهِ اللّٰهُ مَا بَيْنَهٗ وَبَيْنَ النَّاسِ

ذٰلِكَ بِاَنَّ اللّٰهَ يَقْضِيْ عَلَى النَّاسِ وَلَا يَقْضُوْنَ عَلَيْهِ وَيَمْلِكُ مِنَ النَّاسِ وَلَا يَمْلِكُوْنَ مِنْهُ اَللّٰهُ اَكْبَرُ وَلَا قُوَّةَ اِلَّا بِاللّٰهِ الْعَظِيْمِ

"ಅಲ್‌ಹಮ್‌ದು ಲಿಲ್ಲಾಹಿ ಅಹ್ಮದುಹೂ ವ ಅಸ್ತಈನುಹೂ ವ ಅಸ್ತಗ್‌ಫಿರುಹು ವ ಅಸ್ತಹ್ದೀಹಿ ವ ಊಮಿನು ಬಿಹೀ ವಲಾ ಅಕ್‌ಫುರುಹೂ, ವ ಉಆದೀ ಮನ್‌ಯಕ್‌ಫುರುಹೂ ವ ಅಶ್‌ಹದು ಅನ್‌ಲಾ ಇಲಾಹ ಇಲ್ಲಲ್ಲಾಹು ವಹ್‌ದಹೂ ಲಾ ಶರೀಕಲಹೂ ವ ಅಶ್‌ಹದು ಅನ್ನ ಮುಹಮ್ಮದನ್ ಅಬ್ದುಹೂ ವರಸೂಲುಹೂ ಅರ್‌ಸಲಹೂ ಬಿಲ್ ಹುದಾ ವನ್ನೂರಿ ವಲ್ ಮೌಇಝತಿ ಅಲಾ ಫತ್‌ರತಿನ್ ಮಿನರ್ರುಸುಲಿ ವಕಿಲ್ಲತಿನ್ ಮಿನಲ್ ಇಲ್ಮಿ ವದಲಾಲತಿನ್ ಮಿನನ್ನಾಸಿ ವನ್‌ಕಿತಾಇನ್ ಮಿನಝ್ಝಮಾನಿ ವ ದುನುವ್ವಿನ್ ಮಿನಸ್ಸಾಅತಿ ವ ಕುರ್‌ಬಿನ್

ಮಿನಲ್ ಅಜಲಿ ವಮನ್ ಯುತಿ ಇಲ್ಲಾಹ ವರಸೂಲಹೂ ಫಕದ್ ರಷದ ವಮನ್ ಯಅ್ಸಿಹಿಮಾ ಫಕದ್ ಗವಾ ವ ಫರ್‍ರತ ವದಲ್ಲ ದಲಾಲನ್ ಬಈದಾ. ಊಸೀಕುಮ್ ಬಿತಕ್‌ವಲ್ಲಾಹಿ ಫಇನ್ನಹೂ ಖೈರು ಮಾ ಔಸಾ ಬಿಹಿಲ್ ಮುಸ್ಲಿಮುಲ್ ಮುಸ್ಲಿಮ ಅನ್‌ಯಹುದ್ದಹೂ ಅಲಲ್ ಆಖಿರತಿ ವ ಅನ್ ಯಅ್‌ಮುರಹೂ ಬಿತಕ್‌ವಲ್ಲಾಹಿ ಫಹ್‌ದರೂ ಮಾ ಹದ್ದರಕುಮುಲ್ಲಾಹು ಮಿನ್ ನಫ್‌ಸಿಹೀ ವಲಾ ಅಫ್‌ದಲ ಮಿನ್ ದಾಲಿಕ ನಸೀಹತನ್ ವಲಾ ಅಫ್‌ದಲ ಮಿನ್ ದಾಲಿಕ ದಿಕ್ರನ್ ವ ಇನ್ನ ತಕ್‌ವಲ್ಲಾಹಿ ಲಿಮನ್ ಅಮಿಲ ಬಿಹೀ ಅಲಾ ವಜಲಿನ್ ವ ಮಖಾಫತಿನ್ ಮಿರ‍್ರಬ್ಬಿಹೀ ಔನು ಸಿದ್‌ಕಿನ್ ಅಲಾ ಮಾ ತಬ್‌ಗೂನ ಮಿನ್ ಅಮ್ರಿಲ್ ಆಖಿರತಿ ವಮನ್ ಯುಸ್ಲಿಹಿಲ್ಲದೀ ಬೈನಹೂ ವಬೈನಲ್ಲಾಹಿ ಮಿನ್ ಅಮ್ರಿಹೀ ಫಿಸ್ಸಿರ‍್ರಿ ವಲ್ ಅಲಾನಿಯತಿ ಲಾ ಯನ್ವೀ ಬಿದಾಲಿಕ ಇಲ್ಲಾ ವಜ್‌ಹಲ್ಲಾಹಿ ಯಕುಲ್ಲಹೂ ದಿಕ್ರನ್ ಫೀ ಆಜಿಲಿ ಅಮ್ರಿಹಿ ವದುಕ್ರನ್ ಫೀಮಾ ಬಅ್‌ದಲ್ ಮೌತಿ ಹೀನ ಯಫ್‌ತಕಿರುಲ್ ಮರ್‌ಉ ಇಲಾ ಮಾ ಕದ್ದಮ ವಮಾಕಾನ ಸಿವಾ ದಾಲಿಕ ಯವದ್ದು ಲೌ ಅನ್ನ ಬೈನಹಾ ವ ಬೈನಹೂ ಅಮದಂ ಬಈದನ್ ವಯುಹದ್ದಿರುಕುಮುಲ್ಲಾಹು ನಫ್‌ಸಹೂ ವಲ್ಲಾಹು ರಊಫುಂಬಿಲ್ ಇಬಾದಿ ವಲ್ಲದೀ ಸದಕ ಕೌಲಹೂ ವ ಅನ್‌ಜಝ ವಅ್‌ದಹೂ ಲಾ ಖುಲಿಫ ಲಿದಾಲಿಕ ಫಇನ್ನಹೂ ಯಕೂಲು ಅಝ್ಝವ ಜಲ್ಲ ಮಾ ಯುಬದ್ದಲುಲ್ ಕೌಲು ಲದಯ್ಯ ವಮಾ ಅನ ಬಿಝಲ್ಲಾಮಿನ್ ಲಿಲ್ ಅಬೀದಿ ಫತ್ತಕುಲ್ಲಾಹ ಫೀ ಆಜಿಲಿ ಅಮ್ರಿಕುಮ್ ವ ಆಜಿಲಿಹೀ ಫಿಸಿರ‍್ರಿ ವಲ್ ಅಲಾನಿಯತಿ ಫ ಇನ್ನಹೂ ಮನ್‌ಯತ್ತಕಿಲ್ಲಾಹ ಯುಕಫ್ಫಿರ್ ಅನ್‌ಹು ಸಯ್ಯಿಆತಿಹಿ ವಯುಅ್‌ಝಿಮ ಲಹೂ ಅಜ್‌ರನ್ ವಮನ್ ಯತ್ತಕಿಲ್ಲಾಹ ಫಕದ್ ಫಾಝ ಫೌಝನ್ ಅಝೀಮಾ. ವಇನ್ನ ತಕ್‌ವಲ್ಲಾಹಿ ಯುವಕ್ಕೀ ಮಕ್‌ತಹೂ ವ ಯುವಕ್ಕೀ ಉಕೂಬತಹು ವಯುವಕ್ಕೀ ಸಖ್‌ತಹೂ ವಇನ್ನ ತಕ್‌ವಲ್ಲಾಹಿ ಯುಬಯ್ಯಿದುಲ್ ಉಜೂಹ ವ ಯುರ್‌ದಿರ‍್ರಬ್ಬ ವ ಯರ್‌ಫಉದ್ದರಜತ.

ಖುದೂ ಬಿ ಹಝ್ಝಿಕುಮ್ ವಲಾ ತುಫರ‍್ರಿತೂ ಫೀಜಂಬಿಲ್ಲಾಹಿ ವಕದ್ ಅಲ್ಲಮಕುಮುಲ್ಲಾಹು ಕಿತಾಬಹೂ ವನಹಜ ಲಕುಮ್ ಸಬೀಲಹೂ ಲಿಯಅ್‌ಲಮಲ್ಲದೀನ ಸದಕೂ ವ ಯಅ್‌ಲಮಲ್ ಕಾದಿಬೀನ ಫಅಹ್ಸಿನೂ ಕಮಾ ಅಹ್ಸನಲ್ಲಾಹು ಇಲೈಕುಮ್ ವಆದೂ ಅಅ್‌ದಾಅಹೂ ವಜಾಹಿದೂ ಫಿಲ್ಲಾಹಿ ಹಕ್ಕ ಜಿಹಾದಿಹೀ ಹುವಜ್ತಬಾಕುಮ್ ವಸಮ್ಮಾಕುಮುಲ್ ಮುಸ್ಲಿಮೀನ ಲಿಯಹ್ಲಿಕ ಮನ್ ಹಲಕ ಅನ್ ಬಯ್ಯಿನತಿನ್ ವ ಯಹ್ಯಾ ಮನ್ ಹಯ್ಯ ಅನ್ ಬಯ್ಯಿನತಿನ್ ವಲಾ ಕುವ್ವತ ಇಲ್ಲಾ ಬಿಲ್ಲಾಹ್.

ಫ ಅಕ್‌ಸಿರೂ ದಿಕ್ರಲ್ಲಾಹಿ ವಅ್‌ಮಲೂ ಲಿಮಾ ಬಅ್‌ದಲ್ ಯೌಮಿ ಫ ಇನ್ನಹೂ ಮನ್ ಯುಸ್ಲಿಹು ಮಾಬೈನಹೂ ವ ಬೈನಲ್ಲಾಹಿ ಯಕ್‌ಫಿಹಿಲ್ಲಾಹು ಮಾ ಬೈನಹೂ ವ ಬೈನನ್ನಾಸ್.

ದಾಲಿಕ ಬಿಅನ್ನಲ್ಲಾಹ ಯಕ್‌ದೀ ಅಲನ್ನಾಸಿ ವಲಾ ಯಕ್‌ದೂನ ಅಲೈಹಿ ವ ಯಮ್‌ಲಿಕು ಮಿನನ್ನಾಸಿ ವಲಾ ಯಮ್‌ಲಿಕೂನ ಮಿನ್‌ಹು ಅಲ್ಲಾಹು ಅಕ್ಬರು ವಲಾ ಕುವ್ವತ ಇಲ್ಲಾ ಬಿಲ್ಲಾಹಿಲ್ ಅಝೀಮ್''.

(ಸರ್ವ ಸ್ತುತಿಸ್ತೋತ್ರಗಳು ಅಲ್ಲಾಹನಿಗೆ ಮೀಸಲು. ನಾನು ಅವನನ್ನು ವಂದಿಸುತ್ತೇನೆ. ಅವನಿಂದ ಸಹಾಯ ಯಾಚಿಸುತ್ತೇನೆ. ಅವನಿಂದ ಕ್ಷಮಾಯಾಚನೆ ಮಾಡುತ್ತೇನೆ. ಅವನಿಂದ ಸನ್ಮಾರ್ಗ ದರ್ಶನವನ್ನು ಬೇಡುತ್ತೇನೆ. ಅವನ ಮೇಲೆ ವಿಶ್ವಾಸವಿಡುತ್ತೇನೆ. ನಾನು ಅವನನ್ನು ನಿರಾಕರಿಸುವುದಿಲ್ಲ. ಅವನನ್ನು ನಿರಾಕರಿಸುವವನನ್ನು ನನ್ನ ಶತ್ರುವೆಂದು ಪರಿಗಣಿಸುತ್ತೇನೆ. ಅಲ್ಲಾಹ ನಲ್ಲದೆ ಅನ್ಯ ಆರಾಧ್ಯರಿಲ್ಲವೆಂದು ನಾನು ಸಾಕ್ಷ್ಯ ವಹಿಸುತ್ತೇನೆ. ಅವನು ಏಕೈಕನು. ಅವನಿಗಾರೂ ಸಹಭಾಗಿಗಳಿಲ್ಲ. ಮುಹಮ್ಮದ್(ಸ) ಅಲ್ಲಾಹನ ದಾಸನೆಂದೂ ಅವನ ಸಂದೇಶವಾಹಕರೆಂದೂ ನಾನು ಸಾಕ್ಷ್ಯ ವಹಿಸುತ್ತೇನೆ. ಒಂದು ದೀರ್ಘ ಅವಧಿಯ ತನಕ ಪ್ರವಾದಿಗಳ ಆಗಮನವೇ ನಿಂತು ಹೋಗಿದ್ದ ಒಂದು ಕಾಲಘಟ್ಟದಲ್ಲಿ ನೈಜ ಜ್ಞಾನದ ಬೆಳಕು ಮಂದವಾದಾಗ, ದುರ್ಮಾರ್ಗವು ವ್ಯಾಪಕವಾದಾಗ, ಜಗತ್ತಿನ ವ್ಯವಸ್ಥೆಯು ಅಸ್ತವ್ಯಸ್ತಗೊಂಡಾಗ, ಪ್ರಳಯ ಕಾಲವು ಸಮೀಪಿಸಿದಾಗ ಮತ್ತು ಪ್ರತಿಯೊಬ್ಬನ ಮರಣವು ಸನ್ನಿಹಿತವಾದಾಗ ಅವರಿಗೆ ಅಲ್ಲಾಹನು ಸನ್ಮಾರ್ಗದರ್ಶನ, ಜ್ಯೋತಿ ಮತ್ತು ಉಪದೇಶವನ್ನು ನೀಡಿ ಸಂದೇಶವಾಹಕನಾಗಿ ಮಾಡಿದನು.

ಆದ್ದರಿಂದ ಯಾರು (ಪ್ರವಾದಿವರ್ಯರನ್ನು ನಂಬಿ) ಅಲ್ಲಾಹ್ ಮತ್ತು ಪ್ರವಾದಿಯ ಅನುಸರಣೆ ಮಾಡಿದನೋ ಅವನು ಸನ್ಮಾರ್ಗವನ್ನು ಹೊಂದುವನು. ಯಾರು (ಪ್ರವಾದಿ ವರ್ಯರನ್ನು ನಿರಾಕರಿಸಿ) ಅಲ್ಲಾಹ್ ಮತ್ತು ಪ್ರವಾದಿವರ್ಯರಿಗೆ ಅವಿಧೇಯತೆ ತೋರಿದನೋ ಅವನು ಪಥಭ್ರಷ್ಟನಾದನು, ದುರಂತಕ್ಕೆ ಸಿಲುಕಿದನು ಮತ್ತು ಸನ್ಮಾರ್ಗದಿಂದ ದೂರ ಸರಿದು ಪಥಭ್ರಷ್ಟತೆಯಲ್ಲಿ ಬಹಳ ಮುಂದೆ ಸಾಗಿದನು.

ನಾನು ನಿಮಗೆ ಉಪದೇಶಿಸುತ್ತೇನೆ. ಅಲ್ಲಾಹನನ್ನು ಭಯಪಡಿರಿ. ಒಬ್ಬ ಮುಸ್ಲಿಮನು ಇನ್ನೊಬ್ಬ ಮುಸ್ಲಿಮನಿಗೆ ಮಾಡಬಲ್ಲ ಅತ್ಯುತ್ತಮ ಉಪದೇಶವು ಅವನನ್ನು ಪರಲೋಕದ ಬಂಡವಾಳವನ್ನು ಶೇಖರಿಸಲು ಪ್ರೇರೇಪಿಸುವುದು ಮತ್ತು ಅಲ್ಲಾಹನನ್ನು ಭಯಪಡುತ್ತಿರಲು ಬೋಧಿಸುವುದಾಗಿದೆ. ಆದ್ದರಿಂದ ಅಲ್ಲಾಹನು ತನ್ನನ್ನು ಭಯಪಡಬೇಕೆಂದು ಆದೇಶಿಸಿದ ರೀತಿಯಲ್ಲಿ ಅಲ್ಲಾಹನನ್ನು ಭಯಪಡಿರಿ. ಇದಕ್ಕಿಂತ ಉತ್ತಮವಾದ ಒಂದು ಉಪದೇಶ ವಾಗಲಿ, ಇದಕ್ಕಿಂತ ಉತ್ತಮವಾದ ಒಂದು ಸ್ಮರಣೆಯಾಗಲೀ ಇಲ್ಲ.

ವಾಸ್ತವದಲ್ಲಿ ಅಲ್ಲಾಹನ ಭಯಭಕ್ತಿಯೊಂದಿಗೆ ಜೀವನ ಸಾಗಿಸುವ ದೇವದಾಸನಿಗೆ ದೇವಭಕ್ತಿಯು ಅವನು ಬಯಸುವ ಪರಲೋಕದ ಸದ್ಗತಿಯನ್ನು ಗಳಿಸಲು ನೈಜ ಸಹಕಾರಿ ಯಾಗುವುದು. ಯಾವ ವ್ಯಕ್ತಿಯು ಕೇವಲ ಅಲ್ಲಾಹನ ಸಂಪ್ರೀತಿಗಾಗಿ ಅವನೊಂದಿಗೆ ತನ್ನ ಎಲ್ಲ ಅಂತರಂಗ-ಬಹಿರಂಗ ವ್ಯವಹಾರಗಳನ್ನು ಎಲ್ಲ ಸ್ಥಿತಿಗಳಲ್ಲೂ ಉತ್ತಮಪಡಿಸಿಕೊಳ್ಳುತ್ತಾನೋ ಅವನಿಗೆ ಅದರ ಫಲವಾಗಿ ಇಹಲೋಕದಲ್ಲಿ ಖ್ಯಾತಿ ಲಭಿಸುವುದು ಮತ್ತು ಮರಣದ ಬಳಿಕ ಪ್ರತಿಯೊಬ್ಬನೂ ತಾನು ಪರಲೋಕಕ್ಕಾಗಿ ಮಾಡಿದ ತನ್ನ ಸತ್ಕರ್ಮಗಳಿಗಾಗಿ ಅತ್ಯಧಿಕ ಬಯಕೆಯುಳ್ಳವನಾಗಿರುವಾಗ ಅವನು ಸತ್ಕರ್ಮಗಳ ದೊಡ್ಡ ಬಂಡವಾಳವನ್ನೇ ಹೊಂದಿರು ವನು. ಅವುಗಳ ಹೊರತು ಇರುವಂತಹ ದುಷ್ಕರ್ಮಗಳು ತನ್ನಿಂದ ಅತ್ಯಧಿಕ ದೂರವಾಗಲಿ ಎಂದು ಅವನು ಬಯಸುವನು. ಅಲ್ಲಾಹನು ನಿಮ್ಮನ್ನು ತನ್ನ ಬಗ್ಗೆ ಭಯಪಡಿಸುತ್ತಾನೆ. ಅಲ್ಲಾಹನು ತನ್ನ ದಾಸರ ಮೇಲೆ ಅತ್ಯಧಿಕ ಕರುಣೆಯುಳ್ಳವನಾಗಿದ್ದಾನೆ.

ಮಾತು ಸತ್ಯವೂ ವಚನ ಪೂರ್ಸೈಸಲ್ಪಡುವಂತಹದೂ ಆದವನ ಆಣೆ. ಅವನ ಮಾತು ಆಗಿಯೇ ತೀರುವುದು. ಏಕೆಂದರೆ ಆ ಮಹಾಮಹಿಮನು ಸ್ವಯಂ ಹೇಳುತ್ತಾನೆ, 'ನನ್ನ ಬಳಿ ಮಾತು ಬದಲಾಯಿಸಲ್ಪಡುವುದಿಲ್ಲ. ನಾನು ನನ್ನ ದಾಸರ ಮೇಲೆ ಕಿಂಚಿತ್ತೂ ಅಕ್ರಮವೆಸಗುವವನಲ್ಲ. ಆದ್ದರಿಂದ ಐಹಿಕ ಮತ್ತು ಪಾರತ್ರಿಕವಾದ ಎಲ್ಲ ರಹಸ್ಯ ಬಹಿರಂಗ ವ್ಯವಹಾರಗಳಲ್ಲಿ ಅಲ್ಲಾಹನನ್ನು ಭಯಪಡಿರಿ. ವಾಸ್ತವದಲ್ಲಿ ಯಾರು ಅಲ್ಲಾಹನ ಕ್ರೋಧವನ್ನು ಭಯಪಡುತ್ತಾನೋ ಅಲ್ಲಾಹನು ಅವನ ಪಾಪಗಳನ್ನು ಅಳಿಸಿ ಬಿಡುತ್ತಾನೆ. ಅವನ ಪುಣ್ಯವನ್ನು ಅತ್ಯಧಿಕ ಹೆಚ್ಚಿಸುತ್ತಾನೆ. ಯಾರು ಅಲ್ಲಾಹನನ್ನು ಭಯಪಡುತ್ತಾನೋ ಅವನು ಅತಿ ದೊಡ್ಡ ವಿಜಯವನ್ನು ಗಳಿಸಿದನು. ಚೆನ್ನಾಗಿ ತಿಳಿಯಿರಿ. ಅಲ್ಲಾಹನ ಭಯವು ದಾಸನನ್ನು ಅವನ ಕ್ರೋಧದಿಂದ ದೂರವಿರಿಸುತ್ತದೆ. ಅವನ ಶಿಕ್ಷೆಯಿಂದ ರಕ್ಷಿಸುತ್ತದೆ. ಅವನ ಅಸಂತೃಪ್ತಿಯಿಂದ ಮುಕ್ತಗೊಳಿಸುತ್ತದೆ. ಈ ವಾಸ್ತವಿಕತೆಯನ್ನು ಚೆನ್ನಾಗಿ ತಿಳಿಯಿರಿ. ಅಲ್ಲಾಹನ ಭಯಭಕ್ತಿಯು ಮುಖಗಳನ್ನು ಕಾಂತಿಯುತವೂ ಶೋಭಾಯಮಾನವೂ ಆಗಿ ಮಾಡುತ್ತದೆ. ಒಡೆಯನನ್ನು ತನ್ನ ದಾಸನ ಬಗ್ಗೆ ಸಂತುಷ್ಟಗೊಳಿಸುತ್ತದೆ. ದಾಸನ ಸ್ಥಾನಮಾನಗಳನ್ನು ಉನ್ನತಗೊಳಿಸುತ್ತದೆ.

ನಿಮ್ಮ ನಿಮ್ಮ ಪಾಲಿನ ಪುಣ್ಯಗಳನ್ನು ಶೇಖರಿಸಿರಿ. ದೇವನ ಸನ್ನಿಧಾನದಲ್ಲಿ ಎಂದೂ ಕುಂದು ಕೊರತೆ ಮಾಡದಿರಿ. ಅವನಂತೂ ನಿಮಗೆ ತನ್ನ ಗ್ರಂಥದ ಜ್ಞಾನವನ್ನು ನೀಡಿ ತನ್ನ ಸನ್ಮಾರ್ಗವನ್ನು ನಿಮಗೆ ವ್ಯಕ್ತಗೊಳಿಸಿರುವನು. ತಮ್ಮ ಸತ್ಯವಿಶ್ವಾಸದ ಘೋಷಣೆಯಲ್ಲಿ ಯಾರು ಸತ್ಯಸಂಧರು ಮತ್ತು ಯಾರು ಸುಳ್ಳರು ಎಂಬುದನ್ನು ಅವನು ಅರಿಯಬೇಕಾಗಿದೆ. ಆದ್ದರಿಂದ ಅಲ್ಲಾಹನು ನಿಮ್ಮೊಂದಿಗೆ ಉತ್ತಮವಾಗಿ ವ್ಯವಹರಿಸಿರುವಂತೆ ನೀವೂ ಅವರೊಂದಿಗೆ ಉತ್ತಮ ವ್ಯವಹಾರ ಕೈಗೊಳ್ಳಿರಿ. ಅವನ ಶತ್ರುಗಳನ್ನು ನಿಮ್ಮ ಶತ್ರುಗಳೆಂದು ಬಗೆಯಿರಿ. ಅವನ ಮಾರ್ಗದಲ್ಲಿ ಯಾವ ರೀತಿ ಹೋರಾಡಬೇಕಾದ ಬಾಧ್ಯತೆ ಇದೆಯೋ ಆ ರೀತಿ ಹೋರಾಡಿರಿ. ಅವನು ನಿಮ್ಮನ್ನು ತನ್ನ ಧರ್ಮಕ್ಕಾಗಿ ಆರಿಸಿರುವನು ಮತ್ತು ನಿಮ್ಮನ್ನು 'ಮುಸ್ಲಿಮ್' ಎಂದು ಹೆಸರಿಸಿರುವನು. ಏಕೆಂದರೆ ನಾಶಗೊಳ್ಳುವವನು ಸ್ಪಷ್ಟ ಪುರಾವೆಯೊಂದಿಗೆ ನಾಶಗೊಳ್ಳಬೇಕು ಮತ್ತು ಜೀವಂತ ಉಳಿಯುವವನು ಸುಸ್ಪಷ್ಟ ಪ್ರಮಾಣದೊಂದಿಗೆ ಜೀವಂತ ಉಳಿಯಬೇಕು. ಶಕ್ತಿ ಸಾಮರ್ಥ್ಯಗಳ ಉಗಮವು ದೇವನ ಅಸ್ತಿತ್ವವಾಗಿದೆ.

ಆದ್ದರಿಂದ ಅಲ್ಲಾಹನ ಧ್ಯಾನ ಅತ್ಯಧಿಕ ಮಾಡಿರಿ. ಇಂದಿನ ಬಳಿಕ ಬರುವ ನಾಳೆಗಾಗಿ ದುಡಿಯುತ್ತಿರಿ. ಏಕೆಂದರೆ ತನ್ನ ಮತ್ತು ಅಲ್ಲಾಹನ ಮಧ್ಯೆ ಇರುವ ವ್ಯವಹಾರವನ್ನು ಯಾರು ಸರಿಪಡಿಸಿಕೊಳ್ಳುತ್ತಾನೋ ಅವನ ಪಾಲಿಗೆ ಅವನ ಮತ್ತು ಇತರ ಮನುಷ್ಯರ ನಡುವೆ ಇರುವ ಎಲ್ಲ ವ್ಯವಹಾರಗಳಿಗೆ ಅಲ್ಲಾಹನೇ ಸಾಕಾಗುತ್ತಾನೆ. ಅಲ್ಲಾಹನೇ ದಾಸರ ಮಧ್ಯೆ ತೀರ್ಮಾನ ಮಾಡುತ್ತಾನಲ್ಲದೆ ದಾಸರು ಅದರ ತೀರ್ಮಾನ ಮಾಡುವುದಿಲ್ಲ. ಅವನು ಮನುಷ್ಯನ ಪ್ರತಿಯೊಂದು ವಸ್ತುವಿನ ಒಡೆಯನಾಗಿದ್ದಾನೆ. ಅವನ ಯಾವ ವಸ್ತುವೂ ಮನುಷ್ಯನ ವಶದಲ್ಲಿ ಇಲ್ಲ. ಅವನು ಅತ್ಯಂತ ಮಹಾನನು. ಶಕ್ತಿಸಾಮರ್ಥ್ಯಗಳೆಲ್ಲವೂ ಅವನ ಬಳಿಯೇ ಇವೆ.)

**(ತಬ್ರೀ, ಭಾಗ-12, ಪುಟ:255)**

## ಪವಿತ್ರ ಕುರ್‌ಆನಿನೊಂದಿಗೆ ಸಂಬಂಧದ ಉಪದೇಶ

إِنَّ الْحَمْدَ لِلّٰهِ اَحْمَدُهُ وَاَسْتَعِيْنُهُ وَنَعُوْذُ بِاللّٰهِ مِنْ شُرُوْرِ اَنْفُسِنَا وَمِنْ سَيِّاٰتِ اَعْمَالِنَا مَنْ يَّهْدِهِ اللّٰهُ فَلاَ مُضِلَّ لَهُ وَمَنْ يُّضْلِلْهُ فَلاَ هَادِيَ لَهُ، وَاَشْهَدُ اَنْ لَّآ اِلٰهَ اِلَّا اللّٰهُ وَحْدَهُ لاَ شَرِيْكَ لَهُ

اِنَّ اَحْسَنَ الْحَدِيْثِ كِتٰبُ اللّٰهِ قَدْ اَفْلَحَ مَنْ زَيَّنَهُ اللّٰهُ فِيْ قَلْبِهٖ وَاَدْخَلَهُ فِي الْإِسْلَامِ بَعْدَ الْكُفْرِ، وَاخْتَارَهُ عَلٰى مَا سِوَاهُ مِنْ اَحَادِيْثِ النَّاسِ، اِنَّهُ اَصْدَقُ الْحَدِيْثِ وَاَبْلَغُهُ - اَحِبُّوْا مَنْ اَحَبَّ اللّٰهَ وَاَحِبُّوا اللّٰهَ مِنْ كُلِّ قُلُوْبِكُمْ وَلَا تَمَلُّوْا كَلَامَ اللّٰهِ وَذِكْرُهُ، وَلَا تَقْسُوْا عَلَيْهِ قُلُوْبُكُمْ اُعْبُدُوا اللّٰهَ وَلَا تُشْرِكُوْا بِهٖ شَيْئًا، اِتَّقُوا اللّٰهَ حَقَّ تُقٰتِهٖ وَصَدِّقُوْا صَالِحَ مَا تَعْمَلُوْنَ بِاَفْوَاهِكُمْ وَتَحَابُّوْا بِرُوْحِ اللّٰهِ بَيْنَكُمْ، وَالسَّلَامُ عَلَيْكُمْ وَرَحْمَةُ اللّٰهِ

"ಇನ್ನಲ್ ಹಮ್ದ ಲಿಲ್ಲಾಹಿ ಅಹ್ಮದುಹೂ ವ ಅಸ್ತಈನುಹೂ ವನಊದು ಬಿಲ್ಲಾಹಿ ಮಿನ್ ಶುರೂರಿ ಅನ್‌ಫುಸಿನಾ ವಮಿನ್ ಸಯ್ಯಿಆತಿ ಅಅ್‌ಮಾಲಿನಾ ಮಂಯಹ್‌ದಿಹಿಲ್ಲಾಹು ಫಲಾ ಮುದಿಲ್ಲ ಲಹೂ ವಮನ್ ಯುದ್‌ಲಿಲ್‌ಹು ಫಲಾ ಹಾದಿಯಲಹೂ ವ ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹು ವಹ್‌ದಹೂ ಲಾ ಶರೀಕ ಲಹೂ.

ಇನ್ನ ಅಹ್‌ಸನಲ್ ಹದೀಸಿ ಕಿತಾಬುಲ್ಲಾಹಿ ಕದ್ ಅಫ್‌ಲಹ ಮನ್ ಝುಯ್ಯನ ಹುಲ್ಲಾಹು ಫೀ ಕಲ್‌ಬಿಹೀ ವ ಅದ್‌ಖಲಹೂ ಫಿಲ್ ಇಸ್ಲಾಮಿ ಬಅ್‌ದಲ್ ಕುಫ್ರಿ ವಖ್ತಾರಹೂ ಅಲಾ ಮಾಸಿವಾಹು ಮಿನ್ ಅಹಾದೀಸಿನ್ನಾಸಿ ಇನ್ನಹೂ ಅಸ್‌ದಕುಲ್ ಹದೀಸಿ ವ ಅಬ್‌ಲಗುಹೂ. ಅಹಿಬ್ಬೂ ಮನ್ ಅಹಬ್ಬಲ್ಲಾಹ ವ ಅಹಿಬ್ಬುಲ್ಲಾಹ ಮಿನ್ ಕುಲ್ಲಿ ಕುಲೂಬಿಕುಮ್ ವಲಾ ತಮಲ್ಲೂ ಕಲಾಮಲ್ಲಾಹಿ ವದಿಕ್ರಹೂ ವಲಾ ತಕ್‌ಸೂ ಅಲೈಹಿ ಕುಲೂಬಕುಮ್.

ಉಲ್‌ಬುದುಲ್ಲಾಹ ವಲಾ ತುಶ್ರಿಕೂ ಬಿಹೀ ಶೈಅನ್. ಇತ್ತಕುಲ್ಲಾಹ ಹಕ್ಕ ತುಕಾತಿಹೀ ವಸದ್ದಿಕೂ ಸಾಲಿಹ ಮಾ ತಅ್‌ಮಲೂನ ಬಿ ಅಫ್‌ವಾಹಿಕುಮ್ ವತುಹಾಬ್ಬೂ ಬಿರೂಹಿಲ್ಲಾಹಿ ಬೈನಕುಮ್ ವಸ್ಸಲಾಮು ಅಲೈಕುಮ್ ವರಹ್‌ಮತುಲ್ಲಾಹ್".

(ಖಂಡಿತವಾಗಿಯೂ ಸ್ತುತಿ ಸ್ತೋತ್ರಗಳು ಅಲ್ಲಾಹನಿಗೇ ಮೀಸಲಾಗಿದೆ. ನಾನು ಅವನನ್ನು ವಂದಿಸುತ್ತೇನೆ, ಸ್ತುತಿಸುತ್ತೇನೆ. ಅವನಿಂದ ಸಹಾಯ ಯಾಚಿಸುತ್ತೇನೆ. ನಮ್ಮ ದುಷ್ಟಚಿತ್ತದ ದುಷ್ಪ್ರೇರಣೆಗಳಿಂದ ಮತ್ತು ನಮ್ಮ ದುಷ್ಕರ್ಮಗಳ ಪರಿಣಾಮದಿಂದ ನಾವು ಅವನ ಕೃಪಾಶ್ರಯದಲ್ಲಿ ಅಭಯ ಯಾಚಿಸುತ್ತೇವೆ.

ಯಾರಿಗೆ ಅಲ್ಲಾಹನು ಸನ್ಮಾರ್ಗದರ್ಶನ ಮಾಡುತ್ತಾನೋ (ನಿಜವಾಗಿ ಅಲ್ಲಾಹನು ಸನ್ಮಾರ್ಗ. ದರ್ಶನ ಮಾಡುವುದು ಅದನ್ನು ಬಯಸುವವನಿಗೆ ಮಾತ್ರ) ಅವನನ್ನು ಯಾರೂ ಪಥಭ್ರಷ್ಟಗೊಳಿಸಲಾರರು. ಯಾರನ್ನು ಅಲ್ಲಾಹನು ಪಥಭ್ರಷ್ಟಗೊಳಿಸಿದನೋ (ನಿಜವಾಗಿ ಅಲ್ಲಾಹನು ಪಥಭ್ರಷ್ಟಗೊಳಿಸುವುದು ಸನ್ಮಾರ್ಗದರ್ಶನವನ್ನು ಬಯಸದವನನ್ನು ಮಾತ್ರ) ಅವನಿಗೆ ಯಾರೂ ಸನ್ಮಾರ್ಗದರ್ಶನ ಮಾಡಲಾರರು. ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲವೆಂದು ನಾನು ಸಾಕ್ಷ್ಯ ವಹಿಸುತ್ತೇನೆ. ಅವನು ಏಕೈಕನು. ಅವನಿಗಾರೂ ಭಾಗೀದಾರರಿಲ್ಲ.

ವಾಸ್ತವದಲ್ಲಿ ಅತ್ಯುತ್ತಮ ವಚನವು ಅಲ್ಲಾಹನ ಗ್ರಂಥವಾಗಿದೆ. ಯಾರ ಹೃದಯದಲ್ಲಿ ದೇವಗ್ರಂಥದ ಬೆಳಕಿದೆಯೋ ಮತ್ತು ಯಾರನ್ನು ಅಲ್ಲಾಹನು ಸತ್ಯನಿಷೇಧದ ಬಳಿಕ ಇಸ್ಲಾಮಿನ ಸೌಭಾಗ್ಯ ದಯಪಾಲಿಸಿದನೋ ಮತ್ತು ಯಾರು ಎಲ್ಲ ಮನುಷ್ಯ ವಚನಗಳನ್ನು ತೊರೆದು ಅಲ್ಲಾಹನ ಗ್ರಂಥವನ್ನು ಆರಿಸಿಕೊಂಡನೋ ಅವನು ಯಶಸ್ವಿಯಾದನು. ನಿಸ್ಸಂದೇಹ ವಾಗಿಯೂ ಅಲ್ಲಾಹನ ವಚನವು ಸಾದ್ಯಂತ ಸತ್ಯವಾಗಿದೆ. ಅತ್ಯಂತ ಪ್ರಭಾವಪೂರ್ಣವಾಗಿದೆ. ಅದರೊಂದಿಗೆ ಸಂಬಂಧ ಬೆಳೆಸುವವನನ್ನು ನೀವು ಪ್ರೀತಿಸಿರಿ ಮತ್ತು ನಿಮ್ಮ ಹೃದಯದ ಪೂರ್ಣ ಸನ್ನದ್ಧತೆಯೊಂದಿಗೆ ಅಲ್ಲಾಹನೊಂದಿಗೆ ನೈಜ ಪ್ರೇಮವನ್ನು ಬೆಳೆಸಿರಿ. ಅವನ ವಚನದ ಪಠನ ಮತ್ತು ಅವನ ಧ್ಯಾನದಿಂದ ಎಂದೂ ಬೇಸರಗೊಳ್ಳಬೇಡಿ. ಅಲ್ಲಾಹನ ವಚನದ ಬಗ್ಗೆ ನಿಮ್ಮ ಹೃದಯವು ಎಂದೂ ನಿರಪೇಕ್ಷವೂ ಕಠಿಣವೂ ಆಗದಿರಲಿ.

ಅಲ್ಲಾಹನನ್ನೇ ಆರಾಧಿಸಿರಿ. ಯಾರನ್ನೂ ಅವನ ಜೊತೆ ಕಿಂಚಿತ್ತೂ ಪಾಲುದಾರನಾಗಿ ಮಾಡಬೇಡಿರಿ. ಅವನನ್ನು ಭಯಪಡಬೇಕಾದ ರೀತಿಯಲ್ಲಿ ಭಯಪಡುತ್ತಲಿರಿ. ನಿಮ್ಮ ಸತ್ಕರ್ಮಗಳನ್ನು ನಿಮ್ಮ ಬಾಯಿಯಿಂದಲೂ ದೃಢಪಡಿಸಿರಿ. (ಅರ್ಥಾತ್ ನಿಮಗೆ ಭೂಷಣ ವಾದುದನ್ನೇ ಬಾಯಿಯಿಂದಲೂ ಹೊರಡಿಸಿರಿ) ಅಲ್ಲಾಹನ ದಯೆ ಮತ್ತು ಧರ್ಮದ ಬುನಾದಿಯಲ್ಲಿ ಪರಸ್ಪರರನ್ನು ಪ್ರೀತಿಸಿರಿ. ನಿಮ್ಮ ಮೇಲೆ ಶಾಂತಿಯೂ ಅಲ್ಲಾಹನ ಕರುಣೆಯೂ ಇರಲಿ.)

(ಇಅ್‌ಜಾಝುಲ್ ಕುರ್‌ಆನ್)

## ದ್ವಿತೀಯ ಪ್ರವಚನ

اَلْحَمْدُ لِلّٰهِ حَمْدًا كَثِيْرًا وَّالصَّلٰوةُ وَالسَّلَامُ عَلٰى رَسُوْلِهٖ اَرْسَلَهُ اللّٰهُ شَاهِدًا وَّنَذِيْرًا وَّدَاعِيًا اِلَى اللّٰهِ بِاِذْنِهٖ وَسِرَاجًا مُّنِيْرًا وَعَلٰى اٰلِهٖ وَاَصْحَابِهٖ وَسَلَّمَ تَسْلِيْمًا كَثِيْرًا كَثِيْرًا

اَمَّا بَعْدُ: فَيٰاَيُّهَا النَّاسُ! اُوْصِيْكُمْ بِتَقْوَى اللّٰهِ فَاِنَّ تَقْوَى اللّٰهِ مِلَاكُ الْحَسَنَاتِ۔ وَعَلَيْكُمْ بِاطَّاعَةِ فَاِنَّهُ مَنْ يُّطِعِ اللّٰهَ وَرَسُوْلَهُ فَقَدْ فَازَ فَوْزًا عَظِيْمًا وَقَالَ اللّٰهُ تَعَالٰى فِىْ كِتَابِهِ الْمَجِيْدِ۔ اِنَّ اللّٰهَ وَمَلٰٓئِكَتَهُ يُصَلُّوْنَ عَلَى النَّبِىِّ يٰاَيُّهَا الَّذِيْنَ اٰمَنُوْا صَلُّوْا عَلَيْهِ وَسَلِّمُوْا تَسْلِيْمًا

اَللّٰهُمَّ صَلِّ عَلٰى سَيِّدِنَا وَمَوْلَانَا مُحَمَّدٍ وَّعَلٰى اٰلِهٖ وَاَصْحَابِهِ الَّذِيْنَ اتَّبَعُوْهُ فِىْ سَاعَةِ الْعُسْرَةِ اَللّٰهُمَّ اَمْطِرْ شَاٰبِيْبَ رِضْوَانِكَ عَلَى السَّابِقِيْنَ الْاَوَّلِيْنَ مِنَ الْمُهَاجِرِيْنَ وَالْاَنْصَارِ خُصُوْصًا عَلٰى اَفْضَلِ الْبَشَرِ بَعْدَ الْاَنْبِيَاءِ بِالتَّحْقِيْقِ اَمِيْرِ الْمُؤْمِنِيْنَ سَيِّدِنَا اَبِىْ بَكْرِنِ الصِّدِّيْقِ رَضِىَ اللّٰهُ تَعَالٰى عَنْهُ وَعَلٰى اَمِيْرِ الْمُؤْمِنِيْنَ سَيِّدِنَا عُمَرَ الْفَارُوْقِ رَضِىَ اللّٰهُ عَنْهُ وَعَلٰى اَمِيْرِ الْمُؤْمِنِيْنَ سَيِّدِنَا عُثْمَانَ بْنِ عَفَّانَ رَضِىَ اللّٰهُ تَعَالٰى عَنْهُ وَعَلٰى اَمِيْرِ الْمُؤْمِنِيْنَ سَيِّدِنَا عَلِىِّ بْنِ اَبِىْ طَالِبٍ كَرَّمَ اللّٰهُ وَجْهَهُ وَعَلٰى وَلَدَيْهِ السَّعِيْدَيْنِ سَيِّدَا شَبَابِ اَهْلِ الْجَنَّةِ اَلْحَسَنُ وَالْحُسَيْنُ رَضِىَ اللّٰهُ تَعَالٰى عَنْهُمَا وَعَلٰى اُمِّهِمَا سَيِّدَةِ نِسَآءِ اَهْلِ الْجَنَّةِ فَاطِمَةَ

الزَّهْرَآءِ رَضِيَ اللّٰهُ تَعَالٰى عَنْهَا وَعَلٰى سَآئِرِ الصَّحَابَةِ وَالتَّابِعِيْنَ

رِضْوَانُ اللّٰهِ تَعَالٰى عَلَيْهِمْ اَجْمَعِيْنَ

اَللّٰهُمَّ انْصُرْ مَنْ نَّصَرَ دِيْنَ مُحَمَّدٍ صَلَّى اللّٰهُ عَلَيْهِ وَسَلَّمَ وَاجْعَلْنَا مِنْهُمْ

وَاخْذُلْ مَنْ خَذَلَ دِيْنَ مُحَمَّدٍ صَلَّى اللّٰهُ عَلَيْهِ وَسَلَّمَ وَلَا تَجْعَلْنَا

مِنْهُمْ عِبَادَاللّٰهِ! رَحِمَكُمُ اللّٰهُ اِنَّ اللّٰهَ يَاْمُرُ بِالْعَدْلِ وَالْاِحْسَانِ وَاِيْتَآءِ

ذِى الْقُرْبٰى وَيَنْهٰى عَنِ الْفَحْشَآءِ وَالْمُنْكَرِ وَالْبَغْىِ يَعِظُكُمْ لَعَلَّكُمْ

تَذَكَّرُوْنَ اُذْكُرُوا اللّٰهَ يَذْكُرْكُمْ وَادْعُوْهُ يَسْتَجِبْ لَكُمْ وَلَذِكْرُ اللّٰهِ

تَعَالٰى اَعْلٰى وَاَوْلٰى وَاَعَزُّ وَاَجَلُّ وَاَتَمُّ وَاَهَمُّ وَاَعْظَمُ وَاَكْبَرُ

"ಅಲ್‌ಹಮ್ದುಲಿಲ್ಲಾಹಿ ಹಮ್‌ದನ್ ಕಸೀರನ್ ವಸ್ಸಲಾತು ವಸ್ಸಲಾಮು ಅಲಾ ರಸೂಲಿಹೀ ಅರ್‌ಸಲಹುಲ್ಲಾಹು ಶಾಹಿದಂವನದೀರಂ ವದಾಇಯನ್ ಇಲಲ್ಲಾಹಿ ಬಿಇದ್‌ನಿಹಿ ವಸಿರಾಜಂಮುನೀರಾ ವಅಲಾ ಆಲಿಹಿ ವ ಅಸ್‌ಹಾಬಿಹೀ ವಸಲ್ಲಮ ತಸ್‌ಲೀಮನ್ ಕಸೀರನ್‌ಕಸೀರಾ.

ಅಮ್ಮಾ ಬಅ್‌ದು, ಫಯಾ ಅಯ್ಯುಹನ್ನಾಸು ಊಸೀಕುಮ್ ಬಿತಕ್‌ವಲ್ಲಾಹ್ ಫಇನ್ನ ತಕ್‌ವಲ್ಲಾಹಿ ಮಿಲಾಕುಲ್ ಹಸನಾತ್ ವಅಲೈಕುಮ್ ಬಿತ್ತಾಅತಿ ಫಇನ್ನಹೂ ಮಂಯುತಿಇಲ್ಲಾಹ ವರಸೂಲಹೂ ಫಕದ್ ಫಾಝ ಫೌಝುನ್ ಅಝೀಮಾ. ವಕಾಲಲ್ಲಾಹು ತಆಲಾ ಫೀ ಕಿತಾಬಿಹಿಲ್ ಮಜೀದ್, ಇನ್ನಲ್ಲಾಹ ವ ಮಲಾಇಕತಹೂ ಯುಸಲ್ಲೂನ ಅಲನ್ನಬಿಯ್ಯಿ ಯಾ ಅಯ್ಯುಹಲ್ಲದೀನ ಆಮನೂ ಸಲ್ಲೂ ಅಲೈಹಿ ವಸಲ್ಲಿಮೂ ತಸ್‌ಲೀಮಾ

ಅಲ್ಲಾಹುಮ್ಮ ಸಲ್ಲಿ ಅಲಾ ಸಯ್ಯಿದಿನಾ ವ ಮೌಲಾನಾ ಮುಹಮ್ಮದಿನ್ ವಅಲಾ ಆಲಿಹೀ ವ ಅಸ್‌ಹಾಬಿಹಿಲ್ಲದೀನತ್ತಬಊಹು ಫೀ ಸಾಅತಿಲ್ ಉಸ್ರತಿ. ಅಲ್ಲಾಹುಮ್ಮ ಅಮ್ಮಿರ್ ಶಆಬೀಬ ರಿದ್ವಾನಿಕ ಅಲಸ್ಸಾಬಿಕೀನಲ್ ಅವ್ವಲೀನ ಮಿನಲ್ ಮುಹಾಜಿರೀನ ವಲ್ ಅನ್ಸಾರಿ ಖುಸೂಸನ್ ಅಲಾ ಅಫ್‌ದಲಿಲ್ ಬಶರಿ ಬಅ್‌ದಲ್ ಅಂಬಿಯಾಇ ಬಿತ್ತಹ್‌ಕೀಕಿ ಅಮೀರಿಲ್ ಮುಅ್‌ಮಿನೀನ ಸಯ್ಯಿದಿನಾ ಅಬೀಬಕ್ರಿನಿಸ್ಸಿದ್ದೀಕಿ ರದಿಯಲ್ಲಾಹು ತಆಲಾ ಅನ್‌ಹು ವಅಲಾ ಅಮೀರಿಲ್ ಮುಅ್‌ಮಿನೀನ ಸಯ್ಯಿದಿನಾ ಉಮರಲ್ ಫಾರೂಕಿ ರದಿಯಲ್ಲಾಹು ತಆಲಾ ಅನ್‌ಹು ವಅಲಾ ಅಮೀರಿಲ್ ಮುಅ್‌ಮಿನೀನ ಸಯ್ಯಿದಿನಾ ಉಸ್ಮಾನಬ್‌ನಿ ಅಫ್ಘಾನ್

ರದಿಯಲ್ಲಾಹು ತಆಲಾ ಅನ್‌ಹು ವಅಲಾ ಅಮೀರಿಲ್ ಮುಅ್‌ಮಿನೀನ ಸಯ್ಯಿದಿನಾ ಅಲಿಯ್ಯಿಬ್ನಿ ಅಬೀ ತಾಲಿಬ್ ಕರ್‍ರಮಲ್ಲಾಹು ವಜ್‌ಹಹೂ ವಅಲಾ ವಲದೈಹಿಸ್ಸಈದೈನಿ ಸಯ್ಯಿದಾ ಶಬಾಬಿ ಅಹ್ಲಿಲ್ ಜನ್ನತಿ ಅಲ್ ಹಸನು ವಲ್ ಹುಸೈನು ರದಿಯಲ್ಲಾಹು ತಆಲಾ ಅನ್‌ಹುಮಾ ವಅಲಾ ಉಮ್ಮಿಹಿಮಾ ಸಯ್ಯಿದತಿನ್ನಿಸಾಇ ಅಹ್ಲಿಲ್ ಜನ್ನತಿ ಫಾತಿಮತಝ್ಝುಹ್ರಾಇ ರದಿಯಲ್ಲಾಹು ತಆಲಾ ಅನ್‌ಹಾ ವಅಲಾ ಸಾಇರಿಸ್ಸಹಾಬತಿ ವತ್ತಾಬಿಈನ ರಿದ್ವಾನುಲ್ಲಾಹಿ ತಆಲಾ ಅಲೈಹಿಮ್ ಅಜ್ಮಈನ್.

ಅಲ್ಲಾಹುಮ್ಮನ್‌ಸುರ್ ಮನ್ನಸರ ದೀನ ಮುಹಮ್ಮದಿನ್ ಸಲ್ಲಲ್ಲಾಹು ಅಲೈಹಿವಸಲ್ಲಮ ವಜ್‌ಅಲ್‌ನಾ ಮಿನ್‌ಹುಮ್ ವಖ್‌ದುಲ್ ಮನ್ ಖದಲ ದೀನ ಮುಹಮ್ಮದಿನ್ ಸಲ್ಲಲ್ಲಾಹು ಅಲೈಹಿ ವಸಲ್ಲಮ ವಲಾ ತಜ್‌ಅಲ್‌ನಾ ಮಿನ್‌ಹುಮ್ ಇಬಾದಲ್ಲಾಹ್, ರಹಿಮಕುಮುಲ್ಲಾಹ್ ಇನ್ನಲ್ಲಾಹ ಯಅ್‌ಮುರು ಬಿಲ್ ಅದ್ಲಿ ವಅ್‌ಇಹ್ಸಾನಿ ವಈತಾಇ ದಿಲ್‌ಕುರ್ಬಾ ವಯನ್‌ಹಾ ಅನಿಲ್ ಫಹ್‌ಶಾಇ ವಲ್ ಮುನ್‌ಕರಿ ವಲ್ ಬಗೀ ಯಇಝುಕುಮ್ ಲಅಲ್ಲಕುಮ್ ತದಕ್ಕರೂನ ಉದ್‌ಕುರುಲ್ಲಾಹ ಯದ್‌ಕುರುಕುಮ್ ವದ್‌ಊಹು ಯಸ್ತಜಿಬ್ ಲಕುಮ್ ವಲದಿಕ್ರುಲ್ಲಾಹಿ ತಆಲಾ ಅಅ್‌ಲಾ ವ ಔಲಾ ವ ಅಅಝ್ಝು ವ ಅಜಲ್ಲು ವ ಅತಮ್ಮು ವ ಅಹಮ್ಮು ವ ಅಅ್‌ಝಮು ವ ಅಕ್‌ಬರ್".

(ಅಲ್ಲಾಹನಿಗೆ ಸರ್ವಸ್ತುತಿ. ಅತ್ಯಧಿಕ ಸ್ತುತಿ. ಅಲ್ಲಾಹನು ಸಾಕ್ಷಿಯಾಗಿ ಎಚ್ಚರಿಕೆ ನೀಡುವವರಾಗಿ, ಅಲ್ಲಾಹನ ಅಪ್ಪಣೆಯಂತೆ ಅವನೆಡೆಗೆ ಕರೆಯುವವರಾಗಿ ಉಜ್ವಲ ಜ್ಯೋತಿ ಯಾಗಿ ಮಾಡಿ ಕಳುಹಿಸಿದ ಆತನ ಸಂದೇಶವಾಹಕರ ಹಾಗೂ ಅವರ ಸಂತತಿ ಮತ್ತು ಸಂಗಾತಿಗಳ ಮೇಲೆ ಶಾಂತಿಯಿರಲಿ. ಅವರ ಮೇಲೆ ಕೋಟಿ ಕೋಟಿ ಸಲಾಮ್ ಇರಲಿ.

ತರುವಾಯ, ಮನುಷ್ಯರೇ! ನಾನು ನಿಮಗೆ ದೇವಭಯವನ್ನು ಉಪದೇಶಿಸುತ್ತೇನೆ. ಖಂಡಿತವಾಗಿಯೂ ಅಲ್ಲಾಹನ ಭಯವೇ ಎಲ್ಲ ಒಳಿತುಗಳ ಮೂಲವಾಗಿದೆ ಮತ್ತು ನೀವು ವಿಧೇಯರಾಗಿರಿ. ಏಕೆಂದರೆ ಯಾರು ಅಲ್ಲಾಹ್ ಮತ್ತು ಆತನ ಸಂದೇಶವಾಹಕರಿಗೆ ವಿಧೇಯನಾದನೋ ಅವನು ಮಹಾನ್ ಯಶಸ್ಸನ್ನು ಗಳಿಸಿದನು. ಅಲ್ಲಾಹನು ತನ್ನ ಪವಿತ್ರ ಗ್ರಂಥದಲ್ಲಿ ಹೀಗೆ ಹೇಳಿರುವನು: ಖಂಡಿತವಾಗಿಯೂ ಅಲ್ಲಾಹ್ ಮತ್ತು ಅವನ ದೂತರು ಪ್ರವಾದಿಯವರಿಗೆ ಸಲಾತ್ ಹೇಳುತ್ತಾರೆ. ಸತ್ಯವಿಶ್ವಾಸಿಗಳೇ! ನೀವೂ ಅವರ ಮೇಲೆ ಸಲಾತ್ ಮತ್ತು ಸಲಾಮ್ ಪಠಿಸುತ್ತಲಿರಿ.

ಓ ಅಲ್ಲಾಹ್! ನಮ್ಮ ನಾಯಕರಾದ ಮುಹಮ್ಮದ್‌ರ(ಸ) ಮೇಲೆ, ಸಂಕಷ್ಟದ ವೇಳೆ ಅವರನ್ನು ಅನುಸರಿಸಿದ ಅವರ ಕುಟುಂಬದವರ ಮೇಲೆ ಮತ್ತು ಅವರ ಸಂಗಾತಿಗಳ ಮೇಲೆ ಸಲಾತ್ ಹೇಳು. ಓ ಅಲ್ಲಾಹ್! ಪ್ರಪ್ರಥಮವಾಗಿ ಸತ್ಯವಿಶ್ವಾಸ ಸ್ವೀಕರಿಸಿದ ಮುಹಾಜಿರ್ ಮತ್ತು ಅನ್ಸಾರ್‌ಗಳ ಮೇಲೆ ನಿನ್ನ ಅನುಗ್ರಹವನ್ನು ವರ್ಷಿಸು. ವಿಶೇಷವಾಗಿ ಪ್ರವಾದಿಗಳ ನಂತರ ಅತ್ಯುತ್ತಮ ವ್ಯಕ್ತಿಗಳೆಂದು ಖಚಿತವಾಗಿರುವ ಸತ್ಯವಿಶ್ವಾಸಿಗಳ ಅಮೀರ್, ನಮ್ಮ ನಾಯಕರಾದ ಅಬೂಬಕರ್ ಸಿದ್ದೀಕ್‌ರ(ರ) ಮೇಲೆ ಮತ್ತು ಸತ್ಯವಿಶ್ವಾಸಿಗಳ ಅಮೀರ್,

ನಮ್ಮ ನಾಯಕರಾದ ಉಮರುಲ್ ಫಾರೂಕ್‌ರ(ರ) ಮೇಲೆ ಮತ್ತು ಸತ್ಯವಿಶ್ವಾಸಿಗಳ ಅಮೀರ್, ನಮ್ಮ ನಾಯಕರಾದ ಉಸ್ಮಾನ್ ಬಿನ್ ಅಫ್ಫಾನ್‌ರ(ರ) ಮೇಲೆ ಮತ್ತು ಸತ್ಯ ವಿಶ್ವಾಸಿಗಳ ಅಮೀರ್, ನಮ್ಮ ನಾಯಕರಾದ ಅಲೀ ಬಿನ್ ಅಬೂತಾಲಿಬ್‌ರ(ರ) ಮೇಲೆ ಮತ್ತು ಅವರ ಇಬ್ಬರು ಪುತ್ರರೂ ಸ್ವರ್ಗದಲ್ಲಿ ಯುವಕರ ನಾಯಕರೂ ಆದ ಹಸನ್ ಮತ್ತು ಹುಸೈನ್‌ರ(ರ) ಮೇಲೆ ಮತ್ತು ಅವರ ತಾಯಿಯೂ ಸ್ವರ್ಗದಲ್ಲಿ ಮಹಿಳೆಯರ ನಾಯಕಿಯೂ ಆದ ಫಾತಿಮತುಝ್ಝುಹರಾರ(ರ) ಮೇಲೆ ಮತ್ತು ಎಲ್ಲ ಸಹಾಬಿಗಳು ಮತ್ತು ತಾಬಿಈಗಳ ಮೇಲೆ ಮತ್ತು ಅವರನ್ನು ಹಿಂಬಾಲಿಸಿದವರ ಮೇಲೆ(ರ).

ಓ ಅಲ್ಲಾಹ್! ಯಾರು ಮುಹಮ್ಮದ್‌ರ(ಸ) ಧರ್ಮಕ್ಕೆ ನೆರವಾದನೋ ಅವನಿಗೆ ನೀನು ನೆರವಾಗು ಮತ್ತು ನಮ್ಮನ್ನೂ ಅಂತಹವರಲ್ಲಿ ಸೇರಿಸು. ಯಾರು ಮುಹಮ್ಮದ್‌ರ(ಸ) ಧರ್ಮಕ್ಕೆ ನೆರವಾಗುವುದನ್ನು ತೊರೆದನೋ ನೀನೂ ಅವನಿಗೆ ನೆರವಾಗುವುದನ್ನು ತೊರೆ ಮತ್ತು ನಮ್ಮನ್ನು ಅಂತಹವರಲ್ಲಿ ಸೇರಿಸದಿರು. ಅಲ್ಲಾಹನ ದಾಸರೇ! ಅಲ್ಲಾಹನು ನಿಮ್ಮ ಮೇಲೆ ಕರುಣೆ ತೋರಲಿ.

ಅಲ್ಲಾಹ್ ನ್ಯಾಯ, ಪರೋಪಕಾರ ಹಾಗೂ ಆಪ್ತೇಷ್ಟರ ಬಗ್ಗೆ ಸೌಜನ್ಯವನ್ನು ಆದೇಶಿಸುತ್ತಾನೆ ಮತ್ತು ಅಶ್ಲೀಲ ಕಾರ್ಯ, ದುಷ್ಕೃತ್ಯ, ಅಕ್ರಮ, ಅತ್ಯಾಚಾರಗಳನ್ನು ನಿಷೇಧಿಸು ತ್ತಾನೆ. ನೀವು ಜಾಗೃತರಾಗಲಿಕ್ಕಾಗಿ ಅವನು ನಿಮಗೆ ಉಪದೇಶ ನೀಡುತ್ತಾನೆ.

ನೀವು ಅಲ್ಲಾಹನನ್ನು ಸ್ಮರಿಸಿರಿ ಆತನು ನಿಮ್ಮನ್ನು ಸ್ಮರಿಸುವನು. ಅವನನ್ನು ಕರೆದು ಪ್ರಾರ್ಥಿಸಿರಿ ಅವನು ನಿಮಗೆ ಉತ್ತರ ನೀಡುವನು ಮತ್ತು ಮಹಾನನಾದ ಅಲ್ಲಾಹನ ಸ್ಮರಣೆಯು ಉನ್ನತವೂ, ಆದ್ಯತೆಯುಳ್ಳದ್ದೂ, ಪ್ರತಾಪಶಾಲಿಯೂ, ಹಿರಿಮೆಯುಳ್ಳದ್ದೂ, ಪರಿಪೂರ್ಣವೂ, ಪ್ರಾಮುಖ್ಯವೂ ಘನವಂತವೂ ಅತ್ಯಂತ ಹಿರಿದಾದುದೂ ಆಗಿದೆ.)

# ನಿಕಾಹ್ ಪ್ರವಚನ

ನಿಕಾಹ್ ಅಥವಾ ವಿವಾಹದ ಸಭೆಯಲ್ಲಿ ಪ್ರವಚನ ನೀಡುವುದು ಪ್ರವಾದಿವರ್ಯರ(ಸ) ಚರ್ಯೆಯಾಗಿದೆ. ತನ್ಮೂಲಕ ನಿಕಾಹ್‌ನ ಧಾರ್ಮಿಕ ನೆಲೆಯನ್ನು ಮನವರಿಕೆ ಮಾಡಿಸುವುದು, ಅದರ ಬೇಡಿಕೆಗಳನ್ನು ತಿಳಿಯಪಡಿಸುವುದು ಮತ್ತು ನಿಕಾಹ್‌ನಿಂದಾಗಿ ವಧೂವರರ, ಮತ್ತವರ ಸಂಬಂಧಿಕರ ಮೇಲೆ ಬೀಳುವ ಮಹತ್ತರ ಹೊಣೆಗಾರಿಕೆಗಳನ್ನು ನೆನಪಿಸುವುದು ಉದ್ದೇಶ. ಇಂತಹ ಸಂದರ್ಭದಲ್ಲಿ ನಿಕಾಹ್ ಪ್ರವಚನದಿಂದ ಪೂರ್ಣ ಪ್ರಯೋಜನ ಪಡೆಯುವ ಸಲುವಾಗಿ ನಿಕಾಹ್ ಮಾಡಿಸಿಕೊಡುವವರು ನಿಕಾಹ್ ಪ್ರವಚನದ ತರ್ಜುಮೆ ಮತ್ತು ಸಂಕ್ಷಿಪ್ತ ವ್ಯಾಖ್ಯಾನವನ್ನು ತಮ್ಮ ಭಾಷೆಯಲ್ಲಿ ತಿಳಿಸುವುದು ಹೆಚ್ಚು ಸೂಕ್ತವೆನಿಸುತ್ತದೆ. ಇದರಿಂದ ಶ್ರೋತೃಗಳು ಪ್ರಸ್ತುತ ವಿಷಯಗಳನ್ನು ಚೆನ್ನಾಗಿ ತಿಳಿಯುವಂತಾಗುವುದು. ಈ ಉದ್ದೇಶ ಕ್ಕಾಗಿ ನಿಕಾಹ್‌ನ ಪ್ರವಚನ ಮತ್ತು ಅದರ ಅನುವಾದವನ್ನು ಇಲ್ಲಿ ಕೊಡಲಾಗುತ್ತಿದೆ:

إِنَّ الْحَمْدَ لِلّٰهِ نَسْتَعِيْنُهُ وَنَسْتَغْفِرُهُ وَنَعُوْذُ بِاللّٰهِ مِنْ شُرُوْرِ اَنْفُسِنَا مَنْ يَّهْدِهِ اللّٰهُ فَلَا مُضِلَّ لَهُ وَمَنْ يُّضْلِلْهُ فَلَا هَادِيَ لَهُ وَاَشْهَدُ اَنْ لَّا اِلٰهَ اِلَّا اللّٰهُ وَاَشْهَدُ اَنَّ مُحَمَّدًا عَبْدُهُ وَرَسُوْلُهُ

يٰاَيُّهَا الَّذِيْنَ اٰمَنُوْا اتَّقُوا اللّٰهَ حَقَّ تُقَاتِهِ وَلَا تَمُوْتُنَّ اِلَّا وَاَنْتُمْ مُّسْلِمُوْنَ

يٰـاَيُّهَا النَّاسُ اتَّقُوْا رَبَّكُمُ الَّذِيْ خَلَقَكُمْ مِّنْ نَّفْسٍ وَّاحِدَةٍ وَّخَلَقَ مِنْهَا زَوْجَهَا وَبَثَّ مِنْهُمَا رِجَالًا كَثِيْرًا وَّنِسَاءً وَاتَّقُوْا اللّٰهَ الَّذِيْ تَسَآءَلُوْنَ بِهِ وَالْاَرْحَامَ اِنَّ اللّٰهَ كَانَ عَلَيْكُمْ رَقِيْبًا

يٰـاَيُّهَا الَّذِيْنَ اٰمَنُوا اتَّقُوا اللّٰهَ وَقُوْلُوْا قَوْلًا سَدِيْدًا يُّصْلِحْ لَكُمْ اَعْمَالَكُمْ وَيَغْفِرْ لَكُمْ ذُنُوْبَكُمْ وَمَنْ يُّطِعِ اللّٰهَ وَرَسُوْلَهُ فَقَدْ فَازَ فَوْزًا عَظِيْمًا

"ಇನ್ನಲ್ ಹಮ್ದ ಲಿಲ್ಲಾಹಿ ನಸ್‌ತಈನುಹೂ ವನಸ್‌ತಗ್‌ಫಿರುಹೂ ವನಊದುಬಿಲ್ಲಾಹಿ ಮಿನ್‌ಶುರೂರಿ ಅನ್‌ಫುಸಿನಾ ಮನ್‌ಯಹ್‌ದಿಹಿಲ್ಲಾಹು ಫಲಾ ಮುದಿಲ್ಲಲಹೂ ವಮನ್ ಯುದ್‌ಲಿಲ್‌ಹು. ಫಲಾ ಹಾದಿಯ ಲಹೂ ವಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹು ವಅಶ್‌ಹದು ಅನ್ನ ಮುಹಮ್ಮದನ್ ಅಬ್ದುಹೂ ವರಸೂಲುಹೂ

ಯಾ ಅಯ್ಯುಹಲ್ಲದೀನ ಆಮನುತ್ತಕುಲ್ಲಾಹ ಹಕ್ಕ ತುಕಾತಿಹೀ ವಲಾ ತಮೂತುನ್ನ ಇಲ್ಲಾ ವಅನ್‌ತುಮ್ ಮುಸ್ಲಿಮೂನ್.

ಯಾಅಯ್ಯುಹನ್ನಾಸುತ್ತಕೂ ರಬ್ಬಕುಮುಲ್ಲದೀ ಖಲಕಕುಮ್ ಮಿನ್ ನಫ್ಸಿನ್ ವಾ ಹಿದತಿನ್ ವಖಲಕ ಮಿನ್‌ಹಾ ಝೌಜಹಾ ವಬಸ್ಸ ಮಿನ್‌ಹುಮಾ ರಿಜಾಲನ್ ಕಸೀರನ್ ವ ನಿಸಾಅನ್ ವತ್ತಕುಲ್ಲಾಹಲ್ಲದೀ ತಸಾಅಲೂನ ಬಿಹೀ ವಲ್ ಅರ್ಹಾಮ ಇನ್ನಲ್ಲಾಹ ಕಾನ ಅಲೈಕುಮ್ ರಕೀಬಾ.

ಯಾಅಯ್ಯುಹಲ್ಲದೀನ ಆಮನುತ್ತಕುಲ್ಲಾಹ ವಕೂಲೂ ಕೌಲನ್ ಸದೀದನ್ ಯುಸ್‌ಲಿಹ್ ಲಕುಮ್ ಅಲ್‌ಮಾಲಕುಮ್ ವ ಯಗ್‌ಫಿರ್‌ಲಕುಮ್ ದುನೂಬಕುಮ್ ವ ಮನ್‌ಯುತಿ ಇಲ್ಲಾಹ ವ ರಸೂಲಹೂ ಫಕದ್ ಫಾಝು ಫೌಝುನ್ ಅಝೀಮಾ".

(ಸ್ತುತಿಸ್ತೋತ್ರಗಳು ಅಲ್ಲಾಹನಿಗೇ ಮೀಸಲು. ನಾವು ಅವನಿಂದಲೇ ಸಹಾಯ ಯಾಚಿಸುತ್ತೇವೆ. ಅವನಿಂದಲೇ ನಮ್ಮ ಪಾಪಗಳಿಗೆ ಕ್ಷಮೆ ಯಾಚಿಸುತ್ತೇವೆ. ನಾವು ನಮ್ಮ ದೇಹೇಚ್ಛೆಗಳ ಕಿರುಕುಳ ಮತ್ತು ಕೆಡುಕುಗಳ ವಿರುದ್ಧ ನಮ್ಮನ್ನು ಅಲ್ಲಾಹನ ಆಶ್ರಯದಲ್ಲಿ ಸಮರ್ಪಿಸುತ್ತೇವೆ. (ವಾಸ್ತವದಲ್ಲಿ) ಅಲ್ಲಾಹನು ಯಾರನ್ನು ಸನ್ಮಾರ್ಗದಲ್ಲಿ ಹಚ್ಚಿದನೋ (ಅವನು ಸನ್ಮಾರ್ಗದಲ್ಲಿ ನಡೆಯಬಯಸುವವನನ್ನು ಮಾತ್ರ ಆ ಮಾರ್ಗದಲ್ಲಿ ಹಚ್ಚುತ್ತಾನೆ) ಅವನನ್ನು ಯಾರೂ ದಾರಿಗೆಡಿಸಲಾರರು. ಯಾರನ್ನು ಅಲ್ಲಾಹನು ಪಥಭ್ರಷ್ಟಗೊಳಿಸಿದನೋ (ಅವನು ಪಥಭ್ರಷ್ಟನಾಗ ಬಯಸುವವನನ್ನು ಮಾತ್ರ ದಾರಿಗೆಡಿಸುತ್ತಾನೆ) ಅವನನ್ನು ಯಾರೂ ಸನ್ಮಾರ್ಗಕ್ಕೆ ಹಚ್ಚಲಾರರು. ನಾನು ಸಾಕ್ಷ್ಯವಹಿಸುತ್ತೇನೆ ಅಲ್ಲಾಹನ ಹೊರತು ಅನ್ಯ ಆರಾಧ್ಯ ರಿಲ್ಲ ಮತ್ತು ನಾನು ಸಾಕ್ಷ್ಯವಹಿಸುತ್ತೇನೆ ಮುಹಮ್ಮದ್(ಸ) ಅಲ್ಲಾಹನ ದಾಸರು ಮತ್ತು ಆತನ ಸಂದೇಶವಾಹಕರಾಗಿರುವರು.

ಸತ್ಯವಿಶ್ವಾಸಿಗಳೇ! ಅಲ್ಲಾಹನನ್ನು ಭಯಪಡಬೇಕಾದ ರೀತಿಯಲ್ಲಿ ಭಯಪಡಿರಿ. ಮರಣದ ತನಕವೂ ಅಲ್ಲಾಹನಿಗೆ ನಿಷ್ಠಾವಂತರಾಗಿಯೂ ವಿಧೇಯರಾಗಿಯೂ ಬಾಳಿರಿ.

ಜನರೇ! ಅಲ್ಲಾಹನ ಕ್ರೋಧವನ್ನು ಭಯಪಡಿರಿ. ಅವನು ನಿಮ್ಮನ್ನು ಒಂದು ಜೀವದಿಂದ ಸೃಷ್ಟಿಸಿದನು. ಆ ಜೀವದಿಂದಲೇ ಅದರ ಜೊತೆಯನ್ನು ಸೃಷ್ಟಿಸಿದನು. ತರುವಾಯ ಅವೆರಡರಿಂದ ಅನೇಕ ಸ್ತ್ರೀ-ಪುರುಷರನ್ನು ಹರಡಿದನು. ಯಾರ ಹೆಸರೆತ್ತಿ ನೀವು ಪರಸ್ಪರ ಹಕ್ಕು ಗಳನ್ನು ಬೇಡುತ್ತೀರೋ ಆ ಪಾಲಕಪ್ರಭುವಿನ ಕ್ರೋಧವನ್ನು ಭಯಪಡಿರಿ. ಬಂಧು ಗಳ ಹಕ್ಕು ಬಾಧ್ಯತೆಗಳನ್ನು ಪೂರೈಸಿರಿ. ಅಲ್ಲಾಹನು ನಿಮ್ಮ ಮೇಲ್ನೋಟ ನಡೆಸುತ್ತಿದ್ದಾನೆಂಬುದನ್ನು ಖಚಿತವಾಗಿ ಅರಿಯಿರಿ.

ಸತ್ಯವಿಶ್ವಾಸಿಗಳೇ! ಅಲ್ಲಾಹನನ್ನು ಭಯಪಡಿರಿ. ನಿಖರವಾದ ದೃಢ ಮಾತನ್ನೇ ಆಡಿರಿ. ಅಲ್ಲಾಹನು ನಿಮ್ಮ ಕರ್ಮಗಳನ್ನು ಸುಧಾರಿಸುವನು ಮತ್ತು ನಿಮ್ಮ ಪಾಪಗಳನ್ನು ಮನ್ನಿಸುವನು. ಯಾರು ಅಲ್ಲಾಹನ ಮತ್ತು ಅವನ ಸಂದೇಶವಾಹಕರ ಅನುಸರಣೆ ಮಾಡುತ್ತಾರೋ ಅವರು ಅತಿ ದೊಡ್ಡ ವಿಜಯವನ್ನು ಗಳಿಸುವರು.) (ಮಿಷ್ಕಾತ್)

وَقَالَ رَسُوْلُ اللّٰهِ صَلَّى اللّٰهُ عَلَيْهِ وَسَلَّمَ وَاللّٰهِ اِنِّىْ لَاَخْشَاكُمْ لِلّٰهِ وَاَتْقَاكُمْ لَهُ وَلٰكِنِّىْ اَصُوْمُ وَاُفْطِرُ وَاُصَلِّىْ وَاَرْقُدُ وَاَتَزَوَّجُ النِّسَآءَ فَمَنْ رَغِبَ عَنْ سُنَّتِىْ فَلَيْسَ مِنِّىْ (بخاری)

"ವ ಕಾಲ ರಸೂಲುಲ್ಲಾಹಿ ಸಲ್ಲಲ್ಲಾಹು ಅಲೈಹಿವಸಲ್ಲಮ್ ವಲ್ಲಾಹಿ ಇನ್ನೀ ಲಅಖ್‌ಶಾಕುಮ್ ಲಿಲ್ಲಾಹಿ ವ ಅತ್‌ಕಾಕುಮ್ ಲಹೂ ವಲಾಕಿನ್ನೀ ಅಸೂಮು ವ ಉಫ್‌ತಿರು ವ ಉಸಲ್ಲೀ ವ ಅರ್‌ಕುದು ವ ಅತಝುವ್ವಜುನ್ನಿಸಾಅ ಫಮನ್ ರಗಿಬ ಅನ್ ಸುನ್ನತೀ ಫಲೈಸ ಮಿನ್ನೀ".

ಪ್ರವಾದಿ(ಸ) ಈ ರೀತಿ ಆದೇಶಿಸಿರುವರು: (ಅಲ್ಲಾಹನಾಣೆ! ನಾನು ನಿಮ್ಮ ಪೈಕಿ ಅಲ್ಲಾಹನನ್ನು ಅತ್ಯಧಿಕ ಭಯಪಡುವವನು. ನಿಮ್ಮೆಲ್ಲರಿಗಿಂತ ಹೆಚ್ಚು ಅವನ ಕ್ರೋಧದಿಂದ ದೂರವಿರುವವನಾಗಿರುವೆನು. ಆದರೂ ನಾನು ಕೆಲವೊಮ್ಮೆ ಐಚ್ಛಿಕ ಉಪವಾಸಗಳನ್ನು ಆಚರಿಸುತ್ತೇನೆ. ಕೆಲವೊಮ್ಮೆ ಆಚರಿಸುವುದಿಲ್ಲ. ರಾತ್ರಿಯ ವೇಳೆ ನಮಾಝ್ ಮಾಡುತ್ತೇನೆ ಮತ್ತು ಮಲಗುತ್ತೇನೆ. ನಾನು ಸ್ತ್ರೀಯರೊಂದಿಗೆ ವಿವಾಹವನ್ನೂ ಮಾಡುತ್ತೇನೆ. ಆದ್ದರಿಂದ ಯಾರು ನನ್ನ ಚರ್ಯೆಯಿಂದ ವಿಮುಖನಾ ಗುವನೋ ಅವನು ನನ್ನವನಲ್ಲ.) (ಬುಖಾರಿ)

# ಇಸ್ತಿಖಾರಃ ಅಥವಾ ಒಳಿತಿನ ಬಯಕೆ

ಪ್ರಯಾಣ, ವಿವಾಹ, ನೌಕರಿ, ವ್ಯಾಪಾರ ಇತ್ಯಾದಿ ಜೀವನದ ಮುಖ್ಯ ವ್ಯವಹಾರ ಗಳಲ್ಲಿ ಇಸ್ತಿಖಾರಃ ಮಾಡುವುದು ಒಳ್ಳೆಯದು. ಇಸ್ತಿಖಾರಃ ಎಂದರೆ ಪುಣ್ಯ ಮತ್ತು ಒಳಿತನ್ನು ಬಯಸುವುದಾಗಿದೆ. ಯಾವುದೇ ಪ್ರಮುಖ ಧರ್ಮಸಮ್ಮತ ವಿಷಯಗಳಲ್ಲಿ ನಿಮಗೆ ಉತ್ತಮ ಯಾವುದೆಂದು ಸ್ಪಷ್ಟವಾಗುವುದಿಲ್ಲವೋ ಅವುಗಳ ಬಗ್ಗೆ ಇಸ್ತಿಖಾರಃ ಖಂಡಿತ ಮಾಡಿರಿ. ತರುವಾಯ ಯಾವುದರ ಬಗ್ಗೆ ಮನಸ್ಸು ಸಂತೃಪ್ತಿ ತಾಳುತ್ತದೋ ಅದನ್ನು ಅಲ್ಲಾಹನ ವಿಧಿಯೆಂದು ಬಗೆದು ನಿಸ್ಸಂಕೋಚವಾಗಿ ಕೈಗೊಳ್ಳಿರಿ. ಇಸ್ತಿಖಾರದ ಕ್ರಮ ಹೀಗಿದೆ. ಯಾವುದಾದರೂ ಅಸಾಮಾನ್ಯ ಮಹತ್ವದ ಕೆಲಸ ಮುಂದಾಗಿದ್ದರೆ ಅನಪೇಕ್ಷಣೀಯ ಮತ್ತು ನಿಷಿದ್ಧ ಸಮಯಗಳನ್ನುಳಿದು ಇತರ ಯಾವುದಾದರೂ ಸಮಯದಲ್ಲಿ ಎರಡು ರಕಅತ್ ನಮಾಝ್ ಮಾಡಿ ಇಸ್ತಿಖಾರದ ಪ್ರಾರ್ಥನೆಯನ್ನು ಹೇಳಿರಿ. ಪ್ರವಾದಿ(ಸ) ಹೇಳಿರುವುದಾಗಿ ಹ. ಸಅದ್ ಬಿನ್ ಅಬೀ ವಕ್ಕಾಸ್(ರ) ಹೇಳುತ್ತಾರೆ:

"ಅಲ್ಲಾಹನೊಂದಿಗೆ ಇಸ್ತಿಖಾರ ಮಾಡುವುದು ಆದಮರ ಮಕ್ಕಳ ಸೌಭಾಗ್ಯವಾಗಿದೆ. ದೇವವಿಧಿಯ ಬಗ್ಗೆ ಸಂತೃಪ್ತರಾಗುವುದು ಕೂಡ ಆದಮರ ಮಕ್ಕಳ ಸೌಭಾಗ್ಯವಾಗಿದೆ. ಅಲ್ಲಾಹನೊಂದಿಗೆ ಇಸ್ತಿಖಾರಃ ಮಾಡದಿರುವುದು ಮತ್ತು ದೇವವಿಧಿಯ ಬಗ್ಗೆ ಅತೃಪ್ತರಾಗಿ ರುವುದು ಆದಮರ ಮಕ್ಕಳ ದೌರ್ಭಾಗ್ಯವಾಗಿದೆ". (ಮುಸ್ನದ್ ಅಹ್ಮದ್)

ಪ್ರವಾದಿ(ಸ) ಹೀಗೂ ಹೇಳಿರುವರು: "ಇಸ್ತಿಖಾರಃ ಮಾಡುವವನು ಎಂದೂ ನಿರಾಶನಾಗುವುದಿಲ್ಲ. ಸಮಾಲೋಚನೆ ಮಾಡು ವವನು ಎಂದೂ ಪರಿತಪಿಸುವುದಿಲ್ಲ ಹಾಗೂ ಮಿತವ್ಯಯವನ್ನು ಪಾಲಿಸುವವನು ಎಂದೂ ಇತರರ ಅಪೇಕ್ಷಿತನಾಗುವುದಿಲ್ಲ". (ತಬ್ರಾನಿ)

ಹ. ಜಾಬಿರ್(ರ) ಹೇಳುತ್ತಾರೆ: ಪ್ರವಾದಿ(ಸ) ನಮಗೆ ಕುರ್‌ಆನ್ ಓದಿಸುತ್ತಿದ್ದಂತೆಯೇ ಪ್ರತಿಯೊಂದು ವಿಷಯದಲ್ಲಿ ಇಸ್ತಿಖಾರಃ ಮಾಡಬೇಕೆಂದೂ ಕಲಿಸುತ್ತಿದ್ದರು. ಅವರು(ಸ) ಹೀಗೆ ಹೇಳುತ್ತಿದ್ದರು: ನಿಮ್ಮ ಪೈಕಿ ಯಾರಾದರೂ ಯಾವುದೇ ವಿಷಯದ ಬಗ್ಗೆ ಚಿಂತಿತನಾದರೆ ಎರಡು ರಕಅತ್ ನಮಾಝ್ ಮಾಡಿ ಈ ದುಆ ಪಠಿಸಲಿ: (ಬುಖಾರಿ)

اَللّٰهُمَّ اِنِّىْ اَسْتَخِيْرُكَ بِعِلْمِكَ وَاسْتَقْدِرُكَ بِقُدْرَتِكَ وَاَسْئَلُكَ مِنْ فَضْلِكَ الْعَظِيْمِ فَاِنَّكَ تَقْدِرُ وَلَا اَقْدِرُ وَتَعْلَمُ وَلَا اَعْلَمُ وَاَنْتَ عَلَّامُ الْغُيُوْبِ

اَللّٰهُمَّ اِنْ كُنْتَ تَعْلَمُ اَنَّ هٰذَا الْاَمْرَ خَيْرٌ لِّيْ فِيْ دِيْنِيْ وَمَعِيْشَتِيْ وَعَاقِبَةِ
اَمْرِيْ فَاقْدُرْهُ لِيْ وَيَسِّرْهُ لِيْ ثُمَّ بَارِكْ لِيْ فِيْهِ وَاِنْ كُنْتَ تَعْلَمُ اَنَّ هٰذَا
الْاَمْرَ شَرٌّ لِّيْ فِيْ دِيْنِيْ وَمَعِيْشَتِيْ وَعَاقِبَةِ اَمْرِيْ فَاصْرِفْهُ عَنِّيْ
وَاصْرِفْنِيْ عَنْهُ وَاقْدُرْلِيَ الْخَيْرَ حَيْثُ كَانَ ثُمَّ اَرْضِنِيْ بِهٖ

"ಅಲ್ಲಾಹುಮ್ಮ ಇನ್ನೀ ಅಸ್ತಖೀರುಕ ಬಿಇಲ್ಮಿಕ ವಅಸ್‌ತಕ್‌ದಿರುಕ ಬಿಕುದ್‌ರತಿಕ ವ ಅಸ್‌ಅಲುಕ ಮಿನ್ ಫದ್‌ಲಿಕಲ್ ಅಝೀಮಿ ಫಇನ್ನಕ ತಕ್‌ದಿರು ವಲಾ ಅಕ್‌ದಿರು ವತಅ್‌ಲಮು ವಲಾ ಅಅ್‌ಲಮು ವಅನ್‌ತ ಅಲ್ಲಾಮುಲ್ ಗುಯೂಬ್.

ಅಲ್ಲಾಹುಮ್ಮ ಇನ್‌ಕುಂತ ತಅ್‌ಲಮು ಅನ್ನ ಹಾದಲ್ ಅಮ್ರ* ಖೈರುಲ್ಲೀ ಫೀ ದೀನೀ ವ ಮಈಶತೀ ವಆಕಿಬತಿ ಅಮ್ರಿ ಫಕ್‌ದುರ್‌ಹು ಲೀ ವ ಯಸ್ಸಿರ್‌ಹು ಲೀ ಸುಮ್ಮ ಬಾರಿಕ್‌ಲೀ ಫೀಹಿ ವ ಇನ್‌ಕುಂತ ತಅ್‌ಲಮು ಅನ್ನ ಹಾದಲ್ ಅಮ್ರ ಶರ್ರುಲ್ಲೀ ಫೀದೀನೀ ವ ಮಈಶತೀ ವಾಆಕಿಬತಿ ಅಮ್ರಿ ಫಸ್‌ರಿಫ್‌ಹು ಅನ್ನೀ ವಸ್‌ರಿಫ್ನೀ ಅನ್‌ಹು ವಕ್‌ದುರ್ ಲಿಯಲ್ ಖೈರ ಹೈಸು ಕಾನ ಸುಮ್ಮ ಅರ್ದಿನೀ ಬಿಹೀ".

(ಅಲ್ಲಾಹನೇ, ನಾನು ನಿನ್ನಿಂದ ನಿನ್ನ ಜ್ಞಾನದ ಆಧಾರದಲ್ಲಿ ಒಳಿತನ್ನು ಬಯಸುತ್ತೇನೆ. ನಿನ್ನ ಸಾಮರ್ಥ್ಯದ ಆಧಾರದಲ್ಲಿ ನಿನ್ನಿಂದ ಮಹಾ ಅನುಗ್ರಹವನ್ನು ಅರಸುತ್ತೇನೆ. ಏಕೆಂದರೆ ನೀನು ಸರ್ವಸಮರ್ಥನು. ನಾನು ಏನೇನೂ ಸಾಮರ್ಥ್ಯ ಹೊಂದಿಲ್ಲ. ನೀನು ಸರ್ವಜ್ಞನು. ನಾನು ಏನೇನೂ ಜ್ಞಾನ ಹೊಂದಿಲ್ಲ. ನೀನು ಪರೋಕ್ಷದ ಎಲ್ಲ ವಿಷಯಗಳನ್ನು ಬಲ್ಲವನಾಗಿರುವಿ.

ಓ ಅಲ್ಲಾಹ್! ನಿನ್ನ ಜ್ಞಾನದಂತೆ ನನ್ನ ಪಾಲಿಗೆ ಈ ಕೆಲಸವು ಉತ್ತಮವಾಗಿದ್ದರೆ ನನ್ನ ಇಹ ಪರಲೋಕಗಳ ಮಟ್ಟಿಗೆ ಹಾಗೂ ಅದರ ಪರಿಣಾಮದ ಮಟ್ಟಿಗೆ ನೀನು ಅದನ್ನು ನನಗೆ ವಿಧಿಸು. ಅದನ್ನು ನನಗೆ ಸುಗಮಗೊಳಿಸು ಮತ್ತು ನನಗೆ ಅದನ್ನು ಮಂಗಳಮಯಗೊಳಿಸು. ಒಂದು ವೇಳೆ ನಿನ್ನ ಜ್ಞಾನದಂತೆ ಈ ಕಾರ್ಯವು ನನ್ನ ಪಾಲಿಗೆ ಕೆಡುಕಾಗಿದ್ದರೆ ನನ್ನ ಇಹ ಪರ ಲೋಕಗಳ ಮಟ್ಟಿಗೆ ಹಾಗೂ ಅದರ ಪರಿಣಾಮದ ಮಟ್ಟಿಗೆ ಈ ಕಾರ್ಯವನ್ನು ನನ್ನಿಂದ ದೂರವಿರಿಸು. ನನ್ನನ್ನು ಅದರಿಂದ ಕಾಪಾಡು. ನನಗೆ ಒಳಿತು ಮತ್ತು ಪುಣ್ಯವನ್ನು ವಿಧಿಸು. ಎಲ್ಲಿದ್ದರೂ ಸರಿಯೆ ಮತ್ತು ಅದರ ಬಗ್ಗೆ ನನ್ನನ್ನು ಸಂತೃಪ್ತನಾಗಿ ಮಾಡು ಮತ್ತು ಏಕಾಗ್ರತೆ ನೀಡು.)

* ಇಲ್ಲಿ 'ಹಾದಲ್ ಅಮ್ರ' ಎನ್ನುವ ಬದಲು ತನ್ನ ಅಪೇಕ್ಷೆಯ ಹೆಸರೆತ್ತಿ ಅದನ್ನು ಪ್ರಸ್ತಾಪಿಸಬೇಕು ಅಥವಾ ತನ್ನ ಅಪೇಕ್ಷೆಯನ್ನು ಮನಸ್ಸಿಗೆ ತಂದುಕೊಳ್ಳಬೇಕು.

# ಅಲ್ಲಾಹನ ಗುಣನಾಮಗಳು

ಆತ್ಮಸಂಸ್ಕರಣೆ ಮತ್ತು ಮನಶ್ಶಾಂತಿಯ ಅಧಿಕೃತ ಹಾಗೂ ಸುರಕ್ಷಿತ ಮಾರ್ಗವು ಅಲ್ಲಾಹನ ಧ್ಯಾನವಾಗಿದೆ. ನಿಮ್ಮ ನಾಲಗೆಯು ಸದಾ ದೇವಸ್ತುತಿಯಲ್ಲಿ ನಿರತವಾಗಿರಲಿ. ಅವನ ಗುಣಗಳನ್ನು ಜಪಿಸುತ್ತಿರಿ. ಅವುಗಳ ಬೇಡಿಕೆಗಳ ಕುರಿತು ಚಿಂತನೆ ನಡೆಸಿರಿ. ದೃಢ ವಿಶ್ವಾಸ ಮತ್ತು ಪೂರ್ಣಪ್ರಜ್ಞೆಯೊಂದಿಗೆ ಈ ಗುಣಗಳನ್ನು ನಿಮ್ಮ ಮನಮಸ್ತಿಷ್ಕಗಳ ಮೇಲೆ ಆವರಿಸಿಡುವ ಅಭ್ಯಾಸ ಬೆಳೆಸಿರಿ. ಪವಿತ್ರ ಕುರ್‌ಆನ್ ಈ ರೀತಿ ಆದೇಶಿಸಿದೆ.

يَا أَيُّهَا الَّذِينَ آمَنُوا اذْكُرُوا اللَّهَ ذِكْرًا كَثِيرًا ﴿٤١﴾ وَسَبِّحُوهُ بُكْرَةً وَأَصِيلًا ﴿٤٢﴾

"ಸತ್ಯವಿಶ್ವಾಸಿಗಳೇ! ಅಲ್ಲಾಹನನ್ನು ಅತ್ಯಧಿಕ ಸ್ಮರಿಸಿರಿ ಮತ್ತು ಬೆಳಗು ಬೈಗುಗಳಲ್ಲಿ ಅವನ ಗುಣಗಾನ ಮಾಡುತ್ತಿರಿ". (ಅಲ್ ಅಹ್‌ಝಾಬ್: 42,43)

وَلِلَّهِ الْأَسْمَاءُ الْحُسْنَىٰ فَادْعُوهُ بِهَا

"ಅಲ್ಲಾಹನಿಗೆ ಅತ್ಯುತ್ತಮ ನಾಮಗಳಿವೆ. ಆ ನಾಮಗಳಿಂದಲೇ ಅವನನ್ನು ಕೂಗಿ ಕರೆಯುತ್ತಿರಿ". (ಅಲ್ ಅಲ್‌ರಾಫ್: 180)

ಈ ಹೆಸರುಗಳ ವಿವರ ಮತ್ತು ಅವುಗಳ ವಿಶಾಲ ಬೇಡಿಕೆಗಳು ಪವಿತ್ರ ಕುರ್‌ಆನಿನಲ್ಲಿ ಸ್ಪಷ್ಟವಾಗಿ ವಿವರಿಸಲ್ಪಟ್ಟಿವೆ.

ಪ್ರವಾದಿವರ್ಯರೂ(ಸ) ಈ ಗುಣನಾಮಗಳ ಸಂಖ್ಯೆ, ವಿವರ ಮತ್ತು ಅವುಗಳನ್ನು ಸಂರಕ್ಷಿಸುವುದರ ಮಹಾನ್ ಪುಣ್ಯವನ್ನು ವಿವರಿಸುತ್ತಾ ಅವುಗಳನ್ನು ಜಪಿಸುತ್ತಿರಬೇಕೆಂದು ಪ್ರೇರೇಪಿಸಿರುವರು. ಪ್ರವಾದಿ(ಸ) ಈ ರೀತಿ ಆದೇಶಿಸಿರುವರು:

"ಅಲ್ಲಾಹನಿಗೆ ತೊಂಬತ್ತೊಂಬತ್ತು - ನೂರಕ್ಕಿಂತ ಒಂದು ಕಡಿಮೆ - ಹೆಸರುಗಳಿವೆ. ಅವುಗಳನ್ನು ಸಂರಕ್ಷಿಸುವವನು ಸ್ವರ್ಗವನ್ನು ಪ್ರವೇಶಿಸುವನು". (ಬುಖಾರಿ)

ಅಲ್ಲಾಹನ ಗುಣನಾಮಗಳನ್ನು ಸಂರಕ್ಷಿಸುವುದೆಂದರೆ ಅವುಗಳನ್ನು ಕಲಿಯುವುದು. ಮನನ ಮಾಡುವುದು, ಅವುಗಳ ಬೇಡಿಕೆಗಳನ್ನು ಪೂರೈಸುವುದು ಮತ್ತು ಆ ಬೇಡಿಕೆಗಳಂತೆ ಜೀವನವನ್ನು ರೂಪಿಸುವ ಪ್ರಯತ್ನ ಮಾಡುವುದಾಗಿದೆ. ಇದರ ಸರಿಯಾದ ಕ್ರಮವೇನೆಂದರೆ

ಕುರ್‌ಆನ್ ಪಠನವನ್ನು ಆಸಕ್ತಿಯೊಂದಿಗೆ ಮಾಡಬೇಕು. ಅದನ್ನು ಕ್ರಮಬದ್ಧವಾಗಿ ಪಠಿಸುವ ಪರಿಪಾಠವಿಟ್ಟುಕೊಳ್ಳಿರಿ. ಅದರ ಬಗ್ಗೆ ಚಿಂತನೆ ನಡೆಸುವುದನ್ನೂ ತಪ್ಪದೆ ಪಾಲಿಸಿರಿ. ಅಲ್ಲಾಹನ ಗುಣನಾಮಗಳು ಮತ್ತು ಅವುಗಳ ಬೇಡಿಕೆಗಳ ಉಲ್ಲೇಖವಿರುವ ಪ್ರವಾದಿ ವಚನಗಳನ್ನು ಪೂರ್ಣ ಗಮನ ಮತ್ತು ಆಸಕ್ತಿಯೊಂದಿಗೆ ಅಭ್ಯಸಿಸಿರಿ. ಅಲ್ಲಾಹನ ಗುಣನಾಮಗಳನ್ನೊಳಗೊಂಡ ದಿಕ್ರ್‌ಗಳನ್ನೂ ಪ್ರಾರ್ಥನೆಗಳನ್ನೂ ಪೂರ್ಣ ಏಕಾಗ್ರತೆಯೊಂದಿಗೆ ಪಠಿಸುವ ಅಭ್ಯಾಸ ಬೆಳೆಸಿರಿ. ಪವಿತ್ರ ಕುರ್‌ಆನಿನ ಪಂಡಿತರು ಈ ತೊಂಬತ್ತೊಂಬತ್ತು ಗುಣನಾಮಗಳನ್ನೂ ಪವಿತ್ರ ಕುರ್‌ಆನ್‌ನಿಂದಲೇ ಸಂಗ್ರಹಿಸಿರುವರು.

**1.** ٱللَّهُ ಅಲ್ಲಾಹ್: ಇದು ಜಗತ್ತಿನ ಸೃಷ್ಟಿಕರ್ತನ ಹೆಸರಾಗಿದೆ. ಅದು ಎಲ್ಲ ರೀತಿಯ ಉನ್ನತ ಗುಣಗಳು, ಒಳಿತು ಮತ್ತು ಸಮೃದ್ಧಿಯ ಆಗರವಾಗಿದೆ. ಈ ಹೆಸರನ್ನು ಎಂದೂ ಅವನ ಹೊರತು ಯಾರಿಗೂ ಹೇಳಲಾಗಿಲ್ಲ. ಹೇಳಲೂಬಾರದು. ಅಲ್ಲಾಹನೇ ನಿಮ್ಮ ಪ್ರೀತಿಯ ನೈಜ ಕೇಂದ್ರವಾಗಿರುವನು. ಅವನೇ ನಿಮ್ಮ ಆರಾಧನೆ ಮತ್ತು ಬಲಿದಾನಗಳಿಗೆ ಅರ್ಹನಾದ ಏಕೈಕನು. ಎಲ್ಲ ರೀತಿಯ ಅಪಾಯಗಳಿಂದಲೂ ರಕ್ಷಣೆಯ ಏಕೈಕ ಆಶ್ರಯ ದಾತನು ಅವನಾಗಿರುವನು. ಆದ್ದರಿಂದ ಅವನ ಪ್ರೀತಿಯಿಂದಲೇ ಮನಸ್ಸನ್ನು ತುಂಬಬೇಕು. ಅವನದೇ ಪ್ರಾಮಾಣಿಕ ಆರಾಧನೆ, ದಾಸ್ಯ ಮತ್ತು ಅನುಸರಣೆ ಮಾಡಬೇಕು ಹಾಗೂ ಅವನಲ್ಲೇ ನಂಬಿಕೆ ಮತ್ತು ಭರವಸೆ ಇಡಬೇಕು.

وَالَّذِينَ آمَنُوا أَشَدُّ حُبًّا لِلَّهِ

"ಸತ್ಯವಿಶ್ವಾಸಿಗಳು ಅಲ್ಲಾಹನನ್ನು ಅತ್ಯಧಿಕ ಪ್ರೀತಿಸುತ್ತಾರೆ".

(ಪವಿತ್ರ ಕುರ್‌ಆನ್, 2:165)

إِنَّا أَنزَلْنَا إِلَيْكَ الْكِتَابَ بِالْحَقِّ فَاعْبُدِ اللَّهَ مُخْلِصًا لَّهُ الدِّينَ ۝ أَلَا لِلَّهِ الدِّينُ الْخَالِصُ

"(ಸಂದೇಶವಾಹಕರೇ) ಈ ಗ್ರಂಥವನ್ನು ನಾವು ನಿಮ್ಮ ಕಡೆಗೆ ಪರಮ ಸತ್ಯವಾಗಿ ಅವತೀರ್ಣ ಗೊಳಿಸಿರುತ್ತೇವೆ. ಆದುದರಿಂದ ನೀವು ಧರ್ಮವನ್ನು ಅಲ್ಲಾಹನಿಗಾಗಿಯೇ ಮೀಸಲಿರಿಸುತ್ತ ಅವನ ದಾಸ್ಯವನ್ನೇ ಮಾಡಿರಿ. ಎಚ್ಚರಿಕೆ! ಧರ್ಮವು ನಿಷ್ಕಳಂಕವಾಗಿ ಕೇವಲ ಅಲ್ಲಾಹನ ಹಕ್ಕಾಗಿದೆ". (ಪವಿತ್ರ ಕುರ್‌ಆನ್, 39:2-3)

قُلْ إِنَّمَا أُمِرْتُ أَنْ أَعْبُدَ اللَّهَ وَلَا أُشْرِكَ بِهِ

"ಹೇಳಿರಿ, ನಾನು ಕೇವಲ ಅಲ್ಲಾಹನ ದಾಸ್ಯ ಮತ್ತು ಆರಾಧನೆ ಮಾಡಬೇಕೆಂದೂ ಅವನ ಜೊತೆ ಯಾರನ್ನೂ ಸಹಭಾಗಿಯಾಗಿಸಬಾರದೆಂದೂ ನನಗೆ ಆಜ್ಞಾಪಿಸಲಾಗಿದೆ".

(ಪವಿತ್ರ ಕುರ್‌ಆನ್, 13:36)

وَعَلَى اللّٰهِ فَلْيَتَوَكَّلِ الْمُتَوَكِّلُوْنَ ﴿١٢﴾

"ಮತ್ತು ಭರವಸೆ ಇಡುವವರು ಅಲ್ಲಾಹನ ಮೇಲೆ ಮಾತ್ರ ಭರವಸೆ ಇಡುತ್ತಾರೆ". (ಪವಿತ್ರ ಕುರ್‌ಆನ್, 14:12)

2. اَلرَّحْمٰنُ ಅರ್ರಹ್ಮಾನ್: ತನ್ನ ಕರುಣೆಯಲ್ಲಿ ಅತ್ಯಧಿಕ ಉತ್ಸಾಹ ಇರುವವನು. ಅಪಾರವಾಗಿ ದಯೆ ತೋರುವವನು. ತನ್ನ ಕರುಣೆಯಿಂದ ಮನುಷ್ಯನಿಗೆ ಮಹಾನ್ ಅನುಗ್ರಹ ಗಳನ್ನು ದಯಪಾಲಿಸಿದವನು.

اَلرَّحْمٰنُ ﴿١﴾ عَلَّمَ الْقُرْاٰنَ ﴿٢﴾ خَلَقَ الْاِنْسَانَ ﴿٣﴾ عَلَّمَهُ الْبَيَانَ ﴿٤﴾

"ರಹ್ಮಾನನೇ ಈ ಕುರ್‌ಆನನ್ನು ಕಲಿಸಿದನು. ಮನುಷ್ಯನನ್ನು ಸೃಷ್ಟಿಸಿ ಅವನಿಗೆ ಮಾತಾಡುವ ಶಕ್ತಿಯನ್ನು ದಯಪಾಲಿಸಿದನು". (ಪವಿತ್ರ ಕುರ್‌ಆನ್, 55:1-4)

ಪವಿತ್ರ ಕುರ್‌ಆನಿನಂತಹ ಮಹಾನ್ ಅನುಗ್ರಹವನ್ನು ನೀಡಿರುವುದು ಮತ್ತು ಮನುಷ್ಯನಿಗೆ ಮಾತಾಡುವ ಶಕ್ತಿ ನೀಡಿ ಇತರ ಸೃಷ್ಟಿಗಳಿಗಿಂತ ವಿಶಿಷ್ಟಗೊಳಿಸಿರುವುದು ಅಲ್ಲಾಹನ ಕರುಣೆಯ ಅತಿದೊಡ್ಡ ಪ್ರಕಟನೆಯಾಗಿದೆ.

3. اَلرَّحِيْمُ ಅರ್ರಹೀಮ್: ನಿರಂತರ ಕರುಣೆ ತೋರುವವನು. ಅವನ ಶಾಶ್ವತ ಕರುಣೆಯ ಪರಂಪರೆಯು ಎಂದೂ ಕೊನೆಗೊಳ್ಳುವುದಿಲ್ಲ. ಇಹಲೋಕದಲ್ಲೂ ಮನುಷ್ಯನು ಅವನ ನಿರಂತರ ಕರುಣೆಯ ನೆರಳಲ್ಲೇ ಬೆಳೆಯುತ್ತಾನೆ, ಪ್ರಗತಿ ಹೊಂದುತ್ತಾನೆ, ಒಳಿತಿನ ಹಾದಿಯಲ್ಲಿ ಮುಂದುವರಿಯುತ್ತಾನೆ ಮತ್ತು ಕರ್ಮಗಳಿಗೆ ಅವಧಿಯನ್ನು ಪಡೆಯುತ್ತಾನೆ. ಪರಲೋಕದಲ್ಲಿಯೂ ಸತ್ಯವಿಶ್ವಾಸಿಗಳು ಅಲ್ಲಾಹನ ಇದೇ ಗುಣದ ಹೇತುವಾಗಿ ಸ್ವರ್ಗ ದಂತಹ ವಿಶ್ರಾಂತಿ ಧಾಮದಲ್ಲಿ ಐಶಾರಾಮ ಮತ್ತು ಶಾಂತಿಯ ಜೀವನವನ್ನು ಪಡೆಯುವರು.

وَاِنْ تَعُدُّوْا نِعْمَةَ اللّٰهِ لَا تُحْصُوْهَا

"ನೀವು ಅಲ್ಲಾಹನ ಅನುಗ್ರಹಗಳನ್ನು ಎಣಿಸ ಬಯಸಿದರೆ ಅವುಗಳನ್ನು ಎಣಿಸಲಾರಿರಿ". (ಪವಿತ್ರ ಕುರ್‌ಆನ್, 16:18)

ಅರ್ಥಾತ್ ಅಲ್ಲಾಹನ ಅಪಾರ ಮತ್ತು ನಿರಂತರ ಅನುಗ್ರಹಗಳಿಗೆ ಎಣಿಕೆಯು ಅಸಾಧ್ಯ. ಮನುಷ್ಯನು ಪ್ರತಿಕ್ಷಣವೂ ಅಲ್ಲಾಹನ ಕರುಣೆ ಮತ್ತು ಗಮನವನ್ನು ಅಪೇಕ್ಷಿಸುತ್ತಾನೆ ಮತ್ತು ಅವನ ಕರುಣೆಯ ಮಳೆಯು ನಿರಂತರ ಸುರಿಯುತ್ತಿದೆ.

هُوَ الَّذِيْ يُصَلِّيْ عَلَيْكُمْ وَمَلٰٓئِكَتُهٗ لِيُخْرِجَكُمْ مِّنَ الظُّلُمٰتِ اِلَى النُّوْرِ

وَكَانَ بِالْمُؤْمِنِيْنَ رَحِيْمًا ۝ تَحِيَّتُهُمْ يَوْمَ يَلْقَوْنَهٗ سَلٰمٌ ۚ وَاَعَدَّ لَهُمْ اَجْرًا كَرِيْمًا ۝

"ಅವನೇ ನಿಮ್ಮ ಮೇಲೆ ಕರುಣೆ ತೋರುತ್ತಾನೆ. ಅವನ ದೂತರು ನಿಮಗಾಗಿ ಕರುಣೆಯ ಪ್ರಾರ್ಥನೆ ಮಾಡುತ್ತಿರುತ್ತಾರೆ. ನಿಮ್ಮನ್ನು ಅಂಧಕಾರಗಳಿಂದ ಹೊರತೆಗೆದು ಬೆಳಕಿ ನೆಡೆಗೆ ಸಾಗಿಸಲಿಕ್ಕಾಗಿ, ಅವನು ಸತ್ಯವಿಶ್ವಾಸಿಗಳ ಮೇಲೆ ಅತ್ಯಧಿಕ ಕರುಣೆಯುಳ್ಳವನಾ ಗಿದ್ದಾನೆ. ಅವನನ್ನು ಅವರು ಭೇಟಿಯಾಗುವ ದಿನ ಅವರನ್ನು ಸಲಾಮ್‌ನೊಂದಿಗೆ ಸ್ವಾಗತಿಸಲಾ ಗುವುದು. ಅವರಿಗಾಗಿ ಅಲ್ಲಾಹನು ಗೌರವಾದರಗಳ ಪ್ರತಿಫಲವನ್ನು ಸಿದ್ಧಗೊಳಿಸಿಟ್ಟಿರುವನು".

(ಪವಿತ್ರ ಕುರ್‌ಆನ್, 33:43-44)

4. اَلْمَلِكُ ಅಲ್ ಮಲಿಕ್: ವಿಶ್ವದ ನೈಜ ರಾಜ. ಅವನ ಆಧಿಪತ್ಯವು ಉಭಯ ಲೋಕಗಳ ಮೇಲೂ ಇದೆ.

فَتَعٰلَى اللّٰهُ الْمَلِكُ الْحَقُّ

"ಅಲ್ಲಾಹನು ಅತ್ಯುನ್ನತನು. ನೈಜ ರಾಜ". (ಪವಿತ್ರ ಕುರ್‌ಆನ್, 23:116)

5. اَلْقُدُّوْسُ ಅಲ್ ಕುದ್ದೂಸ್: ಎಲ್ಲ ನ್ಯೂನತೆ ಮತ್ತು ಕೊರತೆಗಳಿಂದ ಸಂಪೂರ್ಣ ಪರಿಶುದ್ಧನು. ಆದ್ದರಿಂದ ಅವನು ಕಳುಹಿಸಿದ ಕಾನೂನು ಎಲ್ಲ ಕುಂದುಕೊರತೆಗಳಿಂದ ಮುಕ್ತವಾಗಿದೆ.

6. اَلسَّلَامُ ಅಸ್ಸಲಾಮ್: ಎಲ್ಲ ಕೊರತೆ ಮತ್ತು ಬಲಹೀನತೆಗಳಿಂದ ಸುರಕ್ಷಿತನು ಮತ್ತು ಮುಕ್ತನು.

7. اَلْمُؤْمِنُ ಅಲ್ ಮುಅ್‌ಮಿನ್: ಎಲ್ಲ ಆಪತ್ತುಗಳಿಂದಲೂ ಯಾತನೆಗಳಿಂದಲೂ ಸುರಕ್ಷಿತವಾಗಿಡುವವನು.

8. اَلْمُهَيْمِنُ ಅಲ್ ಮುಹೈಮಿನ್: ಸೃಷ್ಟಿಗಳ ಮೇಲ್ನೋಟ ವಹಿಸುವವನು ಮತ್ತು ಪಾಪಗಳಿಂದ ಸುರಕ್ಷಿತವಾಗಿಡುವವನು.

9. اَلْعَزِيْزُ ಅಲ್ ಅಝೀಝ್: ಪ್ರತಾಪ ಮತ್ತು ಅಧಿಕಾರದ ಏಕೈಕ ಮೂಲ. ಅವನ ಅಧಿಕಾರವು ಸರ್ವವ್ಯಾಪಿಯಾಗಿದೆ.

اِنَّ الْعِزَّةَ لِلّٰهِ جَمِيْعًا ؕ

"ಪ್ರತಾಪವು ಸರ್ವಸಂಪೂರ್ಣವಾಗಿ ಅಲ್ಲಾಹನಿಗೆ ಮೀಸಲು".

(ಪವಿತ್ರ ಕುರ್‌ಆನ್, 10:65)

10. اَلْجَبَّارُ ಅಲ್ ಜಬ್ಬಾರ್: ಅತ್ಯಧಿಕ ಶಕ್ತಿ-ಸಾಮರ್ಥ್ಯವುಳ್ಳವನು. ಸೃಷ್ಟಿಗಳ ಸಂಕಷ್ಟಗಳನ್ನು ನಿವಾರಿಸುವವನು.

11. اَلْمُتَكَبِّرُ ಅಲ್ ಮುತಕಬ್ಬಿರ್: ಮಹಾನತೆ ಮತ್ತು ದೊಡ್ಡಸ್ಥಿಕೆಯ ಮೂಲ. ಅವನ ದೊಡ್ಡಸ್ಥಿಕೆಯಲ್ಲಿ ಯಾರೂ ಪಾಲುದಾರರಿಲ್ಲ.

هُوَ اللّٰهُ الَّذِیْ لَآ اِلٰهَ اِلَّا هُوَۚ اَلْمَلِكُ الْقُدُّوْسُ السَّلٰمُ الْمُؤْمِنُ الْمُهَیْمِنُ

الْعَزِیْزُ الْجَبَّارُ الْمُتَكَبِّرُؕ سُبْحٰنَ اللّٰهِ عَمَّا یُشْرِكُوْنَ ۝

"ಅವನೇ ಅಲ್ಲಾಹ್ ಅವನ ಹೊರತು ಬೇರಾವ ಆರಾಧ್ಯನೂ ಇಲ್ಲ. ಅವನು ಸಾಮ್ರಾಟನು, ಪರಮ ಪಾವನನು, ಸಾದ್ಯಂತ ಮಂಗಲಮಯನು, ಶಾಂತಿದಾತನು, ಸಂರಕ್ಷಕನು, ಪ್ರಬಲನು, ತನ್ನ ಆಜ್ಞೆಯನ್ನು ಶಕ್ತಿಯಿಂದ ಅನುಷ್ಠಾನಿಸಿ ಬಿಡುವವನು, ಸದಾ ಸರ್ವೋನ್ನತ ನಾಗಿಯೇ ಇರುವವನು, ಜನರು ಮಾಡುತ್ತಿರುವ ಸಹಭಾಗಿತ್ವದಿಂದ ಅಲ್ಲಾಹನು ಪರಿಶುದ್ಧನು".
(ಪವಿತ್ರ ಕುರ್‌ಆನ್, 59:23)

12. اَلْخَالِقُ ಅಲ್ ಖಾಲಿಕ್: ಸರ್ವಶಕ್ತಿ ಸಾಮರ್ಥ್ಯಗಳನ್ನು ಹೊಂದಿದವನು ಮತ್ತು ಅತ್ಯುತ್ತಮ ಅಸ್ತಿತ್ವ ದಯಪಾಲಿಸುವವನು.

13. اَلْبَارِئُ ಅಲ್ ಬಾರಿಅ್: ಎಲ್ಲ ವಸ್ತುಗಳನ್ನು ನಾಸ್ತಿಯಿಂದ ಅಸ್ತಿತ್ವಕ್ಕೆ ತರುವವನು. ಅಸದೃಶ ಸೃಷ್ಟಿಕರ್ತ.

14. اَلْمُصَوِّرُ ಅಲ್ ಮುಸವ್ವಿರ್: ಸೃಷ್ಟಿಗಳಿಗೆ ರೂಪ ನೀಡುವವನು.

هُوَ الَّذِیْ یُصَوِّرُكُمْ فِی الْاَرْحَامِ كَیْفَ یَشَآءُؕ

"ನಿಮ್ಮ ಮಾತೆಯರ ಗರ್ಭಗಳಲ್ಲಿ ತಾನಿಚ್ಛಿಸಿದ ರೂಪವನ್ನು ನಿಮಗೆ ಕೊಡುವಾತನು ಅವನೇ". (ಪವಿತ್ರ ಕುರ್‌ಆನ್, 3:6)

وَصَوَّرَكُمْ فَاَحْسَنَ صُوَرَكُمْۚ

"ಅವನು ನಿಮಗೆ ರೂಪ ನೀಡಿದನು ಮತ್ತು ಅತ್ಯುತ್ತಮ ರೂಪ ನೀಡಿದನು".
(ಪವಿತ್ರ ಕುರ್‌ಆನ್, 64:3)

هُوَ اللّٰهُ الْخَالِقُ الْبَارِئُ الْمُصَوِّرُ لَهُ الْاَسْمَآءُ الْحُسْنٰىؕ

"ಅವನೇ ಅಲ್ಲಾಹ್!. ವಿಶ್ವದ ಸೃಷ್ಟಿಕರ್ತ. ಅಸ್ತಿತ್ವವನ್ನು ನೀಡುವವನು. ರೂಪ ಕೊಡುವವನು. ಎಲ್ಲ ಉತ್ತಮ ನಾಮಗಳು ಆತನಿಗಿವೆ". (ಪವಿತ್ರ ಕುರ್‌ಆನ್, 59:24)

15. اَلْغَفَّارُ ಅಲ್ ಗಫ್ಫಾರ್: ಅತ್ಯಧಿಕ ಕ್ಷಮಿಸುವವನು ಮತ್ತು ಮನ್ನಿಸುವವನು.

فَقُلْتُ اسْتَغْفِرُوْا رَبَّكُمْ ۗ اِنَّهٗ كَانَ غَفَّارًا ۝١٠

"ನಾನಾಗ ಹೇಳಿದೆ: ನಿಮ್ಮ ಪ್ರಭುವಿನಿಂದ ನೀವು ಕ್ಷಮಾಯಾಚನೆ ಮಾಡಿರಿ. ಖಂಡಿತ ವಾಗಿಯೂ ಆತನು ಅತ್ಯಂತ ಕ್ಷಮಾಶೀಲನಾಗಿರುವನು". (ಪವಿತ್ರ ಕುರ್‌ಆನ್, 71:10)

16. اَلْقَهَّارُ ಅಲ್ ಕಹ್ಹಾರ್: ತನ್ನ ಸೃಷ್ಟಿಗಳ ಮೇಲೆ ಅಜೇಯ ಶಕ್ತಿ ಮತ್ತು ಅಧಿಕಾರ ಹೊಂದಿದವನು.

17. اَلْوَاحِدُ ಅಲ್ ವಾಹಿದ್: ಏಕೈಕನು. ಅವನ ಅಸ್ತಿತ್ವ ಗುಣಗಳು, ಸಾಮರ್ಥ್ಯಗಳು ಮತ್ತು ಹಕ್ಕುಗಳಲ್ಲಿ ಯಾರೂ ಭಾಗೀದಾರರಿಲ್ಲ.

لِمَنِ الْمُلْكُ الْيَوْمَ ۗ لِلّٰهِ الْوَاحِدِ الْقَهَّارِ ۝١٦

"ಇಂದು ಆಧಿಪತ್ಯ ಯಾರದು? ಅಲ್ಲಾಹನದು. ಅವನು ಏಕೈಕನೂ ಅಜೇಯನೂ ಆಗಿರುವನು". (ಪವಿತ್ರ ಕುರ್‌ಆನ್, 40:16)

18. اَلتَّوَّابُ ಅತ್ತವ್ವಾಬ್: ತನ್ನ ದಾಸರ ಸ್ಥಿತಿಯ ಬಗ್ಗೆ ಗಮನವಿರಿಸುವವನು ಮತ್ತು ಪಾಪಿಗಳ ಪಶ್ಚಾತ್ತಾಪವನ್ನು ಸ್ವೀಕರಿಸುವವನು.

ثُمَّ تَابَ عَلَيْهِمْ لِيَتُوْبُوْا ۗ اِنَّ اللّٰهَ هُوَ التَّوَّابُ الرَّحِيْمُ ۝١١٨

"ಮತ್ತೆ ಅಲ್ಲಾಹನು ಅವರತ್ತ ಗಮನ ಹರಿಸಿದನು. ಅವರು ಪಶ್ಚಾತ್ತಾಪಪಡುವಂತಾಗಲು. ಖಂಡಿತವಾಗಿಯೂ ಅಲ್ಲಾಹನು ಅತಿಹೆಚ್ಚು ಪಶ್ಚಾತ್ತಾಪ ಸ್ವೀಕರಿಸುವವನೂ ದಯೆ ತೋರುವವನೂ ಆಗಿರುವನು" (ಪವಿತ್ರ ಕುರ್‌ಆನ್, 9:118)

19. اَلْوَهَّابُ ಅಲ್ ವಹ್ಹಾಬ್: ನಿಸ್ವಾರ್ಥವಾಗಿ ಮನ್ನಿಸುವವನು ಮತ್ತು ಉದಾರಿ.

وَهَبْ لَنَا مِنْ لَّدُنْكَ رَحْمَةً ۚ اِنَّكَ اَنْتَ الْوَهَّابُ ۝٨

"ನಮಗೆ ನಿನ್ನ ವತಿಯಿಂದ ಕರುಣೆಯನ್ನು ದಯಪಾಲಿಸು. ಖಂಡಿತವಾಗಿಯೂ ನೀನು ಅತ್ಯಧಿಕ ಉದಾರಿಯಾಗಿರುವೆ". (ಪವಿತ್ರ ಕುರ್‌ಆನ್, 3:8)

20. اَلْخَلَّاقُ ಅಲ್ ಖಲ್ಲಾಕ್: ಎಲ್ಲ ಸಮಯದಲ್ಲಿ ಎಲ್ಲ ರೀತಿಯಲ್ಲಿ ಪ್ರತಿಯೊಂದು ವಸ್ತುವನ್ನು ಸೃಷ್ಟಿಸುವವನು. ಸೃಷ್ಟಿಯ ಕಾರ್ಯದಲ್ಲಿ ಅತ್ಯಂತ ಪ್ರವೀಣ.

اَوَلَيْسَ الَّذِيْ خَلَقَ السَّمٰوٰتِ وَالْاَرْضَ بِقٰدِرٍ عَلٰٓى اَنْ يَّخْلُقَ مِثْلَهُمْ ۗ بَلٰى

وَهُوَ الْخَلّٰقُ الْعَلِيْمُ ۝٨١

"ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸಿದವನು ಅದರಂತಹ ವಸ್ತುಗಳನ್ನು ಸೃಷ್ಟಿಸಲು ಸಮರ್ಥನಲ್ಲವೇ? ಖಂಡಿತವಾಗಿಯೂ ಅವನು ದೊಡ್ಡ ಸೃಷ್ಟಿಕರ್ತ ಮತ್ತು ಸರ್ವಜ್ಞನಾಗಿರುವನು". (ಪವಿತ್ರ ಕುರ್‌ಆನ್, 36:81)

**21.** اَلرَّزَّاقُ ಅರ್ರಝ್ಝಾಕ್: ತನ್ನ ಸೃಷ್ಟಿಗಳಿಗೆ ಉದಾರವಾಗಿ ಆಹಾರ ನೀಡುವವನು. ಅವರ ಎಲ್ಲ ಬಯಕೆ ಬೇಡಿಕೆಗಳನ್ನು ಈಡೇರಿಸುವವನು.

**22.** اَلْمَتِيْنُ ಅಲ್ ಮತೀನ್: ಅತ್ಯಂತ ಶಕ್ತಿಶಾಲಿ ಮತ್ತು ಸಮರ್ಥ.

إِنَّ اللّٰهَ هُوَ الرَّزَّاقُ ذُو الْقُوَّةِ الْمَتِيْنُ ۝٥٨

"ಖಂಡಿತವಾಗಿಯೂ ಅಲ್ಲಾಹನೇ ಜೀವನಾಧಾರ ಕೊಡುವವನೂ ಬಹಳ ಶಕ್ತಿ ಶಾಲಿಯೂ ಆಗಿರುತ್ತಾನೆ". (ಪವಿತ್ರ ಕುರ್‌ಆನ್, 51:58)

**23.** اَلْفَتَّاحُ ಅಲ್ ಫತ್ತಾಹ್: ಸೃಷ್ಟಿಗಳ ಮಧ್ಯೆ ಸರಿಯಾದ ತೀರ್ಮಾನ ಮಾಡುವವನು. ಸಂಕಷ್ಟಗಳನ್ನು ನಿವಾರಿಸುವವನು.

**24.** اَلْعَلِيْمُ ಅಲ್ ಅಲೀಮ್: ಸೃಷ್ಟಿಗಳ ಎಲ್ಲ ಮಾತು, ಕೃತಿ, ಭಾವನೆ ಮತ್ತು ಯೋಚನೆಗಳನ್ನು ನೇರವಾಗಿ ಅರಿಯುವವನು.

قُلْ يَجْمَعُ بَيْنَنَا رَبُّنَا ثُمَّ يَفْتَحُ بَيْنَنَا بِالْحَقِّ ۗ وَهُوَ الْفَتَّاحُ الْعَلِيْمُ ۝٢٦

"ಹೇಳಿರಿ, ನಮ್ಮ ಪ್ರಭು ನಮ್ಮನ್ನು ಒಟ್ಟುಗೂಡಿಸುವನು ಮತ್ತು ನಮ್ಮ ಮಧ್ಯೆ ಸರಿಯಾದ ತೀರ್ಮಾನ ಮಾಡುವನು. ಖಂಡಿತವಾಗಿಯೂ ಅವನು ಅತ್ಯಂತ ನ್ಯಾಯಪೂರ್ಣ ತೀರ್ಮಾನ ಮಾಡುವವನು ಮತ್ತು ಸರ್ವಜ್ಞನಾಗಿರುವನು". (ಪವಿತ್ರ ಕುರ್‌ಆನ್, 34:26)

**25.** اَلْمُحِيْطُ ಅಲ್ ಮುಹೀತ್: ಎಲ್ಲ ಸೃಷ್ಟಿಗಳನ್ನೂ ಆವರಿಸಿಕೊಂಡಿರು ವವನು. ಅವನ ಜ್ಞಾನ ಮತ್ತು ಶಕ್ತಿಯಿಂದ ಯಾವ ವಸ್ತುವೂ ಹೊರತಲ್ಲ.

وَّاللّٰهُ مِنْ وَّرَآئِهِمْ مُّحِيْطٌ ۝٢٠

"ಮತ್ತು ಅಲ್ಲಾಹನು ಅವರನ್ನು ಎಲ್ಲ ಕಡೆಯಿಂದಲೂ ಆವರಿಸಿಕೊಂಡಿರುವನು". (ಪವಿತ್ರ ಕುರ್‌ಆನ್, 85:20)

**26.** اَلْقَدِيْرُ ಅಲ್ ಕದೀರ್: ಎಲ್ಲದಕ್ಕೂ ಸಂಪೂರ್ಣ ಸಾಮರ್ಥ್ಯ ಮತ್ತು ಅಧಿಕಾರ ಹೊಂದಿದವನು.

اَنَّ اللّٰهَ عَلٰى كُلِّ شَىۡءٍ قَدِيۡرٌ ۙ وَّاَنَّ اللّٰهَ قَدۡ اَحَاطَ بِكُلِّ شَىۡءٍ عِلۡمًا ﴿۱۲﴾

"ಅಲ್ಲಾಹನು ಎಲ್ಲ ಕಾರ್ಯಗಳಿಗೂ ಸಮರ್ಥನು ಮತ್ತು ಅಲ್ಲಾಹನು ತನ್ನ ಜ್ಞಾನದಿಂದ ಸಕಲ ವಸ್ತುಗಳನ್ನು ಆವರಿಸಿಕೊಂಡಿರುವನು". (ಪವಿತ್ರ ಕುರ್‌ಆನ್, 65:12)

**27.** اَلْحَلِيْمُ ಅಲ್ ಹಲೀಮ್: ಶಿಕ್ಷೆ ಕೊಡುವುದರಲ್ಲಿ ಆತುರ ಪಡದವನು. ದಾಸರಿಗೆ ಸುಧಾರಿಸಿಕೊಳ್ಳುವ ಅವಕಾಶ ನೀಡುವವನು. ಸಹನಶೀಲನು.

**28.** اَلْغَفُوْرُ ಅಲ್ ಗಫೂರ್: ಅತ್ಯಧಿಕ ಕ್ಷಮಾದಾನ ಮಾಡುವವನು ಮತ್ತು ಬಚ್ಚಿಡುವವನು.

**29.** اَلْعَفُوُّ ಅಲ್ ಅಫುವ್ವ್: ಅತ್ಯಧಿಕ ಕ್ಷಮಿಸುವವನು.

**30.** اَلشَّكُوْرُ ಅಶ್ಶಕೂರ್: ಜನರ ಸತ್ಕರ್ಮಗಳ ಬಗ್ಗೆ ಅತ್ಯಧಿಕ ಗುಣಗ್ರಾಹಿಯಾಗಿರುವವನು.

اِنَّ اللّٰهَ يُمۡسِكُ السَّمٰوٰتِ وَالۡاَرۡضَ اَنۡ تَزُوۡلَا ۚ وَلَـئِنۡ زَالَتَاۤ اِنۡ
اَمۡسَكَهُمَا مِنۡ اَحَدٍ مِّنۡۢ بَعۡدِهٖ ؕ اِنَّهٗ كَانَ حَلِيۡمًا غَفُوۡرًا ﴿۴۱﴾

"ವಾಸ್ತವದಲ್ಲಿ ಅಲ್ಲಾಹನೇ ಆಕಾಶಗಳನ್ನೂ ಭೂಮಿಯನ್ನೂ ಸರಿದು ಹೋಗು ವುದರಿಂದ ತಡೆದು ನಿಲ್ಲಿಸಿರುವನು. ಅವು ಸರಿದು ಬಿಟ್ಟರೆ ಅಲ್ಲಾಹನ ಹೊರತು ಅವುಗಳನ್ನು ತಡೆದು ನಿಲ್ಲಿಸಬಲ್ಲವನು ಯಾರೂ ಇಲ್ಲ. ಖಂಡಿತವಾಗಿಯೂ ಅಲ್ಲಾಹನು ಅತ್ಯಧಿಕ ಕ್ಷಮಾ ಶೀಲನೂ ಸಹನಶೀಲನೂ ಆಗಿರುವನು". (ಪವಿತ್ರ ಕುರ್‌ಆನ್, 35:41)

عَسَى اللّٰهُ اَنۡ يَّعۡفُوَ عَنۡهُمۡ ؕ وَكَانَ اللّٰهُ عَفُوًّا غَفُوۡرًا ﴿۹۹﴾

"ಅಲ್ಲಾಹನು ಅವರನ್ನು ಕ್ಷಮಿಸಲೂಬಹುದು. ಅಲ್ಲಾಹನು ಅತ್ಯಧಿಕ ಕ್ಷಮಿಸು ವವನು ಮತ್ತು ಮನ್ನಿಸುವವನಾಗಿರುತ್ತಾನೆ". (ಪವಿತ್ರ ಕುರ್‌ಆನ್, 4:99)

وَقَالُوا الۡحَمۡدُ لِلّٰهِ الَّذِىۡۤ اَذۡهَبَ عَنَّا الۡحَزَنَ ؕ اِنَّ رَبَّنَا لَغَفُوۡرٌ شَكُوۡرُ ۨ ﴿۳۴﴾

"ಅವರು ಹೇಳುವರು ನಮ್ಮಿಂದ ದುಃಖವನ್ನು ದೂರೀಕರಿಸಿದ ಅಲ್ಲಾಹನಿಗೆ ಸರ್ವಸ್ತುತಿ. ಖಂಡಿತವಾಗಿಯೂ ನಮ್ಮ ಪ್ರಭು ಅತ್ಯಧಿಕ ಕ್ಷಮಾದಾನಿಯೂ ಗುಣಗ್ರಾಹಿಯೂ ಆಗಿರುವನು".
(ಪವಿತ್ರ ಕುರ್‌ಆನ್, 35:34)

31. اَلْعَظِيْمُ ಅಲ್ ಅಝೀಮ್: ತನ್ನ ವ್ಯಕ್ತಿತ್ವ ಮತ್ತು ಗುಣಗಳಲ್ಲಿ ಮಹಾನತೆ ಮತ್ತು ಹಿರಿಮೆಯುಳ್ಳವನು.

فَسَبِّحْ بِاسْمِ رَبِّكَ الْعَظِيْمِ ۝

"ನೀವು ನಿಮ್ಮ ಪ್ರಭುವಿನ ನಾಮದಿಂದ ಕೀರ್ತನೆ ಮಾಡಿರಿ".

(ಪವಿತ್ರ ಕುರ್‌ಆನ್, 56:74)

32. اَلْوَاسِعُ ಅಲ್ ವಾಸಿಅ್: ಅತ್ಯಂತ ವಿಶಾಲನು. ಜನರಿಗೆ ಅತ್ಯಂತ ಔದಾರ್ಯದಿಂದ ನೆರವಾಗುವವನು.

وَاللّٰهُ وَاسِعٌ عَلِيْمٌ ۝ يُّؤْتِي الْحِكْمَةَ مَنْ يَّشَاءُ ۚ وَمَنْ يُّؤْتَ الْحِكْمَةَ فَقَدْ اُوْتِيَ خَيْرًا كَثِيْرًا ؕ

"ಅಲ್ಲಾಹನು ಅತ್ಯಧಿಕ ಉದಾರಿಯೂ ಸರ್ವಜ್ಞನೂ ಆಗಿರುವನು. ತಾನಿಚ್ಛಿಸಿದವನಿಗೆ ಯುಕ್ತಿಯನ್ನು ದಯಪಾಲಿಸುತ್ತಾನೆ. ಯಾರಿಗೆ ಯುಕ್ತಿಯು ನೀಡಲ್ಪಟ್ಟಿತೋ ಅವನಿಗೆ ಅತ್ಯಮೂಲ್ಯ ಸಂಪತ್ತು ಲಭಿಸಿತು". (ಪವಿತ್ರ ಕುರ್‌ಆನ್, 2:268-269)

33. اَلْحَكِيْمُ ಅಲ್ ಹಕೀಮ್: ವಿಶ್ವದ ವ್ಯವಸ್ಥೆ ಮತ್ತು ಜನರ ವ್ಯವಹಾರ ದಲ್ಲಿ ಅತ್ಯಂತ ಜಾಣ್ಮೆಯಿಂದ ತೀರ್ಮಾನ ಮಾಡುವವನು.

اِنَّ اللّٰهَ كَانَ عَلِيْمًا حَكِيْمًا ۝ يُّدْخِلُ مَنْ يَّشَاءُ فِيْ رَحْمَتِهٖ ؕ وَالظّٰلِمِيْنَ اَعَدَّ لَهُمْ عَذَابًا اَلِيْمًا ۝

"ಖಂಡಿತವಾಗಿಯೂ ಅಲ್ಲಾಹನು ಅತ್ಯಧಿಕ ಜ್ಞಾನವುಳ್ಳವನಾಗಿದ್ದಾನೆ. ಯುಕ್ತಿ ಯೊಂದಿಗೆ ತೀರ್ಮಾನ ಮಾಡುವವನಾಗಿದ್ದಾನೆ. ತಾನಿಚ್ಛಿಸುವವರನ್ನು ತನ್ನ ಕರುಣೆಯ ಆಸರೆಯಲ್ಲಿರಿಸುತ್ತಾನೆ ಮತ್ತು ಅಕ್ರಮಿಗಳಿಗೆ ಅವನು ವೇದನಾಜನಕ ಶಿಕ್ಷೆಯನ್ನು ಸಿದ್ಧ ಗೊಳಿಸಿಟ್ಟಿರುತ್ತಾನೆ".

(ಪವಿತ್ರ ಕುರ್‌ಆನ್, 76:30, 31)

34. اَلْحَيُّ ಅಲ್ ಹಯ್ಯ್: ಜೀವನದ ಮೂಲ. ಮರಣ, ನಿದ್ರೆ ಮತ್ತು ತೂಕಡಿಕೆಯಿಂದ ಮುಕ್ತ.

وَتَوَكَّلْ عَلَى الْحَيِّ الَّذِيْ لَا يَمُوْتُ

"ಮತ್ತು ಭರವಸೆ ಇಡಿರಿ ಆ ಚಿರಂತನನ ಮೇಲೆ. ಅವನಿಗೆಂದೂ ಮರಣವಿಲ್ಲ".
(ಪವಿತ್ರ ಕುರ್‌ಆನ್, 25:58)

**35.** اَلْقَيُّوْمُ ಅಲ್ ಕಯ್ಯೂಮ್: ವಿಶ್ವದ ವ್ಯವಸ್ಥೆಯನ್ನು ನಿರ್ವಹಿಸುವವನು ಮತ್ತು ಅದನ್ನು ಸ್ಥಾಪಿಸಿಡುವವನು.

اَللّٰهُ لَآ اِلٰهَ اِلَّا هُوَ ۚ اَلْحَيُّ الْقَيُّوْمُ ۚ لَا تَاْخُذُهٗ سِنَةٌ وَّلَا نَوْمٌ ۗ

"ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲ. ಅವನು ಚಿರಂತನನು. ವಿಶ್ವ ವ್ಯವಸ್ಥೆಯನ್ನು ಆಧರಿಸಿರುವವನು. ಅವನನ್ನು ತೂಕಡಿಕೆಯಾಗಲೀ ನಿದ್ರೆಯಾಗಲೀ ಬಾಧಿಸುವುದಿಲ್ಲ".
(ಪವಿತ್ರ ಕುರ್‌ಆನ್, 2: 255)

**36.** اَلسَّمِيْعُ ಅಸ್ಸಮೀಅ್: ತನ್ನ ದಾಸರ ಎಲ್ಲ ಮಾತುಗಳನ್ನು ಆಲಿಸುವವನು. ಅವರ ಬಗ್ಗೆ ಪೂರ್ಣಜ್ಞಾನ ಉಳ್ಳವನು.

**37.** اَلْبَصِيْرُ ಅಲ್ ಬಸೀರ್: ಜನರ ಕರ್ಮಗಳನ್ನು ಮತ್ತು ವ್ಯವಹಾರಗಳನ್ನು ವೀಕ್ಷಿಸುವವನು. ಅವರ ಮಧ್ಯೆ ಸರಿಯಾದ ತೀರ್ಮಾನ ಮಾಡುವ ಸಲುವಾಗಿ.

وَاللّٰهُ يَقْضِيْ بِالْحَقِّ ۗ وَالَّذِيْنَ يَدْعُوْنَ مِنْ دُوْنِهٖ لَا يَقْضُوْنَ بِشَيْءٍ ۗ اِنَّ اللّٰهَ

هُوَ السَّمِيْعُ الْبَصِيْرُ ﴿٢٠﴾

"ಅಲ್ಲಾಹನು ನ್ಯಾಯಪೂರ್ಣವಾಗಿಯೇ ತೀರ್ಪು ನೀಡುತ್ತಾನೆ. ಅವನ ಹೊರತು ಇತರ ಯಾರನ್ನು ಇವರು ಕರೆದು ಪ್ರಾರ್ಥಿಸುತ್ತಿರುವರೋ ಅವರು ಯಾವುದೇ ವಿಷಯದ ಬಗ್ಗೆ ತೀರ್ಪು ಕೊಡಲಾರರು. ಖಂಡಿತವಾಗಿಯೂ ಅಲ್ಲಾಹನೇ ಎಲ್ಲವನ್ನೂ ಕೇಳುವವನೂ ಎಲ್ಲವನ್ನೂ ನೋಡುವವನೂ ಆಗಿರುತ್ತಾನೆ". (ಪವಿತ್ರ ಕುರ್‌ಆನ್, 40:20)

**38.** اَللَّطِيْفُ ಅಲ್ ಲತೀಫ್: ಅತ್ಯಂತ ಸೂಕ್ಷ್ಮಜ್ಞನು. ಅತ್ಯಂತ ಸೂಕ್ಷ್ಮ ಉಪಾಯಗಳನ್ನು ಹೂಡುವವನು.

**39.** اَلْخَبِيْرُ ಅಲ್ ಖಬೀರ್: ಜನರ ಪ್ರತಿಯೊಂದು ವಿಷಯದ ಬಗ್ಗೆ ಪೂರ್ಣಜ್ಞಾನ ಉಳ್ಳವನು.

يٰبُنَيَّ اِنَّهَآ اِنْ تَكُ مِثْقَالَ حَبَّةٍ مِّنْ خَرْدَلٍ فَتَكُنْ فِيْ صَخْرَةٍ اَوْ فِي السَّمٰوٰتِ

اَوْ فِي الْاَرْضِ يَاْتِ بِهَا اللّٰهُ ۗ اِنَّ اللّٰهَ لَطِيْفٌ خَبِيْرٌ ﴿١٦﴾

"ನನ್ನ ಮಗನೇ! ಒಂದು ವಸ್ತು ಸಾಸಿವೆ ಕಾಳಿನಷ್ಟಿದ್ದಾಗಲೂ ಅದೊಂದು ಬಂಡೆಯೊಳಗಿದ್ದರೂ ಅಥವಾ ಆಕಾಶ ಭೂಮಿಗಳಲ್ಲಿ ಎಲ್ಲಿ ಅಡಗಿದ್ದರೂ ಅದನ್ನು ಅಲ್ಲಾಹನು ಹೊರ ತರುವನು. ಖಂಡಿತವಾಗಿಯೂ ಅಲ್ಲಾಹನು ಸೂಕ್ಷ್ಮಜ್ಞನೂ ಎಲ್ಲ ವಿಷಯಗಳ ಅರಿವುಳ್ಳವನೂ ಆಗಿರುವನು". (ಪವಿತ್ರ ಕುರ್‌ಆನ್, **31:16**)

**40.** اَلْعَلِىُّ ಅಲ್ ಅಲಿಯ್ಯ್: ಅತ್ಯುನ್ನತನು; ಉನ್ನತ ಸ್ಥಾನಮಾನವಿರುವವನು.

**41.** اَلْكَبِيْرُ ಅಲ್ ಕಬೀರ್: ಅತ್ಯಂತ ಮಹಾನನು. ಬಹಳ ದೊಡ್ಡವನು. ಅವನ ಮಹಿಮೆ ಮತ್ತು ದೊಡ್ಡಸ್ಥಿಕೆಯಲ್ಲಿ ಯಾರೂ ಭಾಗೀದಾರರಿಲ್ಲ.

**42.** اَلْحَقُّ ಅಲ್ ಹಕ್ಕ್: ಅವನ ಅಸ್ತಿತ್ವವು ಸತ್ಯಪೂರ್ಣವಾಗಿದೆ. ಯಾರ ನಿರಾಕರಣೆಯಿಂದಲೂ ಅವನ ಸತ್ಯಪೂರ್ಣತೆಯಲ್ಲಿ ಯಾವ ವ್ಯತ್ಯಾಸವೂ ಉಂಟಾಗುವುದಿಲ್ಲ.

ذٰلِكَ بِاَنَّ اللّٰهَ هُوَ الْحَقُّ وَاَنَّ مَا يَدْعُوْنَ مِنْ دُوْنِهِ الْبَاطِلُ وَاَنَّ اللّٰهَ هُوَ الْعَلِيُّ الْكَبِيْرُ ﴿٣٠﴾

"ಏಕೆಂದರೆ ಅಲ್ಲಾಹನ ಅಸ್ತಿತ್ವವು ಸತ್ಯಪೂರ್ಣವಾಗಿದೆ ಮತ್ತು ಅಲ್ಲಾಹನ ಹೊರತು ಇವರು ಕರೆದು ಪ್ರಾರ್ಥಿಸುವವರೆಲ್ಲರೂ ಮಿಥ್ಯವಾಗಿದ್ದಾರೆ. ಮಾತ್ರವಲ್ಲ ಅಲ್ಲಾಹನೇ ಅತ್ಯುನ್ನತನೂ ಮಹಾನನೂ ಆಗಿರುವನು". (ಪವಿತ್ರ ಕುರ್‌ಆನ್, **31:30**)

**43.** اَلْمُبِيْنُ ಅಲ್ ಮುಬೀನ್: ಸತ್ಯವನ್ನು ಪ್ರತ್ಯಕ್ಷಗೊಳಿಸುವವನು ಮತ್ತು ಸತ್ಯವನ್ನು ಸತ್ಯವಾಗಿ ಮಾಡಿ ತೋರಿಸುವವನು.

وَيَعْلَمُوْنَ اَنَّ اللّٰهَ هُوَ الْحَقُّ الْمُبِيْنُ ﴿٢٥﴾

"ನಿಜವಾಗಿಯೂ ಅಲ್ಲಾಹನೇ ವಾಸ್ತವಿಕತೆಯನ್ನು ವ್ಯಕ್ತಗೊಳಿಸುವ ಪರಮ ಸತ್ಯವಾಗಿರುವನೆಂಬುದನ್ನು ಅವರು ಕಂಡುಕೊಳ್ಳುವರು". (ಪವಿತ್ರ ಕುರ್‌ಆನ್, **24:25**)

**44.** اَلْمَوْلٰى ಅಲ್ ಮೌಲಾ: ಸತ್ಯವಿಶ್ವಾಸಿಗಳಿಗೆ ನೆರವು ಮತ್ತು ಬೆಂಬಲ ನೀಡುವವನು. ನೈಜ ಒಡೆಯ. ಕಾರ್ಯನಿರ್ವಾಹಕ.

**45.** اَلنَّصِيْرُ ಅನ್ನಸೀರ್: ಸತ್ಯವಿಶ್ವಾಸಿಗಳಿಗೆ ಸಹಾಯ ಮತ್ತು ನೆರವು ಮಾಡುವವನು.

وَاعْتَصِمُوْا بِاللّٰهِ ۭ هُوَ مَوْلٰىكُمْ ۚ فَنِعْمَ الْمَوْلٰى وَنِعْمَ النَّصِيْرُ ۝۷۸

"ಅಲ್ಲಾಹನ ಂದಿಗೆ ಸಂಬಂಧ ಸ್ಥಾಪಿಸಿಕೊಂಡಿರಿ. ಆತನೇ ನಿಮ್ಮ ಒಡೆಯ. ಅತ್ಯುತ್ತಮ ಒಡೆಯನವನು. ಅತ್ಯುತ್ತಮ ಸಹಾಯಕನವನು". (ಪವಿತ್ರ ಕುರ್‌ಆನ್, 22:78)

ذٰلِكَ بِاَنَّ اللّٰهَ مَوْلَى الَّذِيْنَ اٰمَنُوْا وَاَنَّ الْكٰفِرِيْنَ لَا مَوْلٰى لَهُمْ ۝۱۱

"ಏಕೆಂದರೆ ಅಲ್ಲಾಹನೇ ಸತ್ಯವಿಶ್ವಾಸಿಗಳ ಕಾರ್ಯಸಾಧಕನಾಗಿದ್ದಾನೆ ಮತ್ತು ಸತ್ಯ ನಿಷೇಧಿಗಳಿಗೆ ಯಾರೂ ಕಾರ್ಯಸಾಧಕರಿಲ್ಲ". (ಪವಿತ್ರ ಕುರ್‌ಆನ್, 47:11)

**46.** اَلْكَرِيْمُ ಅಲ್ ಕರೀಮ್: ಅತ್ಯಂತ ಉದಾರವಾಗಿ ಕ್ಷಮಿಸುವವನು ಮತ್ತು ವರ್ತಿಸುವವನು.

يٰۤاَيُّهَا الْاِنْسَانُ مَا غَرَّكَ بِرَبِّكَ الْكَرِيْمِ ۝۶ الَّذِيْ خَلَقَكَ فَسَوّٰىكَ فَعَدَلَكَ ۝۷ فِيْۤ اَيِّ صُوْرَةٍ مَّا شَآءَ رَكَّبَكَ ۝۸

"ಓ ಮಾನವ! ನಿನ್ನ ಉದಾರಿಯಾದ ಪ್ರಭುವಿನ ಬಗ್ಗೆ ನಿನ್ನನ್ನು ವಂಚಿಸಿರುವುದು ಯಾವುದು? ಅವನೇ ನಿನ್ನನ್ನು ಸೃಷ್ಟಿಸಿದನು. ನಿನ್ನನ್ನು ಸಮಂಜಸಗೊಳಿಸಿದನು. ನಿನ್ನನ್ನು ಸಂತುಲಿತಗೊಳಿಸಿದನು. ತಾನಿಚ್ಛಿಸಿದ ರೂಪದಲ್ಲಿ ನಿನ್ನ ರಚನೆ ಮಾಡಿದನು".

(ಪವಿತ್ರ ಕುರ್‌ಆನ್, 82:6-8)

**47.** اَلْغَنِيُّ ಅಲ್ ಗನಿಯ್ಯ್: ಸೃಷ್ಟಿಗಳಿಂದ ಏನೂ ಬಯಸದ ನಿರಪೇಕ್ಷನು.

**48.** اَلْحَمِيْدُ ಅಲ್ ಹಮೀದ್: ಸ್ವಯಂಸ್ತುತ್ಯರ್ಹನು. ಯಾರ ಸ್ತುತಿಸ್ತೋತ್ರಗಳ ಅಪೇಕ್ಷಕನೂ ಅಲ್ಲ.

وَمَنْ يَّشْكُرْ فَاِنَّمَا يَشْكُرُ لِنَفْسِهٖ ۚ وَمَنْ كَفَرَ فَاِنَّ اللّٰهَ غَنِيٌّ حَمِيْدٌ ۝۱۲

"ಯಾರು ಅಲ್ಲಾಹನಿಗೆ ಕೃತಜ್ಞನಾಗುತ್ತಾನೋ ವಾಸ್ತವದಲ್ಲಿ ಅವನು ತನಗಾಗಿಯೇ ಕೃತಜ್ಞನಾಗುತ್ತಾನೆ. ಇನ್ನು ಯಾರಾದರೂ ಕೃತಘ್ನನಾದರೆ ಖಂಡಿತವಾಗಿಯೂ ಅಲ್ಲಾಹನು ನಿರಪೇಕ್ಷನೂ ಸ್ವಯಂಸ್ತುತ್ಯರ್ಹನೂ ಆಗಿರುತ್ತಾನೆ". (ಪವಿತ್ರ ಕುರ್‌ಆನ್, 31:12)

**49.** اَلْقَوِيُّ ಅಲ್ ಕವಿಯ್ಯ್: ಅತ್ಯಂತ ಶಕ್ತಿಶಾಲಿ. ಅವನ ಮುಂದೆ ಯಾರ ಶಕ್ತಿಯೂ ಪರಿಣಾಮಕಾರಿಯಾಗದು.

50. اَلشَّدِيْدُ ಅಶ್ಶದೀದ್: ಅತ್ಯಂತ ಕಠಿಣವಾಗಿ ಹಿಡಿಯುವವನು. ಅವನ ಹಿಡಿತದಿಂದ ರಕ್ಷಣೆ ಹೊಂದುವುದು ಸಾಧ್ಯವೇ ಅಲ್ಲ.

كَدَاْبِ اٰلِ فِرْعَوْنَ ۙ وَالَّذِيْنَ مِنْ قَبْلِهِمْ ۚ كَذَّبُوْا بِاٰيٰتِنَا ۚ فَاَخَذَهُمُ اللّٰهُ بِذُنُوْبِهِمْ ۗ وَاللّٰهُ شَدِيْدُ الْعِقَابِ ﴿١١﴾

"ಫಿರ್‌ಔನನ ಜನಾಂಗ ಮತ್ತು ಅವರಿಗಿಂತ ಹಿಂದಿನ ಜನರಂತೆ ಅವರು ಅಲ್ಲಾಹನ ನಿದರ್ಶನಗಳನ್ನು ನಿರಾಕರಿಸಿದರು. ಅಲ್ಲಾಹನು ಅವರನ್ನು ಅವರ ಪಾಪಗಳಿಗಾಗಿ ಹಿಡಿದನು. ಅಲ್ಲಾಹನು ಅತ್ಯಂತ ಶಕ್ತಿಶಾಲಿ ಮತ್ತು ಕಠಿಣವಾಗಿ ಶಿಕ್ಷಿಸುವವನಾಗಿದ್ದಾನೆ".

(ಪವಿತ್ರ ಕುರ್‌ಆನ್, 3:11)

51. اَلرَّقِيْبُ ಅರ್ರಕೀಬ್: ದಾಸರ ಕರ್ಮಗಳ ಮತ್ತು ವ್ಯವಹಾರಗಳ ಮೇಲ್ನೋಟ ವಹಿಸುವವನು.

اِنَّ اللّٰهَ كَانَ عَلَيْكُمْ رَقِيْبًا ﴿١﴾

"ಖಂಡಿತವಾಗಿಯೂ ಅಲ್ಲಾಹನು ನಿಮ್ಮ ಮೇಲೆ ಮೇಲ್ನೋಟವನ್ನು ಇರಿಸಿಕೊಂಡಿ ರುವನು". (ಪವಿತ್ರ ಕುರ್‌ಆನ್, 4:1)

52. اَلْقَرِيْبُ ಅಲ್ ಕರೀಬ್: ದಾಸರಿಗೆ ಅತ್ಯಂತ ನಿಕಟವಾಗಿರುವವನು.

53. اَلْمُجِيْبُ ಅಲ್ ಮುಜೀಬ್: ದಾಸರ ಪ್ರಾರ್ಥನೆಗಳನ್ನು ಆಲಿಸುವವನು ಮತ್ತು ಸ್ವೀಕರಿಸುವವನು.

وَاِذَا سَاَلَكَ عِبَادِيْ عَنِّيْ فَاِنِّيْ قَرِيْبٌ ۗ اُجِيْبُ دَعْوَةَ الدَّاعِ اِذَا دَعَانِ ۙ

"ಪ್ರವಾದಿವರ್ಯರೇ! ನನ್ನ ದಾಸರು ನಿಮ್ಮೊಡನೆ ನನ್ನ ಬಗ್ಗೆ ಕೇಳಿದರೆ ನಾನು ಅವರಿಗೆ ನಿಕಟನಾಗಿದ್ದೇನೆಂದು ಹೇಳಿರಿ". (ಪವಿತ್ರ ಕುರ್‌ಆನ್, 2:186)

فِيْهَا فَاسْتَغْفِرُوْهُ ثُمَّ تُوْبُوْٓا اِلَيْهِ ۗ اِنَّ رَبِّيْ قَرِيْبٌ مُّجِيْبٌ ﴿٦١﴾

"ಆದ್ದರಿಂದ ನೀವು ಅವನಿಂದ ಕ್ಷಮಾಯಾಚನೆ ಮಾಡಿರಿ ಮತ್ತು ಅವನ ಸನ್ನಿಧಿಯಲ್ಲಿ ಪಶ್ಚಾತ್ತಾಪಪಟ್ಟು ಮರಳಿರಿ. ಖಂಡಿತವಾಗಿಯೂ ನನ್ನ ಪ್ರಭು ಅತ್ಯಂತ ನಿಕಟನಾಗಿದ್ದಾನೆ ಮತ್ತು ಪ್ರಾರ್ಥನೆಗಳನ್ನು ಸ್ವೀಕರಿಸುವವನಾಗಿದ್ದಾನೆ". (ಪವಿತ್ರ ಕುರ್‌ಆನ್, 11:61)

**54.** اَلْوَكِيْلُ ಅಲ್ ವಕೀಲ್: ದಾಸರ ಕಾರ್ಯ ಸಾಧನೆಯ ಹೊಣೆ ಹೊತ್ತವನು. ಕಾರ್ಯ ನಿರ್ವಾಹಕ.

وَّقَالُوْا حَسْبُنَا اللّٰهُ وَنِعْمَ الْوَكِيْلُ ﴿١٧٣﴾

"ಅವರು ಹೇಳಿದರು: ನಮಗೆ ಅಲ್ಲಾಹ್ ಸಾಕು ಮತ್ತು ಅವನೇ ಅತ್ಯುತ್ತಮ ಕಾರ್ಯ ಸಾಧಕನು". (ಪವಿತ್ರ ಕುರ್‌ಆನ್, 3:173)

**55.** اَلْحَسِيْبُ ಅಲ್ ಹಸೀಬ್: ದಾಸರ ವಿಚಾರಣೆ ನಡೆಸುವವನು ಮತ್ತು ಅವರ ಲೆಕ್ಕ ಪರಿಶೋಧಿಸುವವನು.

اِنَّ اللّٰهَ كَانَ عَلٰى كُلِّ شَىْءٍ حَسِيْبًا ﴿٨٦﴾

"ಖಂಡಿತವಾಗಿಯೂ ಅಲ್ಲಾಹನು ಸಕಲ ವಿಷಯಗಳ ಲೆಕ್ಕ ಪರಿಶೋಧಕನಾಗಿ ರುತ್ತಾನೆ". (ಪವಿತ್ರ ಕುರ್‌ಆನ್, 4:86)

**56.** اَلْجَامِعُ ಅಲ್ ಜಾಮಿಅ್: ಶರೀರದ ಕಣಕಣಗಳನ್ನು ಒಂದುಗೂಡಿಸುವವನು ಮತ್ತು ಪುನರುತ್ಥಾನದಂದು ಜನರನ್ನು ಒಟ್ಟುಗೂಡಿಸುವವನು.

رَبَّنَآ اِنَّكَ جَامِعُ النَّاسِ لِيَوْمٍ لَّا رَيْبَ فِيْهِ

"ನಮ್ಮ ಪ್ರಭೂ! ಖಂಡಿತವಾಗಿಯೂ ನೀನು ಅದೊಂದು ದಿನ ಎಲ್ಲ ಜನರನ್ನು ಒಟ್ಟುಗೂಡಿಸಲಿರುವೆ. ಆ ದಿನ ಬರುವುದರಲ್ಲಿ ಸಂದೇಹವೇ ಇಲ್ಲ".

(ಪವಿತ್ರ ಕುರ್‌ಆನ್, 3:9)

**57.** اَلْقَادِرُ ಅಲ್ ಕಾದಿರ್: ಎಲ್ಲ ಕಾರ್ಯಗಳನ್ನು ಮಾಡುವ ಶಕ್ತಿ ಸಾಮರ್ಥ್ಯಗಳನ್ನು ಹೊಂದಿದವನು.

اَيَحْسَبُ الْاِنْسَانُ اَلَّنْ نَّجْمَعَ عِظَامَهٗ ﴿٣﴾ بَلٰى قٰدِرِيْنَ عَلٰٓى اَنْ نُّسَوِّىَ بَنَانَهٗ ﴿٤﴾

"ಮನುಷ್ಯನ ಕಣಕಣಗಳನ್ನೆಂದೂ ನಾವು ಒಂದುಗೂಡಿಸಲಾರೆವೆಂದು ಅವನು ಭಾವಿಸು ತ್ತಿರುವನೇ? ಖಂಡಿತವಾಗಿಯೂ ಮಾಡುವೆವು. ನಾವು ಅವನ ಬೆರಳ ತುದಿಗಳನ್ನು ರಚಿಸಲಿಕ್ಕೂ ಸಮರ್ಥರು". (ಪವಿತ್ರ ಕುರ್‌ಆನ್, 75:3-4)

**58.** اَلْحَفِيْظُ ಅಲ್ ಹಫೀಝ್: ದಾಸರನ್ನು ಎಲ್ಲಾ ವಿಪತ್ತು ಮತ್ತು ಸಂಕಷ್ಟಗಳಿಂದ ಸಂರಕ್ಷಿಸುವವನು.

إِنَّ رَبِّي عَلَىٰ كُلِّ شَيْءٍ حَفِيظٌ ﴿٥٧﴾

"ಖಂಡಿತವಾಗಿಯೂ ನನ್ನ ಪ್ರಭು ಪ್ರತಿಯೊಂದು ವಸ್ತುವನ್ನು ಸಂರಕ್ಷಿಸುವವನಾಗಿ ರುತ್ತಾನೆ". (ಪವಿತ್ರ ಕುರ್‌ಆನ್, 11:57)

**59.** اَلْمُقِيْتُ ಅಲ್ ಮುಕೀತ್: ಸೃಷ್ಟಿಗಳಿಗೆ ಸರಿಯಾದ ಪಾಲು ನೀಡಲು ಸಮರ್ಥನು. ಜೀವನಾಧಾರ ನೀಡುವವನು.

وَكَانَ اللَّهُ عَلَىٰ كُلِّ شَيْءٍ مُّقِيتًا ﴿٨٥﴾

"ಮತ್ತು ಅಲ್ಲಾಹನು ಪ್ರತಿಯೊಂದು ವಸ್ತುವಿಗೂ ಸರಿಯಾದ ಪಾಲು ನೀಡಲು ಸಮರ್ಥನು". (ಪವಿತ್ರ ಕುರ್‌ಆನ್, 4:85)

**60.** اَلْوَدُوْدُ ಅಲ್ ವದೂದ್: ತನ್ನ ದಾಸರನ್ನು ಅಪಾರವಾಗಿ ಪ್ರೀತಿಸುವವನು.

**61.** اَلْمَجِيْدُ ಅಲ್ ಮಜೀದ್: ಹಿರಿಮೆ ಮತ್ತು ಮಹಿಮೆಯವನು.

وَهُوَ الْغَفُورُ الْوَدُودُ ﴿١٤﴾ ذُو الْعَرْشِ الْمَجِيدُ ﴿١٥﴾

"ಅವನಂತೂ ಅತ್ಯಧಿಕ ಕ್ಷಮಾಶೀಲನೂ ಅಪಾರವಾಗಿ ಪ್ರೀತಿಸುವವನೂ ಆಗಿರುವನು. ವಿಶ್ವಸಿಂಹಾಸನದ ಒಡೆಯನು". (ಪವಿತ್ರ ಕುರ್‌ಆನ್, 85:14-15)

**62.** اَلشَّهِيْدُ ಅಶ್ಶಹೀದ್: ಸರ್ವವ್ಯಾಪಿ. ಪ್ರತಿಯೊಂದು ವಸ್ತುವಿನ ಮೇಲೆ ನಿಗಾ ಇಟ್ಟಿರುವವನು.

وَاللَّهُ عَلَىٰ كُلِّ شَيْءٍ شَهِيدٌ ﴿٦﴾

"ಮತ್ತು ಅಲ್ಲಾಹನು ಪ್ರತಿಯೊಂದು ವಸ್ತುವಿನ ಮೇಲೆ ನಿಗಾ ಇಟ್ಟಿರುವವನಾಗಿ ರುವನು". (ಪವಿತ್ರ ಕುರ್‌ಆನ್, 58:6)

**63.** اَلْوَارِثُ ಅಲ್ ವಾರಿಸ್: ಪ್ರತಿಯೊಂದು ವಸ್ತುವಿನ ನೈಜ ಒಡೆಯ. ಅವನ ಒಡೆತನವು ಎಂದೂ ಕೊನೆಗೊಳ್ಳುವುದಿಲ್ಲ.

**64.** اَلْمُحْيِ ಅಲ್ ಮುಹ್ಯೀ: ಸೃಷ್ಟಿಗಳಿಗೆ ಜೀವದಾನ ಮಾಡುವವನು.

وَإِنَّا لَنَحْنُ نُحْيِي وَنُمِيتُ وَنَحْنُ الْوَارِثُونَ ﴿٢٣﴾

"ಜೀವ ನೀಡುವವರೂ ಮರಣ ನೀಡುವವರೂ ನಾವೇ. ನಾವೇ ಎಲ್ಲರ ವಾರೀಸುದಾರ ರಾಗುವವರಿದ್ದೇವೆ". (ಪವಿತ್ರ ಕುರ್‌ಆನ್, 15:23)

65. اَلْوَلِيُّ ಅಲ್ ವಲಿಯ್ಯ್: ಸತ್ಯವಿಶ್ವಾಸಿಗಳ ಬೆಂಬಲಿಗ ಮತ್ತು ಮೇಲ್ವಿಚಾರಕ.

66. اَلْفَاطِرُ ಅಲ್ ಫಾತಿರ್: ಪ್ರತಿಯೊಂದು ವಸ್ತುವನ್ನು ಉಂಟು ಮಾಡುವವನು.

فَاطِرَ السَّمٰوٰتِ وَالْاَرْضِ اَنْتَ وَلِيّٖ فِی الدُّنْيَا وَالْاٰخِرَةِ

"ಆಕಾಶಗಳ ಮತ್ತು ಭೂಮಿಯ ನಿರ್ಮಾಪಕನೇ! ಇಹದಲ್ಲೂ ಪರದಲ್ಲೂ ನೀನೇ ನನ್ನ ರಕ್ಷಕ ಮಿತ್ರನಾಗಿರುವೆ". (ಪವಿತ್ರ ಕುರ್‌ಆನ್, 12:101)

67. اَلْمَالِكُ ಅಲ್ ಮಾಲಿಕ್: ಎಲ್ಲ ವಸ್ತುಗಳ ನೈಜ ಒಡೆಯ. ಅವನ ಮುಂದೆ ಎಲ್ಲರೂ ದೀನರೂ ವಿವಶರೂ ಆಗಿರುವರು.

مٰلِكِ يَوْمِ الدِّيْنِ ۝٤

"ನಿರ್ಣಾಯಕ ದಿನದ ಒಡೆಯ". (ಪವಿತ್ರ ಕುರ್‌ಆನ್, 1:4)

68. اَلْمُقْتَدِرُ ಅಲ್ ಮುಕ್ತದಿರ್: ಎಲ್ಲ ವಸ್ತುಗಳ ಮೇಲೂ ಪೂರ್ಣ ಆಧಿಪತ್ಯ ಹೊಂದಿದವನು. ಅವನು ಯಾವ ಕಾರ್ಯಕ್ಕೂ ವಿವಶನಲ್ಲ.

69. اَلْمَلِيْكُ ಅಲ್ ಮಲೀಕ್: ಪರಮಾಧಿಕಾರಿಯಾದ ಸಾಮ್ರಾಟ.

اِنَّ الْمُتَّقِيْنَ فِیْ جَنّٰتٍ وَّنَهَرٍ ۝٥٤ فِیْ مَقْعَدِ صِدْقٍ عِنْدَ مَلِيْكٍ مُّقْتَدِرٍ ۝٥٥

"ಖಂಡಿತವಾಗಿಯೂ ಅಲ್ಲಾಹನ ಭಯವಿರಿಸಿಕೊಂಡವರು ಸ್ವರ್ಗೋದ್ಯಾನಗಳಲ್ಲಿಯೂ ನದಿ-ನದಗಳ ನಡುವೆಯೂ ಇರುವರು. ಪ್ರತಿಷ್ಠಿತ ಸ್ಥಾನದಲ್ಲಿ ಪರಮಾಧಿಕಾರಿಯಾದ ಸಾಮ್ರಾಟನ ಬಳಿಯಲ್ಲಿ". (ಪವಿತ್ರ ಕುರ್‌ಆನ್, 54:54-55)

70. اَلْاَوَّلُ ಅಲ್ ಅವ್ವಲ್: ಎಲ್ಲ ಸೃಷ್ಟಿಗಳ ಸೃಷ್ಟಿಗಿಂತಲೂ ಮುಂಚೆ ಅಸ್ತಿತ್ವದಲ್ಲಿದ್ದವನು.

71. اَلْاٰخِرُ ಅಲ್ ಆಖಿರ್: ಎಲ್ಲ ಸೃಷ್ಟಿಗಳ ನಾಶದ ಬಳಿಕವೂ ಅಸ್ತಿತ್ವದಲ್ಲಿರುವವನು.

72. اَلظَّاهِرُ ಅಲ್ ಝಾಹಿರ್: ಅವನ ದೇವತ್ವವು ಕಣಕಣದಲ್ಲೂ ಗೋಚರಿಸುತ್ತದೆ.

73. اَلْبَاطِنُ ಅಲ್‌ಬಾತಿನ್: ದೃಷ್ಟಿಗಳಿಂದ ಅಡಗಿರುವವನು. ದೃಷ್ಟಿಗಳಿಗೆ ಗೋಚರಿಸದವನು.

هُوَ الْأَوَّلُ وَالْآخِرُ وَالظَّاهِرُ وَالْبَاطِنُ

"ಆತನೇ ಆದಿಯೂ ಆತನೇ ಅಂತ್ಯನೂ ಆತನೇ ಅಭಿವ್ಯಕ್ತನೂ ಆತನೇ ಗುಪ್ತನೂ ಆಗಿರುವವನು". (ಪವಿತ್ರ ಕುರ್‌ಆನ್, 57:3)

74. اَلْقَاهِرُ ಅಲ್ ಕಾಹಿರ್: ದಾಸರ ಮೇಲೆ ಸಂಪೂರ್ಣ ಸ್ವಾಮ್ಯ ಮತ್ತು ಅಧಿಕಾರ ಹೊಂದಿದವನು.

وَهُوَ الْقَاهِرُ فَوْقَ عِبَادِهِ

"ಅವನು ತನ್ನ ದಾಸರ ಮೇಲೆ ಸಂಪೂರ್ಣ ಸ್ವಾಮ್ಯ ಮತ್ತು ಅಧಿಕಾರ ಉಳ್ಳವನಾಗಿದ್ದಾನೆ". (ಪವಿತ್ರ ಕುರ್‌ಆನ್, 6:18)

75. اَلْكَافِيْ ಅಲ್ ಕಾಫೀ: ದಾಸರ ಪ್ರತಿಯೊಂದು ಅಗತ್ಯಕ್ಕೆ ಸಾಕಾಗುವವನು.

أَلَيْسَ اللَّهُ بِكَافٍ عَبْدَهُ

"ಅಲ್ಲಾಹನು ತನ್ನ ದಾಸರಿಗೆ ಸಾಕಾಗಲಾರನೇ?" (ಪವಿತ್ರ ಕುರ್‌ಆನ್, 39:36)

76. اَلشَّاكِرُ ಅಶ್ಯಾಕಿರ್: ದಾಸರ ಕಾರ್ಯ ಚಟುವಟಿಕೆಗಳನ್ನು ಮಾನ್ಯ ಮಾಡುವವನು.

وَكَانَ اللَّهُ شَاكِرًا عَلِيمًا ۝

"ಅಲ್ಲಾಹನು ಗುಣಗ್ರಾಹಿಯೂ ಸರ್ವಜ್ಞನೂ ಆಗಿರುವನು".

(ಪವಿತ್ರ ಕುರ್‌ಆನ್, 4:147)

77. اَلْمُسْتَعَانُ ಅಲ್ ಮುಸ್ತಆನ್: ಸಹಾಯ ಯಾಚಿಸಲ್ಪಡಬೇಕಾದ ಅಸ್ತಿತ್ವ.

وَاللَّهُ الْمُسْتَعَانُ

"ಮತ್ತು ಅಲ್ಲಾಹನಿಂದಲೇ ಸಹಾಯ ಯಾಚಿಸಲ್ಪಡಬೇಕು".

(ಪವಿತ್ರ ಕುರ್‌ಆನ್, 12:18)

78. اَلْبَدِيْعُ ಅಲ್ ಬದೀಅ್: ಮೂಲ ಸೃಷ್ಟಿಕರ್ತ ಅನುಪಮ ಸಂಶೋಧಕ.

بَدِيعُ السَّمَاوَاتِ وَالْأَرْضِ

"ಭೂಮಿ ಆಕಾಶಗಳ ಅನುಪಮ ಸಂಶೋಧಕ." (ಪವಿತ್ರ ಕುರ್‌ಆನ್, 2:117)

79. اَلْغَفِر ಅಲ್ ಗಾಫಿರ್: ಪಾಪಗಳನ್ನು ಕ್ಷಮಿಸುವವನು.

غَافِرِ الذَّنْبِ وَ قَابِلِ التَّوْبِ

"ಪಾಪಗಳನ್ನು ಕ್ಷಮಿಸುವವನು ಮತ್ತು ಪಶ್ಚಾತ್ತಾಪಗಳನ್ನು ಸ್ವೀಕರಿಸುವವನು".
(ಪವಿತ್ರ ಕುರ್‌ಆನ್, 40:3)

80. اَلْحَاكِمُ ಅಲ್ ಹಾಕಿಮ್: ತನ್ನ ಸೃಷ್ಟಿಗಳ ಮೇಲೆ ಅಧಿಪತ್ಯ ನಡೆಸುವವನು. ಏಕೈಕ ಅಧಿಪತಿ ಮತ್ತು ಕಾನೂನು ನಿರ್ಮಾತೃ.

اِنِ الْحُكْمُ اِلَّا لِلّٰهِ

"ಆಧಿಪತ್ಯವು ಕೇವಲ ಅಲ್ಲಾಹನ ಹಕ್ಕಾಗಿದೆ". (ಪವಿತ್ರ ಕುರ್‌ಆನ್, 12:40)

81. اَلْغَالِبُ ಅಲ್ ಗಾಲಿಬ್: ಸಂಪೂರ್ಣ ಅಧಿಕಾರ ಮತ್ತು ನಿಯಂತ್ರಣ ಹೊಂದಿದವನು.

وَ اللّٰهُ غَالِبٌ عَلٰٓى اَمْرِهٖ

"ಅಲ್ಲಾಹನು ತನ್ನ ಕಾರ್ಯಗಳ ಮೇಲೆ ಪೂರ್ಣ ನಿಯಂತ್ರಣ ಉಳ್ಳವನಾಗಿದ್ದಾನೆ".
(ಪವಿತ್ರ ಕುರ್‌ಆನ್, 12:21)

82. اَلْحَكَمُ ಅಲ್ ಹಕಮ್: ಪಕ್ಷಪಾತ ರಹಿತ ತೀರ್ಮಾನ ಮಾಡುವವನು.

اَفَغَيْرَ اللّٰهِ اَبْتَغِيْ حَكَمًا

"ನಾನೇನು, ಅಲ್ಲಾಹನ ಹೊರತು ಇತರ ತೀರ್ಪುಗಾರರನ್ನು ಹುಡುಕಬೇಕೆ?"
(ಪವಿತ್ರ ಕುರ್‌ಆನ್, 6:114)

83. اَلْعَالِمُ ಅಲ್ ಆಲಿಮ್: ಅಂತರಂಗ ಬಹಿರಂಗಗಳನ್ನು ಚೆನ್ನಾಗಿ ಬಲ್ಲವನು.

84. اَلْمُتَعَالُ ಅಲ್ ಮುತಆಲ್: ಎಲ್ಲ ಪರಿಸ್ಥಿತಿಗಳಲ್ಲೂ ಉನ್ನತನೂ ಮಹಾನನೂ ಆಗಿರುವವನು.

عٰلِمُ الْغَيْبِ وَ الشَّهَادَةِ الْكَبِيْرُ الْمُتَعَالِ ۝٩

"ಅವನು ಎಲ್ಲ ಪ್ರತ್ಯಕ್ಷಾಪ್ರತ್ಯಕ್ಷಗಳ ಜ್ಞಾನಿ. ಅವನು ಅತಿ ಮಹಾನನು ಮತ್ತು ಚಿರೋನ್ನತನು". (ಪವಿತ್ರ ಕುರ್‌ಆನ್, 13:9)

**85.** اَلرَّفِيْعُ ಅರ್ರಫೀಃ: ಅತ್ಯುನ್ನತ ಪದವಿಯವನು.

رَفِيْعُ الدَّرَجٰتِ ذُو الْعَرْشِ

"ಅತ್ಯುನ್ನತ ಪದವಿಯವನು ವಿಶ್ವ ಸಿಂಹಾಸನದ ಒಡೆಯ".

(ಪವಿತ್ರ ಕುರ್‌ಆನ್, **40:15**)

**86.** اَلْحَافِظُ ಅಲ್ ಹಾಫಿಝ್: ವಿಪತ್ತುಗಳ ಮತ್ತು ಅವಘಡಗಳಿಂದ ರಕ್ಷಿಸುವವನು.

فَاللّٰهُ خَيْرٌ حٰفِظًا

"ಅಲ್ಲಾಹನೇ ಅತ್ಯುತ್ತಮ ಸಂರಕ್ಷಕನಾಗಿರುವನು". (ಪವಿತ್ರ ಕುರ್‌ಆನ್, **12:64**)

**87.** اَلْمُنْتَقِمُ ಅಲ್ ಮುನ್ತಕಿಮ್: ತನ್ನ ಮತ್ತು ತನ್ನ ನಿಷ್ಠಾವಂತರ ವೈರಿಗಳಿಂದ ಪ್ರತೀಕಾರ ಪಡೆಯುವವನು.

فَانْتَقَمْنَا مِنَ الَّذِيْنَ اَجْرَمُوْا ۗ وَكَانَ حَقًّا عَلَيْنَا نَصْرُ الْمُؤْمِنِيْنَ

"ತರುವಾಯ ಯಾರು ಅಪರಾಧವೆಸಗಿದರೋ ಅವರಿಂದ ನಾವು ಪ್ರತೀಕಾರ ಪಡೆದೆವು ಮತ್ತು ಸತ್ಯವಿಶ್ವಾಸಿಗಳಿಗೆ ನೆರವಾಗುವುದು ನಮ್ಮ ಕರ್ತವ್ಯವಾಗಿತ್ತು".

(ಪವಿತ್ರ ಕುರ್‌ಆನ್, **30:47**)

**88.** اَلْقَائِمُ بِالْقِسْطِ ಅಲ್ ಕಾಇಮು ಬಿಲ್ ಕಿಸ್ತ್: ನ್ಯಾಯದೊಂದಿಗೆ ಆಧಿಪತ್ಯ ನಡೆಸುವವನು.

**89.** اَلْاِلٰهُ ಅಲ್ ಇಲಾಹ್: ಆರಾಧ್ಯನು. ಅವನ ಹೊರತು ಆರಾಧನೆಗೆ ಅರ್ಹರು ಯಾರೂ ಇಲ್ಲ.

قَآئِمًا بِالْقِسْطِ ۗ لَآ اِلٰهَ اِلَّا هُوَ

"ನ್ಯಾಯದೊಂದಿಗೆ ಆಧಿಪತ್ಯ ನಡೆಸುವವನು. ಅವನ ಹೊರತು ಅನ್ಯ ಆರಾಧ್ಯರಿಲ್ಲ".

(ಪವಿತ್ರ ಕುರ್‌ಆನ್, **3:18**)

**90.** اَلْهَادِىُ ಅಲ್ ಹಾದೀ: ನೇರ ಮಾರ್ಗ ತೋರಿಸುವವನು. ಪ್ರವಾದಿಗಳು ಮತ್ತು ಗ್ರಂಥಗಳನ್ನು ಕಳುಹಿಸುವವನು.

وَ اِنَّ اللّٰهَ لَهَادِ الَّذِيْنَ اٰمَنُوْٓا اِلٰى صِرَاطٍ مُّسْتَقِيْمٍ ﴿۵۴﴾

"ಖಂಡಿತವಾಗಿಯೂ ಅಲ್ಲಾಹನು ಸತ್ಯವಿಶ್ವಾಸಿಗಳಿಗೆ ನೇರಮಾರ್ಗ ತೋರಿಸುತ್ತಾನೆ".

(ಪವಿತ್ರ ಕುರ್‌ಆನ್, 22:54)

**91.** اَلرَّءُوْفُ ಅರ್ರಊಫ್: ದಾಸರ ಮೇಲೆ ಅತ್ಯಧಿಕ ದಯೆ ತೋರುವವನು.

وَ اللّٰهُ رَءُوْفٌۢ بِالْعِبَادِ ﴿۳۰﴾

"ಮತ್ತು ಅಲ್ಲಾಹನು ತನ್ನ ದಾಸರ ಮೇಲೆ ಅತ್ಯಧಿಕ ದಯೆ ತೋರುವವನಾಗಿದ್ದಾನೆ".

(ಪವಿತ್ರ ಕುರ್‌ಆನ್, 3:30)

**92.** اَلنُّوْرُ ಅನ್ನೂರ್ : ಇಹಪರ ಲೋಕಗಳನ್ನು ಬೆಳಗಿಸುವವನು. ಬೆಳಕಿನ ಮೂಲ.

اَللّٰهُ نُوْرُ السَّمٰوٰتِ وَ الْاَرْضِ

"ಅಲ್ಲಾಹನು ಆಕಾಶಗಳ ಮತ್ತು ಭೂಮಿಯ ಬೆಳಕಾಗಿದ್ದಾನೆ".

(ಪವಿತ್ರ ಕುರ್‌ಆನ್, 24:35)

**93.** اَلْاَكْرَمُ ಅಲ್ ಅಕ್ರಮ್: ಪ್ರತಾಪ ಮತ್ತು ಗೌರವವುಳ್ಳವನು. ದಾಸರ ಜೊತೆ ಅತ್ಯಂತ ಉದಾರವಾಗಿ ವರ್ತಿಸುವವನು.

اِقْرَاْ وَ رَبُّكَ الْاَكْرَمُ ﴿۳﴾

"ಓದಿರಿ ನಿಮ್ಮ ಪ್ರಭು ಅತ್ಯಧಿಕ ಉದಾರಿಯಾಗಿರುವನು".

(ಪವಿತ್ರ ಕುರ್‌ಆನ್, 96:3)

**94.** اَلْاَعْلٰى ಅಲ್ ಅಲ್‌ಲಾ: ಅತ್ಯುನ್ನತನು.

سَبِّحِ اسْمَ رَبِّكَ الْاَعْلَى ﴿۱﴾

"ಅತ್ಯುನ್ನತನಾದ ನಿಮ್ಮ ಪ್ರಭುವಿನ ಸ್ತುತಿಸ್ತೋತ್ರ ಮಾಡಿರಿ".

(ಪವಿತ್ರ ಕುರ್‌ಆನ್, 87:1)

**95.** اَلْبَرُّ ಅಲ್ ಬರ್ರ್: ತನ್ನ ಸೃಷ್ಟಿಗಳ ಜೊತೆ ಸೌಜನ್ಯದಿಂದ ವರ್ತಿಸುವವನು.

اِنَّهٗ هُوَ الْبَرُّ الرَّحِيْمُ ﴿۲۸﴾

"ಖಂಡಿತವಾಗಿಯೂ ಅವನು ಅತ್ಯಂತ ಸೌಜನ್ಯಶೀಲ ಮತ್ತು ಕರುಣಾನಿಧಿಯಾಗಿರುವನು".

(ಪವಿತ್ರ ಕುರ್‌ಆನ್, 52:28)

**96.** اَلرَّبُّ ಅರ್ರಬ್ಬ್: ಪರಿಪಾಲನೆ ಮಾಡುವವನು. ಎಲ್ಲ ರೀತಿಯ ಅಪಾಯ ಗಳಿಂದ ರಕ್ಷಿಸಿ, ವಿಕಾಸದ ಎಲ್ಲ ಅಗತ್ಯಗಳನ್ನು ಪೂರೈಸಿ ಪರಿಪೂರ್ಣತೆಯ ಮಟ್ಟಕ್ಕೆ ತಲುಪಿಸುವವನು. ಒಡೆಯ. ಮಾಲಕ.

اَلْحَمْدُ لِلّٰهِ رَبِّ الْعٰلَمِيْنَ ۝٢

"ಸರ್ವಸ್ತುತಿಯೂ ಸರ್ವಲೋಕಗಳ ಪರಿಪಾಲಕನಾದ ಅಲ್ಲಾಹನಿಗೆ ಮೀಸಲು".
(ಪವಿತ್ರ ಕುರ್‌ಆನ್, 1:2)

**97.** اَلْحَفِيُّ ಅಲ್ ಹಫಿಯ್ಯ್: ಸೃಷ್ಟಿಗಳ ಬಗ್ಗೆ ಅತ್ಯಧಿಕ ಗಮನವಿರಿಸುವವನು. ಅತ್ಯಧಿಕ ಕರುಣೆಯುಳ್ಳವನು.

اِنَّهٗ كَانَ بِيْ حَفِيًّا ۝٤٧

"ಖಂಡಿತವಾಗಿಯೂ ಅವನು ನನ್ನ ಪಾಲಿಗೆ ಅತ್ಯಧಿಕ ಕರುಣೆಯುಳ್ಳವನಾಗಿದ್ದಾನೆ".
(ಪವಿತ್ರ ಕುರ್‌ಆನ್, 19:47)

**98.** اَلْاَحَدُ ಅಲ್ ಅಹದ್: ಏಕೈಕನು. ಅನುಪಮ. ಅವನಿಗೆ ಯಾವ ಹೋಲಿಕೆಯೂ ಇಲ್ಲ.

قُلْ هُوَ اللّٰهُ اَحَدٌ ۝١

"ಹೇಳಿರಿ, ಅವನು ಅಲ್ಲಾಹನು ಏಕೈಕನು". (ಪವಿತ್ರ ಕುರ್‌ಆನ್, 112:1)

**99.** اَلصَّمَدُ ಅಸ್ಸಮದ್: ನಿರಪೇಕ್ಷನು, ಅವನು ಯಾರ ಅವಲಂಬಿತನಲ್ಲ. ಎಲ್ಲರೂ ಅವನ ಅವಲಂಬಿತರು.

اَللّٰهُ الصَّمَدُ ۝٢

"ಅಲ್ಲಾಹನು ಸಕಲರಿಂದಲೂ ನಿರಪೇಕ್ಷನು ಮತ್ತು ಸರ್ವರೂ ಅವನ ಅವಲಂಬಿತರು".
(ಪವಿತ್ರ ಕುರ್‌ಆನ್, 112:2)

# ಪ್ರಾರ್ಥನೆಗಳು

## ಒಂದೇ ನೋಟದಲ್ಲಿ

ದಿನ ರಾತ್ರಿಗಳ ವಿಭಿನ್ನ ವೇಳೆಗಳಲ್ಲಿ ಮತ್ತು ಸಂದರ್ಭಗಳಲ್ಲಿ ಪಠಿಸಲು ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ ಬಂದಿರುವ ದುಆಗಳನ್ನು ಕಂಠಪಾಠ ಮಾಡಿಕೊಂಡು ಆಗಾಗ ಪಠಿಸುತ್ತಲಿರಿ. ಈ ದುಆಗಳನ್ನು ಪಠಿಸುವಾಗ ಪೂರ್ಣನಿಷ್ಠೆ, ಪ್ರಜ್ಞೆ, ಆಸಕ್ತಿ, ತಲ್ಲೀನತೆ ಮತ್ತು ಏಕಾಗ್ರತೆ ಇರುವಂತೆ ಜಾಗ್ರತೆ ವಹಿಸಿರಿ. ಈ ರೀತಿ ಈ ದುಆಗಳು ನಿಜವಾಗಿ ನಿಮ್ಮ ಮನದಾಳದಿಂದ ಹೊರಡುವ ಪ್ರಾರ್ಥನೆಗಳಾಗಬೇಕು. ತನ್ನ ಪ್ರಭುವಿನಲ್ಲಿ ಬೇಡುವುದು, ನಿರಂತರ ಬೇಡುತ್ತಿರುವುದು, ಅವನು ಕಲಿಸಿದ ಪದಗಳಲ್ಲೇ ಬೇಡುವುದು ಅವನ ಇಷ್ಟದಾಸರು ಸದಾ ಬೇಡುತ್ತಿದ್ದವುಗಳನ್ನೇ ಬೇಡುವುದು ಸತ್ಯವಿಶ್ವಾಸಿಯ ವೈಶಿಷ್ಟ್ಯವಾಗಿದೆ. ಇದುವೇ ಇಹಪರಗಳ ಸೌಭಾಗ್ಯವಾಗಿದೆ.

ಇದೇ ಉದ್ದೇಶದಿಂದ ಕುರ್‌ಆನ್ ಮತ್ತು ಹದೀಸ್‌ಗಳಿಂದ ಆಯ್ದ ದುಆಗಳನ್ನು ಈ ಗ್ರಂಥದಲ್ಲಿ ಕ್ರೋಢೀಕರಿಸಲಾಗಿದೆ. ಆದರೆ ಈ ದುಆಗಳು ವಿಭಿನ್ನ ಅಧ್ಯಾಯಗಳಲ್ಲಿ ಅನೇಕ ವಿಷಯಗಳ ಮಧ್ಯೆ ಚದುರಿ ಹೋಗಿವೆ. ಓದುಗನಿಗೆ ಅಗತ್ಯ ಬಿದ್ದಾಗ ಅವುಗಳನ್ನು ಹುಡುಕಲು ತ್ರಾಸವಾಗಬಹುದು. ಆದ್ದರಿಂದ ಇಲ್ಲಿ ಆ ದುಆಗಳ ಒಂದು ಸಮಗ್ರ ಅನುಕ್ರಮಣಿಕೆಯನ್ನು ವರ್ಣಾಕ್ಷರಮಾಲೆಯ ಕ್ರಮದಲ್ಲಿ ನೀಡಲಾಗುತ್ತಿದೆ. ಮೊದಲು ಆ ದುಆದ ಶೀರ್ಷಿಕೆ ಮತ್ತು ಅದರ ಎದುರು ಆ ದುಆ ಬಂದಿರುವ ಪುಟದ ಸಂಖ್ಯೆಯನ್ನು ನೀಡಲಾಗಿದೆ. ಇದರಿಂದ ವಾಚಕರಿಗೆ ಹೆಚ್ಚು ಅನುಕೂಲವಾಗಬಹುದು.

### ಅ

## ಆ



## ಇ



## ಉ



## ಐ

## ಒ



## ಕ



## ಖ



## ಗ



## ಚ

## ಜ



## ತ



## ದ



## ನ



## ಪ

## ಫ



## ಬ



## ಭ



## ಮ

## ರ



## ಲ



## ವ

## ಸ

## ಶ



## ಹ



◆◆ ● ◆◆

ಓ ಅಲ್ಲಾಹ್! ನೀನೇ ನನ್ನ ಪಾಲಕ ಪ್ರಭು. ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ. ನೀನೇ ನನ್ನನ್ನು ಸೃಷ್ಟಿಸಿದೆ. ನಾನು ನಿನ್ನ ದಾಸ. ನಾನು ನಿನ್ನಲ್ಲಿ ಮಾಡಿರುವ ದಾಸ್ಯ, ಆರಾಧನೆಯ ಮತ್ತು ಅನುಸರಣೆಯ ಕರಾರನ್ನು ನನಗೆ ಸಾಧ್ಯವಿದ್ದಷ್ಟು ಪಾಲಿಸುವೆನು. ನನ್ನಿಂದ ಆಗಿ ಹೋದ ತಪ್ಪುಗಳ ದುಷ್ಪರಿಣಾಮ ಗಳಿಂದ ನಿನ್ನ ಅಭಯ ಕೋರುತ್ತೇನೆ. ನೀನು ನನಗೆ ಕೊಡ ಮಾಡಿದ ಅನುಗ್ರಹ ಗಳನ್ನು ನಾನು ಅಂಗೀಕರಿಸುತ್ತೇನೆ. ನಾನು ಪಾಪಿ ಎಂಬುದನ್ನು ಒಪ್ಪಿಕೊಳ್ಳುತ್ತೇನೆ. ಆದ್ದರಿಂದ ನನ್ನ ಪಾಪಗಳನ್ನು ಮನ್ನಿಸು. ನಿನ್ನ ಹೊರತು ನನ್ನ ಪಾಪಗಳನ್ನು ಮನ್ನಿಸುವವರು ಯಾರೂ ಇಲ್ಲ.

(ಬುಖಾರಿ, ತಿರ್ಮಿದಿ)